ಮನೋಹರ ಗ್ರಂಥಮಾಲೆಯ ೯೯-೧೦೦ನೆಯ ಕುಸುಮ

# ಚೀನದ ಬಾಳು-ಬದುಕು

(ಚೀನೀ ಆಧುನಿಕ ಸಣ್ಣ ಕತೆಗಳ ಸಂಗ್ರಹ)

ಇಂಗ್ಲಿಷಿಗೆ ತಂದ ಮೂಲ ಸಂಪಾದಕರು :

'ಎಡ್ಗರ್ ಸ್ನೊ'

ಕನ್ನಡಕ್ಕೆ ಅನುವಾದಿಸಿದವರು :

ದ. ರಾ. ಬೇಂದ್ರೆ

ಗು. ಜ. ಮಂಗಲಗಿ

ಕೀರ್ತಿ ಕುರ್ತಕೋಟಿ

ವರಗಿರಿ

ಡಿಶೆಂಬರ-ಫೆಬ್ರುವರಿ
೧೯೪೯-೧೯೫೦

ಬೆಲೆ :
೨-೦-೦

ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ.

ಸಾಹಿತ್ಯವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ, ಎಂ. ಎ.

ಶ್ರೀ. ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ)

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿಟಿ.

ಸಂಪಾದಕ:

**ಜಿ. ಬಿ. ಜೋಶಿ**



ಪ್ರಕಾಶಕರು:

ಜಿ. ಬಿ. ಜೋಶಿ,
ಮನೋಹರ ಗ್ರಂಥಮಾಲಾ
ಧಾರವಾಡ.

ಮುದ್ರಕರು:

ಎಂ. ಎ. ಕಾಮತ, ಬಿ. ಎಸ್ಸಿ.
ಹಿಂದಮಾತಾ ಪ್ರಿಂಟಿಂಗ್‌ಪ್ರೆಸ್
ಧಾರವಾಡ.

# ಪರಿವಿಡಿ



## ಭಾಗ ೧

### ಲು-ಶೂನರ ಕತೆಗಳು



## ಭಾಗ ೨

### ಬೇರೆ ಲೇಖಕರ ಕತೆಗಳು

# ನಮ್ಮ ಮಾತು

ಶ್ರೀ. ವಿ. ಕೃ. ಗೋಕಾಕ ಅವರು ಇಂಗ್ಲಂಡಕ್ಕೆ ಹೋಗಿದ್ದಾಗ ಈ 'ಚೀನದ ಜಾಣ-ಜಡರ'ನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಲು ಒಪ್ಪಿಗೆ ಪಡೆದುಕೊಂಡು ಬಂದರು. ಇದು ಈಗ ಹದಿಮೂರು ವರ್ಷಗಳ ಹಿಂದೆಯೆ ಬೆಳಕು ಕಾಣಬೇಕಾಗಿತ್ತು. ಆದರೆ ಏನೇನೊ ಅನಾನುಕೂಲಗಳುಂಟಾಗಿ ಈ ವರೆಗೂ ಆ ಕೆಲಸ ಹಾಗೇ ತಡೆದು ನಿಂತಿತ್ತು. ಈಗ ಅದನ್ನು ಪ್ರಕಟಿಸುವ ಸುಯೋಗ ಒದಗಿ ಬಂತು. ಅದಕ್ಕಾಗಿ ಸಂತೋಷವಾಗಿದೆ.

ಶ್ರೀ. ದ. ರಾ. ಬೇಂದ್ರೆ, ಶ್ರೀ. ಕೆ. ಡಿ. ಕುರ್ತಕೋಟಿ, ಶ್ರೀ. ಜಿ. ಜೆ. ಮಂಗಲಗಿ, ಶ್ರೀ. ವರಗಿರಿ ಇವರು ಅಲ್ಪಾವಕಾಶದಲ್ಲಿಯೆ ಅನುವಾದ ಮಾಡಿ ಕೊಟ್ಟಿರದಿದ್ದರೆ ಈ ಸಂಪುಟ ಈಗಲಾದರೂ ಹೊರಕ್ಕೆ ಬರುತಿತ್ತೋ ಇಲ್ಲವೊ ಹೇಳಲಿಕ್ಕೆ ಬಾರದು. ಗ್ರಂಥಮಾಲೆಯ ಮೇಲೆ ವಿಶ್ವಾಸವಿಟ್ಟು ಅನುವಾದ ಮಾಡಿಕೊಟ್ಟ ಈ ನಾಲ್ವರಿಗೂ ನಾನು ಅತ್ಯಂತ ಋಣಿಯಾಗಿದ್ದೇನೆ.

ಕನ್ನಡದಲ್ಲಿಯ ಈ ಗ್ರಂಥಸಂಪಾದನೆಯ ವಿಷಯದಲ್ಲಿ ಒಂದೆರಡು ಮಾತುಗಳನ್ನು ಬರೆಯಬೇಕೆಂದು ಮೊದಲೇನೊ ಒಂದು ವಿಚಾರ ಬಂದಿತ್ತು. ಆದರೆ ಇಂಗ್ಲಿಷಿನಲ್ಲಿ ಸಂಪಾದಿಸಿದ ಎಡ್ಗರ್‌ಸ್ನೋ ಅವರು ಬರೆದ ಪ್ರಸ್ತಾವನೆಯನ್ನು ಓದಿದ ಮೇಲೆ ನಾನು ಬರೆಯಬೇಕೆಂದುಕೊಂಡಿದ್ದ ಮಾತುಗಳೆಲ್ಲ ಕರಗಿಹೋದವು. ನನ್ನ ಮನಸ್ಸಿನಲ್ಲಿ ಬಂದದ್ದೆಲ್ಲವನ್ನೂ ಅವರೇ ಬರೆದು ಬಿಟ್ಟಿದ್ದಾರಲ್ಲ ಎನಿಸಿತು. ಇನ್ನು ನನ್ನ ಕೆಲಸ ಎಂದರೆ: ಅವರು ಬರೆದ ಪ್ರಸ್ತಾವನೆಗೇ 'ಹೌದು, ನಾನೂ ಹಾಗೇ ಬರೆಯಬೇಕೆಂದಿದ್ದೆ. ಎಲ್ಲ ನನ್ನ ಮನಸ್ಸಿನಲ್ಲಿ ಬಂದದ್ದೇ ಬರೆಯಲಾಗಿದೆ.' ಎಂದು ತಲೆಹಾಕುವದಕ್ಕಿಂತ ಹೆಚ್ಚಿಗೇನೂ ಇಲ್ಲ.

ಇಂಗ್ಲೀಷಿನಲ್ಲಿಯೆ ಈ ತರಹದ ಪುಸ್ತಕ ಮೊದಲನೆಯದು ಎನ್ನುವಾಗ ಕನ್ನಡಕ್ಕೆ ಅದು ಮೊದಲನೆಯದು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ.

ಈ ಗ್ರಂಥ ಸಂಪೂರ್ಣ ಓದಿದ ಮೇಲೆ ಎಡ್ಗರ್‌ಸ್ನೋ ಅವರ 'ಐದು ವರ್ಷದ ಶ್ರಮದ ಫಲವಾಗಿ ಇದು ಬಂದಿದೆ' ಎಂಬ ಮಾತಿನ ಸತ್ಯಾಂಶ

ಹೊಳೆಯುದಿರಲಾರದು. ಕತೆಗಳೇನೊ ಮನರಂಜನೆಗೆ ಅನ್ನ ಒದಗಿಸಿದರೂ, ಎಡ್ಗರ್‌ಸ್ನೋ ಅವರ 'ಪ್ರಸ್ತಾವನೆ' ಚೀನೀ ಬರೆಹಗಾರರ ಬಗ್ಗೆ ಬರೆದ ಅವರ 'ಪರಿಚಯ', ಲು-ಶೂನರ ಬಗ್ಗೆ ಬರೆದ ಪ್ರಬೋಧಕ ವಿಮರ್ಶೆ, ಕೊನೆಯಲ್ಲಿದ್ದ ಚೀನೀ ಸಾಹಿತ್ಯಕ್ರಾಂತಿಯ ಇತಿಹಾಸ ಇವೆಲ್ಲ ರಂಜನೆಯ ಸೀಮೆಯನ್ನು ದಾಟಿಸಿ ವಿಚಾರದ ಸೀಮೆಯಲ್ಲಿ ಓದುಗರನ್ನು ಒಯ್ದುಬಿಡುತ್ತವೆ, ಆ ದೃಷ್ಟಿಯಿಂದ ಓದಿದರೆ. ಅಷ್ಟೊಂದು ಸತ್ವ ಇದೆ ಆ ಬರೆಹಗಳಲ್ಲಿ.

ಇಂಗ್ಲಿಷ ಅನುವಾದದ ಬಗ್ಗೆ ಪ್ರಸ್ತಾವನೆಯಲ್ಲಿ ಎಡ್ಗರ್‌ಸ್ನೋ ಅವರು ಹೇಳಿದ ಮಾತುಗಳನ್ನೆ ಕನ್ನಡ ಅನುವಾದದ ಬಗ್ಗೆಯೂ ಹೇಳಬಹುದು. ಅವನ್ನೆ ಲಕ್ಷ್ಯದಲ್ಲಿಟ್ಟುಕೊಂಡು ಓದಿದಲ್ಲಿ ಹೆಚ್ಚು ಸಹಾಯವಾದೀತು.

ಈ ಗ್ರಂಥಪ್ರಕಟನೆಯ ಕಾರ್ಯದಲ್ಲಿ ನನ್ನ ಸ್ನೇಹಿತರನೇಕರು ಅನೇಕ ರೀತಿಯಿಂದ ನೆರವಾಗಿದ್ದಾರೆ: ಮಿತ್ರ ಗೋಕಾಕ ಅವರು ಮಾಲೆಯ ಮೇಲಿನ ಆದರದಿಂದ ತಾವು ಇಂಗ್ಲೆಂಡಿಗೆ ಹೋದಾಗ ಇದರ ಅನುವಾದಕ್ಕಾಗಿ ಪರವಾನಿಗೆ ದೊರಕಿಸಿಕೊಟ್ಟಿದ್ದಾರೆ; ಕವಿವರ್ಯ ಬೇಂದ್ರೆಯವರು ಇದರಲ್ಲಿಯ ಕೆಲ ಕತೆಗಳನ್ನು ಕನ್ನಡಿಸಿ ಕೊಟ್ಟಿದ್ದಾರೆ; ಎಲ್ಲ ಕತೆಗಳನ್ನೂ ಇವರೇ ಮಾಡಬೇಕೆಂಬ ಆಶೆಯಿದ್ದರೂ ಅದು ಸಫಲವಾಗಲಿಲ್ಲ. ಪ್ರಸಂಗ ಅನಿವಾರ್ಯವಾದ್ದಾಗ ಮಿತ್ರರಾದ ಶ್ರೀ. ಮಂಗಲಗಿ, ಕೀರ್ತಿ ಕುರ್ತಕೋಟಿ, ವರಗಿರಿ ಇವರು ನನ್ನ ಬೇಡಿಕೆಗೆ ಒಪ್ಪಿಕೊಂಡು ಉಳಿದೆಲ್ಲ ಕತೆಗಳನ್ನು ಅನುವಾದಿಸಿ ಕೊಟ್ಟಿದ್ದಾರೆ; ಇವರೆಲ್ಲರಿಗೂ ನಾನು ತುಂಬ ಉಪಕೃತನಾಗಿದ್ದೇನೆ.

"ಇಂಗ್ಲಿಷ ಸಂಪುಟದ ಸಂಪಾದಕರಿಂದ, ಮತ್ತು ಪ್ರಕಾಶಕರಿಂದ ಪರವಾನಿಗೆ ಕೊಡಿಸುವ ಕಾರ್ಯದಲ್ಲಿ ಶ್ರೀ. ಮುಲಕರಾಜ ಆನಂದ ಅವರು ಶ್ರೀ. ಗೋಕಾಕರವರಿಗೆ ತುಂಬಸಹಾಯ ಸಲ್ಲಿಸಿದ್ದಕ್ಕಾಗಿ ಅವರಿಗೂ, ಪ್ರಕಾಶಕರಿಗೂ, ಸಂಪಾದಕರಿಗೂ ನಾನು ಅತ್ಯಂತ ಋಣಿಯಾಗಿದ್ದೇನೆ.

ಅಲ್ಪಾವಕಾಶದಲ್ಲಿಯೆ ಈ ೪೫೦ ಪುಟದ ಗ್ರಂಥವನ್ನು ಮುದ್ರಿಸಿಕೊಟ್ಟ ಹಿಂದಮಾತಾ ಮುದ್ರಣಾಲಯದವರಿಗೂ ನಾನು ಕೃತಜ್ಞನಾಗಿದ್ದೇನೆ.

—ಸಂಪಾದಕ

# ಪ್ರಸ್ತಾವನೆ

ಈ ಪುಸ್ತಕ ಯಾಕೆ ಮತ್ತು ಹೇಗೆ ವಿರಚಿತವಾಯಿತೆಂಬುದರ ಬಗ್ಗೆ ಸ್ವಲ್ಪ ತಿಳಿಸಿ ಹೇಳುವದು ಅಗತ್ಯವೆನಿಸುತ್ತದೆ. ಈ ಕೃತಿಯು ಹಿಂದೆ ಐದು ವರ್ಷಗಳ ಕಾರ್ಯ ಅಡಗಿದೆ. ಇದರ ಉದ್ದೇಶ, ಅರ್ಧ ಕುತೂಹಲ, ಅರ್ಧ ಪ್ರಯೋಗದ ಆಸೆಯಿಂದ ಕೂಡಿದೆ. ಆದರೆ ನನ್ನ ಮಟ್ಟಿಗೆ ಮಾತ್ರ, ಪಾಶ್ಚಿಮಾತ್ಯರು "ಆಧುನಿಕ ಜೀನದ ಕಲ್ಪಕಶಕ್ತಿ ಎತ್ತ ಸಾಗಿದೆ?" ಎಂದು ಕೇಳುವ ಪ್ರಶ್ನೆಗೆ ಉತ್ತರ ದೊರಕಿಸಿ ಹೇಳುವದೇ ಆಗಿದೆ.

ಈ ದೇಶದಲ್ಲಿ ಇರುವ ಯಾವನೊಬ್ಬನಿಗೂ, ತಾನೊಂದು, ಜೀವಂತ ಕಲೆಯಿಂದ ಚೈತನ್ಯಪಡೆದ ಜನರ ನಡುವೆ ಇರುತ್ತೇನೆಂದು ಭಾಸವಾಗದೆ ಇರದು. ಜಗತ್ತಿನ ತೀರ ಪ್ರಾಚೀನವಾದ ಮತ್ತು ನಿರರ್ಗಳವಾದ ಸಂಸ್ಕೃತಿಯಲ್ಲಾದ ಬದಲಾವಣೆ, ಹಳೆಯ ಸಾಂಪ್ರದಾಯಗಳ ಏಳು ಸುತ್ತಿನ ಕೋಟೆಯ ಪತನ, ಮತ್ತು ನವಸೃಷ್ಟಿನಿರ್ಮಿತಿಗೆ ನಡೆದ ಒಳ ಮತ್ತು ಹೊರ ಹೋರಾಟ; ಶತಮಾನಗಳಿಂದ, ನೀತಿಯುತ, ಗುಣಯುಕ್ತ ಮತ್ತು ಮಿತವೆಂದು ತಿಳಿದ ವಸ್ತು, ಸಂಸ್ಥೆ ಮತ್ತು ವಿಚಾರಗಳ ಮೇಲೆ ಕೆಡವುತ್ತಿರುವ ವಿಮರ್ಶೆಯ ತೀಕ್ಷ್ಣ ಬೆಳಕು; ಕಾಲ ದೇಶಗಳ ನಿರ್ಣಯದಲ್ಲಿ ಹೊಸ ಶೋಧನೆ; ಪೂರ್ವ ಏಶಿಯಾದ ಎಲ್ಲ ಭಾಗಗಳಲ್ಲಿ ನಡೆದ, ಶಕ್ತಿಯುತವೂ ಅರ್ಥಪೂರ್ಣವೂ ಆದ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ರಾಂತಿ ಈ ವಿರೋಧ ಮತ್ತು ಘರ್ಷಣದ ರಂಗಗಳಲ್ಲಿಯೇ, ಇಂದು ಚೀನದ ಮಾನವರ ಜೀವನಪ್ರವಾಹ ರಭಸದಿಂದ ಹರಿಯುತ್ತದೆ. ಭೂಮಿಯನ್ನು ಫಲವತ್ತಾಗಿ ಮಾಡುವ ಮತ್ತು ನವೀನ ಕಲೆಯಲ್ಲಿ ಜೀವನವನ್ನು ತುಂಬುವ ಕ್ರಾಂತಿಗೆ ಇವೇ ಕಾರಣಗಳು.

ಸುತ್ತಲಿನ ವಾತಾವರಣದೊಡನೆ ಸಮರಸನಾದ ಯಾವ ವ್ಯಕ್ತಿಯೂ,

ಚೀನದಲ್ಲಿ ನಡೆದ ಬುದ್ಧಿಯ ಚಟುವಟಿಕೆಗಳನ್ನು ನೋಡಿ ಆಶ್ಚರ್ಯ ಹೊಂದದೆ ಇರಲಾರ. ಇದೇ ನನಗಾದ ಅನುಭವ. ಚೀನದ ಮೇಲೆ ಪಾಶ್ಚಿಮಾತ್ಯರೂ ಮತ್ತು ಸ್ವತಃ ಚೀನೀಯರೂ ಬರೆದ ನೂರಾರು ವಿಮರ್ಶಾತ್ಮಕ ಲೇಖನಗಳೂ ನನ್ನನ್ನು ಸಮಾಧಾನಗೊಳಿಸಲಿಲ್ಲ. ಅವರೆಲ್ಲ ಗತಕಾಲದ ವೈಭವ ಮತ್ತು ಮೊದಲೇ ಗೊತ್ತಾದ ಸಂಸ್ಕೃತಿ ಮತ್ತು ತೊಡಕುಗಳನ್ನೇ ಒತ್ತಿ ಹೇಳಿದ್ದರು. ಬೇರೆ ದೇಶದ ಬರಹಗಾರರಿಗೆ ಚೀನದ ಹೃದಯದ ಆಳ ಗೊತ್ತಾಗಿಲ್ಲ. ಮತ್ತು ಚೀನವನ್ನು ಅಭ್ಯಾಸ ಮಾಡುವ ವಿದ್ಯಾರ್ಥಿ, ಬಡಲಾವಣೆಯ ಸನ್ನೆಗೇ ಹೆದರುತ್ತ ಅವನ್ನು ನಿರ್ಲಕ್ಷಿಸಿದ. ಎಷ್ಟೋ ಚೀನೀ ಬರಹಗಾರರು ಆಧುನಿಕ ಚೀನವನ್ನು ಹೀಯಾಳಿಸಿದರು; ಇಲ್ಲವೆ ಬೇರೆ ದೇಶದ ಓದುಗನ ರಸಿಕತೆಗೆ ತಕ್ಕಂತೆ ಸುಳ್ಳುವೇಷ ಹಾಕಿ ತೋರಿಸಿದರು. ಆದರೆ ಇದೆಲ್ಲ, ಲಿನ್-ಯುಟಾಂಗ್‌ನ " ನನ್ನ ದೇಶ ಮತ್ತು ನನ್ನ ಜನ " ಪ್ರಕಟವಾಗುವದಕ್ಕಿಂತ ಮೊದಲು.

ಚೀನಿ ಪಂಡಿತ ತನ್ನ ಬಗ್ಗೆ ಏನು ತಿಳಿದುಕೊಳ್ಳುತ್ತಾನೆ, ಏನು ಮಾತನಾಡುತ್ತಾನೆ, ಮತ್ತು ಏನು ಚೀನೀ ಭಾಷೆಯಲ್ಲಿ ಬರೆಯುತ್ತಾನೆಂಬುದನ್ನು ನಾನು ತಿಳಿಯಬೇಕಾಗಿತ್ತು. ಇಂದಿನ ಮೇಲಿನ ಮತ್ತು ಕೆಳಗಿನ ವರ್ಗದ ಚೀನೀಯರು ಯಾವ ರೀತಿಯಲ್ಲಿ ಕೆಲಸ ಮಾಡುತ್ತಾರೆ, ನಡೆಯುತ್ತಾರೆ, ಪ್ರೀತಿಸುತ್ತಾರೆ, ಮತ್ತು ಹೇಗೆ ವಿಚಾರಿಸುತ್ತಾರೆ? ಈಗಿನ ದಿನಗಳಲ್ಲಿ ಕಾನ್-ಫ್ಯೂಸಿಯಸ್, ಮೆನ್ಸಿಯುಸ್, ಶೂನ್-ಟ್ಸ್, ಮತ್ತು ಮೊ-ಟೀ ಇವರ ಹೆಸರುಗಳು ಅವರಲ್ಲಿ ಭಕ್ತಿಯನ್ನು ಹುಟ್ಟಿಸುವದಿಲ್ಲ. ಹಾಗಾದರೆ ಅವರಿಗೆ ಅರ್ಥಪೂರ್ಣವಾದದ್ದು ಯಾವದು? ಅವರ ಜೀವನೋದ್ದೇಶ ಎಲ್ಲಿಂದ ಬರುತ್ತಿವೆ? ಜಪಾನ ಮತ್ತು ಬೇರೆ ಪಾಶ್ಚಿಮಾತ್ಯ ರಾಷ್ಟ್ರಗಳ ಹಿಂಸಾಚಾರ ಕಲಾವಿದನ ಹೃದಯದಲ್ಲಿ ಹೇಗೆ ಒಡಮೂಡಿದೆ? ಮತ್ತು ಅವನು ಇವನ್ನು ಹೇಗೆ ಪ್ರಕಟಿಸುತ್ತಾನೆ? ಅದರಲ್ಲಿಯೂ ತನ್ನಂತೆಯೇ ಇದ್ದ ಓದುಗರಿಗಾಗಿದ್ದ ಕಲ್ಪಕಸಾಹಿತ್ಯದಲ್ಲಿ ಹೇಗೆ ಮೂರ್ತಗೊಳಿಸುತ್ತಾನೆ. ಆ ಲಲಿತಸಾಹಿತ್ಯ ಕೇವಲ ಚೀನೀ ಜನರ ಸೌಂದರ್ಯದೃಷ್ಟಿಗಾಗಿಯಲ್ಲದೆ, ಬೇರೆ ದೇಶದ ಓದುಗರನ್ನು ಸಂತೋಷಗೊಳಿಸಲಿಕ್ಕಾಗಲಿ ಇಲ್ಲವೆ, ಪರದೇಶದ ಹುಚ್ಚು

ಭಾವನೆಗಳನ್ನು ತುಂಬುವದಕ್ಕಾಗಲಿ ಅಥವಾ ಪಾಶ್ಚಿಮಾತ್ಯರಿಗಿದ್ದ 'ಅಪೂರ್ವ' 'ವಿಲಕ್ಷಣ' 'ಚಿತ್ರಕ' ಕುತೂಹಲಗಳನ್ನು ತೃಪ್ತಿಪಡಿಸ ಲಿಕ್ಕಾಗಲಿ ಇಲ್ಲ.

ಆದರೆ ಈ ಬಗೆಯ ಲಲಿತಸಾಹಿತ್ಯವನ್ನು ನಾನು ನೋಡಿದಾಗ, ಈ ರೀತಿಯ ಸಾಹಿತ್ಯ ಇಂಗ್ಲಿಷಿನಲ್ಲಿಯೇ ಇಲ್ಲದ್ದನ್ನು ನೋಡಿ ಆಶ್ಚರ್ಯ ವಾಯಿತು. ಮಹತ್ವದ ಯಾವ ಚೀನೀ ಕಾದಂಬರಿಯೂ ಬೇರೆ ಭಾಷೆ ಗಳಲ್ಲಿ ಅನುವಾದಿತವಾಗಿಲ್ಲ; ಕೆಲವು ಸಣ್ಣಕತೆಗಳು ಕೆಲವೊಂದು ಕ್ಷಣಿಕ ಜೀವನದ ಪತ್ರಿಕೆಗಳಲ್ಲಿ ಬಂದಿವೆ. ಇದು ೧೯೩೩ರಲ್ಲಿ. ಚೀನದ ಮಾರ್ಗ ಸಾಹಿತ್ಯವೂ ಬಹಳ ಪ್ರಕಟವಾಗಿಲ್ಲ. ಶುಯಿ-ಹು-ಚ್ವಾನ್ ಈ ಕಾವ್ಯವನ್ನು 'ಪರ್ಲ್‌ಬಕ್' ಸುಂದರವಾಗಿ 'ಎಲ್ಲರೂ ಬಾಂಧವರು' ಎಂದು ಹೆಸರಿಟ್ಟು ಅನುವಾದಿಸಿದರು. 'ಹುಂಗ್-ಚೌ-ಮೆಂಗ್' ಅಥವಾ 'ಕೆಂಪು ಮನೆಯ ಕನಸು' ವೆಂಬವೊನ್ನ್ನೆ ಭಾಷಾಂತರಿಸಲ್ಪಟ್ಟಿತು; ಪ್ರಾಚೀನ 'ಲಿಯೊ ತ್ಸಾಯಿ'ಯ ಇಂಗ್ಲಿಷ್ ಭಾಷಾಂತರವನ್ನು ಹರ್ಬರ್ಟ್ ಗಾಯಿಲ್ಸರು 'ಚೀನಿ ಸ್ಟುಡಿಯೋದ ವಿಚಿತ್ರ ಕತೆಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ೧೯೨೫ರಲ್ಲಿ ಬ್ರೆವಿಟ್ ಟೇಲರರು 'ಸ್ಯಾನ್-ಕುವೊ' ಅಥವಾ 'ಮೂರು ರಾಜ್ಯಗಳು' ಇವನ್ನು ಭಾಷಾಂತರಿಸಿದರು. ಆದರೆ ಆಧುನಿಕ ಕ್ರಾಂತಿ ಸಾಹಿತ್ಯದ ಕೆಲವು ಭಾಗಗಳು ಮಾತ್ರ ಇಂಗ್ಲಿಷಿನಲ್ಲಿ ಬಂದವು.

ನಾನು ಎಷ್ಟೋ ಚೀನಿ ಮತ್ತು ಪರದೇಶದ ಬರೆಹಗಾರರನ್ನು ಇದರ ವಿಷಯ ಕೇಳಿದೆ. ಪರದೇಶದ ಸಾಹಿತಿಗಳು, ಚೀನೀ ಭಾಷೆಯನ್ನು ಬಲ್ಲ ವರು ಕೂಡ, ಅದರಲ್ಲಿ ಬೆಲೆಯುಳ್ಳದ್ದೇನೂ ಇಲ್ಲವೆಂದೇ ಹೇಳಿದರು. ಆಧು ನಿಕ ಚೀನಾ ಅಂಥ ಮಹಾಕೃತಿಗಳನ್ನು ನಿರ್ಮಿಸಿರದಿದ್ದರೂ, ಆ ಸಾಹಿತ್ಯ ದಲ್ಲಿ ವೈಜ್ಞಾನಿಕ, ಮತ್ತು ಸಾಮಾಜಿಕ ಮಹತ್ವವಿದೆಯೆಂದೂ, ಮತ್ತು ಹಾರ್ದಿಕ ಸಂಬಂಧದ ಸಲುವಾಗಿಯಾದರೂ ಅದು ನಮಗೆ ತಿಳಿಯ ಬೇಕೆಂದೂ ನಾನು ವಾದಿಸಿದೆ. ವೇಗವಾಗಿ ಬೆಳೆಯುವ ಚೀನದ ಮುದ್ರ ಣಾಲಯದಿಂದ ಹೊರಗೆ ಬೀಳುವ, ಮತ್ತು ದೈನಿಕ, ಮಾಸಿಕ ಪತ್ರಿಕೆಗಳಲ್ಲಿ ಪ್ರಕಟವಾಗುವ ಸಾಹಿತ್ಯದಲ್ಲಿ ಮತ್ತು ಸಂಸ್ಕೃತಿ ವಿಚಾರಗಳ ಬೆಳವಣಿಗೆ

ಯನ್ನು ರೂಪಿಸುವ ಶಕ್ತಿ ಇದ್ದೇ ಇದೆಯೆಂದು ನನಗನಿಸಿತು. ಎಷ್ಟೋ ಚೀನೀಯರು ಇದನ್ನು ಒಪ್ಪಿದರು. ೧೯೧೭ರ ಹೊಸ ಸೃಷ್ಟಿಯಿಂದ ಸುರು ವಾದ ಸಾಹಿತ್ಯದ ಶಕ್ತಿ ಕೇಂದ್ರಿಕೃತವಾದ ಸಣ್ಣಕತೆಗಳ ಕ್ಷೇತ್ರವನ್ನು ನನಗೆ ತೋರಿಸಿದರು. ಆದರೆ ಯಾರು ಪಾಶ್ಚಿಮಾತ್ಯ ದೇಶಕ್ಕೆ ಅಜ್ಞಾತವಾದ ಆ ಪ್ರಾಂತದಲ್ಲಿ ಕಾಲಿಡಬೇಕು ? ಯಾರು ಆರಿಸಿ, ಭಾಷಾಂತರಿಸಿ, ಸಂಪಾದಿಸ ಬೇಕು ?

ಲು-ಶೂನ್ ಮತ್ತು ಲಿನ್-ಯು ಟಾಂಗ್‌ರನ್ನು ಕಂಡಾಗ, ಈ ಕೆಲಸ ವನ್ನು ನಾನೇ ವಹಿಸಿಕೊಳ್ಳಬೇಕೆಂದು ನಿರ್ಣಯುವಾಯಿತು. ಲು-ಶೂನ್‌ರ ಉದಾರವಾನವತೆ, ಸಹಾನುಭೂತಿಯ ಕಾವು, ಸುತ್ತಲಿನ ಜೀವನದ ಸೂಕ್ಷ್ಮಪರಿಶೀಲನೆ ನನ್ನನ್ನು ಮರುಳುಗೊಳಿಸಿದವು. ಇದರಿಂದಾಗಿ ಅವರ ಲೇಖನಗಳಲ್ಲಿ ಉತ್ತಮ ವಿಮರ್ಶೆ ದೊರಕಬಹುದೆಂದೆನಿಸಿತು. ಲಿನ್-ಯು-ಟಾಂಗರ, ಬುದ್ಧಿಸಾಮರ್ಥ್ಯ, ಇಂಗ್ಲಿಷ ಭಾಷೆಯ ಜೊತೆಗಿದ್ದ ಆಟಗಾರಿಕೆ, ವೇಧಕವಾದ ಮತ್ತು ಪರಿಣತವಾದ ಟೀಕೆ, ಸರಸಸಜ್ಜನಿಕೆಯ ಸ್ವಚ್ಛಂದತೆ ಈ ಗುಣಗಳು, ಅಪಾರ ಚೈತನ್ಯವೊಂದು ಚೀನೀ ಭಾಷೆಯಲ್ಲಿದೆ ಮತ್ತು ಇಂಗ್ಲಿಷಿನಲ್ಲಿ ತರಲೇಬೇಕೆಂದು ಸೂಚಿಸಿದವು.

ನನಗಾಗ ಚೀನೀ ಭಾಷೆ ಸಂಪೂರ್ಣ ಗೊತ್ತಿರಲಿಲ್ಲ. ಆದರೆ ಯಾಓ-ಶಿನ್-ಸುಂಗ್‌ರು ನೆರವಿಗೆ ಬಂದರು. ಇವರು ತರುಣ ವಿಮರ್ಶಕರೂ ನಾಟಕಕಾರರೂ, ಹರಟೆಗಾರರೂ, ಮತ್ತು ಲು-ಶೂನ್‌ರ ಗೆಳೆಯರೂ ಇರು ವರು. ಇಬ್ಬರೂ ಕೂಡಿ ಲು-ಶೂನ್‌ರ 'ನಾಹನ್'ವನ್ನು ಬೆಳಕಿಗೆ ತಂದೆವು. ಈ ಕತೆ, ಆಧುನಿಕ ಚೀನದ ಸಣ್ಣಕತೆಯ ಬೆಳವಣಿಗೆಗೆ ಕಾರಣ ವಾಯಿತೆಂದು ಎಲ್ಲರೂ ಒಪ್ಪಿಕೊಂಡಿದ್ದಾರೆ. ಈ ಸಂಪುಟದಲ್ಲಿಯ ಲು-ಶೂನ್‌ರ ಕಥಾಭಾಗ, ಆ ನೆರವಿನ ಫಲ.

ಮುಂದೆ ಆಧುನಿಕ ವಿಖ್ಯಾತ ಲೇಖಕರ, ಪ್ರಮುಖ ಕತೆಗಳನ್ನಾರಿಸಲು ನಾನು ಎಷ್ಟೋ ಚೀನೀ ಲೇಖಕರ ನೆರವನ್ನು ಬೇಡಿದೆ. ಅವರಲ್ಲಿ ನನ್ನ ಕೃತಜ್ಞತೆಗೆ ಪಾಲುಗಾರರಾದವರೆಂದರೆ, ಸಾಮಾಜಿಕ ಮತ್ತು ರಾಜ ಕೀಯ ರಂಗದಲ್ಲಿ, ರಶಿಯಾದ ಗಾರ್ಕಿಯನ್ನು ನೆನಪಿಗೆ ತರುವ, ಮತ್ತು

ಲೇಖನಗಳಿಂದ ಚೀನದ ಚೆಕಾವ್ಹ್ ಎನಿಸಿದ ಲು-ಶೂನ್; ಚೀನದ ಪ್ರಸಿದ್ಧ ಕಾದಂಬರಿಕಾರ ಮಾ-ಟುನ್; ಟಾ-ಕುಂಗ್-ಪಾಓ, ಲಿಟರರಿ ಸಪ್ಲಿಮೆಂಟದ ಸಂಪಾದಕ ಶಿಯೊ-ಚ್ಯೆನ್; 'ಲಿಟರೇಚರ್'ದ ಸಂಪಾದಕ ಚೆನ್-ಶೆನ್-ಟು; 'ಅನಲೆಕ್ಟ್ಸ್'ದ ಸಂಪಾದಕ ಲಿನ್-ಯು-ಟಾಂಗ್; ಚೀನದ ಅದ್ವಿತೀಯ ಪಂಡಿತ ಕು-ಚೆನ್-ಕಾಂಗ್; ಮೇಲೆ ಹೇಳಿದ ಯಾಓ-ಶಿನ್-ನುಂಗ್; ಇದರಲ್ಲಿಯ ಎರಡು ಕತೆಗಳನ್ನು ಬರೆದ ಮಿಸ್. ಶಿ-ಮಿಂಗ್; ಶೆನ್-ತ್ಸುಂಗ್-ವೆಂಗ್, ಮತ್ತು ಪಾ-ಚಿನ್ (ಇವರಿಬ್ಬರೂ ಆಧುನಿಕ ಸಾಹಿತ್ಯವನ್ನು ರೂಪುಗೊಳಿಸಿದ್ದಾರೆ.)

ಈ ಲೇಖಕರಲ್ಲಿ ಯಾರೂ ವ್ಯಕ್ತಿಶಃ ಈ ಗ್ರಂಥಕ್ಕೆ ಹೊಣೆಗಾರರಲ್ಲ; ಯಾಕಂದರೆ ಯಾವಾಗಲೂ ನಾನು ಅವರ ಉಪದೇಶವನ್ನು ಸ್ವೀಕರಿಸಲಿಲ್ಲ. ನನಗಿದ್ದ ವಿಮರ್ಶೆಯ ನಿರ್ಣಯದಿಂದಲೇ ಗ್ರಂಥ ಮುಂದುವರಿಯಬೇಕು. ಇದಕ್ಕೆ ಬೇಕಾದವರು ನನ್ನನ್ನು ಟೀಕಿಸಬಹುದು. ಚೀನೀ ಲೇಖಕರಲ್ಲಿಯೂ ಮತ್ತು ಓದುಗರಲ್ಲಿಯೂ ಕೂಡ, ಅತ್ಯುತ್ತಮ ಕತೆ ಯಾವದೆಂಬುದರ ಬಗ್ಗೆ ಭಿನ್ನಾಭಿಪ್ರಾಯವಿದೆ. ಇವರೆಲ್ಲರ ಜೊತೆಗೂ ನಾನು ಚರ್ಚೆಯನ್ನೇನೊ ಮಾಡಿದೆ. ಆದರೆ ಈ ಗ್ರಂಥ ಅವರಾರನ್ನೂ ಸಂಪೂರ್ಣವಾಗಿ ಅನುಕರಿಸದಿದ್ದರೂ ಸಾಕಷ್ಟು ಪ್ರಾತಿನಿಧಿಕ ಸಣ್ಣಕತೆಗಳಿಗೆ ಎಡೆಗೊಟ್ಟಿದೆ.

ಲು-ಶೂನರ ಕತೆಗಳನ್ನು ಬಿಟ್ಟು, ಬೇರೆ ಕತೆಗಳ ಭಾಷಾಂತರದಲ್ಲಿ ನೆರವಾದ ಕೆಲವು ಚೀನಿ ಲೇಖಕರಿಗೆ ನನ್ನ ವಂದನೆಗಳು. ಅವರಲ್ಲಿ, ಕು-ಟುಂಗ್-ಚಿ, ಶಿಯೊ-ಚ್ಯೆನ್, ಮತ್ತು ಶಿ-ಮಿಂಗ್, ಇವರಲ್ಲದೆ, ಇಂಗ್ಲಿಷ ಗೊತ್ತಿಲ್ಲದ, ಆಧುನಿಕ ಸಾಹಿತ್ಯವನ್ನು ತಿರಸ್ಕರಿಸುವ ನನ್ನ ಪಂಡಿತರೂ ಬರುತ್ತಾರೆ.

ಚೀನದ ವಿದ್ಯಾರ್ಥಿಗಳು, ಈ ಕತೆಗಳನ್ನು ಮೂಲದ ಜೊತೆಗೆ ಹೋಲಿಸಿ ನೋಡುವಾಗ ಸ್ವಲ್ಪ ಎಚ್ಚರಿಕೆಯಿಂದಿರುವದು ಒಳ್ಳೆಯದು. ಯಾಕಂದರೆ ಭಾಷಾಂತರ ಮಾಡುವಾಗ ತೆಗೆದುಕೊಂಡ ಸ್ವಾತಂತ್ರ್ಯವನ್ನು ನೋಡಿ ಅವರು ದಿಗಿಲುಗೊಳ್ಳಬಹುದು. ಯಾವ ಕತೆಯೂ ಅಕ್ಷರಶಃ ಅನುವಾದವಲ್ಲವೆಂದು ನಾನು ಒಪ್ಪಿಕೊಳ್ಳುತ್ತೇನೆ. ಅಕ್ಷರಶಃ ಭಾಷಾಂತರ

ಹಾಗಬೇಕಾದರೆ ಪ್ರತಿಯೊಂದು ಚೀನೀ ಶಬ್ದಕ್ಕೂ ಪ್ರತಿಯಾದ ಇಂಗ್ಲಿಷ್ ಶಬ್ದ, ಪ್ರತಿಯೊಂದು ಪಡೆನುಡಿಗೂ, ಇಂಗ್ಲಿಷ್ ಪಡೆನುಡಿಯನ್ನು ಹಾಕ ಬೇಕಾಗುತ್ತದೆ.

ನಾನು ಮಾಡಿದ ಪ್ರಯತ್ನ ಇಷ್ಟೇ : ಪ್ರತಿಯೊಂದು ಕೃತಿಯ ಜೀವ ವನ್ನು ತಂದುಕೊಡುವದು. ಮೂಲದ ಫ್ರೋಟೊ ತೆಗೆದುಕೊಳ್ಳುವದಲ್ಲ. ಅದರ ಹಿಂದೆ ಇದ್ದ ಭಾವನೆಗಳನ್ನು ಸಾಧ್ಯವಾದಷ್ಟು ಇಂಗ್ಲಿಷಿನಲ್ಲಿ ತರು ವದು. ಚೀನೀ ಭಾಷೆಯು ಕತೆಗಳ ಅಕ್ಷರಶಃ ಭಾಷಾಂತರದಲ್ಲಿ ಇದು ಅಶಕ್ಯ. ಸಾಧ್ಯವಾದಷ್ಟು ಮೂಲದ ಪಡೆನುಡಿಗಳನ್ನು ಎಷ್ಟೋ ಕಡೆಗೆ ತಂದಿದ್ದೇನೆ. ಅರ್ಥ ಪುಟದಷ್ಟು ಟಿಪ್ಪಣೆ ಬರೆಯಬೇಕಾದ ಕೆಲವು ಶ್ಲೇಷಗಳನ್ನೂ ಪೌರಾ ಣಿಕ ಉಲ್ಲೇಖನಗಳನ್ನೂ ಇಟ್ಟಿಲ್ಲ. ಇದರಿಂದ ಚೀನೀಯರು ವಿಲಕ್ಷಣ ಜನರೆಂದು ಹೇಳುವ ದಂತಕತೆಗೆ ಪ್ರೋತ್ಸಾಹ ಕೊಡಬೇಕಲ್ಲ.

ಇದೆಲ್ಲ ಕೂಡಿ ಕೆಲಸವೇನೂ ಹಗುರವಾಗಿಲ್ಲ. ಆದರೆ ಬರಿಯ ದಣಿವು ದುಡಿತಗಳನ್ನೆ ಮನಸ್ಸಿನಲ್ಲಿಟ್ಟರೆ ನಾನು ಇದರಲ್ಲಿ ಹೋಗಲೇ ಬಾರದಾಗಿತ್ತು. ಈ ರೀತಿಯ ಸಂಕಲನಗಳನ್ನು ನಕಲು ಮಾಡುವವದಕ್ಕಿಂತ, ನಾನೇ ಇನ್ನೂ ಮೂರು ಪುಸ್ತಕಗಳನ್ನು ಬರೆದರೆ ಒಳ್ಳೆಯದು.

ಇನ್ನೂ ಎಷ್ಟೋ ಸುಂದರವಾದ ಕತೆಗಳನ್ನು ಹಾಕಬಹುದಿತ್ತು. ಆಗರೆ ಅವೆಲ್ಲ ದೀರ್ಘವಾದವುಗಳು. ಅವುಗಳಲ್ಲಿ ಕೆಲವನ್ನು ಕಾದಂಬರಿ ಗಳೆಂಮೋ ನೀಳ್ಗತೆಗಳೆಂಮೊ ಕರೆಯಬಹುದು. ಆದರೆ ಅವುಗಳ ಕಥಾ ಕ್ಷೇತ್ರ, ಕ್ರಿಯೆ, ಮತ್ತು ಸನ್ನಿವೇಶಗಳೆಲ್ಲ ಸಣ್ಣಕತೆಯದೇ. ಲು-ಶೂನರ ಹಾ-ಕ್ಯೂ-ಚೆಂಗ್-ಚೌನ್, ಮಾ-ಟುನ್‌ರ 'ಬೇಸಿಗೆಯ ರೇಶಿಮೆ ಹುಳ ಗಳು' ಮತ್ತು ಶೆನ್-ತ್ಸುಂಗ್‌ರ ಪ್ರಸಿದ್ಧ 'ಫ್ರಾಂಟಿಯರ್ ಸಿಟಿ' ಇವು ಈ ರೀತಿಯ ಕತೆಗಳು. ಲಾಃಶೆ, ಕೌ-ನೊ-ಜೊ, ಚಾಂಗ್-ತ್ಸ-ಪಿಂಗ್, ಮತ್ತು ವ್ಯಾಂಗ್-ಟುಂಗ್‌ರ ಕೃತಿಗಳಲ್ಲಿ ಇವನ್ನು ಕಾಣಬಹುದು.

ಕೆಲವೊಂದು ಕತೆಗಳನ್ನು ಬಿಟ್ಟರೆ, ಉಳಿದೆಲ್ಲವುಗಳನ್ನು ಸಂಕ್ಷೇಪಿಸ ಲಾಗಿದೆ; ಅದು ಒಳ್ಳೆಯದೆಂದು ಚೀನೀ ವಿಮರ್ಶಕರೂ ಒಪ್ಪಿಕೊಂಡಿದ್ದಾರೆ. ಚೀನಿ ಲೇಖಕರಿಗೆ ದೊರೆಯುವ ಪ್ರತಿಫಲ ಸ್ವಲ್ಪ. ಸಾವಿರ ಶಬ್ದಗಳಿಗೆ ಸಾಧಾ

ರಣ ೩-೪ ಚೀನೀ ಡಾಲರುಗಳಷ್ಟು; ೫ ಡಾಲರಿಗಿಂತ ಹೆಚ್ಚಾಗುವದೇ ಇಲ್ಲ. ಇದರಿಂದ ಒಳ್ಳೆಯ ಲೇಖಕರನ್ನುಳಿದು, ಉಳಿದವರು ತಮ್ಮ ಮಾಲೆಯಲ್ಲಿ ಮಣಿಗಳನ್ನು ಪೋಣಿಸಿಯೇ ಪೋಣಿಸುತ್ತಾರೆ. ಆಗಾಗ ಕತೆಗಳಿಗೆ, ಸುಂದರವಾದ ಆದರೂ ಅನವಶ್ಯಕವಾದ ವರ್ಣನೆ ಮತ್ತು ಸಂವಾದಗಳನ್ನು ಜೋಡಿಸುತ್ತಾರೆ. ಇದರಿಂದ ಕತೆಯು ಬೆಳವಣಿಗೆಗೆ ಯಾವ ವಿಧದಲ್ಲೂ ಸಹಾಯವಾಗುವುದಿಲ್ಲ; ಹೀಗೆ ಕತೆಯ ಸೌಂದರ್ಯವನ್ನೂ, ಸುಸಂಗತಿಯನ್ನೂ, ಹೊಟ್ಟೆ ತುಂಬಿಸುವದರ ಸಲುವಾಗಿ ಕೆಡಿಸುತ್ತಾರೆ. ಪಶ್ಚಿಮದಲ್ಲಿ ಇಂಥ ಸಂಗತಿ ಗೊತ್ತೇ ಇಲ್ಲ.

ಈ ಕುಂದು, ಎಷ್ಟೋ ತೀರ ಮನೋಹರವಾದ ಕತೆಗಳಲ್ಲಿಯೇ ಕಂಡುಬಂದು ಭಾಷಾಂತರದಲ್ಲಿ ಇನ್ನೂ ಒಡೆದು ಕಾಣುತ್ತದೆ. ಚೀನೀ ಜನರು ಇದನ್ನು ಲಕ್ಷ್ಯಕ್ಕೆ ತರುವದಿಲ್ಲ. ಹಿಂದಿನ ಕಾಲದ ಕತೆ ಹೇಳುವವರು ಉಪಯೋಗಿಸುತ್ತಿದ್ದ ಜಾಣತನಗಳಲ್ಲಿ ಒಂದು. ಅವನು ಈ ರೀತಿ ಮಾಡುವದಕ್ಕೆ ಕಾರಣವಿತ್ತು. ಯಾಕಂದರೆ ರೂಪವಿಲ್ಲದ ಕಾವ್ಯವನ್ನು ಅವನು ರಚಿಸುತ್ತಿದ್ದ. ಆದರೆ ಪಾಶ್ಚಾತ್ಯ ಓದುಗರಿಗೆ ಇದು ಸರಿಬೀಳುವದಿಲ್ಲ. ಆದ್ದರಿಂದ ಕೆಲವು ಕತೆಗಳಲ್ಲಿ ಕೆಲವು ಭಾಗಗಳನ್ನು ತೆಗೆದುಹಾಕುವ ಧೈರ್ಯ ಮಾಡಿದೆ. ' ಹಾ-ಓ ' ಮತ್ತು ' ಆತ್ಮಹತ್ಯೆ ' ಈ ಕತೆಗಳ ವಿಷಯದಲ್ಲಿ ಲೇಖಕರು ಒಪ್ಪಿಗೆ ಕೊಟ್ಟರು. ಆದರೆ ' ವಿಕೃತಿ 'ಯ ವಿಷಯದಲ್ಲಿ ಮಾತ್ರ ಲೇಖಕರು ಒಪ್ಪಿಗೆ ಕೊಡಲಿಲ್ಲ.

ಆದರೆ ಸಂಪಾದಕನ ಪಾಪ ಇಷ್ಟಕ್ಕೇ ಮುಗಿಯಲಿಲ್ಲ. ಇದಲ್ಲದೆ ಕತೆಗಳಲ್ಲಿಯೇ ಅಸ್ಪಷ್ಟ ಮತ್ತು ಕ್ಲಿಷ್ಟವೆಂದು ಕಾಣುವ ಸಂದರ್ಭದಲ್ಲಿ, ದೀರ್ಘವಾದ ವಿವರಣೆಯನ್ನು ಕೊಡಬೇಕಾಯಿತು. ಉದಾಹರಣೆಗೆ 'Voyage Beyond Law'ದಲ್ಲಿ, ಮೂಲದಲ್ಲಿ ಸೆನ್ಸಾರದವರನ್ನು ತೃಪ್ತಿಗೊಳಿಸಲು ಅಸ್ಪಷ್ಟವಾಗಿರಿಸಿದ ಮನುಷ್ಯರು ಮತ್ತು ಸನ್ನಿವೇಶಗಳನ್ನು ವರ್ಣಿಸಲು ಅರ್ಥವನ್ನು ಹೆಚ್ಚು ವಿವರಿಸಬೇಕಾಯಿತು. ಚೀನೀ ಅಕ್ಷರ ಮತ್ತು ಶಬ್ದಗಳಿಂದಲೇ ಬರಬಹುದಾದ ನಾದಸಂಪತ್ತು ಅನುವಾದದಲ್ಲಿ ಅಲ್ಲಲ್ಲಿ ಬರಲಾರದು. ಕೆಲವು ಕಡೆ ಬಣ್ಣ ಹಾಕಿಯೋ, ಶಬ್ದಗಳನ್ನು ಹಿಗ್ಗಿಸಿಯೋ,

ಮೂಲದಲ್ಲಿಯ ಭಾವ ವಿಚಾರಗಳಿಗೆ ಆದಷ್ಟು ಹೊಂದಿಕೆಯಾಗುವಂತೆ ಮಾಡಿದೆ.

ಇದೆಲ್ಲ ಮಾಡಿಯೂ, ಭಾಷಾಂತರ ಅಕ್ಷರಶಃ ಇರಲೇಬಾರದೆಂದು ಯಾರೂ ವಾದಿಸಬಾರದು. ಹಾಗೆ ಇರದಿದ್ದರೆ ಇದಕ್ಕೂ ಕೀಳಾಗಬಹುದು. 'ಸಿಗ್‌ಫ್ರೀಡ್ ಟ್ರೆಬಿಚ್'ನ 'ಜಿಟ್ಟಾಳ ಪರಿತಾಪ'ವನ್ನು ಅನುವಾದಿಸಿದ ಬರ್ನಾರ್ಡ ಶಾನಷ್ಟು ನಾನು ಕೆಟ್ಟಿಲ್ಲ. ಅನುವಾದವೊಂದು ಸಣ್ಣ ಸಂಗತಿ ಯೆಂದು ತಿಳಿದ ಅವನು, ಆ ಆಸ್ಟ್ರಿಯಾದ ಆವಿದ್ಧ ಪ್ರಯೋಗವನ್ನು ಒಂದು ಪ್ರಹಸನಕ್ಕೆ ತಿರುಗಿಸಿದ್ದಾನೆ. ಇಲ್ಲಿಯ ಕತೆಗಳು ಮೂಲದ ಜೀವವನ್ನೂ ಭಾವವನ್ನೂ ಕಳೆದುಕೊಂಡಿಲ್ಲ. ಅವುಗಳ ಸಾಧನೆಗಳು, ಮುಖ್ಯ ಉದ್ದೇಶ, ಚೀನಾದ ದೈವದಲ್ಲಿರುವ ತೊಡಕುಗಳನ್ನೆಲ್ಲ ಪ್ರಾಮಾಣಿಕವಾಗಿ ತೋರಿಸಿದೆ. ಓದುಗನಿಗೆ ಮೂಲದ ಪ್ರತಿಭೆ ದೊರೆಯುಲಿಕ್ಕಿಲ್ಲ. ಜಗತ್ತಿನ ಐದರಲ್ಲಿ ಒಬ್ಬನು ವಾಸಿಸುವ ದೇಶದ, ಇತಿಹಾಸ, ಜೀವನಸಂಸ್ಕೃತಿಯ ಒಂದು ನಿದರ್ಶನ ಇಲ್ಲಿ ಸಿಗುತ್ತದೆ. ಅಲ್ಲಿಯ ನದಿ, ಬೈಲು, ಕೊಳ್ಳ, ಗುಡ್ಡ ಅಲ್ಲಿಯ ಜನರ ಹೃದಯ, ಬುದ್ಧಿ, ಒಮ್ಮೊಮ್ಮೆ ಚೀನದ ಆತ್ಮದ ದರ್ಶನ ಭವ್ಯವಾಗಿ ಕಾಣುತ್ತಿದೆ.

ಗ್ರಂಥದ ಪುಟಗಳನ್ನೋದುವಾಗ, ಇದರಲ್ಲಿ ಅಡಕವಾದ ಮತ್ತು ಆಗದೆ ಇದ್ದ ಬರೆಹಗಾರರ ಹಿನ್ನಲೆ ಅವಶ್ಯವಾಗಿ ಬೇಕು. ಅದರ ಸಲುವಾಗಿ, ಚೀನಿ ಸಾಹಿತ್ಯದ ಬೆಳವಣಿಗೆಯನ್ನು ಕುರಿತು ಒಂದು ಲೇಖನವನ್ನು, ಅವರ ಬಗ್ಗೆ ಅಧಿಕಾರದಿಂದ ಬರೆಯಬಲ್ಲ ನಿಮ್‌ವೇಲ್ಸರು ಬರೆದಿದ್ದಾರೆ. ವಿಸ್ತಾರವಾಗಿ ಶೋಧನೆ ಮಾಡಿ, ಶ್ರಮ ವಹಿಸಿ ಅಭ್ಯಾಸ ಮಾಡಿ, ಚೀನದ ಉತ್ಕೃಷ್ಟ ವಿಮರ್ಶಕರೊಡನೆ ಚರ್ಚಿಸಿ, ಈ ಗ್ರಂಥವನ್ನು ಸಿದ್ಧಗೊಳಿಸಿದೆ. ಈ ರೀತಿಯ ಪೂರ್ಣ ವಿಮರ್ಶಾತ್ಮಕವಾದ ಗ್ರಂಥ ಮೊದಲನೆಯ ಸಲ ಇಂಗ್ಲಿಷದಲ್ಲಿ (ಕನ್ನಡದಲ್ಲಿ) ಬೆಳಕಿಗೆ ಬಂದುದೆಂದು ನಾನು ನಂಬಿದ್ದೇನೆ.

ಪೇಕಿಂಗ್ —ಎಡ್ಗರ್ ಸ್ನೊ

ಜುಲೈ ೧೯೩೬

———

ಪರಿಚಯ

## ಲು–ಶೂನ್

(೧೮೮೧—)

'ಲು-ಶೂನ್' ಎಂಬುದು ಈ ಲೇಖಕರ ಸಾಹಿತ್ಯಕ-ನಾಮ, ಅಥವಾ ಕಾವ್ಯನಾಮ. ಈ ಗಣ್ಯ ಚೀನಾ ಬರಹಗಾರರ ನಿಜವಾದ ಹೆಸರು 'ಚೌ-ಶೂ-ಚೆನ್' ಎಂದಿದೆ. ಅವರು ಚೆಕಿಯಾಂಗ್ ಪ್ರಾಂತದ 'ಶೋಹ್-ಶಿಂಗ್' ಎಂಬ ಪಟ್ಟಣದಲ್ಲಿ ೧೮೮೧ನೆಯ ಇಸವಿಯಲ್ಲಿ ಹುಟ್ಟಿದರು. ಇವರ ಮನೆತನದಲ್ಲಿ ಪರಂಪರಾಗತವಾಗಿ ವಿದ್ವಾಂಸರು ಹುಟ್ಟಿಬಂದಿದ್ದಾರೆ. ಇವರ ಅಜ್ಜ 'ಹಾನ್-ಲಿನ್' ಪದವಿಯನ್ನು ಸಂಪಾದಿಸಿದ್ದರು. ಈ ಪದವಿ ಮಂಚೂ ಮನೆತನದ ರಾಜರು ವಿದ್ವಾಂಸರಿಗೆ ದಯಪಾಲಿಸುತಲಿದ್ದ ರಾಜಮರ್ಯಾದೆಗಳಲ್ಲೆಲ್ಲ ಅಗ್ರಗಣ್ಯವಾದುದು. ಈ ಲೇಖಕರ ತಂದೆ-- ಇವರು ಯೌವನದಲ್ಲಿಯೇ ತೀರಿಕೊಂಡರು—ಪ್ರಥಮ ಸರಕಾರೀ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ 'ಸ್ಯೂ-ತ್ಸ-ಏ' ಎಂಬ ಮರ್ಯಾದೆಯನ್ನು ಗಳಿಸಿದ್ದರು.

ಇಂಥ ಮನೆತನದಲ್ಲಿ ಜನಿಸಿದ ಚೌ-ಶೂ-ಚೆನ್‌ರಿಗೆ ಬಾಲ್ಯದಲ್ಲಿಯೇ ಸ್ವಾಭಾವಿಕ ಮಹಾಕಾವ್ಯಗಳ ಶಿಕ್ಷಣ ದೊರೆಯಿತು. ಆದರೆ, ತಂದೆಯ ಮರಣದ ನಂತರ ಇವರಿಗೆ ತಾಪತ್ರಯಗಳು ತಲೆದೋರಹತ್ತಿದವು. ಈ ಹಳೆಯ ವಿದ್ವಾಂಸರಲ್ಲಿ ಹಣವನ್ನು ಹೀರಿಕೊಳ್ಳುವ ಚಾಪಲ್ಯ ಇದ್ದಂತೆ ಕಾಣುವದಿಲ್ಲ. ಯಾಕಂದರೆ ಸಾಹಿತ್ಯಕ-ನೈಪುಣ್ಯ 'ಚೌ' ಮನೆತವನ್ನು ಧನವಂತರನ್ನಾಗಿಯೇನೂ ಮಾಡಿರಲಿಲ್ಲ. ತಂದೆಯ ಮರಣದಿಂದ ಇವರೂ ಇವರ ತಾಯಿಯೂ ನಿರ್ಗತಿಕರಾದರು. ಇವರಿಗೆ ತಿರಿದು ತಿನ್ನುವ ಪ್ರಸಂಗ ಬಂದಿತ್ತು, ಎಂಬ ಅತಿಶಯೋಕ್ತಿಯ ವದಂತಿಯೂ ಇದೆ. ಆದರೆ ಆದರಲ್ಲಿ ಅರ್ಥವಿಲ್ಲ. ಮೊದಮೊದಲು ಇವರ ತಾಯಿ ಅನ್ಯರಿಂದ ಸಹಾಯ ಕೋರಿದ್ದುದುಂಟು. ಅವರು ಬಹಳ ಕಷ್ಟ ಸೋಸಿ ಮಗನನ್ನು ನ್ಯಾನ್‌ಕಿಂಗಿಗೆ ಕರೆದೊಯ್ದರು; ಅಲ್ಲಿ ಸರಕಾರೀ ಶಾಲಿಗಳೊಂದರಲ್ಲಿ ಅತಿ ಪ್ರಯಾಸದಿಂದ ಪ್ರವೇಶವನ್ನು

ದೊರಕಿಸಿದರು. ಆಮೇಲೆ ಅವರು ಸಾರ್ವಭೌಮ ನೌಕಾ ವಿದ್ಯಾಲಯದಲ್ಲಿ ಕೆಲವು ಕಾಲ ಅಭ್ಯಾಸ ಮಾಡಿ ಕಡೆಗೆ ಬಸಿ ಮತ್ತೂ ಯಂತ್ರವಿಜ್ಞಾನಶಾಲೆ ಯಲ್ಲಿ ಪದವೀಧರರಾಗಿ ಹೊರಬಿದ್ದರು. ಮುಂದೆ ಉಚ್ಚ ಶಿಕ್ಷಣಕ್ಕಾಗಿ ಜಪಾನಿಗೆ ಹೋದರು. ಆಗಿನ ಅವರ ವೆಚ್ಚವನ್ನು ಸರಕಾರವೇ ನೋಡಿ ಕೊಂಡಿತು.

ಟೋಕಿಯೋದಲ್ಲಿ ಭಿಷಗ್ವಿಜ್ಞಾನದ ಅಭ್ಯಾಸ ಮುಗಿಸಿಕೊಂಡು ಅವರು ೧೯೦೯ರಲ್ಲಿ ಚೀನಾಕ್ಕೆ ಮರಳಿ ಬಂದರು. ಯುರೋಪಿನಲ್ಲಿ ತಮ್ಮ ಅಭ್ಯಾಸ ವನ್ನು ಮುಂದುವರಿಸಬೇಕೆಂದು ಅವರ ಇಚ್ಛೆ; ಅದು ಸಾಧ್ಯವಾಗಲಿಲ್ಲ. ವೈದ್ಯಕೀಯ ವ್ಯವಸಾಯ ಸುರುವು ಮಾಡಲೂ ಮನಸ್ಸಾಗಲಿಲ್ಲ. ಯಾಕೆಂದರೆ ಅವರು ಕಲಿತ ಅಲ್ಪ ವಿದ್ಯೆಯಿಂದ ಹಿತಕ್ಕಿಂತ ಅಹಿತವೇ ಹೆಚ್ಚಾಗಬಹುದೆಂದು ಅವರು ಭಾವಿಸಿದರು. ಆದುದರಿಂದ ಅವರು ತುಂಬಾ ನಿರಾಶರಾಗಿ, ತಮ್ಮ ತಾಯ್ನಾಡಿನಲ್ಲಿಯೇ ಶಿಕ್ಷಣಕಾರ್ಯವನ್ನು ಕೈಕೊಂಡರು. ೧೯೧೧ರಲ್ಲಿಯ ಕ್ರಾಂತಿಯು ಫಲಕಾರಿಯಾದಾಗ, ಅವರ ಆಶೆ ಕೊನರಿತು, ಉತ್ತೇಜನ ಹೆಚ್ಚಿತು, ಅವರು ತತ್‌ಕ್ಷಣ 'ಪೆಕಿಂಗ್'ಗೆ ಹೋಗಿ, ಅದೇ ತಾನೇ ಚೀನಾ ದೇಶದಲ್ಲಿ ನವಚೈತನ್ಯವನ್ನು ತುಂಬುತಲಿದ್ದ ಬೌದ್ಧಿಕಜೀವನದಲ್ಲಿ ಸಮರಸ ಹೊಂದಿದರು.

ಹದಿನೈದು ವರುಷಗಳ ವರೆಗೆ ಇವರ ಚೈತನ್ಯಮಯ ಜೀವನದ ಕಾರ್ಯಕ್ಷೇತ್ರ ಬಹುಮುಖವಾಗಿತ್ತು. ಶಿಕ್ಷಣಮಂತ್ರಿಗಳ ಕಚೇರಿಯಲ್ಲಿ ಹುದ್ದೆಯೊಂದನ್ನು ಸ್ವೀಕರಿಸಿ, ಅದೇ ಸಮಯಲ್ಲಿ ಮೂರು ಭಿನ್ನ ವಿಶ್ವವಿದ್ಯಾ ಲಯಗಳಲ್ಲಿಯೂ ಪ್ರಾಧ್ಯಾಪಕರಾಗಿ ದುಡಿದರು. ಚೀನೀಯ ಸಾಹಿತ್ಯ ಪುನರುಜ್ಜೀವನದ ತವರುಮನೆಯಾಗಿ, ವಿದ್ಯಾರ್ಥಿಗಳ ಕೂಟದ ರಾಜಕೀಯ ರಣರಂಗದ ಕೇಂದ್ರವಾಗಿ, ಆ ಮೂಲಕ ಅಧಿಕಾರವರ್ಗದ ದೊಡ್ಡ ದೊಡ್ಡ ತೊಂದರೆಗಳ ಉಗಮವಾಗಿ, ಸುಪ್ರಸಿದ್ಧಿಯನ್ನು ಪಡೆದ ಪೆಕಿಂಗ್ ರಾಷ್ಟ್ರೀಯ ವಿಶ್ವವಿದ್ಯಾಲಯವು ಈ ಮೂರು ವಿಶ್ವವಿದ್ಯಾಲಯಗಳಲ್ಲೊಂದಾಗಿತ್ತು. ತನ್ಮಧ್ಯ ಲೂ-ಶೂನರು 'ಮ್ಯಾನ್-ಯು-ಆನ್' ಮತ್ತೂ 'ಯೂ-ಶಿ' ಎಂಬ ಸಾಹಿತ್ಯ ಮಾಸಿಕಗಳ ಸಂಪಾದಕತ್ವವನ್ನು ವಹಿಸಿದರು; ಜರ್ಮನ್, ರಷಿಯನ್

ಮತ್ತೂ ಜಪಾನೀ ಭಾಷೆಗಳಲ್ಲಿಯ ಅಸಂಖ್ಯಾತ ಪುಸ್ತಕಗಳನ್ನು ಭಾಷಾಂತರಿಸಿದರು; ಸುಪ್ರಸಿದ್ಧವಾದ 'ನ್ಯೂ-ಯುಥ್' ಎಂಬ ಪತ್ರಿಕೆಯಲ್ಲಿ ತನ್ಮಯರಾದರು. ೧೯೧೭ರಲ್ಲಿ ಈ 'ನ್ಯೂ ಯುಥ್' ಪತ್ರಿಕೆಯು 'ಪೈ-ಹುವಾ' (ದೇಶಭಾಷಾ) ಆಂದೋಲನವನ್ನು ಸುರುವುಮಾಡಿತು. ಕಡೆಗೆ ಚೀನದ ಆದ್ಯಂತವಾಗಿ ತನ್ನ ಜಯದುಂದುಭಿಯೊಡನೆ ಪ್ರಸರಣ ಹೊಂದಿತು. ಆಮೇಲೆ ಈ ಪತ್ರಿಕೆಯನ್ನು ತನ್ನ ಪ್ರತಿಗಾಮೀ ರಾಜಕೀಯ ವಿಚಾರಗಳಿಗಾಗಿ ಈಗ ನ್ಯಾನ್‌ಕಿಂಗಿನಲ್ಲಿ ದೀರ್ಘಾವಧಿ ಕಾರಾಗೃಹವಾಸವನ್ನು ಅನುಭವಿಸುತ್ತಿರುವ ಸುಪ್ರಸಿದ್ಧ ಕಮ್ಯುನಿಸ್ಟರಾದ ಚೆನ್-ಟೂ-ಶ್ಯೂರವರು ನಡೆಯಿಸಹತ್ತಿದರು. ಆಗ ಚೆನ್‌ರವರು ತೀವ್ರತರ ಸುಧಾರಣಾವಾದಿಗಳಾಗಿದ್ದರು. ಅವರ ಅಪೂರ್ವ ಕೃತಿಯೆಂದು ಹೂ-ಶಿನ್‌ರಿಗೆ ಖ್ಯಾತಿಯನ್ನು ತಂದುಕೊಟ್ಟ ಪ್ರಖ್ಯಾತ ನಿಬಂಧವೊಂದು ಇದೇ ಸಮಯದಲ್ಲಿ ಪ್ರಸಿದ್ಧಿಸಲ್ಪಟ್ಟಿತು. ಈ ನಿಬಂಧದಲ್ಲಿ ಅವರು 'ಪೈ-ಹುವಾ'ವನ್ನು ರಾಷ್ಟ್ರೀಯ ಭಾಷೆಯನ್ನಾಗಿ ಸ್ವೀಕರಿಸಬೇಕೆಂದು ಪ್ರತಿಪಾದಿಸಿದರು. 'ನ್ಯೂ ಯುಥ್' ಪತ್ರಿಕೆಯು ಹುಟ್ಟಿ ಸಂಪೂರ್ಣವಾಗಿ 'ಪೈ-ಹುವಾ' ಭಾಷೆಯಲ್ಲಿಯೇ ಪ್ರಕಾಶನ ಹೊಂದುವವರೆಗೆ ಚೀನಾದ ಎಲ್ಲ ಸಾಹಿತ್ಯವೂ ಅಲ್ಲಿಯ 'ಸಂಸ್ಕೃತ' ಭಾಷೆಯೆನಿಸಿಕೊಂಡ 'ವೆನ್-ಲಿ' ಯಲ್ಲಿಯೇ ವ್ಯಕ್ತವಾಗಿತ್ತು.

ಭಾಷಾಕ್ರಾಂತಿಯಷ್ಟು ಆಂದೋಲನವನ್ನು ಚೀನೀಯ ಯಾವ 'ಕ್ರಾಂತಿ'ಗಳೂ ಎಬ್ಬಿಸಿರಲಿಲ್ಲ, 'ನ್ಯೂ ಯುಥ್' ಪತ್ರಿಕೆಯು ಸುರುವುಮಾಡಿದ 'ಲೇಖನಿ ಯುದ್ಧ'ದಷ್ಟು ಭೀಕರವಾದ ಯುದ್ಧವೂ ಯಾವದೂ ಆಗಿರಲಿಲ್ಲ! ಈ ಕ್ರಾಂತಿಯು ಕ್ರಮೇಣವಾಗಿ ಮಂಚೂ ಮನೆತನದವರ ಆಳಿಕೆಯಿಂದಲೇ ಸಾಗಿಬಂದಿದ್ದ ಸಾಂಪ್ರದಾಯಶೀಲರ ರಾಜಕೀಯ ಸಾಮಾಜಿಕ ತತ್ವಗಳನ್ನೇ ಪಾದಾಕ್ರಾಂತ ಮಾಡಿ, ಪ್ರಚಲಿತ ರಾಜರ ಮೇಲೆಯೂ ಕೈ ಮಾಡಿತು. ಸಜೀವ ಚೀನಾದ ಆಧುನಿಕ ವಿಚಾರ ಸೌಷ್ಟವವು ಪ್ರಾರಂಭವಾದದ್ದು ಇದೇ ಕಾಲದಲ್ಲಿ. ಚೀನಾದ ಪ್ರಗತಿಶೀಲರು ರಾಜನೀತಿಯಲ್ಲಿಯೂ ರಾಜ್ಯ ಕಾರ್ಯಭಾರ ಪದ್ಧತಿಯಲ್ಲಿಯೂ ತೀವ್ರತರ ಸುಧಾರಣೆಯಾಗಬೇಕೆಂದು ಹಟಹಿಡಿದರು. ಅವರು ಬೇಸರಿಕೆ ಬರುವ

ಮುಷ್ಟಿಗೆ ನೀತಿಗೆಟ್ಟ ಪೇಕಿಂಗ್ ಆಳಿಕೆಯನ್ನು ಬಹಿರಂಗವಾಗಿಯೇ ತಿರಸ್ಕರಿಸ ಹತ್ತಿದರು. ಅದರ ವಿರುದ್ಧ ಹೋರಾಡಲು ದೇಶದ ಆದ್ಯಂತವಾಗಿ ಪ್ರತಿಪಕ್ಷ ವನ್ನು ಸಂಘಟಿಸಲು ಸಹಾಯ ಮಾಡಹತ್ತಿದರು.

ಈ ಜನರಲ್ಲೆಲ್ಲ ಪ್ರಮುಖರೆಂದರೆ ಲು-ಶೂನರೇ. ಚೆನ್-ಟೊ-ಶೂ ರವರ ಸಹೋದ್ಯೋಗಿಗಳಾಗಿ ಪ್ರಥಮತಃ ಅವರು 'ನ್ಯೂ ಯುಥ್' ಪತ್ರಿಕೆ ಯಲ್ಲಿ ತಮ್ಮ ಲೇಖನಗಳನ್ನು ಬರೆಯಹತ್ತಿದರು. ಈ ಸಂಗ್ರಹದಲ್ಲಿ ಸೇರಿಸಿದ ಅವರ 'ಔಷಧ' ಎಂಬ ಸಣ್ಣಕತೆಯೂ ಉಳಿದ ಕೆಲವು ಕತೆಗಳೂ ಈ ಪತ್ರಿಕೆ ಯಲ್ಲಿಯೇ ಪ್ರಕಟವಾದವು. ಅವರು 'ಪೈ-ಹುವಾ' ಭಾಷೆಯಲ್ಲಿ 'ಸಾ-ಕಾನ್' ಅಥವಾ 'ಯದ್ವಾತದ್ವಾ ವಿಚಾರ' ಎಂಬ ಹೊಸಬಗೆಯ ಲಘು ಪ್ರಬಂಧ ತಂತ್ರದ ನವೀನ ರೂಪದ ಜನಕರು ಎಂದು ಅವರು ಮೊದಲು ಪ್ರಖ್ಯಾತರಾದರು. ಆಗ ಪ್ರಚಲಿತವಾಗಿದ್ದ ಬೌದ್ಧಿಕ ಯುದ್ಧದಲ್ಲಿ ಈ ಪ್ರಬಂಧ ತಂತ್ರವು ಒಳ್ಳೇ ಫಲಕಾರಿಯಾದ ಆಯುಧವಾಗಿತ್ತು. ಈಗಲೂ ಸಹ ಅದು ಎಲ್ಲೆಲ್ಲಿಯೂ ತಲೆದೋರುತ್ತಿರುವ ಸಾಹಿತ್ಯರೂಪವಾಗಿದೆ. ಈ ಬಗೆಯ ಉದಾಹರಣೆಗಳನ್ನು ಲು-ಶೂನರ 'ಬಿಸಿಗಾಳಿ', 'ಕಾಡಹುಲ್ಲು' ಮತ್ತೂ ಉಳಿದ ಒಂದೆರಡು ಪುಸ್ತಕಗಳಲ್ಲಿ ಕಾಣಬಹುದು. ಆದರೆ ಅವರು ರಾಷ್ಟ್ರದ ಮೂಲೆಮೂಲೆಯಲ್ಲಿಯೂ ಪ್ರಖ್ಯಾತಿಯನ್ನು ಹೊಂದಿದುದು ೧೯೨೧ರಲ್ಲಿ ಪ್ರಸಿದ್ಧವಾದ ಒಂದು ವ್ಯಂಗ್ಯಕತೆಯಿಂದ. ಅದರ ಹೆಸರು 'ಆ-ಕ್ಯೂನ ನಿಜವಾದ ಕತೆ' ಎಂದು. ಈ ಕತೆಯ ವಸ್ತುವೂ ಆ ವಸ್ತುವಿಗೆ ಕಲ್ಪನಾಪೂರ್ಣ ರೂಪಗೊಟ್ಟ ತಂತ್ರವೂ ಆಗ ಚೀನೀ ಸಾಹಿತ್ಯಕ್ಕೆ ಅತ್ಯಂತ ವಿಲಕ್ಷಣವಾಗಿ ಕಂಡವು. 'ಆ-ಕ್ಯೂ'ದ ಬಗ್ಗೆ ಎಲ್ಲೆಲ್ಲಿಯೂ ಚರ್ಚೆ; ಎಲ್ಲೆಲ್ಲಿಯೂ ವಾಗ್ಯುದ್ಧ. ಅದೇ ತಾನೇ 'ಸನ್ಯತ್ಸೇನ್'ರ ಅನುಯಾಯಿ ಗಳು ಕ್ಯಾಂಟನ್ನಿನಲ್ಲಿ ಅವರನ್ನು 'ಚೀನಾದೇಶದ ಅಧ್ಯಕ್ಷ'ರು ಎಂದು ಆರಿಸಿದ್ದರು. ಸಾಂಪ್ರದಾಯಶೀಲರು ಸನ್ಯತ್ಸೇನರಿಗೆ 'ವಿಕ್ಷಿಪ್ತ ಬುದ್ಧಿಯ ತತ್ವಜೀವಿ' ಎಂದು ಅಪಹಾಸ್ಯಮಾಡಿ ಎಲ್ಲೆಲ್ಲಿಯೂ ಗೊಂದಲವನ್ನೇ ಎಬ್ಬಿ ಸಿದ್ದರು. ಆದರೆ ಈ ಕತೆಯ ವಿಷಯದ ಚರ್ಚೆ ಸನ್ಯತ್ಸೇನರ ವಿಷಯದ ಚರ್ಚೆಯನ್ನೂ ಒನ್ಮೆಟ್ಟಿತು. ಮಡಿವಂತ ಸಾಹಿತಿಗಳು ಈ ನೀಳ್ಗತೆಯನ್ನು

ಸುಧಾರಣಾಶೀಲರಲ್ಲಿ ಕಾಣಬಹುದಾದ ಎಲ್ಲ ಅನೀತಿಯ ನೀಚತಮಸಾರ ಎಂದು ತಿರಸ್ಕರಿಸಿದರೆ, ಆಧುನಿಕರು ಇದನ್ನು 'ಪೈ-ಹುವಾ' ಭಾಷೆಯಲ್ಲಿಯ ಸತ್ವ-ಸೌಂದರ್ಯಗಳನ್ನು ನಿಚ್ಚಳವಾಗಿ ಎತ್ತಿ ತೋರಿಸುವ ಉತ್ತಮ ಕಲಾ ಕೃತಿ ಎಂದು ಬಾಯ್ತುಂಬ ಹೊಗಳಿದರು. ಕೆಲವೊಂದು ಸಮಯ ಚೀನಾದ 'ಲೇಖನಿ-ಯುದ್ಧ'ವೆಲ್ಲ ಲು-ಶೂನ್‌ರ ಸುತ್ತಲೂ ಸಾಗಿತು. ಅವರು ಆ ಯುದ್ಧದಲ್ಲಿ ಜಯಶೀಲರಾಗಿ 'ಪೈ-ಹುವಾ' ಸಾಹಿತ್ಯದ ಲೇಖಕಶಿರೋಮಣಿ ಎಂದು ಸರ್ವಮನ್ನಣೆಯನ್ನು ಪಡೆದರು.

ಆಮೇಲೆ ಸ್ವಲ್ಪೇ ದಿನಗಳಲ್ಲಿ ಆ ಕತೆ ಅವರ 'ಯುದ್ಧದ ಕೂಗು' ಎಂಬ ಪುಸ್ತಕದಲ್ಲಿ ಪ್ರಕಾಶನ ಹೊಂದಿದಾಗ, ಆ ಪುಸ್ತಕದ ಮೊದಲನೆಯ ಮುದ್ರಣದ ಎಲ್ಲ ಪ್ರತಿಗಳೂ ಕೂಡಲೇ ಮಾರಿಹೋದವು. ಅಂದಿನಿಂದಲೂ ಪ್ರತಿ ವರುಷ ಆ ಪುಸ್ತಕದ ಒಂದೆರಡು ಪುನರ್ಮುದ್ರಣಗಳು ಆಗಿಯೇ ಆಗುತ್ತವೆ. ಈಗ ಜೀವಂತ ಇರುವ ಚೀನೀ ಲೇಖಕರ ಕೆಲವೇ ಪುಸ್ತಕಗಳು ಅನ್ಯಭಾಷೆಗಳಲ್ಲಿ ಭಾಷಾಂತರ ಹೊಂದಿವೆ. ಅವುಗಳಲ್ಲಿ ಈ ಪುಸ್ತಕವೂ ಒಂದು. ಫ್ರೆಂಚ್, ಜರ್ಮನ್, ರಶಿಯನ್ ಮತ್ತೂ ಇನ್ನೂ ಕೆಲವು ಭಾಷೆ ಗಳಲ್ಲಿ ಚನ್ನಾಗಿ ಪ್ರಚಾರ ಹೊಂದಿದೆ. (ಅದು ಬಹಳ ಉದ್ದವಾದುದರಿಂದ ಅದನ್ನು ಈ ಸಂಗ್ರಹದಲ್ಲಿ ಹಾಕಿಲ್ಲ.) ಲು-ಶೂನರ ಕೃತಿಗಳನ್ನು ತುಂಬಾ ಹೊಗಳುತ್ತಿರುವ 'ರೋಮೆ ರೋಲಾ'ರವರು ಈ ಕತೆಯನ್ನೋದಿದೊಡನೆ ಭಾವೋದ್ರೇಕದಿಂದ ಅತ್ತುಬಿಟ್ಟೆನೆಂದು ತಾನೇ ಹೇಳಿದರು.

ಆದರೆ ಸರಕಾರಕ್ಕೆ ಇದು ಸೇರಲಿಲ್ಲ. 'ಯುದ್ಧದ ಕೂಗು' ಪ್ರಕಾಶನ ಹೊಂದಿ ಪ್ರಸಂಗವನ್ನು ಮತ್ತಷ್ಟು ಕಠಿಣ ಮಾಡಿತು. ವಿದ್ಯಾರ್ಥಿಗಳ ಕೂಟವನ್ನು ಸಂಘಟಿಸಿ ಅವರಲ್ಲಿ ಪ್ರತಿಭಟನಾ ಬುದ್ಧಿಯನ್ನು ಪ್ರಚೋದಿಸುವ ರೆಂಬ ಆರೋಪ ಹೊರಿಸಿ ಶಿಕ್ಷಣ ಮಂತ್ರಿಗಳ ಕಚೇರಿಯಲ್ಲಿಯ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಡಲು ಲು-ಶೂನರಿಗೆ ಜುಲುಮೆ ಮಾಡಿದರು. ತುವಾನ್-ಚಿ-ಜ್ಯುಯಿಯವರ ಸರ್ವಾಧಿಕಾರದ ಸಮಯದಲ್ಲಿ ಒಮ್ಮಿಂದೊಮ್ಮೆ ಅವರನ್ನು ಬಂಧಿಸಬೇಕೆಂಬ ಆಜ್ಞೆ ಹೊರಟಿತು. ಅವರ ಸ್ನೇಹಿತರು ಸಕಾಲಕ್ಕೆ ಎಚ್ಚರಿಕೆ

ಕೊಟ್ಟಿದ್ದರಿಂದ ಅವರು ಪೇಕಿಂಗ್‌ದಿಂದ ಪಾರಾಗಿ ಹೋದರು; ಸಾವಿನಿಂದಲೇ ಪಾರಾದರು ಎನ್ನಬಹುದು.

ಅವರು ಕೆಲವು ದಿನ ಆಮೊಯಿಯಲ್ಲಿದ್ದು ಬರೆಯುವ, ಕಲಿಸುವ ವ್ಯವಸಾಯ ಸಾಗಿಸಿದರು. ಸನ್ಯತ್ಸೇನರು ಕಮ್ಯುನಿಸ್ಟರಿಗೆ ತಮ್ಮ ಕೋಮಿಂಟಾಂಗ್ ಸರಕಾರದಲ್ಲಿ ಪ್ರವೇಶವಿತ್ತಾಗ, ಅವರು ಕ್ಯಾಂಟನ್ನಿಗೆ ಹೋಗಿ ಎಡಪಕ್ಷವನ್ನು ಸ್ಥಾಪಿಸಿಕೊಂಡಿದ್ದ ತಮ್ಮ ಗೆಳೆಯರನ್ನು ಕೂಡಿಕೊಂಡರು. ೧೯೨೭ರಲ್ಲಿ ಚಿಯಾಂಗ್ ಕೈ-ಶೇಕ್‌ರು ಕೋಮಿಂಟಾಂಗ್ ಸರಕಾರದಿಂದ ಕಮ್ಯುನಿಸ್ಟರನ್ನು ಹೊರದೂಡಹತ್ತಿದ್ದರ ಫಲವಾಗಿ ಸಾವಿರಗಟ್ಟಲೆ ವಿದ್ಯಾರ್ಥಿಗಳೂ ಕಾರ್ಮಿಕರೂ ಒಕ್ಕಲಿಗರೂ ಜೀವಕ್ಕೆ ಎರವಾಗಬೇಕಾಯಿತು. ಆಗ ಇವರು ಮತ್ತೆ ತಮ್ಮ ಹೆಸರನ್ನು ಬದಲಿಸಿಕೊಂಡು ಓಡಾಡಬೇಕಾಯಿತು. ಬಂಧನವನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ಶಾಂಘಾಯಿಯಲ್ಲಿ ಭೂಗತರಾದರು.

ಕಮ್ಯುನಿಸ್ಟರ ಮೇಲೆ ಗದೆಯೆತ್ತಿದುದೂ ಅದರ ಬೆನ್ನಹಿಂದೆಯೇ ಕ್ಯಾಂಟನ್ ಬೀದಿಗಳಲ್ಲಿ ಭೀಕರ ರಕ್ತಪಾತವಾದುದೂ ಲು-ಶೂನ್‌ರ ಮನಸ್ಸನ್ನು ಕಲ್ಲುಮಾಡಿ, ಜನರ ಪ್ರತಿಕ್ರಿಯೆಯ ಬಗ್ಗೆ ಮನನಮಾಡಿಕೊಟ್ಟವು; ಎಡಪಕ್ಷದ ಕ್ರಾಂತಿಕಾರರನ್ನು ಸದೃಢವಾಗಿ ಕೂಡಿಕೊಳ್ಳುವ ಮನೋನಿರ್ಧಾರವನ್ನು ಮಾಡಿದವು. ಚೀನಾ ದೇಶದಲ್ಲಿ 'ಎಡಪಕ್ಷ' ಎಂಬ ಶಬ್ದಕ್ಕೆ ಐತಿಹಾಸಿಕವಾಗಿ ಯಾವ ಯಾವ ಅರ್ಥ ಹಚ್ಚುವರು ಎಂಬುದನ್ನು ಸ್ಪಷ್ಟೀಕರಿಸಲು ಇದು ಇಲ್ಲಿ ಅವಕಾಶವಿಲ್ಲ. ಆದರೂ ಇಷ್ಟು ಹೇಳಬಹುದು: ಕೋಮಿನ್‌ಟಾಂಗ್ ಸರಕಾರದ ಎಡಪಕ್ಷವು ನಾಶವಾದ ಮೇಲೆ, ಉಳಿದ ಸುಧಾರಣಾಶೀಲರ ಚಟುವಟಿಕೆಗಳಿಗೆಲ್ಲ ಎಡಪಕ್ಷದ ಚಟುವಟಿಕೆಗಳೆಂದೇ ಕರೆಯಹತ್ತಿದರು. ಉದಾಹರಣಾರ್ಥವಾಗಿ, ಕೋಮಿಂಟಾಂಗ್‌ದ ಕೃತ್ಯದ ಪ್ರತಿಕ್ರಿಯೆಯ ಫಲವಾಗಿ ತಲೆದೋರಿದ 'ಕ್ರಾಂತಿಕಾರಕ ಸಾಹಿತ್ಯ' ಚಳವಳಿಯಲ್ಲಿ ಅಸಂತುಷ್ಟ ಮಧ್ಯಮ ವರ್ಗದವರೂ, ಶ್ರೀಮಂತ ಸಮತಾವಾದಿಗಳೂ ಸೌಮ್ಯವಾದಿಗಳೂ, ಕಮ್ಯುನಿಸ್ಟರೂ, ಮೆನ್‌ಶೆವಿಷ್ಟರೂ, ಟ್ರಾಟ್ಸ್ಕಿಯ ಅನುಯಾಯಿಗಳೂ—ಎಲ್ಲರೂ ಸೇರ್ಪಡೆಯಾಗಿದ್ದರು.

ಈ ಎಡಪಕ್ಷದ ಬೌದ್ಧಿಕ ಚಳವಳಿಯಲ್ಲಿ ಒಳಜಗಳಗಳು ತಲೆದೋರ ಹತ್ತಿದವು. ನಿರ್ಮಾಣಶೀಲರು, ಸೂನ್ ಸೊಸಾಯಿಟಿ ಸದಸ್ಯರು, ಮಾರ್ಕ್ಸ್ವಾದಿಗಳು ಮುಂತಾದ ಒಳಪಂಗಡಗಳಾಗಿ ತಮ್ಮತಮ್ಮೊಳಗೆ ಬಡಿದಾಡ ಹತ್ತಿದರು. ಈ ಹಿಂಡಿನಲ್ಲೆಲ್ಲ ಲು-ಶೂನರು ಕೂಲಿಕಾರರ ಹಿತೈಷಿಗಳು ಎಂದು ಪ್ರಮುಖ ಮುಖಂಡರಾದರು. ಸಂಪೂರ್ಣ ಸಾಮಾಜಿಕ ಬದಲಾವಣೆಯಿಲ್ಲದೆ ಬರಿಯ ಮಧ್ಯಮವರ್ಗದವರ ಕ್ರಾಂತಿಯಿಂದ ಜನಸಾಮಾನ್ಯರಿಗೆ ಯಾವ ಬಗೆಯಿಂದಲೂ ಹಿತವಿಲ್ಲ ಎಂದು ಈಗ ಅವರು ನಂಬಹತ್ತಿದರು. ಕೋಮಿಂಟಾಂಗ್ ಸರಕಾರವು ಅವರ ಲೇಖನಗಳನ್ನೊಳಗೊಂಡ ಎಲ್ಲ ಪ್ರಕಾಶನಗಳ ಮೇಲೆ ಮುಟುಗೋಲು ಹಾಕಿತು. ಅವರು ಅನೇಕ ಸಾಹಿತ್ಯಕ ನಾಮಗಳನ್ನೂ ಇಟ್ಟುಕೊಂಡು ಬರೆಯುವ ಪ್ರಸಂಗ ಬಂತು.

ನಾನು ಅವರ ವಿಷಯ ಮೊದಲು ಕೇಳಿದ್ದು ೧೯೩೦ರಲ್ಲಿ. ಆಗ ಅವರಿಗೆ ಜನ ಎಡಪಕ್ಷದ ಲೇಖಕರ ಸಂಘವನ್ನು ಸಂಘಟಿಸಿ ಅದರ ಮುಂದಾಳ್ತನವನ್ನು ವಹಿಸಿಕೊಳ್ಳಲು ಬಿನ್ನವಿಸಹತ್ತಿದ್ದರು. ಸರಕಾರವು ಈ ಸಂಘವನ್ನು ನಿರ್ನಾಮ ಮಾಡಲು ನಿಶ್ಚಯಿಸಿತ್ತು. ೧೯೩೧ರಲ್ಲಿ ವಿಶೇಷತಃ ಜಪಾನವು ಮಂಚೂರಿಯಾದ ಮೇಲೆ ದಾಳಿ ಮಾಡಿದ ಮೇಲೆ—ಕೋಮಿಂಟಾಂಗ್ ಯೋಧರು ಬೌದ್ಧಿಕ ಜೀವಿಗಳ ಮೇಲೆ ಉಗ್ರ ಕ್ರಮ ಕೈಕೊಳ್ಳಹತ್ತಿದರು. ಒಕ್ಕಲಿಗರ ಕೂಲಿಕಾರರ ಸತ್ಯಜೀವನದ ಬಗೆಗೆ ಬರೆಯುವದು ಗಂಡಾಂತರದ ವಿಷಯವೇ ಆಯಿತು. ಅಂಥ ಪುಸ್ತಕಗಳನ್ನು ಯಾರಾದರೂ ಹತ್ತಿರ ಇಟ್ಟುಕೊಂಡರೆ, ಅವರಿಗೆ ದಂಡನಾಯಕರ ಲಹರಿಯ ಮೇರೆಗೆ ಯಾವ ಶಿಕ್ಷೆಯೂ ತಟ್ಟಬಹುದು. ಅಲ್ಲಿಂದೀಚೆಗೆ ಕಮ್ಯುನಿಸ್ಟರೆಂಬ ಸಂಶಯದಿಂದ ಸಾವಿರಾರು ಯುವಕರೂ ಯುವತಿಯರೂ ಸೆರೆಯಾಳಾಗಿದ್ದಾರೆ; ಚಿತ್ರಹಿಂಸೆಗೆ ಈಡಾಗಿದ್ದಾರೆ; ಜೀವವನ್ನೂ ಕೊಟ್ಟಿದ್ದಾರೆ. ಆದರೆ ೧೯೩೧ನೆ ಇಸವಿಯ ಫೆಬ್ರುವರಿ ೭ನೇ ತಾರೀಖಿನ ದಿನ ಶಾಂಘಾಯಿಯಲ್ಲಿ ಸಂಭವಿಸಿದ ಆರು ಮಂದಿ ಎಡಪಕ್ಷದ ವಿದ್ವಾಂಸರ ಕೊಲೆಯಂಥ ಅಮಾನುಷ ಕೃತ್ಯ ಇನ್ನೊಂದಿಲ್ಲ.

ಇವರೆಲ್ಲ ಮೂವತ್ತು ವರುಷದ ಒಳಗಿನ ತರುಣರು. ಅವರಲ್ಲಿ ಒಬ್ಬ

ಹೆಣ್ಣುಮಗಳೂ ಇದ್ದಳು. ಇವರನ್ನು ಬ್ರಿಟಿಶ್ ಪೋಲಿಸ್‌ದವರು ಶಾಂಘಾಯಿ ಇಂಟರ್‌ನ್ಯಾಶನಲ್ ಸೆಟಲ್‌ಮೆಂಟಿನಲ್ಲಿ ಬಂಧಿಸಿ ಕೋಮಿಂಟಾಂಗ್ ಯೋಧರ ವಶಪಡಿಸಿದರು. ಆ ಆರು ಜನರೆಂದರೆ: ಲೀ ವೀ-ಶೆನ್, ಪೂ-ಯೇ-ಪಿಂಗ್, ಜೊ-ಶೀ, ಸೂಂಗ್-ಹೂ, ಯೀನ್-ಫೂ ಮತ್ತೂ ಫೇಂಗ್-ಕೂದಗ್ ಎಂಬ ಹುಡುಗಿ. ಅವರಿಗೆ ಮೊದಲು ವಾಡಿಕೆಯಂತೆ ಚಿತ್ರಹಿಂಸೆ ಕೊಟ್ಟು, ಅವರಿಂದಲೇ ತಮ್ಮ ಗೋರಿಗಳನ್ನು ಅಗಿಸಿ, ಆಮೇಲೆ ಅವರ ತಲೆ ಹೊಡೆದರು. ಈ ಸನ್ನಿವೇಶದಿಂದ ಜಗತ್ತಿನ ಎಲ್ಲ ಸೌಮ್ಯವಾದಿಗಳೂ ಸಿಡಿಮಿಡಿಗೊಂಡರು. ಅಮೇರಿಕೆಯಲ್ಲಿ ಸಿಂಕ್ಲೇರ್ ಲೂಯಿ, ಥಿಯೋಡರ್ ಡ್ರೇಜರ್, ಜೋನ್‌ಡ್ಯುವಿ, ಅಪ್‌ಟನ್ ಸಿಂಕ್ಲೇರ್ ಮೊದಲಾದ ನೂರು ಲೇಖಕರು ವಾಸಿಂಗ್‌ಟನ್ನಿನಲ್ಲಿಯ ಚೀನೀ ಮಂತ್ರಿಗೆ ತಮ್ಮ ಪ್ರತಿಭಟನಾ ಪತ್ರವನ್ನು ಕಳಿಸಿಕೊಟ್ಟರು. ಒಂದು ವರುಷದ ಮೇಲೆ, ಲೇಖಿಕೆಯರೆಲ್ಲೆಲ್ಲ ಹೆಚ್ಚು ಜನಪ್ರಿಯರಾದ ಟಿಂಗ್-ಲಿಂಗ್‌ರವರನ್ನು ಸರಕಾರೀ ಹಸ್ತಕರು ಓಡಿಸಿಕೊಂಡು ಹೋದರು. ಅವರೂ ಕೊಲ್ಲಲ್ಪಟ್ಟಿದ್ದಾರೆಂದು ಸುದ್ದಿಯಿದೆ. ಅದೇ ಸಮಯದಲ್ಲಿ 'ಅಕೆಡೆಮಿಕಾ ಸಿನಿಕಾ' ಎಂಬ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ಡಾ. ಯಾಂಗ್-ಶೆನ್‌ನೆಂಬ ವಿದ್ವತ್ಪೂರ್ಣ ತರುಣ ವಿಜ್ಞಾನಿಯನ್ನು, ಎಡಪಕ್ಷಕ್ಕೆ ಸಹಾನುಭೂತಿ ತೋರಿದನೆಂಬ ನೆವದಿಂದ ದುಡ್ಡುಕೊಟ್ಟು ಕೊಲೆಗಡಕರಿಂದ ತಲೆಹೊಡೆಸಿದರು. ಕ್ರೂರ ದಬ್ಬಾಳಿಕೆಗೆ ಈಡಾದ ಇವರೆಲ್ಲರೂ ಲು-ಶೂನರ ಗೆಳೆಯರೇ ಆಗಿದ್ದರಾದ್ದರಿಂದ, ಅವರಾದರೂ ಬಂಧನ ಇಲ್ಲವೇ ಕೊಲೆ ಇವುಗಳಲ್ಲೊಂದು ತಮಗೂ ತಪ್ಪಿದ್ದಲ್ಲವೆಂಬ ಸತತ ಭೀತಿಯಲ್ಲಿಯೇ ಇದ್ದರು. ಆಧುನಿಕ ಚೀನಾದ ಸಾಹಿತ್ಯದಲ್ಲಿ ಉಜ್ವಲ ಪ್ರತಿಭಾಸಂಪನ್ನರೆಂದು ಎಣಿಸಲ್ಪಟ್ಟ ಮಾ-ವೊ-ಟನ್, ಟಿಂಗ್-ಲಿಂಗ್, ಕೌ-ಮೊ-ಜೋ ಎಂಬ ಲೇಖಕರೂ ಲು-ಶೂನರೂ 'ಘಾತಕವಿಚಾರ'ಗಳ ಉಗಮಸ್ಥಾನ ಎಂದು ಗಣಿಸಲ್ಪಟ್ಟಿದ್ದಾರೆ. ಈಗಾಗಲೇ ಕೋಮಿಂಗಟಂಗ ಸರಕಾರವು ಲು-ಶೂನರ ಹನ್ನೊಂದು ಪುಸ್ತಕಗಳ ಮಾರಾಟವನ್ನು ಪ್ರತಿಬಂಧಿಸಿದೆ.

ಕಾರ್ಮಿಕರ ಹಿತಚಿಂತಕ ಲೇಖಕರು ಎಂಬ ದೃಷ್ಟಿಯಿಂದ ನೋಡಿ

ದಲ್ಲಿ ಲು-ಶೂನರು ಅಪ್ಟನ್ ಸಿಂಕ್ಲೇರರೂ ಅವರೊಡನೆ ಜೋನ್ ಡ್ಯೂವಿಯವರೂ ಚೀನೀ ಸರಕಾರದ ವಕ್ರದೃಷ್ಟಿಯಲ್ಲಿ ಇದ್ದಾರೆ. ಇವರ ಪುಸ್ತಕಗಳೂ ಇನ್ನುಳಿದ ಅನೇಕ ಪರದೇಶೀ ಲೇಖಕರ ಪುಸ್ತಕಗಳೂ 'ಪೈ-ಹುವಾ' ಭಾಷೆಯಲ್ಲಿ ಭಾಷಾಂತರ ಹೊಂದಿವೆ. ಆದರೆ ಲು-ಶೂನರು ಅಪ್ಟನ್ ಸಿಂಕ್ಲೇರರ ಉಚ್ಚ ಮಟ್ಟಕ್ಕೆ ತಾವು ಬಂದಿರುವದಿಲ್ಲವೆಂದೂ ಚೀನಾದೇಶವು ಇನ್ನೂ ಶ್ರೇಷ್ಠ ಲೇಖಕರಿಗೆ ಜನ್ಮವಿತ್ತಿಲ್ಲವೆಂದೂ ತಿಳಿದಿರುವರು. ಈಗ ಚೀನೀ ಸಮಾಜದಲ್ಲಿ ಕಂಡುಬರುವ ಸುಲಿಗೆ, ಲಂಚಗುಳಿತನ, ಸಾವುಕಾರಿಕೆ, ಶಿಶುದಾಸ್ಯ, ಸ್ವಾರ್ಥ, ಅಂಧಶ್ರದ್ಧೆಯ ಕಾನ್ಫೂಸಿಯುಸ್‌ವಾದ, ಒಕ್ಕಲಿಗರ ಮತ್ತೂ ಕಾರ್ಮಿಕರ ಸುಲಿಗೆ, ಮುದ್ರಣಸಂಯಮನ, ಜನತಾಸಂಘಗಳ ನಾಶ, ಮೊದಲಾದ ಕೊಳೆಗಳ ವಿರುದ್ಧ ಲು-ಶೂನರು ತಮ್ಮ ಲೇಖನಿಯನ್ನು ಎತ್ತಿದಾಗ ಅವರು ಬೌದ್ಧಿಕ ಸುಧಾರಕರ ತರ್ಕಶುದ್ಧ ಅಲಿಪ್ತತೆಯನ್ನೇ ತೋರುವರು.

ಲು-ಶೂನರು ಒಳ್ಳೆಯ ವಾಕ್‌ಪಟುಗಳು; ಸಾಮಾಜಿಕ ನ್ಯಾಯದ ವಿಷಯದಲ್ಲಿ ಆವೇಶಭರಿತರಾಗಿ ಮಾತಾಡಹತ್ತಿದಾಗ ಅವರ ಆವೇಶವನ್ನು ಕೇಳುವವರಲ್ಲಿಯೂ ಸಾಂಸರ್ಗಿಕವಾಗಿ ತುಂಬಿಸುವ ಶಕ್ತಿ ಅವರಲ್ಲಿ ಇದೆ. ಆದುದರಿಂದ ಅವರ ಭಾಷಣ ಕೇಳಲು ಜನ ಮುತ್ತಿಗೆ ಬೀಳುವರು. ಭಾಷಣಗಳು ಅವರನ್ನು ಆಗಾಗ ಗಂಡಾಂತರದಲ್ಲಿ ಇಳಿಸುವವು. ಆದರೆ ಅವರ ಬಗೆಗೆ ಜನರಿಗೆ ಇರುವ ಆದರ ಅವರನ್ನು ಸಂರಕ್ಷಿಸುವದು. ತತ್ವಪ್ರಸಾರಾರ್ಥವಾಗಿ ತಿರುಬೊಬ್ಬೆ ಹೊಡೆಯುವದು ಅವರಿಗೆ ಸೇರುವದಿಲ್ಲ. ಅವರಲ್ಲಿ ಹಾಸ್ಯ ಸಾಕಷ್ಟಿದೆ. ಚೀನೀ ಯುವಕರಿಗೆ ಕೊಡುವ ಅವರ ಸಂದೇಶವು ತಾರ್ಕಿಕ ಮಾರ್ಗದಿಂದ ಯುವಕರ ಮನವನ್ನು ಮುಟ್ಟುತ್ತದೆ. ಅವರ ಸಂದೇಶ ಇಂತಿದೆ:

ಸಮಾಜದಲ್ಲಿಯ ಆರ್ಥಿಕ ಸಮಸ್ಯೆಗಳನ್ನು ಅಭ್ಯಸಿಸಿರಿ; ಅವುಗಳ ಬಗ್ಗೆ ವಿಚಾರ ಮಾಡಿರಿ. ನಿರ್ಜೀವವಾಗಿದ್ದ ನೂರಾರು ಹಳ್ಳಿಗಳಿಗೆ ಹೋಗಿ ಬನ್ನಿರಿ. ದಂಡನಾಯಕರನ್ನು ಭೆಟ್ಟಿಯಾಗಿರಿ. ಆಮೇಲೆ ಅವರಿಗೆ ಬಲಿಯಾದವರನ್ನು ನೋಡಿ ಬನ್ನಿರಿ. ಆಮೇಲೆ ಇಂದಿನ ಪರಿಸ್ಥಿತಿಯ ಸತ್ಯಾಂಶ

ವನ್ನು ತೆರೆದ ಕಣ್ಣುಗಳಿಂದ ಶುದ್ಧಮನಸ್ಸಿನಿಂದ ಕಂಡುಹಿಡಿಯಿರಿ. ಸುಶಿಕ್ಷಿತ ಸಮಾಜವನ್ನು ಕಟ್ಟಲು ದುಡಿಯಿರಿ. ಆದರೆ ಅದರ ವಿಷಯದಲ್ಲಿ ಯಾವಾಗಲೂ ಅಭ್ಯಾಸಮಾಡಿರಿ; ವಿಚಾರಮಾಡಿರಿ" ಪುನರುಜ್ಜೀವನ ಲಾಲಸೆಯುಳ್ಳ ಸುಶಿಕ್ಷಿತ ಯುವಕರು ಮಾತ್ರ ಚೀನಾದೇಶದ ಮೂಲಭೂತ ರೋಗಗಳನ್ನು ತಿಳಿದುಕೊಳ್ಳಲು ಸಮರ್ಥರಿದ್ದಾರೆ ಎಂದು ಅವರ ನಂಬಿಗೆ. "ಕೊಳೆತು ತೀವ್ರಗತಿಯಿಂದ ಕಳಚಿ ಬೀಳುತ್ತಿರುವ ವರ್ಗದಲ್ಲಿ ಬೆಳೆದು ಬಂದ ಅವರೇ ತಮ್ಮ ವರ್ಗವನ್ನು ತಾವೆ ತಿಳಿದುಕೊಳ್ಳಬಲ್ಲರು; ತಾವೆ ಅದನ್ನು ನಾಶಮಾಡಬಲ್ಲರು; ತಾವೆ ಅದರ ಬದಲು ಬೇರೊಂದು ಬುದ್ಧಿವಂತವಾದ ಸಾಮಾಜಿಕ ಸುವ್ಯವಸ್ಥೆಯನ್ನೂ ಕಟ್ಟಬಲ್ಲರು."

ಆದರೆ, ಗೋರ್ಕಿಯಂತೆ ಲು-ಶೂನರು ಕ್ರಾಂತಿಯ ರಾಜಕೀಯ ಅಂಗಕ್ಕಿಂತ ಸಾಮಾಜಿಕ ಸಾಂಸ್ಕೃತಿಕ ಅಂಗಗಳನ್ನು ಹೆಚ್ಚು ಮನನ ಮಾಡಿಕೊಂಡಿದ್ದಾರೆ. ಜೀವನದಲ್ಲಿ ಮತ್ತೂ ಕೃತಿಗಳಲ್ಲಿ ಅವರು ಮುಖ್ಯತಃ ತಮ್ಮದೇ ಆದ ಹಾದಿಯನ್ನು ಹಿಡಿದವರು. ಸಾಮ್ಯವಾದದಲ್ಲಿಯ ಅವರ ನಂಬಿಗೆ ತಾರ್ಕಿಕ ಚರ್ಚೆ ವಿದ್ಯಾವ್ಯಾಸಂಗಗಳ ತಳಹದಿಯ ಮೇಲೆ ನಿಂತಿರದೆ ಜನಜಂಗುಳಿಯ ಆರ್ಥಿಕ, ನೈತಿಕ ಆಶೆ-ಆಕಾಂಕ್ಷೆಗಳ ವಿಷಯದಲ್ಲಿಯ ವೈಯಕ್ತಿಕ ಅನುಭವದ ಮೇಲೆಯೇ ನಿಂತಿದೆ. 'ಕಲೆಯ ಸಲುವಾಗಿ ಕಲೆ' ಎಂದಾಗ ಅವರು ಮೂಗು ಮುರಿಯುತ್ತಾರೆ. ಲೇಖನಗಳ ಮಹತ್ವ ಕೇವಲ ಪ್ರಚಾರಾತ್ಮಕ ಸಂದೇಶದಲ್ಲಿಯೇ ಇದೆ ಎಂದೂ ಅವರ ನಂಬಿಗೆ. ಆದರೆ ಅವರ ಇಚ್ಛೆಯು ಏನೇ ಇರಲಿ, ಅವರ ಕೃತಿಗಳೆಲ್ಲ ಕಲಾಪೂರ್ಣವಾಗಿವೆ. ಅವರ ಕಲೆ ಇಂದಿನ ಚೀನದಲ್ಲಿ ಹುಟ್ಟಿಬಂದ ಯಾವ ಪ್ರತಿಭಾಪೂರ್ಣ ಕಲೆಗಿಂತಲೂ ಕಡಿಮೆಯಿಲ್ಲ.

ಲು-ಶೂನರ ಮೇಲೆ ರಶಿಯದ ಬರೆಹಗಾರರಾದ 'ಟರ್ಗೆನೆವ್ಹ್', 'ಆರ್ಟ್ಸಿಬಾಶೆವ್ಹ್', ವಿಶೇಷವಾಗಿ 'ಗಾ:ರ್ಕಿ' ಅಲ್ಲದೆ ಇನ್ನೂ ಕೆಲ ಯುರೋಪದ ಮಹತ್ವದ ಬರೆಹಗಾರರ ಕೃತಿಗಳಿಂದ ಪರಿಣಾಮವಾಗಿದ್ದರೂ ಲು-ಶೂನರು ಏನೇ ಬರೆಯಲಿ, ಅದಕ್ಕೆ ಅವರದೇ ಆದ ಒಂದು ವ್ಯಕ್ತಿತ್ವದ ಮುದ್ರೆ ಇರುತ್ತದೆ; ಆ ಬರೆವಣಿಗೆ ತಮ್ಮ ಸುತ್ತುಮುತ್ತಲಿನ ವಾತಾವರಣದ ಗರ್ಭ

ದೊಳಗಿಂದ ಹುಟ್ಟಿಬಂದಿರುತ್ತದೆ, ಲು-ಶೂನರ ಮನಸ್ಸತ್ವವನ್ನು ಹೀರಿ ಕೊಂಡು. ಇದು ಒಬ್ಬ ಚೀನಾ ವಿಮರ್ಶಕ ಹೇಳಿದ ಮಾತು:

"ಪಾಶ್ಚಾತ್ಯ ಸಾಹಿತ್ಯದ ಪರಿಣಾಮವಾಗಿದ್ದರೂ ಕೂಡ ಲು-ಶೂನರು ಬರೆಯುವುದೆಲ್ಲ ಚೊಕ್ಕ ಚಿನ್ನ. ಅವರ ಶೈಲಿಯಲ್ಲಿಯ ಪ್ರಸಾದತೆ, ನಯ, ಸ್ವಾಭಾವಿಕ ಗಾಂಭೀರ್ಯ, ಇವೆಲ್ಲ ಚೀನಾದ್ದೆ. ಉಳಿದ ಅನುಕರಣ-ಬರೆಹ ಗಾರರಿಂದ ಅವರನ್ನು ಬೇರ್ಪಡಿಸುವ ಗುಣ ಎಂದರೆ ಇದೆ. ಈಗ ಇವರ ಅನುಕರಣ ಮಾಡುವವರೇ ಹೆಚ್ಚಾಗಿದ್ದಾರೆ. ಇವರ ಹಳ್ಳಿಗಾಡು ಜೀವನದ ಕತೆಗಳು, ಇವರ ಪ್ರಬಂಧಗಳು ತರುಣ ಪೀಳಿಗೆಯವರಿಗೆ ದಾರಿದೀಪ ಗಳಾಗಿವೆ...."

ಲು-ಶೂನರ ಎಷ್ಟೋ ಒಳ್ಳೆ ಕತೆಗಳನ್ನೂ ಪ್ರಬಂಧಗಳನ್ನೂ ಓದಿದ್ದೇನೆ; ಭಾಷಾಂತರ ಮಾಡಲು ಸಹಾಯಕನಾಗಿದ್ದೇನೆ; ಅವರ ಕತೆಗಳಲ್ಲಿ ಅನೇಕಕ್ಕೆ ಆಕಾರ, ರೂಪ ಇಲ್ಲ ಎನಿಸುತ್ತದೆ; ಕೆಲವು ಬರಿ ವ್ಯಕ್ತಿಚಿತ್ರ ಎನಿಸುತ್ತದೆ; ಹೀಗೆನಿಸುವದು ಪಾಶ್ಚಾತ್ಯರ ದೃಷ್ಟಿಯಿಂದ. ಆದರೆ ಅವರ ಶೈಲಿಯಲ್ಲಿಯೆ ಒಂದು ಮೋಹಕತೆ ಇದೆ. ಅದನ್ನು ಇನ್ನೊಂದು ಭಾಷೆಗಿಳಿಸಲು ಎಷ್ಟೇ ತಿಣಿಕಿದರೂ ಸಾಧ್ಯವಿಲ್ಲ ಎನಿಸುತ್ತದೆ. ಈ ಶೈಲಿಯ ಮೋಹಕತೆ ಅಲ್ಲದೆ ಇನ್ನು ಒಂದು ಗುಣವಿದೆ; ಅದೇ ಮುಖ್ಯ, ಅವರ ಬರೆವಣಿಗೆಯಲ್ಲಿ ಎಂದು ನನಗೆನಿಸುತ್ತದೆ. ಅದೆಂದರೆ ಅವರ ಹಾಸ್ಯ. ಕರುಣ ಆನಂದದ ನಡುವೆ ಆ ಹಾಸ್ಯ ತೂಗುತ್ತಿರುತ್ತದೆ. ನಕ್ಕುನಗಿಸುವಾನಗೆ, ಆ ಲೇಸುನಗೆ ಯಾವ ಪರದೇಶ ಬರೆಹಗಾರರ ಹತೋಟಿಗೂ ಸಿಗದೆ ಇದ್ದದ್ದು. ಆ ಹಾಸ್ಯ ಎಂಥದು ಎಂಬದಕ್ಕೆ ಲಿನ್-ಯು-ಟ್ಯಾಂಗರ ಒಂದು ಮಾಸಿಕದಲ್ಲಿ ಈ ಮಾತುಗಳಿವೆ:

"ಚೆಕವ್ಹರ ಕತೆಗಳಲ್ಲಿಯ ಹಳೆ ರಶಿಯದ ಬುದ್ಧಿಶ್ರೀಮಂತರಂತೆ, 'ಡಿಕೆನ್ಸ'ರಲ್ಲಿಯ ೧೯ನೇ ಶತಮಾನದ ಇಂಗ್ಲೆಂಡದ ಅಹಂಮನ್ಯರಂತೆ, ಲು-ಶೂನರ ಬರೆಹಗಳಲ್ಲಿಯ ವ್ಯಕ್ತಿಗಳು ಮುಂದಿನ ಶತಮಾನಕ್ಕೂ ಬದುಕಿ ಉಳಿಯುತ್ತಾರೆ; ಆ ಸತ್ವ ಅವರಲ್ಲಿದೆ. ಅವರು ಚಿತ್ರಿಸುವ ವ್ಯಕ್ತಿಚಿತ್ರಗಳಲ್ಲಿ ವಾಸ್ತವತೆ ಇದ್ದೂ ಆನಂದದ ಊರ್ಮಿಯನ್ನೆಬ್ಬಿಸುತ್ತದೆ; ಸಮಾಜದ ಪರಿ ಸ್ಥಿತಿಯನ್ನು ಕಣ್ಣೆದಿರು ಕಟ್ಟುತ್ತದೆ.... ಅವನ್ನು ಓದುವಾಗ ಕೇವಲ ಮನ

ರಂಜನೆಗಿಂತ ಏನೋ ಒಂದು ಬೇರೆ ಭಾವ ಹುಟ್ಟುತ್ತದೆ; ಅದು ಆತ್ಮೀಯ. ನಗೆಯ ಹುತ್ತದಿಂದ ಹಾವಿನ ಹೆಡೆ ಎದ್ದು ನಿಂತಂತೆ ಆ ವ್ಯಕ್ತಿಗಳಿರುವ ಅಸಹಾಯ ಸಮಾಜ ನಮ್ಮ ಕಣೆದುರು ಎದ್ದು ಕಾಣುತ್ತದೆ. ಏನೇ ಅಂದರೂ ಒಳ್ಳೆ ಮಾರ್ಮಿಕ ಕಲಾವಿದ."

ಚೀನಾದ ಕೃತ್ರಿಮ ರಾಜಕೀಯ ವಾತಾವರಣವು ಅವರ ಬರಬಹುದಾದ ಅದ್ಭುತ ಕೃತಿನಿರ್ಮಾಣಕ್ಕೆ ಅಡ್ಡಗಲ್ಲಾಗಿ ನಿಂತಿದೆ. ಅಂತೆ ಗುಪ್ತ ನಾಮಗಳನ್ನಿಟ್ಟುಕೊಂಡೊ, ಬೇರೆ ಯಾವ ಹೆಸರುಗಳಿಂದಲೊ, ಭಾಷಾಂತರ ಮಾಡಿಯೊ ಬರೆವಣಿಗೆ ಸಾಗಿಸಬೇಕಾಗಿದೆ. ಈತ ಓದುವದು ಹೆಚ್ಚು. ಹತ್ತು ಹನ್ನೆರಡು ಜರ್ಮನ್ ರಶಿಯನ್ ಪುಸ್ತಕಗಳನ್ನು ಭಾಷಾಂತರ ಮಾಡಿದ್ದರೂ, ಜಪಾನಿಯಿಂದ ಮಾಡಿದ್ದೇ ಹೆಚ್ಚು. ಇಂಗ್ಲೀಷ ಏನೂ ಬರುವದಿಲ್ಲ. ಪರಭಾಷೆಗಳಲ್ಲಿಯ ಜ್ಞಾನಸಂಪತ್ತನ್ನೆಲ್ಲ ತನ್ನ ಭಾಷೆಗೆ ತಂದು ಚೀನಿಯರ ವಿಚಾರಪಥಕ್ಕೂ ಬೆಳಕು ಹಿಡಿದು ಚೀನಾ ದೇಶಕ್ಕೇ ದೊಡ್ಡದೊಂದು ಉಪಕಾರ ಮಾಡಿದ್ದಾರೆ. ಹೀಗೆ ಮಾಡುವಾಗ ಅವರು ಎದುರಿಸಿದ ಪ್ರತಿರೋಧವೇನೂ ಅಷ್ಟಿಷ್ಟಲ್ಲ. ಅದು ಈಗಲೂ ಇನ್ನೂ ಇದೆ.

ಅವರೀಗ ಏಕಾಂತದಲ್ಲಿರಬೇಕಾಗಿದೆ. ಕಣ್ಮರೆಯಾಗುತ್ತಿರುವ ಪ್ರಾಚ್ಯ ವಸ್ತುಗಳನ್ನು ಸಂಗ್ರಹಿಸಿಡುವದರಲ್ಲಿಯೆ ಅವರ ಹೆಚ್ಚು ಹೊತ್ತು ಹೋಗುತ್ತದೆ. ಸ್ವತಃ ಚಿತ್ರ ಬರೆಯುತ್ತಾರೆ; ಕುಶಲ ಲಿಪಿಗಾರರೂ ಇದ್ದಾರೆ. ಕಟ್ಟಿಗೆಯಲ್ಲಿ ಚಿತ್ರಗಳನ್ನು ಕೊರೆಯುವ ಕಲೆಯ ವಿಕಾಸಕ್ಕೂ ಹೊಸದೊಂದು ಕಲಾ ಪಂಥವು ಬೆಳಕಿಗೆ ಬರುವದಕ್ಕೂ ಇವರೇ ಪ್ರಚೋದಕರಾಗಿದ್ದಾರೆ. ಇವರ ಹತ್ತಿರ ಶಿಲಾಲಿಪಿಗಳ ಒಂದು ದೊಡ್ಡ ಸಂಗ್ರಹವೇ ಇದೆ. 'ಚಿಂಗ್' ಮತ್ತು 'ಮಿಂಗ್' ರಾಜವಂಶದ ಪತ್ರಗಳನ್ನು ಕಟ್ಟಿಗೆಯಲ್ಲಿ ಕೊರೆದ ಹಳೆ ಸಂಗ್ರಹದಿಂದ ಎತ್ತಿ ತಗೆದು ಸಂಪಾದಿಸಿದ್ದಾರೆ.

ಸಂಕ್ರಮಣ ಕಾಲದ ಬುದ್ಧಿಜೀವಿಗಳಂತೆ ಇವರಿಗೂ ಒಂದು ಪರಂಪರಾಗತವಾದ ಸಾಂಸ್ಕೃತಿಕ ಹಿನ್ನೆಲೆಯಿದ್ದುದರಿಂದ "ನಮ್ಮದೆಲ್ಲಾ ಆಯಿತು. ಮುದಕನಾದೆ" ಎಂದು ತಮ್ಮನ್ನು ಆ ಹಿಂದಿನ ಹಳೇ ಯುಗಕ್ಕೆ ಸೇರಿಕೊಂಡು ಬಿಡುತ್ತಾರೆ. "ಈ ಹೊಸ ಹಾದಿಯಲ್ಲಿ ನಡೆದು ತೋರಿಸಲು ಬಹಳ

ಮುದುಕನಾಗಿದ್ದೇನೆ. ತರುಣ ಮುಖಂಡರಿಗೆ ನನ್ನಿಂದ ಬೇರೆ ಏನು ಹೇಳಲಿಕ್ಕಿಲ್ಲೆಂದರೂ 'ಹುಂ ಮುಂದೆ ಸಾಗಿರಿ' ಎಂದು ಹುರುಪು ಕೊಡುವದಿಷ್ಟೆ ಉಳಿದಿದೆ. ಅದೊಂದೇ ಉಳಿದದ್ದೀಗ." ಆದರೂ ಈತನ ಲೆಕ್ಕಣಿಕೆ ಇನ್ನೂ ಮುದುಕಾಗಿಲ್ಲ. ಚೀನಿ ಸಾಹಿತ್ಯದಲ್ಲಿ ಇಂದಿಗೂ ಈತನ ಸ್ಥಾನ ಅದ್ವಿತೀಯವಾಗಿದೆ.

—'ಎಡ್ಗರ್ ಸ್ನೊ'
('ಏಶಿಯಾ' ಎಂಬದರಿಂದ ಜನೇವರಿ ೧೯೩೫)

---

# ಮುಂದೆ ಬರಲಿರುವ ಕುಸುಮಗಳು

(೧) **ಮೇದಿನಾಪುರದ ಮಲ್ಲ**

(ಸಾಹಸ ಜೀವನಚಿತ್ರ)

ಬರೆದವರು :

ಗುರುರಾಜ ಜೋಶಿ, ಎಂ. ಎ. ಬಿಟಿ.

(೨) **ಮಾದನ ಮಗಳು**

(ಸಾಮಾಜಿಕ ಕಾದಂಬರಿ)

ಬರೆದವರು :

ಎಂ. ವಿ. ಸೀತಾರಾಮಯ್ಯ ಎಂ. ಎ.

(೩) **ಹೊಸಸಂಸಾರ ಮತ್ತು ಇತರ ಏಕಾಂಕಗಳು**

ಬರೆದವರು :

ದ. ರಾ. ಬೇಂದ್ರೆ, ಎಂ. ಎ.

(೪) **ಇಂದ್ರಚಾಪ**

(ಸುಪ್ರಸಿದ್ಧ ರಶಿಯನ್ ಕಾದಂಬರಿಯ ಅನುವಾದ)

ಅನುವಾದಕರು :

ತಲ್ಚೇರಿ ರಂಗರಾಯರು, ಎಂ ಎ., ಎಲ್.ಎಲ್.ಬಿ.

(೫) **ಎರಡನೆ ಸಂಬಂಧ**

(ಸಾಮಾಜಿಕ ಕಾದಂಬರಿ)

ಬರೆದವರು :

ಎನ್ಕೆ ಕುಲಕರ್ಣಿ, ಎಂ. ಎ.

(೬) **ಸಮರಸವೇ ಜೀವನ**

(ಇಜ್ಜೋಡಿನ ಮುಂದಿನ ಭಾಗ)

ಬರೆದವರು :

ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ)

(೭) **ಮೂಕಬಲಿ**

(ಸಾಮಾಜಿಕ ಕಾದಂಬರಿ)

ಬರೆದವರ :

ಜಡಭರತ

(೮) **ಮಹಾಲಕ್ಷ್ಮಿ ಮತ್ತು ಇತರ ನಾಟಕಗಳು**

ಬರೆದವರು :

ದ. ರಾ. ಬೇಂದ್ರೆ ಎಂ. ಎ.

# ಪರಿಚಯ

ಚೀನಾದ ಸಾಹಿತ್ಯಕ್ರಾಂತಿಯ ಕಾಲದಲ್ಲಿ ಹುಟ್ಟಿದ ಸಣ್ಣ-ಕತೆಗಳಲ್ಲಿ 'ಮದ್ದು' ಕತೆಯು ಅತ್ಯುತ್ತಮವಾದವುಗಳಲ್ಲೊಂದು ಎಂದು ವಿಮರ್ಶಕರಿಂದ ಪರಿಗಣಿಸಲಾಗುತ್ತದೆ. ಭಾಷಾಸುಧಾರಣೆಗಾಗಿ ಹೊರಟ ಪತ್ರಿಕೆಗಳಲ್ಲಿ ಶ್ರೇಷ್ಠವಾದ 'ನವಯುವಕ' (New Youth) ಎಂಬ ಪತ್ರಿಕೆಯಲ್ಲಿ ಈ ಕತೆಯು ಮೊದಲು ಪ್ರಕಟವಾಯಿತು. ಈ ಕತೆಯ ವಸ್ತು-ನಾವೀನ್ಯವೂ ಪ್ರಭಾವಯುತವಾದ ಶೈಲಿಯೂ ಆ ಕಾಲದ 'ಪೈ-ಹುವಾ' (Pai-hua) ಚಳುವಳಿಯ ಮೇಲೆ ಬಹು ತೀವ್ರ ಪರಿಣಾಮವನ್ನುಂಟು-ಮಾಡಿದವು. ಕತೆಯ ರೀತಿಯಂತೂ ಇದೀಗ ಅದೆಷ್ಟೋ ಅನುಕರಿಸಲ್ಪಡು-ತ್ತಿದೆ. ಲು-ಶೂನ್‌ರವರ ಇತ್ತೀಚಿನ ಬರೆಹಗಳೆಲ್ಲ ಹಳೆ–ಹೊಸತುಗಳ ತಿಕ್ಕಾಟವನ್ನು ಮನೋವೇಧಕವಾಗಿ ಹೇಳುವವು. ಈ ಕತೆಯು ಅದನ್ನು ಹೆಚ್ಚಾಗಿ ತೋರಿಸದಿದ್ದರೂ ಚೀನದ ಗ್ರಾಮಜೀವನದ ಪ್ರತೀಕವೆಂದು ಇದಕ್ಕೆ ಮಹತ್ವವಿದೆ. ಹೊರನಾಡುಗಳ ಸಂಬಂಧವನ್ನು ಬಳೆಯಿಸಿರುವ ಚೀನದ ಬಂದರಗಳನ್ನು ನೋಡಿದ ಪರನಾಡಿನವರಿಗೆ ಈ ಕತೆಯ ವಸ್ತುವು ಅತಿಶಯೋಕ್ತಿಯೆನಿಸಬಹುದು. ಆದರೆ ನಿಜವಾಗಿ ಹಾಗೆ ಇಲ್ಲವೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಇನ್ನೂ ಲಕ್ಷಾವಧಿ ಜನರು ಅಲ್ಲಿ ಯಂತ್ರ ಮಂತ್ರಗಳಿಂದಲೂ,ಬರೆ ಮುಂತಾದ್ದರಿಂದಲೂ ಸಾರಂಗದ ಕೋಡು, ಹುಲಿಯ ಎಲುಬಿನ ಪುಡಿ ಮೊದಲಾದ ವಿಚಿತ್ರ ವಸ್ತುಗಳ ಮಿಶ್ರಣದಿಂದ ಮಾಡಿದ ಔಷಧಗಳಿಂದಲೂ ಉಪಚಾರವನ್ನುಮಾಡುತ್ತಿದ್ದಾರೆ. ಇಂಗ್ಲಂಡದಲ್ಲಿ ಸಾವಿರಕ್ಕೆ ಒಬ್ಬ ನಿಷ್ಣಾತ ವೈದ್ಯನಿದ್ದರೆ ಚೀನದಲ್ಲಿ ಅದರ ಎಂಬತ್ತರಷ್ಟು ಜನಕ್ಕೆ ಕೂಡ ಒಬ್ಬ ವೈದ್ಯನಿಲ್ಲ.

ಒಣಗಿಸಿದ ರಕ್ತವು ತೀವ್ರ ಪರಿಣಾಮಕಾರಿಯಾದ ಔಷಧವಾಗಿದೆಯೆಂದು ಅನೇಕ ಅಶಿಕ್ಷಿತರು ಇನ್ನೂ ನಂಬುತ್ತಲಿದ್ದಾರೆ. ಹಂದಿಯ ರಕ್ತ, ಕುರಿಯ ರಕ್ತ ಇವು ಔಷಧಗಳಲ್ಲಿ ಉಪಯೋಗಿಸುವ ಸಾಮಾನ್ಯವಾದ ಮಿಶ್ರಣಗಳೇ ಆಗಿವೆ. ಈ ಕತೆಯಲ್ಲಿ ಉಪಯೋಗಿಸಿದ ಮೂಢಭಾವನೆಯು ದಕ್ಷಿಣ ಚೀನದಲ್ಲಿ ವಿಶೇಷವಾಗಿ ರೂಢವಾಗಿದೆ. ತಲೆಗಡಿದ ಜನರ ಬಿಸಿ ರಕ್ತವನ್ನು ಮಾರಿಕೊಳ್ಳುವದು ಕೊಲೆಗಡಕನ ಹಕ್ಕು ಎಂದೇ ತಿಳಿಯಲ್ಪಡುತ್ತಿತ್ತು.

ಇಂಥ ಮೂಢ ರೂಢಿಗಳನ್ನು ಜೋರಿನಿಂದ ತಡೆಯದಿರುವ ಸರಕಾರವನ್ನು 'ಮದ್ದು' ಕತೆಯು ಪರ್ಯಾಯವಾಗಿ ಟೀಕಿಸುತ್ತದೆ. ಲು-ಶೂನರ ಅನೇಕ ಬರೆಹಗಳಲ್ಲಿ ಇರುವಂತೆ ಇಲ್ಲಿಯೂ ಚೀನ ಜನಸಾಮಾನ್ಯದಲ್ಲಿ ರೂಢವಾದ ಅಜ್ಞಾನದ ಫಲವಾದ ವಿಕಾರ, ಅಪಯಶ ಇವುಗಳ ತಾತ್ವಿಕ ವಿವೇಚನೆಯ ಕರುಣಾಮಯ ಚಿತ್ರವನ್ನೇ ಕಾಣಬಹುದು "ಅವರ ವಿನೋದದಲ್ಲಿ ಸಾವಿನ ಸಂಕಟವಿದ್ದರೆ ಸಾವಿನಲ್ಲಿ ವಿನೋದವೂ ಇದೆ" ಎಂದು ಒಬ್ಬ ವಿಮರ್ಶಕನು ಹೇಳಿದ ಮಾತು ಈ ಕತೆಗೂ ಅನ್ವಯಿಸುತ್ತದೆ.

ಚೀನ ಭಾಷೆಯಿಂದ ಅನುವಾದ ಮಾಡಿದ ಅತ್ಯುತ್ತಮ ಅನುವಾದಗಳಲ್ಲಿಯೂ ಮೂಲದ ಶಕ್ತಿ ಬರಲಾರದೆಂಬುದು ಸ್ಪಷ್ಟವಿರುವಾಗ ಲೂ-ಶೂನರ ಕತೆಗಳಿಗಂತೂ ಅದು ಹೆಚ್ಚಾಗಿ ಅನ್ವಯಿಸುತ್ತದೆ. ಯಾಕಂದರೆ ಅವರ ಪ್ರತಿಭೆಯು ಅವರ ಶೈಲಿಯ ಪ್ರಭಾವದಲ್ಲಿದೆ. ಚೀನ ಭಾಷೆಯ ಪ್ರತಿಯೊಂದು ಅಕ್ಷರಕ್ಕೂ ತನ್ನದೇ ಆದ (ಸಾವಿರಾರು ವರ್ಷಗಳಿಂದ ಕೂಡಿಬಂದ ಅರ್ಥವಿನ್ಯಾಸದ) ಒಂದು ಆವರಣವಿದೆ. ಅದನ್ನು ಒಂದು ಅಥವಾ ಕೆಲವು ಕನ್ನಡ ಶಬ್ದಗಳಿಂದ ಹೇಳುವದು ಕೂಡ ಅನೇಕ ಸಲ ಕಠಿಣವಾಗುತ್ತದೆ. ಚೀನ ಸಾಹಿತ್ಯದ ವೈಶಿಷ್ಟ್ಯವೇ ಅವರ ಬಂಧದ ಬಿಗುವಿನಲ್ಲಿಯೂ, ಓದುಗರಿಗಾಗಿ ಬಿಟ್ಟ ಊಹೆಯಲ್ಲಿಯೂ ಅದೆಯೆಂದು ಹೇಳಬಹುದು "ವಿಷಯದ ಒಂದು ಕೋನವನ್ನು ದೇಳಿದ ಮೇಲೆ ಉಳಿದ ಮೂರನ್ನೂ ಅವನು ಊಹಿಸದಿದ್ದರೆ ನಾನು ಪಾಠವನ್ನು ಮತ್ತೆ ಹೇಳಲಾರೆ" ಎಂದು ಕನ್ಫೂಶಿಯಸ್ಸನ್ನು ಹೇಳಿದ್ದಾನೆ.

ಲು-ಶೂನರ (ದ್ವಿರುಕ್ತಿ)ಗಳು ಗೂಢವಾದ ಅರ್ಥವನ್ನೊಳಗೊಂಡಿವೆ ಅವರ ಶ್ಲೇಷಗಳು, ಸೂಕ್ಷ್ಮವಾದ ವ್ಯಂಗ್ಯವಕ್ರೋಕ್ತಿಗಳು, ವಿಡಂಬನಗಳು, ಕಥಾಸೂಚ್ಯಗಳೂ ಭಾಷಾಂತರಕ್ಕೆ ನಿಲುಕಲಾರವೆಂದು ಹೇಳಲಾಗುತ್ತಿದೆ. ಸುದೈವದಿಂದ 'ಮದ್ದು' ಕತೆಯು ವಸ್ತುವೂ, ವಿನ್ಯಾಸವೂ ಕೂಡಿಯೆ ಸರಳ ವಾಗಿವೆ. ಅನುವಾದದಲ್ಲಿ ಮೂಲದ ಶೈಲಿಯ ಸೌಂದರ್ಯವನ್ನೂ ಪ್ರಭಾವ ವನ್ನೂ ಕಾಣುವದು ಅಸಾಧ್ಯವಾದರೂ ಕತೆಯ ವಸ್ತು ಮತ್ತು ರೀತಿಯನ್ನು ಇಲ್ಲಿ ಮೆಚ್ಚಬಹುದು. 'ಮದ್ದು' ಕತೆಯ ಅನುವಾದದಲ್ಲಿ ಲು-ಶೂನರ ಪೂರ್ಣಕಲಾಕೃತಿಯ ಬೆಡಗನ್ನು ಕಾಣದಿದ್ದರೂ ಕಲಾವಸ್ತುಸಾಹಿತ್ಯ ವನ್ನಾದರೂ ಓದುಗರು ಕಾಣಬಹುದು.

---

# ಮದ್ದು



ಚಳಿಗಾಲದ ಒಂದು ರಾತ್ರಿ. ಆಗಲೇ ಮುಗಿಯುತ್ತ ಬಂದಿದೆ. ಚಂದ್ರನು ಮರೆಯಾಗಿ ಅದೆಷ್ಟೋ ಹೊತ್ತಾಗಿದೆ. ಆಕಾಶವು ನೀಲವರ್ಣದ ಛತ್ರಿನಂತಿದೆ. ಇನ್ನೂ ನಿಃಶಬ್ದ. ರಾತ್ರಿ-ಸಂಚಾರಿಗಳ ಹೊರತು ಎಲ್ಲವೂ ನಿದ್ದೆಯಲ್ಲಿದೆ ಹುವಾ-ಲಾವೊ-ಶುವಾನನು ಮಾತ್ರ ಎಚ್ಚತ್ತಿದ್ದಾನೆ. ಚಟಕ್ಕನೆ ಹಾಸಿಗೆಯ ಮೇಲೆ ಎದ್ದು ಕುಳಿತು ಕಡ್ಡಿ ಕೊರೆದು ಬದಿಯಲ್ಲಿದ್ದ ನೆಣ ಬಳಿದ ದೀಪವನ್ನು ಹಚ್ಚುತ್ತಾನೆ. ಮಂದವಾಗಿ ಮಿಣುಕುವ ಆ ಹಸಿರು ಬೆಳಕಿನಲ್ಲಿ ಚಹದಂಗಡಿಯ ಆ ಎರಡು ಕೋಣೆಗಳನ್ನು ಕಾಣಬಹುದು.

'ಇನ್ನು ಹೋಗುತ್ತೀಯಾ ಹಿಸಾವೊ-ಶುವಾನನ ಹಡೆದಾತಾ?' ಎಂದು ಹೆಣ್ಣುದನಿಯೊಂದು ಒಳಗಿನಿಂದ ಕೇಳಿಬರುತ್ತದೆ ಹತ್ತಿರದ ಚಿಕ್ಕ ಕೋಣೆಯಿಂದ ಗೂರುವ ಕೆಮ್ಮಿನ ದನಿ —

"ಹಂ ಹಂ"

ಲಾವೊ-ಶುವಾನನು ಬಟ್ಟೆ ಹಾಕಿಕೊಳ್ಳುತ್ತ ಕೆಮ್ಮಿನ ದನಿಯನ್ನು ಕೇಳುವನು. ಮತ್ತು ಒಳಗಡೆ ಕೈಚಾಚಿ "ಅದನ್ನಿಲ್ಲಿ ಕೊಡು" ಎಂದು ಆಕೆಗೆ ಹೇಳುವನು.

ಹೂ-ತಾ-ಮಾಳು ತಲೆಗಿಂಬಿನ ಕೆಳಗೆ ಕೈಯಾಡಿಸಿ ಬೆಳ್ಳಿಯ ನಾಣ್ಯಗಳು ತುಂಬಿದ ಚೀಲವೊಂದನ್ನು ಎತ್ತಿಕೊಡುತ್ತಾಳೆ. ಲಾವೋನು ಅದನ್ನು ಕಿಸೆಯಲ್ಲಿ ಹಾಕಿಕೊಳ್ಳುತ್ತಾನೆ; ಗಾಬರಿಯಿಂದ ಎರಡು ಮೂರು ಸಲ ತಟ್ಟಿಯೂ ನೋಡುತ್ತಾನೆ. ಕಾಗದದ ಕಂದೀಲನ್ನು ಹಚ್ಚಿ ಮೊದಲಿನ ಎಣ್ಣೆಯ ದೀಪವನ್ನು ಆರಿಸುತ್ತಾನೆ ಕಂದೀಲನ್ನು ಹಿಡಿದುಕೊಂಡು ಆ ಚಿಕ್ಕ ಕೋಣೆಯಲ್ಲಿ ಹೋಗಿ ಎಡೆಬಿಡದೆ ಕೆಮ್ಮುತ್ತಿರುವ ಮಗನನ್ನು ಕಂಡು, ಕೆಮ್ಮಿನ

ಆವೇಗ ಕಡಿಮೆಯಾದಾಗ "ಹಿಸಾವ್ರೊ-ಶುವಾನ್, ಏಳಲು ಕಷ್ಟಪಟ್ಟುಕೊಳ್ಳ ಬೇಡ ....ಅಂಗಡಿಯ ಕಾಳಜಿ....ಅದನ್ನು ನಿನ್ನ ತಾಯಿ ನೋಡಿಕೊಳ್ಳು ವಳು" ಎನ್ನುವನು.

ಹಿಸಾವ್ರೋನು ಸ್ತಬ್ಧನಾಗಿರುವನು ಕೆಮ್ಮಿನ ವೇಗ ಕಡಿಮೆಯಾಗಿದೆ, ಇನ್ನು ಮಲಗಬಹುದು ಎಂದು ವಿಚಾರಿಸುತ್ತ ಲಾವ್ರೋನು ಕಿರಿಬಾಗಿಲದಿಂದ ಬೀದಿಗೆ ಬರುವನು ಆ ಕತ್ತಲೆಯಲ್ಲಿ ಕಂದುಬಣ್ಣದ ಬೀದಿಯಲ್ಲದೆ ಇನ್ನೇನೂ ಕಾಣಿಸದು ಕೈಯಲ್ಲಿಯ ಕಂದೀಲಿನ ಬೆಳಕಿನಲ್ಲಿ ತಾಳ ಹಿಡಿ ದಂತೆ ಹೆಜ್ಜೆ ಹಾಕುತ್ತಿರುವ ಅವನ ಪಾದಗಳೆರಡು ಮಾತ್ರ ಕಾಣುತ್ತಿವೆ. ಅಲ್ಲಲ್ಲಿ ನಾಯಿಗಳ ಸದ್ದು; ಅವೂ ಅಲ್ಲಲ್ಲಿಯೆ ಮರೆಯಾಗುವವು. ಗಟ್ಟಿ ಯಾಗಿ ಒಂದೂ ಬೊಗಳುವದಿಲ್ಲ. ತಂಗಾಳಿಯಿಂದ ಲಾವ್ರೊ-ಶುವಾನನಿಗೆ ಒಂದು ತೆರೆದ ಹುರುಪು ಬರುತ್ತದೆ ತಾನಿನ್ನೂ ತರುಣನಾಗಿರುವೆನೆಂದೂ ತನ್ನ ಸ್ಪರ್ಶದಿಂದ ಜೀವ ತುಂಬಿಸುವ ಅದ್ಭುತ ಶಕ್ತಿ ತನ್ನಲ್ಲಿದೆಯೆಂದೂ ಅವನಿಗೆ ಅನಿಸುವದು. ಈ ಉತ್ಸಾಹದಲ್ಲಿ ಅವನು ವೇಗದಿಂದ ಹೆಜ್ಜೆ ಹಾಕುವನು ಮೆಲ್ಲನೆ ಮುಗಿಲಿನಲ್ಲಿ ಬೆಳಕು ತೋರಹತ್ತಿ ಮುಂದಿನ ಬೀದಿಯು ಇನ್ನೂ ಸ್ಪಷ್ಟವಾಗುವದು

ಹೀಗೆ ವಿಚಾರಮಗ್ನನಾಗಿ ಭರದಿಂದ ನಡೆಯುತ್ತ ಬೀದಿಗಳ ಕೂಟ ಬರಲು ಚಕಿತನಾಗಿ ಥಟ್ಟನೆ ನಿಲ್ಲುವನು. ಒಂದೆರಡು ಹೆಜ್ಜೆ ಹಿಂದೆ ಬದಿಗೆ ಸರಿದು ಮಳಿಗೆಯೊಂದರ ಕಿರಿ ಚಪ್ಪರದ ಕೆಳಗೆ ಬರುವನು ಮಳಿಗೆಯ ಬಾಗಿಲಿನ್ನೂ ಮುಚ್ಚಿದೆ. ನಿಂತು ನಿಂತು ಚಳಿಯಲ್ಲಿ ಅವನ ಎಲವುಗಳೇ ಮರಗಟ್ಟಿದಂತೆನಿಸುವವು.

"ಓಹೋ, ಮುದುಕ !"

"ಒಳ್ಳೇ ಉತ್ಸಾಹ ಕಾಣುತ್ತದೆ, ಎಷ್ಟು ಬೇಗ ಎದ್ದಿದ್ದಾನೆ !"

ಲಾವ್ರೊ-ಶುವಾನನು ಕಣ್ಣು ಬಿಟ್ಟು ನೋಡಲು, ತನ್ನನ್ನು ಸರಿಸಿ ಅದೆಷ್ಟೋ ಜನ ಹೋಗುತ್ತಿರುವದು ಕಾಣುವದು. ಅವರಲ್ಲಿ ಒಬ್ಬನಂತೂ ಮುಂದೆ ಹೋದವನು ತಿರುಗಿ ನಿಂತು ತನ್ನನ್ನೇ ದಿಟ್ಟಿಸಿ ನೋಡುವನು. ಆ ಮಂದ ಬೆಳಕಿನಲ್ಲಿ ಅವನ ಗುರುತು ಹತ್ತದಿದ್ದರೂ, ಅವನ ಕಣ್ಣಿನಲ್ಲಿಯ ಆ

ಕ್ರೂರವಾದ, ಸ್ಥಿರವಾದ, ಹರಿದು ತಿನ್ನುವಂತಿರುವ ಬೆಳಕು ಮಾತ್ರ ಲಾವ್ರೋ-ನನ್ನು ಚುಚ್ಚದಿರಲಿಲ್ಲ. ಕಂದೀಲನ್ನು ನೋಡಲು, ಅದು ಆರಿಹೋಗಿದೆ. ಒಮ್ಮೆಲೆ ಕಿಸೆಯಲ್ಲಿಯ ಗಂಟನ್ನು ಮುಟ್ಟಿಕೊಳ್ಳುತ್ತಾನೆ. ಅದು ಅಲ್ಲಿಯೇ ಇದೆ. ಸುತ್ತುಮುತ್ತು ಹಣಿಕಿ ನೋಡಲು ಅದೆಷ್ಟೋ ಜನ ನೆರೆದಿದ್ದಾರೆ. ಮಬ್ಬಿನಲ್ಲಿ ಅವರೆಲ್ಲ ಭೂತಗಳೊ ಎನ್ನುವಂತೆ ಕಾಣುವರು. ದಿಟ್ಟಿಸಿ ನೋಡಲು ಅವರೂ ತನ್ನಂತೆಯೇ ಎನಿಸುವದಲ್ಲದೆ ವಿಶೇಷವೇನೂ ತೋರುವದಿಲ್ಲ.

ಜನರ ಗುಂಪಿನಲ್ಲಿ ಅಲ್ಲಲ್ಲಿ ಸೈನಿಕರು ನಿಂತಿದ್ದಾರೆ. ಹಿಂದೆ ಮತ್ತು ಮುಂದೆಯೂ ಸಮವಸ್ತ್ರ ಧರಿಸಿರುವ ಬಿಳಿಯ ದುಂಡಾದ ಬಟ್ಟೆಯ ಬಿಲ್ಲೆಗಳಿಂದ ಅವರು ಸರಕಾರಿ ಸೈನ್ಯದವರೆಂದು ದೂರದಿಂದಲೇ ಗುರುತಿಸಬಹುದು. ಹತ್ತಿರ ಹೋದಲ್ಲಿ ಅವರ ಸೆರೆಯಂತಹ ಕಂದು ಬಣ್ಣದ ಸಮವಸ್ತ್ರವೂ ಸ್ಪಷ್ಟವಾಗುವದು. ಜನಸಮ್ಮರ್ದದ ಕಾಲುಸಪ್ಪಳವೇ ಸಪ್ಪಳ. ಕೆಲವು ಜನ ಒಂದೆಡೆಗೆ ಗುಂಪಾಗಲು ಒಂದು ಚಿಕ್ಕ ಗುಂಪು ಮತ್ತೊಂದನ್ನು ಸೇರುವದು. ಮಹಾಸಾಗರದ ತೆರೆಗಳಂತೆ ಆ ಗುಂಪುಗಳು ಅತ್ತಿತ್ತ ಅಲೆಯುವವು. ಕೂಟದ ಚೌಕನ್ನು ತಲ್ಪಿದೊಡನೆ ಎಲ್ಲರೂ ತಡೆಯುವರು. ಲಾವ್ರೊ-ಶುವಾನನ ಕಡೆಗೆ ಬೆನ್ನುಮಾಡಿ ಅರ್ಧವರ್ತುಲದಲ್ಲಿ ಜನವೆಲ್ಲ ನಿಲ್ಲುವದು

ಕೊರಳುಪಟ್ಟಿಯಿಂದ ಮುಂಚಾಚಿದ ಕುತ್ತಿಗೆಗಳೆಲ್ಲ ಬಾತಗೋಳಿಗಳ ಹಿಂಡಿನಂತೆ ಯಾವದೋ ಒಂದೆ ವಸ್ತುವಿನ ಕಡೆಗೆ ಕಾಣದಕೈಯಿಂದ ಎಳೆಯಲ್ಪಟ್ಟಿರುವಂತೆ ತಿರುಗಿರುವವು. ಒಂದು ಕ್ಷಣ ಎಲ್ಲವೂ ನೀರವ. ಜನದ ಗೋಣುಗಳಾಚೆಯಿಂದ ದೂರದಿಂದ ಒಂದು ಸಪ್ಪಳ ಲಾವ್ರೊ-ಶುವಾನನಿಗೆ ಕೇಳಿಬರುವದು. ಪ್ರೇಕ್ಷಕರ ಗುಂಪು ಒಮ್ಮೆಲೆ ಚದರುವದು. ಒಬ್ಬರನ್ನೊಬ್ಬರು ತಡೆಹಾಯುತ್ತ ಜನ ಸರಿಯಹತ್ತುವದು. ಈ ನುಗ್ಗಾಟದಲ್ಲಿ ಲಾವ್ರೊ-ಶುವಾನನು ಮುಗ್ಗರಿಸುವವನೇ; ಹೇಗೋ ಸಾವರಿಸಿಕೊಂಡು ನಿಲ್ಲುವನು.

'ಹಾ! ಒಂದು ಕೈಯಿಂದ ಹಣ, ಇನ್ನೊಂದು ಕೈಯಿಂದ ಬದುಕು' ಎಂದು ಚೀರುತ್ತ ತುಂಬಾ ಕರಿ ಬಟ್ಟೆ ಹಾಕಿಕೊಂಡ ವ್ಯಕ್ತಿಯೊಂದು ಮುಂದೆ

ನುಗ್ಗುತ್ತ ಲಾವೊ-ಶುವಾನನ ಎದುರಿನಲ್ಲಿಯೇ ಬಂದು ನಿಂತಿತು. ಆತನ ಕಣ್ಣುಗಳಲ್ಲಿ ಕತ್ತಿಯ ಅಲುಗಿನಂತಹ ತೀಕ್ಷ್ಣ ಹೊಳಪಿದೆ. ಎರಡೂ ಕಣ್ಣುಗಳಿಂದ ಬರುವ ಆ ಬಿರುನೋಟವು ಲಾವೋನನ್ನು ಇರಿದಂತಾಯಿತು. ತನ್ನ ನಿಲುವೆ ಅರ್ಧಕ್ಕೆ ಕುಸಿದಂತೆ ಅವನಿಗನಿಸಿತು.

ಆ ಕಪ್ಪುವ್ಯಕ್ತಿಯು ಒಂದು ಕೈಯನ್ನು ಮುಂದೆ ಚಾಚಿದ್ದಾನೆ. ಮತ್ತೊಂದರಲ್ಲಿ ಉರಿಯು ಹಾಯುತ್ತಿರುವ ಅವುದೋ ವಸ್ತುವಿನ ಉಂಡೆಯನ್ನು ಹಿಡಿದಿದ್ದಾನೆ. ಅದಕ್ಕೆ ಏನೇನೋ ಕೆಂಪು ಮೆತ್ತಿದೆ. ಅದರಿಂದ ಹನಿಗಳು ತಟತಟ ಎಂದು ನೆಲಕ್ಕೆ ಬೀಳುತ್ತಿವೆ.

ಲಾವೊ-ಶುವಾನನು ನಡುಗುವ ಕೈಯಿಂದ ಹಣವನ್ನು ತೆಗೆಯುತ್ತಾನೆ. ಕೈಯೊಳಗಿನ ವಸ್ತುವಿನಿಂದ ರಕ್ತ ತಟಕಿಕ್ಕುತ್ತಿರುವ ಆ ಮನುಷ್ಯನಿಗೆ ಹಣ ಕೊಡಲು ಕೈ ಚಾಚುತ್ತಾನೆ. ಅವನಿಂದ ಆ ಕೆಂಪು ಮುದ್ದೆಯನ್ನು ತೆಗೆನುಕೊಳ್ಳುವ ಧೈರ್ಯವಾಗದೆ ನಿಂತುಬಿಡುತ್ತಾನೆ.

‘ ತೆಗೆದುಕೊಳ್ಳಬಾರದೆ ? ಇದೇಕೆ ಗಾಬರಿ ! ’ ಎಂದು ಕರ್ಕಶವಾಗಿ ಕೇಳುತ್ತಾನೆ. ಮತ್ತು ಲಾವೊ-ಶುವಾನನು ಇನ್ನೂ ಅನುಮಾನಿಸುತ್ತಲೆ ಇರುವದನ್ನು ನೋಡಿ ಒಮ್ಮೆಲೇ ಅವನ ಕೈಯಲ್ಲಿಯ ದೀಪವನ್ನು ಕಿತ್ತಿಕೊಂಡು, ಅದರ ಆವರಣವಾಗಿದ್ದ ಕಾಗದವನ್ನು ಹರಿದು ಅದನ್ನೇ ತನ್ನ ಕೈಯಲ್ಲಿದ್ದ ವಸ್ತುವಿಗೆ ಸುತ್ತಿ ಶುವಾನನ ಕೈಯಲ್ಲಿ ಅದನ್ನು ಇಟ್ಟುಬಿಟ್ಟು, ಹಣವನ್ನು ಕಿತ್ತುಕೊಳ್ಳುತ್ತಾನೆ. ಮತ್ತು ಆ ಬೆಳ್ಳಿಯ ನಾಣ್ಯಗಳ ಮೇಲೆ ಬೆರಳು ಆಡಿಸುತ್ತ “ ಮುದಿಹುಚ್ಚು ! ” ಎಂದು ಮರಳಿ ಹೋಗುತ್ತಾನೆ.

“ ಯಾರಿಗೆ ಗುಣಪಡಿಸಲು? ” ಎಂದು ಯಾರೋ ಅಂದಂತಾಗುತ್ತದೆ. ಲಾವೊ-ಶುವಾನನು ಉತ್ತರ ಕೊಡುವದೇ ಇಲ್ಲ. ಹತ್ತು ತಲೆಮಾರುಗಳಿಂದ ಇಳಿದು ಬಂದ ಒಂದೇ ಒಂದಾದ ಮಗುವೋ ಎನ್ನುವಂತೆ ಕೈಯಲ್ಲಿಯ ಮುದ್ದೆಯನ್ನು ಮೆಲ್ಲನೆ ತಟ್ಟಿ ನೋಡುತ್ತಿರುತ್ತಾನೆ. ತನ್ನ ಕೈಯಲ್ಲಿಯ ಸಶಕ್ತಜೀವನಸಾರವನ್ನು ಇದೀಗ ತನ್ನ ಮನೆಯಲ್ಲಿ ಒಯ್ದುಬಿಡುವ ಅವನಿಗೆ ಮತ್ತಾವದೂ ಲಕ್ಷ್ಯವಿಲ್ಲ. ಮುಂದಿನ ಸುಖದ ಕನಸನ್ನೇ ಕಾಣುತ್ತಿರುತ್ತಾನೆ.

ಬೆಳಕು ಹರಿಯುತ್ತದೆ. ಎದುರಿಗೆ ತನ್ನ ಚಹದಂಗಡಿಗೆ ಹೋಗುವ ದಾರಿ ಸ್ಪಷ್ಟವಾಗಿ ಕಾಣುತ್ತದೆ. ಹಿಂದೆಯೇ ಸೂರ್ಯನ ಕಿರಣಗಳು ಚೌಕಿನಲ್ಲಿ ಮಾಶಿದ ಸುವರ್ಣಾಕ್ಷರಗಳ ಒಂದು ಹಲಗೆಯನ್ನು ಬೆಳಗಿಸುತ್ತಿವೆ. ಅದರ ಮೇಲೆ "ಪ್ರಾಚೀನ.....ಗೋಪುರ....." ಎಂದು ಬರೆದಿದೆ.

(೨)

ಲಾವೊ-ಶುವಾನನು ಮನೆಗೆ ಬಂದು ನೋಡುತ್ತಾನೆ – ಚಹ-ದಂಗಡಿಯ ಭಾಗವನ್ನೆಲ್ಲ ಚನ್ನಾಗಿ ಉಡುಗಿ, ಮೇಜುಗಳನ್ನು ಒರೆಸಿ ಇಡಲಾಗಿದೆ. ಆದರೆ ಇನ್ನೂ ಗಿರಾಕಿಗಳಾರೂ ಬಂದಿಲ್ಲ. ಹಿಸಾವೋ-ಶುವಾನನು ಮಾತ್ರ ಒಂದೆಡೆಗೆ ಕುಳಿತು ನ್ಯಾರಿ ಮಾಡುತ್ತಿದ್ದಾನೆ. ಅವನ ಹಣೆಯಿಂದ ಬೆವರು ಸುರಿಯುತ್ತಿದೆ. ಹಾಕಿಕೊಂಡ ಜಾಕೀಟು ಒಳಸೇರಿದ ಬೆನ್ನು ರಿಗೆ ಅಂಟಿಕೊಂಡಿದೆ. ಒಳಅಂಗಿಯ ಕಾ:ಲರು ಹೊರಗೆ ಜೋಲುಬಿದ್ದಿದೆ. ಬೆನ್ನಮೇಲೆ "ಬಾಹ" ಎಂಬ ಅಕ್ಷರ ಅಚ್ಚೊತ್ತಿದೆಯೊ ಎನ್ನುವಂತೆ ತೋರುತ್ತದೆ. ಅದನ್ನು ನೋಡಿದೊಡನೆ ಲಾವೊ-ಶುವಾನನಿಗೆ ಹುಬ್ಬುಗಂಟಿಕ್ಕುವಂತಾಗುತ್ತದೆ. ಅಷ್ಟರಲ್ಲಿ ಅವನ ಹೆಂಡತಿ ಅಡಿಗೆಮನೆ ಯಿಂದ ಅವಸರದಿಂದ ಹೊರಬರುತ್ತಾಳೆ. ಬಾಯ್ದೆರೆದಿದೆ....ತುಟಿ ನಡು-ಗುತ್ತಿವೆ.

"ತೆ-ಲಿಯಾವೊ-ಮಾಹ?" ಎಂದು ಕೇಳುತ್ತಾಳೆ.

"ಹೂಂ, ತಂದಿದ್ದೇನೆ" ಎಂದು ಲಾವೊ-ಶುವಾನ್ ಹೇಳುತ್ತಾನೆ.

ಇಬ್ಬರೂ ಕೆಲಹೊತ್ತು ಅಡಿಗೆಮನೆ ಸೇರುತ್ತಾರೆ. ಏನೋ ಮಾತಾಡಿ ಕೊಳ್ಳುತ್ತಾರೆ. ಹೂ-ತಾ-ಮಾಳು ಅವಸರದಿಂದ ಹೊರಗೆ ಹೋಗಿ ಒಂದು ಒಣಗಿದ ಕಮಲದೆಲೆಯನ್ನು ತಂದು ಮೇಜಿನ ಮೇಲೆ ಹಾಕುತ್ತಾಳೆ. ಲಾವೊ-ಶುವಾನನು ತನ್ನ ಕೈಯಲ್ಲಿಯ ನಸುಗೆಂಪಾದ ಮುದ್ದೆಯನ್ನು ಕಾಗದದಿಂದ ಬಿಚ್ಚಿ ಆ ಎಲೆಯ ಮೇಲೆ ಹಾಕಿ ಅದನ್ನು ಮತ್ತೆ ಒಳ್ಳೇ ಕಾಳಜಿಯಿಂದ ಮುಚ್ಚುತ್ತಾನೆ. ಅಷ್ಟರಲ್ಲಿ ಹಿಸಾವೊ-ಶುವಾನನು ಊಟ ಮುಗಿಸಿ ಏಳುವದ ರಲ್ಲಿರುತ್ತಾನೆ. "ಹಾಗೆಯೆ ಕೂತಿರು ಚಿಕ್ಕ ಕೊಂಡಿಯೆ, (ಮಗು) ಇಲ್ಲಿ ಆನಕಾ ಬರಬೇಡ" ಎಂದು ಕೂಗುತ್ತಾಳೆ.

ಮಣ್ಣಿನ ಒಲೆಯಲ್ಲಿ ಉರಿ ಏಳುತ್ತದೆ. ಲಾವ್ರೋನು ತನ್ನ ಕೈಯಲ್ಲಿಯ ಹಸಿರು ಮತ್ತು ಕೆಂಪಾದ ಮುದ್ದೆಯನ್ನು ಹಂಚಿನ ಮೇಲೆ ಹಾಕುತ್ತಾನೆ. ಕೆಂಪು ಕಪ್ಪು ಉರಿ ಏಳುತ್ತದೆ. ಏನೋ ಒಂದು ವಾಸನೆ ಮನೆಯನ್ನೆಲ್ಲ ತುಂಬುತ್ತದೆ.

" ಹೊ! ಕಮ್ಮಗಿದೆ. ಏನು ತಿನ್ನುತ್ತಿದ್ದೀರಿ ? " ಎಂದು ಕೇಳುತ್ತ ಗೂನು-ಬೆನ್ನಿನ ಫಿಪ್ತನು ಮೂಗೇರಿಸುತ್ತ ಒಳಗೆ ಬರುತ್ತಾನೆ. ಬೆಳಗಾಗುತ್ತಲೆ ಬಂದು ರಾತ್ರಿಯಾದ ಮೇಲೆ ಹೋಗುವ ಚಹದಂಗಡಿಯ ಚಟಗಾರರಲ್ಲಿ ಅವನು ಒಬ್ಬನೆನ್ನಬಹುದು. ದಾರಿಗೆ ಹೊಂದಿ ಇರುವ ಮೇಜಿಗೆ ಜೋಲಿ ಹೊಡೆಯುತ್ತ ಕುಳಿತು ಅವನು ಹರಟೆ ಸುರುಮಾಡುತ್ತಾನೆ.

" ಅಕ್ಕಿಯ ದೋಸೆ ಹೊಯ್ಯುತ್ತಿದ್ದೀರಾ ? "

ಯಾರೂ ಉತ್ತರ ಕೊಡುವದಿಲ್ಲ. ಲಾವ್ರೊ-ಶುವಾನನು ಮಾತಾಡದೆ ಕುದಿಸಿದ ಚಹ ತಂದಿಡುತ್ತಾನೆ.

ಒಳಗಿನ ಕೋಣೆಯಿಂದ ಹೂ-ತಾ-ಮಾಳು " ಇಲ್ಲಿ ಬಾ, ಹಿಸಾವ್ರೊ-ಶುವಾನ " ಎಂದು ಕರೆಯುತ್ತಾಳೆ. ಮಧ್ಯದಲ್ಲಿ ಒಂದು ಸ್ಟೂಲು ಇಟ್ಟದೆ. ಆ " ಚಿಕ್ಕ ಕೊಂಡಿ " (ಮಗು) ಬಂದು ಕೂಡ್ರುತ್ತಾನೆ. ಅವನ ತಾಯಿ ತಾಟಿನಲ್ಲಿ ಒಂದು ಕಪ್ಪಾದ ಪದಾರ್ಥವನ್ನಿಟ್ಟು ಅದನ್ನು ಅವನ ಕೈಗೆ ಕೊಡುತ್ತ, " ಇದನ್ನು ತಿಂದುಬಿಡು, ಜಡ್ಡು ಬಿಟ್ಟುಹೋಗುವದು " ಎಂದು ಮೆಲ್ಲಗೆ ಹೇಳುತ್ತಾಳೆ.

ಹಿಸಾವ್ರೊ-ಶುವಾನನು ಅದನ್ನು ಎತ್ತಿಕೊಳ್ಳುತ್ತಾನೆ. ಕುತೂಹಲದಿಂದ ಒಂದು ಕ್ಷಣ ಅದನ್ನು ನೋಡುತ್ತಾನೆ. ತನ್ನ ಜೀವವನ್ನೇ ಕೈಯಲ್ಲಿ ಹಿಡಿದಿರುವಂತೆ ಅವನಿಗೆ ಎನಿಸುತ್ತದೆ. ಎದೆ ಆಶ್ಚರ್ಯದಿಂದ ಬಡಿದುಕೊಳ್ಳ ಹತ್ತುತ್ತದೆ. ಮೆಲ್ಲನೆ ಕೈಯಲ್ಲಿಯ ಆ ತಿನಿಸನ್ನು ಒಡೆಯುತ್ತಾನೆ. ಅದರಿಂದ ಬಿಳಿಯ ಉಗಿ ಹೊರಗೆ ಹಾಯ್ದು ಹವೆಯಲ್ಲಿ ಬೆರೆತುಹೊಗುತ್ತದೆ. ಅದೊಂದು ಬಿಳಿಯ ಹಿಟ್ಟಿನುಂಡೆ ಎಂದು ಅವನಿಗೆ ತಿಳಿಯುತ್ತದೆ. ಕೂಡಲೆ ನುಂಗಿಬಿಡುತ್ತಾನೆ. ಅದರ ರುಚಿಯೂ ಕೂಡ ಈಗ ಅವನಿಗೆ ತಿಳಿಯದು. ಮುಂದೆ ಬರಿಯ ತಾಟು, ಒಂದು ಮಗ್ಗುಲಿಗೆ ತಂದೆ, ಮತ್ತೊಂದು ಬದಿಗೆ

ತಾಯಿ, ಇಬ್ಬರೂ ಒಬ್ಬರನ್ನೊಬ್ಬರು ಅರ್ಥಪೂರ್ಣವಾಗಿ ನೋಡುತ್ತಿದ್ದಾರೆ. ಆ ಮೌನವಿನಿಂದ ಏನನ್ನೋ ಹೊರತೆಗೆದು ಏನನ್ನೋ ಒಳಗೆ ಹಾಕುತ್ತಿರುವಂತೆ ಅವರಿಗೆ ಅನಿಸುತ್ತದೆ. ಹಿಸಾವೊ-ಶುವಾನನಿಗೊ ಎಲ್ಲ ಗಾಬರಿ. ದುರ್ಬಲವಾದ ಅವನ ಹೃದಯು ಜೋರಾಗಿ ಬಡಿದುಕೊಳ್ಳಹತ್ತುವದು. ಕೈಯಿಂದ ಎದೆ ಗಟ್ಟಿಯಾಗಿ ಹಿಡಿದುಕೊಂಡು ಕೆಮ್ಮಹತ್ತುವನು.

"ತುಸು ಮಲಗಿಕೋ, ಸಮಾಧಾನವಾಗುವದು."

ತಾಯಿಯ ಮಾತಿನಂತೆ ಹಿಸಾವೊ-ಶುವಾನನು ಕೆಮ್ಮುತ್ತ ಒರಗಿಕೊಳ್ಳುವನು. ಅವನಿಗೆ ಜಂಪು ಹತ್ತುವವರೆಗೆ ನೋಡುತ್ತಿದ್ದು ಅವಳು ಮೆಲ್ಲನೆ ಅವನ ಮೇಲೆ ಕೌದಿಯನ್ನೆಳೆಯುತ್ತಾಳೆ.

(೩)

ಅಂಗಡಿಯ ಭಾಗದಲ್ಲಿ ಇದೀಗ ಎಷ್ಟೋ ಗಿರಾಕಿಗಳು ಬಂದಿದ್ದಾರೆ ಲಾವೊ-ಶುವಾನನು ತನ್ನ ಉದ್ಯೋಗದಲ್ಲಿ ಮಗ್ನನಾಗಿದ್ದಾನೆ. ಬಿಸಿನೀರು, ಚಹ ಹಾಕುತ್ತ ತನ್ನ ಕೆಲಸದಲ್ಲಿ ಒಳ್ಳೆ ಲಕ್ಷ್ಯಗೊಡುತ್ತಿರುವಂತೆ ಒಂದು ಮೇಜಿನಿಂದ ಮತ್ತೊಂದು ಮೇಜಿಗೆ ಓಡಾಡುತ್ತಿರುವನು. ಆದರೆ ಅವನ ಕಣ್ಣುಗಳು ಒಳಸೇರಿ ಕೆಳಗೆ ಕಪ್ಪು ಗೆರೆಗಳು ಎದ್ದು ಕಾಣುತ್ತಿವೆ.

"ಲಾವೊ-ಶುವಾನ್, ಪ್ರಕೃತಿ ಸರಿಯಾಗಿಲ್ಲವೆ?" ಎಂದು ಬಿಳಿಯೊಡೆದ ಕಲ್ಲೀಮೀಸೆಯವನೊಬ್ಬನು ಕೇಳುವನು.

"ಛೇ, ಇಲ್ಲ."

"ಇಲ್ಲ?................ಹಾಗೂ ಶಕ್ಯವಿಲ್ಲ ಎಂದು ನನಗೆ ಆಗಲೇ ಗೊತ್ತು. ಇದೀಗ ನಿನ್ನ ಮುಗುಳ್ನಗೆ........"ಎಂದು ಕಲ್ಲಿಮೀಸೆಯವ ತನ್ನ ಮೊದಲ ಮಾತನ್ನೇ ಅಲ್ಲಗಳೆಯುವಂತೆ ಹೇಳುತ್ತಾನೆ.

"ಲಾವೊ-ಶುವಾನನಿಗೆ ಯಾವಾಗಲೂ ಕೆಲಸ. ಮತ್ತೆ ಮಗನೂ...." ಎಂದು ಗೂನು-ಬೆನ್ನಿನವ ಮಾತು ಮೊದಲು ಮಾಡುತ್ತಿರುವಲ್ಲಿ ಯಾರೋ ಬರುವದನ್ನು ಕಂಡು ಸುಮ್ಮನಾಗುತ್ತಾನೆ. ದಪ್ಪ ಮೋರೆಯ ಮುದ್ದೆ ಮುದ್ದೆ ಮೈಯವನೊಬ್ಬನು ಒಳಗೆ ಬರುವನು. ಮೈಗೆ ಗುಂಡಿ ಹಾಕದ

ಒಂದು ಕಪ್ಪು ಅಂಗಿ ಟೊಂಕಕ್ಕೆ ಸುತ್ತಿದ ಕಪ್ಪು ಪಟ್ಟಿಯನ್ನು ಬಳಸಿ ಇಳಿಬಿದ್ದಿದೆ* ಲಾವೊ-ಶುವಾನನ್ನು ಕೂಗುತ್ತಲೇ ಒಳಗೆ ಬರುತ್ತಾನೆ—

" ತಿಂದನಲ್ಲವೆ ? ಈಗಲೇ ಗುಣವಾಯಿತೆ ? ಲಾವೊ-ಶುವಾನ್, ನಿನ್ನ ನಸೀಬ ಚನ್ನಾಗಿದೆ ಹಾಂ ! ನೀನು ನಿಜವಾಗಿಯೂ ನಸೀಬವಾನನು........ ನಾನು ಸುದ್ದಿ ತೀವ್ರ ಹಚ್ಚದಿರುತ್ತಿದ್ದರೆ..............."

ಒಂದು ಕೈ ಗೌರವವ್ಯಂಜಕವಾಗಿ ನೇರವಾಗಿ ಕೆಳಗೆ ಬಿಟ್ಟು ಮತ್ತೊಂದರಲ್ಲಿ ಕಿಟ್ಲಿಯನ್ನು ಹಿಡಿದುಕೊಂಡು ಲಾವೊ-ಶುವಾನನು ಆಸ್ಥೆಯಿಂದ ಕೇಳುತ್ತಾನೆ ಮತ್ತು ಕಿರುನಗೆ ಬೀರುತ್ತಾನೆ. ಕುಳಿತವರೆಲ್ಲ ಹಾಗೂ ಹೀಗೂ ಕೇಳುತ್ತಿರುತ್ತಾರೆ. ಅಷ್ಟರಲ್ಲಿ ಹೂ-ತಾ-ಮಾಳು ಬರುತ್ತಾಳೆ. ಕಪ್ಪು ಕಣ್ಣುಗಳು. ನಿದ್ದೆಯಿಲ್ಲ. ನಸುನಗುತ್ತ ಮುಂದೆ ಬಂದು ಹಸಿರು ಓಲಿವ್ನಿಂದ ಕಂಪು ಬೀರುವ ಚಹದೆಲೆಗಳನ್ನು ಅದೇ ಬಂದಿರುವ ಆ ವ್ಯಕ್ತಿಗೆ ಹಾಕುತ್ತಾಳೆ. ಲಾವೊ-ಶುವಾನನು ತಾನೇ ಎಸರು ನೀರನ್ನು ಬಟ್ಟಲಕ್ಕೆ ಸುರುವುತ್ತಾನೆ.

"ಖಾತ್ರಿಯಿಂದ ಗುಣ ಕೊಡುವುದು ! ಉಳಿದವುಗಳಂತೆ ಅಲ್ಲ ! ಬಿಸಿ ಇರುವಾಗಲೇ ತಂದದ್ದು, ಆರದಿರುವಾಗಲೇ ತಿಂದದ್ದು, ಅಲ್ಲವೆ ? " ಎಂದು ಆ ಗಡಸುಮೋರೆಯ ವ್ಯಕ್ತಿ ಗಟ್ಟಿಯಾಗಿ ಹೇಳುವನು.

"ಹೌದು ಮತ್ತೆ ! ಕಾನ್ ದೊಡ್ಡಪ್ಪನ ನೆರವಿಲ್ಲದಿದ್ದರೆ ಆಗುತ್ತಿತ್ತೇ ? " ಎಂದು ಹೂ-ತಾ-ಮಾಳು ತನ್ನ ಕೃತಜ್ಞತೆಯನ್ನು ತೋರ್ಪಡಿಸುತ್ತಾಳೆ.

" ಖಾತ್ರಿಯಿಂದ ಗುಣ, ಖಾತ್ರಿಯಿಂದ ಗುಣ, ಬಿಸಿಯಿರುವಾಗಲೇ ತಿಂದಮೇಲೇನು ! ಎಂತಹ ಕ್ಷಯಕ್ಕೂ ಮನುಷ್ಯನ ರಕ್ತ ಬೆರೆಸಿದ ಉಂಡೆ ಪೂರಾ ಗುಣಕಾರಿ. "

"ಕ್ಷಯ" ಎಂದೊಡನೆ ಹೂ-ತಾ-ಮಾಳಿಗೆ ಹೇಗೋ ಆಗುತ್ತದೆ. ಅವಳ ಮುಖ ಬಿಳುಪೇರುತ್ತದೆ. ಆದರೂ ಮೆಲುನಗೆಯಿಂದ ಅದನ್ನು ಮರೆಮಾಡಲು ಯತ್ನಿಸುತ್ತಾಳೆ. ಅವಳು ಮೆಲ್ಲನೆ ಮರೆಯಾಗುತ್ತಾಳೆ. ಅವಳು ಹೋದದ್ದು ಲಕ್ಷ್ಯವಿಲ್ಲದೆ ಕಾನ್‌ದೊಡ್ಡಪ್ಪನು ಮೇಲಿನಂತೆ ಜೋರಾಗಿ ಹೇಳು

---

* " ಕೊಲೆಗಡಕನ ಪರಿವೇಷ " —ಅನುವಾದಕ

ತ್ತಲೇ ಇರುತ್ತಾನೆ. ಹಿಸಾವೊ-ಶುವಾನನು ಮಲಗಿದ ಒಳಗಿನ ಕೋಣೆ ಯಿಂದ ಒಣ ಗೂರಲು ಕೆಮ್ಮಿನ ದನಿ ಕೇಳಿಬರುತ್ತದೆ.

" ಅಂತೂ ಹಿಸಾವೊ-ಶುವಾನನ ನಸೀಬ ತೆರೆಯಿತು. ಜಡ್ಡು ಇನ್ನು ಪೂರಾ ಬಿಟ್ಟುಹೋಗುವದು. ಸಂಶಯವೇ ಇಲ್ಲ. ಅಂತೆಯೆ ಲಾವೊ-ಶುವಾನನು ಎಡೆಬಿಡದೆ ನಗುತ್ತಿದ್ದಾನೆ." ಎಂದ ಕಲ್ಲಿಮೀಸೆಯ ಮುದುಕ ಕಾನನ ಕಡೆಗೆ ಹೋಗುತ್ತ ಅನ್ನುವನು. ಮತ್ತೂ ಕುಗ್ಗಿದ ದನಿ ಯಲ್ಲಿ " ಇಂದು ಗಲ್ಲಿಗೆ ಹಾಕಲ್ಪಟ್ಟವನು ಶಿಯಾ ಮನೆತನದ ಯುವಕ ನೆಂದು ತಿಳಿಯುತ್ತದೆ. ಅವನು ಯಾರ ಮಗ? ನಿಜವಾಗಿ ಏತಕ್ಕೆ ಗಲ್ಲಿಗೇರಿಸಲ್ಪಟ್ಟ ?"

" ಯಾರ ಮಗ? ಶಿಯಾ ಕುಟುಂಬದ ನಾಲ್ಕನೆಯ ಸೊಸೆಯ ಮಗನಲ್ಲದೆ ಮತ್ತಾರು? ಆ ಬಡ ಟೆಂಗ-ಶ್ಸಿ "* ಕೇಳಲು ಜನ ಒಳ್ಳೆ ಉತ್ಸುಕ ವಾಗಿ ನೆರೆದಿದೆ ಎಂದು ತಿಳಿದು ಕಾನದೊಡ್ಡಪ್ಪ ಮೋರೆ ಹಿಗ್ಗಿಸಿ, ದನಿ ಏರಿಸಿ "ಆ ಬಡಪ್ರಾಣಿಗೆ ಬದುಕುವದು ಬೇಕಾಗಿರಲಿಲ್ಲ. ಜೀವ ಬೇಡಾಗಿತ್ತು ಅಷ್ಟೆ" ಎಂದು ಗಟ್ಟಿಯಾಗಿ ಹೇಳುವನು.

" ಮತ್ತೆ, ಇಂದಿನ ತಲೆಗಡಿತದಿಂದ ನನಗೆ ಬಂದದ್ದೇನು? ಕಾಸಿನ ಲಾಭವೂ ಇಲ್ಲ. ಅವನಿಂದ ಕಿತ್ತಿ ತೆಗೆದ ವಸ್ತ್ರಗಳನ್ನು ಕೂಡ ಕೆಂಗಣ್ಣಿನ 'ಆ-ಯೀ' ಜೇಲರ ತೆಗೆದುಕೊಂಡುಬಿಟ್ಟ. ನಿಜವಾಗಿ ಲಾವೊ-ಶುವಾನ ಕಾಕಾನೇ ಒಳ್ಳೇ ನಸೀಬವಾನ ಎನ್ನಬೇಕು. ಇನ್ನು ಎರಡನೆಯವನೆಂದರೆ ಶಿಯಾ ಕುಟುಂಬದ ಮೂರನೆ ಹಿರಿಯ. ಇಪ್ಪತ್ತೈದು ಔನ್ಸು ಬೆಳ್ಳಿಯ ನಾಣ್ಯಗಳ ಇನಾಮು ಅವನೊಬ್ಬನೆ ಕಿಸೆಗೆ ಹಾಕಿದ. ಒಬ್ಬರಿಗೂ ಒಂದು ಕಾಸು ಕೂಡ ಕೊಡಲಿಲ್ಲ!"

ಚಿಕ್ಕ ಕೋಣೆಯಿಂದ ಹಿಸಾವೊ-ಶುವಾನ ಕೈ ಎದೆಗೆ ಅವಚಿಕೊಂಡು ಮೆಲ್ಲಗೆ ಹೊರಗೆ ಹಿಡಿದು ಹಿಡಿದು ಕೆಮ್ಮುತ್ತ ಬರುತ್ತಾನೆ. ಅಡಿಗೆಮನೆ ಸೇರಿ ಒಂದು ಕೊಳಗದಲ್ಲಿ ಆರಿದ ಗಂಜಿ ತುಂಬಿಕೊಂಡು ಉಣ್ಣಲು ಕೂಡು ವನು. ಹೂ-ತಾ-ಮಾ ಅವನ ಬಳಿಗೆ ಹೋಗಿ ಮೆಲ್ಲನೆ " ಈಗ ಗುಣ ಅನಿಸು ತ್ತದೆಯೆ? ಇನ್ನೂ ಮೊದಲಿನಂತೆ ಹಸಿವೆ ಪೀಡಿಸುತ್ತದೆಯೆ?" ಎನ್ನುತ್ತಾಳೆ.

---

* ಶಬ್ದಶಃ—'ವಸ್ತು'

" ಖಾತ್ರಿ ಗುಣ, ಖಾತ್ರಿ " ಎಂದು ಆ ಹುಡುಗನೆಡೆಗೆ ದೃಷ್ಟಿ ಬೀರುತ್ತ ಅನ್ನುತ್ತಾನೆ. ಮತ್ತು ಕೂಡಲೆ ಕುಳಿತ ಜನಕ್ಕೆ " ಶಿಯಾ ಕುಟುಂಬದ ಮೂರನೆಯ ಹಿರಿಯ ಹುಷಾರಿ. ಅವನು ಮೊದಲು ಹೋಗಿ ಅಧಿಕಾರಿಗಳಿಗೆ ವರದಿ ಕೊಡದೆ ಇದ್ದಿದ್ದರೆ ಇಡೀ ಮನೆಮಂದಿಯನ್ನೇ ತಲೆಗಡಿದು ಅವರ ಆಸ್ತಿ ಪಾಸ್ತಿ ಸರಕಾರಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು. ಆದರೆ ಅದಕ್ಕೆ ಬದಲು ? ಹಣ ! " ಎಂದು ಹೇಳುವನು.

" ಆ ಚಿಕ್ಕ ಟಿಂಗ-ಹ್ಸಿ " ಪೂರಾ ಕೆಟ್ಟ ತತ್ತಿ. ಬಂಡಾಯವನ್ನು ಕೂಡಿಕೊಳ್ಳುವಂತೆ ಮುಖ್ಯ ಜೇಲರನ ಮನವೊಲಿಸಲು ಪ್ರಯತ್ನ ಮಾಡಿದ.

" ಅಯ್ ! ಹಾಗಾಗಿದ್ದರೆ ವಿಚಾರಿಸಿರಿ ! " ಎಂದು ಕರಿ ಮೇಜಿಗೆ ಕುಳಿತ ಇಪ್ಪತ್ತರ ತರುಣನೊಬ್ಬ ಕಿಡಿಯಾಗಿ ಕೂಗುವನು.

" ನಿಮಗೆ ಗೊತ್ತಿರಬೇಕು ಕೆಂಗಣ್ಣಿನ ಆ-ಯೀಗೂ ಕೆಲವು ವಿವರಗಳು ಬೇಕಾಗಿದ್ದರಿಂದ ಅವನು ಮಾತು ಬೆಳೆಸಿದ. ' ತಾ-ಚಿಂಗ ವಂಶದ ರಾಜ್ಯ ನಿಜವಾಗಿ ನಮ್ಮೆಲ್ಲರದು ' ಎಂದು ಆತ ಕೆಂಗಣ್ಣಿನ ಆ-ಯೀಗೆ ಹೇಳಿದ. ಇದೀಗ, ಹಾಗಂದರೇನು ? ಇಂಥ ಮಾತನ್ನು ಮನುಷ್ಯನಾದವ ಆಡಬಹುದೆ ? "

"ಕೆಂಗಣ್ಣಿನ ಆ-ಯೀಗೆ ಮನೆಯಲ್ಲಿ ತಾಯಿಯೊಬ್ಬಳೇ ಎಂದು ಗೊತ್ತು. ಆದರೆ " ಒಂದು ಹನಿ ಎಣ್ಣೆ ನೀರು " ಸಿಗದಷ್ಟು ಬಡವನೆಂದು ಅವನಿಗೆ ನಂಬಿಕೆಯಾಗಲಿಲ್ಲ. ಸಿಟ್ಟು ಆಗಲೆ ಹೊಟ್ಟೆಯೊಡೆದು ಬರುತ್ತಿತ್ತು. ಆ ಹುಡುಗ ಅದರಲ್ಲಿ ' ಹುಲಿಯ ತಲೆಗೆರೆ 'ಯಂತೆ ಮಾಡಿದ ಆ-ಯೀ ಅವನ ಮೋರೆಯ ಮೇಲೆ ಹತ್ತಾರು ಸಲ ಜಜ್ಜಿಯೇ ಬಿಟ್ಟ. "

" ಆ-ಯೀ ಗುದ್ದುವದರಲ್ಲಿ ನುರಿತ ಕೈ. ಅವನ ಏಟುಗಳು ಆ ಕೀಳನನ್ನು ಹಾದಿಗೆ ತಂದಿರಬೇಕು. " ಎಂದು ಗೂನು-ಬೆನ್ನಿನ ಶಿಷ್ಟ ಮೂಲೆಯ ಮೇಜಿನಿಂದ ಒದರಿದ.

" ಇಲ್ಲಾ ! ನೀನು ನಂಬಲಿಕ್ಕಿಲ್ಲ ! ಅವನ ಹಾಳು ಮೂಳೆಗಳಿಗೆ ಅಂಜಿಕೆಯೆ ಇರಲಿಲ್ಲ. ಇದಕ್ಕೂ ಹೆಚ್ಚೇನಾಗಬೇಕು, ' ಪಾಪ !' ಎಂದಷ್ಟೇ ಅವನು ಅಂದುಬಿಟ್ಟ. "

ಕರಿಬಿಳಿ ಕಲ್ಲಿಮೀಸೆಯುವ "ಹಾಗಂದರೇನು ? ಅಂತಹದನ್ನು ಹಾಗೆ ಬಡಿಯುವಾಗ ಮತ್ತೆ ಕರುಣೆ ಎಲ್ಲಿಂದ ತರಬೇಕು ?" ಎಂದು ಗೊಣಗಿದ.

"ನೀನು ಲಕ್ಷ್ಯಗೊಟ್ಟು ಕೇಳಿಯೇ ಇಲ್ಲ. ಆ ಚಿಕ್ಕ ಟಂಗ-ಹ್ಸೀಗೆ ಆ-ಯೀನ ಬಗ್ಗೆಯೆ 'ಪಾಪ' ಎನಿಸುತ್ತದೆ ಎಂದು ಹೇಳಬೇಕಾಗಿತ್ತು!"

ಕೇಳುವವರೆಲ್ಲರ ಕಣ್ಣುಗಳು ಒಮ್ಮೆಲೆ ನಿಸ್ತೇಜವಾಗುವವು. ಮಾತ್ರುಗಳು ನಿಂತುಹೋಗುತ್ತವೆ. ಹಿಸಾವೊ-ಶುವಾನನು ಊಟ ಮುಗಿಸಿದ್ದಾನೆ. ಮೈತುಂಬ ಬೆವರು ಸುರಿಯುತ್ತಿದೆ. ತಲೆ ಸಿಡಿಯುವಂತೆ ಅವನಿಗೆ ಅನಿಸುತ್ತದೆ.

"ಅಂತೂ ಆ-ಯೀಗೇ 'ಪಾಪ' ಎಂದನೆ! ಇದೀಗ ಕೇವಲ ಹುಚ್ಚು!" ಎನ್ನುತ್ತ ಕರಿಬಿಳಿ ಕಲ್ಲಿಮೀಸೆಯುವ ಒಡೆಯಲಾರದ ಒಗಟನ್ನು ಬಿಡಿಸಿದ ಅಭಿಮಾನದಿಂದ "ಅವನಿಗೆ ಹುಚ್ಚು ಹಿಡಿದದ್ದೇ ನಿಜ!" ಹೇಳುವನು.

"ಹುಚ್ಚೇ ಸರಿ," ಎಂದು ಮೊದಲು ಮಾತಾಡಿದ ಯುವಕ ಸಮ್ಮತಿ ಸೂಚಿಸುತ್ತಾನೆ. ಅವನಿಗೂ ಏನೋ ಹುಡಿಕಿ ತೆಗೆದಂತೆ ಅನಿಸುತ್ತದೆ.

ಗಿರಾಕಿಗಳ ಮನಸ್ಥಿತಿ ಮತ್ತೆ ಸಮತೆಗೆ ಬರುತ್ತದೆ. ಹರಟೆ, ನಗೆ ಮತ್ತೆ ಸುರುವಾಗುತ್ತವೆ. ಆ ಸಪ್ಪಳದ ಗೊಂದಲಲ್ಲಿ ಜಲ್ಲು ಬಿಟ್ಟು ಕೆಮ್ಮಲು ಅವಕಾಶ ಸಿಕ್ಕಿತೆಂದು ಹಿಸಾವೊ-ಶುವಾನನು ಅಶಕ್ತತೆಯಲ್ಲಿಯೆ ಆದಷ್ಟು ಸಡಿಲು ಬಿಟ್ಟು ಜೋರಾಗಿ ಕೆಮ್ಮುತ್ತಾನೆ.

ಕಾನದೊಡ್ಡಪ್ಪ ಆ ಮಗುವಿನ ಬೆನ್ನು ತಟ್ಟಲು ಮುಂದೆ ಹೋಗಿ "ಹಿಸಾವೊ-ಶುವಾನ, ಖಾತ್ರಿಯಿಂದ ಗುಣವಾಗುವದು ಅಂs! ಹಾಗೆ ಗೂರಬೇಡ. ಖಾತ್ರಿಯಿಂದ ಗಣವಾಗುವದು." ಎನ್ನುತ್ತಾನೆ.

"ಹುಚ್ಚು ಹಿಡಿದಿದ್ದೇ ಸರಿ" ಎಂದು ಗೂನು-ಬೆನ್ನಿನ ಫಿಪ್ತ ಗೋಣು ಹಾಕುತ್ತ ಹೇಳುವನು.

ಪಟ್ಟಣದ ಪಶ್ಚಿಮದ ಕೋಟೆಯ ಮಹಾದ್ವಾರದ ಆಚೆಗಿರುವ ಬೈಲು ಮೊದಲು ಸಾರ್ವಜನಿಕ ಸ್ಥಳವಾಗಿತ್ತು. ಅದರೊಳಗಿಂದ ಅಂಕುಡೊಂಕಾಗಿ ಹೋಗುವ ಕಿರುದಾರಿಯು ಮೊದಲು ಜನ, ಸಮೀಪವೆಂದು ಹುಡುಕಿಕೊಂಡ

ಕಾಲುದಾರಿಯಾಗಿ ಈಗ ಸಹಜವಾದ ಸೀಮಾರೇಖೆಯೆನಿಸಿದೆ. ಆ ದಾರಿಯ ಎಡಕ್ಕೆ ಗಲ್ಲಿಗೇರಿಸಿದ ಅಥವಾ ಸೆರೆಮನೆಯಲ್ಲಿ ಉಪವಾಸ ಕೊಂದ ಜನ ಹೂಳಲ್ಪಟ್ಟಿದ್ದಾರೆ. ಬಲಕ್ಕೆಲ್ಲ ದಿಕ್ಕಿಲ್ಲದ ಬಡವರ ಭಿಕಾರಿಗಳ ಗೋರಿಗಳು ಒಂದಕ್ಕೊಂದು ಹೊಂದಿದ ಎಣಿಕೆಗೆ ನಿಲುಕದ ಈ ಗೋರಿಗಳನ್ನು ನೋಡಿ ದರೆ ಶ್ರೀಮಂತನೊಬ್ಬನ ಮನೆಯಲ್ಲಿ ಹುಟ್ಟುಹಬ್ಬದ ಉತ್ಸವದಲ್ಲಿಟ್ಟ ಮಿಠಾಯಿ ತಾಟುಗಳ ನೆನಪಾಗುವದು.

ಅಂದು ಗೋರಿಗಳ ದರ್ಶನಕ್ಕೆ ಹೋಗುವ ದಿನ. ನಿರಭ್ರವಾಗಿ ಪ್ರಕಾಶಮಾನವಾಗಿ ಬೆಳಗಾಗಿದೆ; ಆದರೂ ದಿನಕ್ಕಿಂತ ಸ್ವಲ್ಪ ಚಳಿ ಹೆಚ್ಚು. 'ವಿಲೊ' ಗಿಡಕ್ಕೆ ಅರ್ಧ ಅಕ್ಕಿಯ ಕಾಳಿನಷ್ಟು ಇದೀಗ ಮೊಗ್ಗೆಗಳು ಒಡೆದಿವೆ. ಬಲಗಡೆಯ ಭಾಗದಲ್ಲಿಯ ಒಂದು ಹೊಸ ಗೋರಿಯ ಬಳಿಯಲ್ಲಿ ಹೂ-ತಾ-ಮಾಳು ನಾಲ್ಕು ಮೀನಗಳನ್ನೂ, 'ಮಿಫಾನ'ದ ತಾಟನ್ನೂ, ಇಟ್ಟು ಕಣ್ಣೀರು ಸುರಿಸುತ್ತಿದ್ದಾಳೆ. ಕಾಗದದ ನಕಲಿ ನಾಣ್ಯವನ್ನೂ ಸುಟ್ಟಿದ್ದಾಳೆ. ನೆಲವನ್ನೇ ನಿಟ್ಟಿಸುತ್ತ ಏನೋ ಕಾಯುತ್ತಿರುವಂತೆ ಅವಳು ಅಲ್ಲಿ ಕುಳಿತು ಕೊಳ್ಳುವಳು. ಏನೋ ಅವಳಿಗೇ ತಿಳಿಯದು. ಸುಳಿಗಾಳಿಯಿಂದ ಅವನ ಚಿಕ್ಕ ಕೂದಲುಗಳು ಹಾರಾಡುತ್ತಿವೆ. ಕಳೆದ ವರ್ಷಕ್ಕಿಂತ ಈ ವರುಷ ಅವು ಅದೆಷ್ಟು ಬೆಳ್ಳಗಾಗಿವೆ!

ಅದೇ ಕಿರುದಾರಿಯಿಂದ ಮತ್ತೊಬ್ಬಳು ಬರುತ್ತಿದ್ದಾಳೆ. ಮೈತುಂಬ ಹರಕು ಬಟ್ಟೆ. ಅವಳ ಕೈಯಲ್ಲೊಂದು ಹಳೆಯ ಕೆಂಪು ಹಚ್ಚಿದ ದುಂಡು ಬುಟ್ಟಿಯಿದೆ. ಕಾಗದದ ಪಟ್ಟಿಗಳು ಅದರಿಂದ ಜೋತಾಡುತ್ತಿವೆ. ನಡು ನಡುವೆ ನಿಲ್ಲುತ್ತ ಮೆಲ್ಲಗೆ ನಡೆಯುತ್ತಿರುವಳು. ಕೊನೆಗೆ ಹೂ-ತಾ-ಮಾಳನ್ನು ನೋಡುವಳು. ಒಡನೆ ಆಶ್ಚರ್ಯ ಅನುಮಾನಗಳೆರಡೂ ಉಂಟಾಗು-ವವು. ಅವಳ ದೀನ ಬಾಡಿದ ಮುಖದ ಮೇಲೆ ಏನೋ ಒಂದು ನಾಚಿಕೆಯ ಛಾಯ ತೋರುವದು. ಮತ್ತೆ ಧೈರ್ಯ ತಂದುಕೊಂಡು ಹಾದಿಯ ಎಡ ಕ್ಕಿರುವ ಗೋರಿಯ ಹತ್ತಿರ ಹೋಗುವಳು. ಕೈಯಲ್ಲಿಯ ಬುಟ್ಟಿಯನ್ನು ಅಲ್ಲಿ ಕೆಳಗಿಡುವಳು.

ಹೇಗೋ ಹಿಸಾವೊ-ಶುವಾನನ ಗೋರಿಗೆ ಎದುರಾಗಿಯೆ ಆ ಗೋರಿ ಯಿದೆ. ನಡುವೆ ಕಿರುದಾರಿಯೊಂದೆ. ಹೂ-ತಾ-ವಾಳು ಅವಳ ಆ ಗೋರಿಯು ಮುಂದೆ ನಾಲ್ಕು ಮೀನಗಳನ್ನೂ ಅನ್ನದ ತಾಟನ್ನೂ ಇಟ್ಟು ಕಾಗದ ನಾಣ್ಯ ವನ್ನು ಸುಟ್ಟು ಅಳುವದನ್ನು ನೋಡುತ್ತಿರುವಳು. ಅವಳೂ ಮಗನನ್ನು ಕಳೆದುಕೊಂಡ ತಾಯಿಯೆಂದೂ, ಅವಳ ಮಗನೇ ಆ ಗೋರಿಯಲ್ಲಿ ಇರಬೇಕೆಂದೂ ಹೂ-ತಾ-ವಾಳಿಗೆ ಹೊಳೆಯುವದು. ಅವಳನ್ನೇ ಕುತೂಹಲ ದಿಂದ ನಿಟ್ಟಿಸುತ್ತಿರುವಳು. ಒಮ್ಮೆಲೆ ನಡುಗುತ್ತ ಅದೇ ನಿದ್ದೆಯಲ್ಲಿದ್ದಂತೆ ಒಮ್ಮೆಲೆ ಹಿಂದಕ್ಕೆ ಜೋಲಿ ಹೊಡೆಯುವಳು.

ಹೂ-ತಾ-ವಾಳಿಗೆ ಆ ನೋಟ ತೀವ್ರ ನೋವನ್ನುಂಟುಮಾಡಿತು. “ ದುಃಖದಿಂದ ಹುಚ್ಚಿಯಾಗಿದ್ದಾಳೆ ! ” ಎಂದು ಅಂಜುತ್ತ ಎದ್ದು ಆ ಕಿರು ದಾರಿಯಾಚೆಗೆ ಅವಳ ಹತ್ತಿರ ಹೋಗಿ ಮೆಲ್ಲನೆ ‘ ಅವ್ವಾ, ಅಳುವದು ಸಾಕು. ಇನ್ನು ನಾವಿಬ್ಬರೂ ಕೂಡಿಯೆ ಮನೆಗೆ ಹೋಗೋಣ ” ಎಂದಳು. ಆಕೆ ಸುಮ್ಮನೆ ಗೋಣು ಹಾಕುವಳು. ಹಾಗೆ ಕಣ್ಣು ಬಿಡುತ್ತಿದ್ದು ಒಮ್ಮೆಲೆ “ ಅಲ್ಲಿ ನೋಡು ! ಅದೇನು ! ” ಎನ್ನುವಳು.

ಅವಳು ಬೆರಳು ಮಾಡಿದತ್ತ ನೋಡಲು ಅಲ್ಲಿ ಕಟ್ಟದಿರುವ, ಹಳದಿ ಮಣ್ಣಿನ ಗುಂಪೆಗಳಿರುವ ಗೋರಿಯು ಹೂ-ತಾ-ವಾಳಿಗೆ ಕಾಣಿಸುವದು. ದಿಟ್ಟಿ ಹಚ್ಚಿ ನೋಡಲು ಆ ಎತ್ತರವಾದ ಮಣ್ಣುಗುಂಪೆಯ ಮೇಲೆ ಕಡುಗೆಂಪು ಮತ್ತು ಬಿಳಿಯ ಹೂಗಳ ಚಿಕ್ಕ ಗೊಂಚಲುಗಳು ತೋರುವವು. ಅವುಗಳನ್ನು ಕಂಡು ಹೂ-ತಾ-ವಾಳಿಗೆ ಅಚ್ಚರಿಯಾಗುವದು.

ಕಳೆದ ಅದೆಷ್ಟೊ ವರ್ಷಗಳಿಂದ ಅವರಿಬ್ಬರೂ ಏನನ್ನೂ ಲಕ್ಷಿಸಿದವರೇ ಅಲ್ಲ. ಆದರೂ ಈಗ ಈ ಹೊಸ ಹೂಗಳನ್ನು ಕುತೂಹಲದಿಂದ ನೋಡು ತ್ತಿದ್ದಾರೆ. ಅವು ಬಹಳವಿರದಿದ್ದರೂ ವ್ಯವಸ್ಥಿತವಾಗಿವೆ. ಅಷ್ಟೊಂದು ಸುಂದರ ವಿರದಿದ್ದರೂ ಅಚ್ಚುಕಟ್ಟಿನಿಂದ ಮೆರುಗನ್ನು ಪಡೆದಿವೆ. ಹೂ-ತಾ-ವಾಳು ಒಮ್ಮೆ ತನ್ನ ಮಗನ ಗೋರಿಯು ಕಡೆಗೂ ಮತ್ತೊಮ್ಮೆ ಆಕೆಯ ಮಗನ ಗೋರಿಯು ಕಡೆಗೂ ಕಣ್ಣು ಹೊರಳಿಸಿ ನೋಡುತ್ತಾಳೆ. ತನ್ನ ಮಗನ ಗೋರಿಯ ಮೇಲೆ ಅಲ್ಲೊಂದು ಇಲ್ಲೊಂದು ಹಂಚಿದಂತೆ ಚಳಿಗೆ ಮೀರಿ

ನಿಂತ ನೀಲಿ ಮತ್ತು ಬಿಳಿಯ ಹೂಗಳು ಸ್ವಲ್ಪ ತೋರುತ್ತಿವೆ. ಆದರೆ ಕಡು ಗೆಂಪು ಒಂದೂ ಇಲ್ಲ. ಏನೋ ಒಂದು ನೆನಪಾಗಿ ಅವಳಿಗೆ ಹೇಗೋ ಅನಿಸುತ್ತದೆ. ಒಂದು ಹೃದಯಶೂನ್ಯತೆ, ಏನೋ ಒಂದು ಕೊರತೆ. ಅದೇನೋ ಬೇಕೆನಿಸುತ್ತದೆ; ಆದರೆ ಏನೆಂಬುದೇ ತಿಳಿಯದು. ಆಕೆ ಹತ್ತಿರ ಹೋಗಿ ಆ ಹೂಗಳನ್ನು ಪರೀಕ್ಷಿಸುತ್ತಾಳೆ. "ಇವರರ್ಥವೇನಿರಬಹುದು ?" ಎಂದು ಅವಳಿಗೆ ಯೋಚನೆ. ಕಣ್ಣೀರು ಕೋಡಿಯಾಗಿ ಹರಿಯುತ್ತದೆ.

"ಮಗೂ, ಯೂ, ನಿನಗೆ ಅನ್ಯಾಯ ಮಾಡಿದ್ದಾರೆ. ಆದರೆ ನೀನು ಮರೆಯುವದಿಲ್ಲವಷ್ಟೆ? ನಿನ್ನ ಎದೆ ನೋವಿನಿಂದ ತುಂಬಿವೆ ಎಂದು ನೀನು ಅದನ್ನು ನನಗೆ ಹೇಳಲು ಈ ರೀತಿಯನ್ನು ಅನುಸರಿಸಿದ್ದೀಯಾ ?" ಎಂದು ಉಸಿರಿಡುತ್ತಾಳೆ. ಸುತ್ತಲೂ ನೋಡುವಲ್ಲಿ, ಎಲೆಯುದುರಿದ ಗಿಡವೊಂದರ ಮೇಲೆ ಕಾಗೆಯೊಂದು ಮೌನದಿಂದ ಕುಳಿತಿರುವದನ್ನು ನೋಡಿ "ಮಗು ಯೂ, ಯೂ, ಅದೊಂದು ಮೋಸ. ನಿನ್ನನ್ನು ಜೀವಂತವಾಗಿಯೆ ಹುಗಿದಿದ್ದಾರೆ. ಆದರೇನು, ದೇವರಿಗೆ ತಿಳಿಯದೆ ? ನಿನ್ನ ಆತ್ಮಕ್ಕೆ ಶಾಂತಿಯಾಗಲಿ. ಆದರೆ ನನಗೊಂದು ಸೂಚನೆ ಕೊಡಲಾರೆಯಾ ? ನೀನು ಈ ಗೋರಿಯಲ್ಲಿ ಇದ್ದುದೇ ನಿಜವಾದರೆ ನೀನು ಸಜೀವನಾಗಿರುವದೇ ಸತ್ಯವಾದರೆ ಅದೋ ಆ ಕಾಗೆ ಹಾರಿಬಂದು ನಿನ್ನ ಗೋರಿಯ ಮೇಲೆ ಕೂಡ್ರಲಿ. ಆಗ ನನಗೆ ಗೊತ್ತಾಗುವದು." ಎಂದು ಗೋಳಿಡುವಳು.

ಸುಳಿಗಾಳಿ ನಿಂತಿದೆ. ಒಣಗಿದ ಹುಲ್ಲು-ಕಡ್ಡಿಗಳು ತಾಮ್ರದ ಕಡ್ಡಿಗಳಂತೆ ನೀಟಾಗಿ ನಿಂತಿವೆ. ಗಾಳಿಯಲ್ಲಿಯ ಮಂದ ಸಪ್ಪಳ ಮಂದಮಂದವಾಗುತ್ತ ನಿಂತುಹೋಗುತ್ತದೆ. ಎಲ್ಲವೂ ಸ್ತಬ್ಧ. ಮೃತ್ಯುವಿನಂತೆ. ಮುದುಕೆಯರಿಬ್ಬರೂ ಆ ಹುಲ್ಲಿನ ಮಧ್ಯದಲ್ಲಿ ಅಲ್ಲಾಡದೆ ಎವೆಯಿಕ್ಕದೆ ಆ ಕಾಗೆಯನ್ನೇ ನೋಡುತ್ತಿದ್ದಾರೆ. ಅದಾವರೂ ತಲೆ ತಗ್ಗಿಸಿ, ಕಬ್ಬಿಣದ ಎರಕ ಹೊಯ್ದಂತೆ ಅಲುಗಾಡದೆ ಕೂತಿದೆ.

ಅದೆಷ್ಟೋ ವೇಳೆ ಕಳೆಯುತ್ತದೆ. ಗೋರಿಗಳಿಗೆ ಬರುವ ಜನದ ಸಂಖ್ಯೆ ಹೆಚ್ಚಾಗುತ್ತ ಹೋಗುತ್ತದೆ. ಆ ಹೂ-ತಾ-ಮಾಳಿಗೆ ತನ್ನ ಮೇಲಿನ ಭಾರವೊಂದು ಮೆಲ್ಲನೆ ಸರಿಯುತ್ತಿರುವಂತೆ ಭಾಸವಾಗುತ್ತದೆ ಮತ್ತು ಅವಳು ಆಕೆಗೆ "ಬಾ ಹೋಗೋಣ" ಎಂದು ಕರೆಯುತ್ತಾಳೆ.

ಆ ಮುದುಕಿ ನಿರಾಶೆಯಿಂದ ನಿಟ್ಟುಸಿರಿಡುತ್ತಾಳೆ. ಮತ್ತು ಬಡಿಸಿ ತಂದ ತಾಟುಗಳನ್ನೆಲ್ಲ ಒಟ್ಟುಗೂಡಿಸಿಕೊಂಡು ಮತ್ತೆ ಒಂದು ಕ್ಷಣ ಹೋಗಲೊ ಬೇಡವೊ ಎಂದು ಅನುಮಾನಿಸುತ್ತ ಕೊನೆಗೊಮ್ಮೆ ಅಲ್ಲಿಂದ ಮೆಲ್ಲನೆ ಅಡಿಯಿಡುತ್ತಾಳೆ. ಮತ್ತು "ಇನ್ನೇನಿರಬೇಕು?" ಎಂದು ತನ್ನಷ್ಟಕ್ಕೆ ಅಂದುಕೊಳ್ಳುತ್ತಾಳೆ.

ಸುಮಾರು ಮೂವತ್ತು ಹೆಜ್ಜೆ ಹೋಗಿರಬಹುದು. ಅಷ್ಟರಲ್ಲಿ ಮೇಲಿನಿಂದ ಒಂದು ಕರ್ಕಶ ದನಿ ಅವರಿಗೆ ಒಮ್ಮೆಲೆ ಕೇಳಬರುವದು:

"ಯಾ ಹ—ಹ—ಹ—"

ಮೈಯಲ್ಲಾ ನಡುಗು. ತಿರುಗಿ ನೋಡತ್ತಾರೆ. ಆ ಕಾಗೆ ತನ್ನ ಮೈ ತುದಿ ಕುಕ್ಕಿಕೊಳ್ಳುತ್ತ ವಿಸ್ತಾರವಾದ ಪಕ್ಕ ಬಿಚ್ಚಿಕೊಂಡು ಬಾಣ ಹೊಡೆದಂತೆ ಕ್ಷಿತಿಜದ ಕಡೆಗೆ ಜೋರಿನಿಂದ ಹಾರಿಹೋಗುತ್ತಿರುವದು.

---

# ಒಂದು ಸಣ್ಣ ಸಂಗತಿ

ನನ್ನ ಹಳ್ಳಿಯನ್ನು ಬಿಟ್ಟು ರಾಜಧಾನಿಗೆ ಬಂದು ಆರು ವರ್ಷಗಳಾದುವು. ಆರು ನಿಮಿಷಗಳಂತೆ ಹೋದವು. ಈ ಕಾಲದಲ್ಲಿ 'ರಾಜಕಾರಣ' ಎಂದೆನಿಸಿಕೊಳ್ಳಬಹುದಾದ ಅನೇಕ ಘಟನೆಗಳು ಸಂಭವಿಸಿದವು. ಅದರಲ್ಲಿ ಕೆಲವನ್ನು ನಾನು ಕಂಡಿದ್ದೇನೆ. ಕೆಲವುಗಳ ಬಗ್ಗೆ ಕೇಳಿದ್ದೇನೆ. ಅವುಗಳೊಳಗಿನ ಯಾವೊಂದ ಮಾತೂ ನನ್ನ ಅಂತಃಕರುಣವನ್ನು ಒಂದಿಷ್ಟಾದರೂ ಕರಗಿಸಿದಂತೆ ತೋರುವುದಿಲ್ಲ. ಅಷ್ಟೇಕೆ, ಅವುಗಳ ನೆನಪೇ ನನ್ನನ್ನು ಕನಲಿಸಿ ಜನಗಳ ಬಗ್ಗೆ ನನಗಿರುವ ಸಹಾನುಭೂತಿಯನ್ನು ಕಾಲ ಕಳೆದಂತೆ ಕಡಿಮೆ ಮಾಡುತ್ತಿದೆ. ಆದರೆ ಒಂದೇ ಒಂದು ಸಣ್ಣ ಸಂಗತಿ ವಿಪುಲಾರ್ಥದಿಂದ ಕೂಡಿ ನನ್ನ ಎದೆಯಲ್ಲಿ ನಾಟಿ ನಿಂತಿದೆ. ಈಗಿನೀ ಕ್ಷಣಕ್ಕೂ ಅದನ್ನು ಮರೆಯಬೇಕೆಂದರೆ ನನ್ನಿಂದಾಗದು.

ಚಳಿಗಾಲದ ದಿವಸಗಳು. ಪ್ರಜಾಧಿಪತ್ಯದ ಆರನೆಯ ವರುಷ. ಬಡಗಣಿಂದ ಕಗ್ಗಾಳಿಯೊಂದು ಬಿರುಸಾಗಿ ಬೀಸಿತು. ಹೊಟ್ಟೆಪಾಡಿಗಾಗಿ ನಾನು ಬೆಳಗಿನಲ್ಲಿ ಬೇಗನೆದ್ದು ಹೋಗಬೇಕಾಗುತ್ತಿತ್ತು. ನನ್ನ ಕೆಲಸದ ಹಾದಿಯಲ್ಲಿ ಕ್ವಚಿತ್ತಾಗಿಯೇ ಯಾರದಾದರೂ ದರ್ಶನವಾಗುತ್ತಿತ್ತು. ಅಂದು ಸ್ವಲ್ಪ ಕಷ್ಟಪಟ್ಟ ಮೇಲೆ ಅಂತೂ ಕೊನೆಗೆ ಒಂದು 'ರಿಕ್‌ಷಾ'ವನ್ನು ಬಾಡಿಗೆ ಮಾಡಿ ಗೆದ್ದೆ. ಎಳೆಯುವವನಿಗೆ ತೆಂಕಣ ಬಾಗಿಲಿಗೆ ನನ್ನನ್ನು ಒಯ್ಯುವದಾಗಿ ಹೇಳಿದೆ.

ಸ್ವಲ್ಪ ಹೊತ್ತಿನ ಮೇಲೆ ಗಾಳಿಯ ಗಡಸು ತಗ್ಗಿತು. ಅದು ಬೀಸಿ ಹೋದದ್ದರಿಂದ ಮಾತ್ರ ಹಾಳು-ಹುಡಿ ಹಾದಿಯಿಂದುಡುಗಿಹೋಯಿತು. ಎಳೆಯುವವನು ಬೇಗನೆ ಓಡಿದ. ತೆಂಕಣ ಬಾಗಿಲ ಬಳಿಗೆ ನಾವು ಬರುವ

ಹೊತ್ತಿಗೇ ನಮ್ಮೆದಿರು ಯಾರೋ ಅಡ್ಡ ನುಗ್ಗಿದರು. 'ರಿಕ್‌ಷಾ'ವಿನಲ್ಲಿ ಕಾಲ್ತೊಡರಿ ನೆಲಕ್ಕುರುಳಿದರು.

ಆಕೆ ಒಬ್ಬ ಹೆಂಗಸು. ತಲೆಯಲ್ಲಿ ಅಲ್ಲಲ್ಲಿ ಬಿಳಿ ಕೂದಲು. ಮೈಯಲ್ಲಿ ಹರಕು ಬಟ್ಟೆ. ಆಕೆ ಮಾರ್ಗದ ಒಂದು ಪಕ್ಕದಿಂದ ಬಿರ್ರನೆ ಬಾಣ ಬಿಟ್ಟಂತೆ ನುಗ್ಗಿ ನಮ್ಮನ್ನೇ ತಡೆಹಾಯ್ದಳು. ನಮ್ಮ 'ರಿಕ್‌ಷಾ' ಎಳೆಯುವವನು ಬದಿಗೆ ಸರಿಯಲು ಹವಣಿಸಿದ್ದ. ಆದರೆ ಆಕೆಯ ಹರಕು ಜಾಕೀಟು ಬಿರಡಿಯಿಲ್ಲದೆ ಗಾಳಿಯಲ್ಲಿ ಬಡೆದುಕೊಳ್ಳುವಾಗ ಗಾಡಿಯ (ಕಂಬಿ?)ಗೆ ಸಿಕ್ಕಿಕೊಂಡಿತು. ಸುದೈವದಿಂದ ಎಳೆಯುವವನು ತನ್ನ ವೇಗ ಕಡಿಮೆ ಮಾಡಿದ್ದ. ಇಲ್ಲದಿದ್ದರೆ ಆಕೆ ತಲೆ ಕೆಳಗಾಗಿ ಬೀಳಬಹುದಾಗಿತ್ತು. ಗಾಯವೂ ವಿಪರೀತವಾಗಬಹುದಾಗಿತ್ತು. ನಾವು ನಿಲ್ಲಿಸಿದಾಗಲೂ ಆ ಹೆಂಗುಸು ನಾಗಾಲಾಗಿ ಇನ್ನೂ ಕೈವೂರಿದ್ದಳು. ಆಕೆಗೆ ಗಾಯವೇನಾದರೂ ಆಗಿರಬಹುದೆಂದು ನಾನು ತಿಳಿದಿರಲಿಲ್ಲ. ಈ ಡಕ್ಕಾ-ಡಿಕ್ಕಿಯನ್ನು ಬೇರೆ ಯಾರೂ ಕಂಡಿರಲೂ ಇಲ್ಲ. ಎಳೆಯುವವನು ಗಾಡಿ ನಿಲ್ಲಿಸಿ ಇಲ್ಲದ ಹುಚ್ಚು ಪಿಕಲಾಟದಲ್ಲಿ ತನ್ನನ್ನು ಕಾಣಾಕಾಣಾ ತೊಡಕಿಸಿಕೊಳ್ಳುತ್ತಿರುವನಲ್ಲಾ ಎಂದು ನಾನು ಕೆರಳಿದೆ. ತಡವಾಗುವದಲ್ಲದೆ ನನ್ನ ಪ್ರಯಾಣಕ್ಕೂ ಅದ ರಿಂದ ತಡೆಯಾಗಿತ್ತು. 'ಇದೇನು ಮಹಾ?' ಎಂದು ನಾನು "ಹೊಡಿ ಮುಂದೆ" ಅಂದೆ. ಏನು ಅದು ಅವನಿಗೆ ಕೇಳಿಸಲಿಲ್ಲವೋ, ಏನು ಅವನ ದುರ್ಲಕ್ಷ್ಯವೋ ಅವನು ಗಾಡಿಯ ಕಂಬಿ ಕೆಳಗಿರಿಸಿ ಆ ಮುದುಕೆಗೆ ಮೇಲಕ್ಕೇಳಲು ಮೆಲ್ಲಗೆ ಸಹಾಯ ನೀಡಿದನು. ಅವಳ ತೋಳು ಹಿಡಿದು ಆಧಾರ ಕೊಟ್ಟು ಅವಳನ್ನು ಕೇಳಿದ:

"ಎಲ್ಲ ಸರಿಯಾಗಿದೆಯೆ?"

"ನಾನು ಗಾಯಗೊಂಡಿದ್ದೇನೆ."

ನಾನಂದೆ: "ಎಲಾ! ನೀನು ಬೀಳುವದನ್ನು ನಾನು ಕಂಡಿದ್ದೇನೆ. ಅಷ್ಟೇನು ಬಿರುಸಾಗಿರಲಿಲ್ಲ. ನಿನಗೇ ಹೇಗೆ ಗಾಯವಾಯಿತು? ನೀನು ಸೋಗು ಮಾಡುತ್ತಿರುವೆ. ಛೀ, ಈ ವ್ಯವಹಾರನೇ ಅಸಹ್ಯ!! ಈ 'ರಿಕ್‌ಷಾ' ಬಂಡಿಯುವನು ತನಗೇ ತೊಂದರೆ ತಂದೊಡ್ಡಿಕೊಳ್ಳುತ್ತಿದ್ದಾನೆ. ಈ ಅವ್ಯಾಪಾರ ದೊಳಗಿಂದ ತಾನು ಹೇಗೆ ಹೊರಬೀಳುತ್ತಾನೋ ಬೀಳಲಿ!"

ಗಾಡಿ ಎಳೆಯುವವನು ಮಾತ್ರ ಆ ಮುದುಕಿ ತನಗೆ ನೋವಾಗಿದೆ ಯೆಂದು ತಿಳಿಸಿದ ಮೇಲೆ ಕ್ಷಣವೂ ವಿಲಂಬ ಮಾಡಲಿಲ್ಲ. ಅವನಿನ್ನೂ ಅವಳ ತೋಳು ಹಿಡಿದು ಆಕೆಗೆ ಮುಂದು ಮುಂದಾಗಿ ಎಚ್ಚರದಿಂದ ಸಾಗಿದನು. ನನಗೆ ವಿಸ್ಮಯವಾಯಿತು. ಮುಂದೆ ಸ್ವಲ್ಪ ದೂರದಲ್ಲಿಯೇ ಇರುವ ಪೋಲೀಸ ಠಾಣ್ಯವು ಅಕಸ್ಮಾತ್ತಾಗಿ ನನ್ನ ಕಣ್ಣಿಗೆ ಬಿತ್ತು. ಇವನೋ ಈಕೆಯನ್ನು ಅಲ್ಲಿಗೆ ಒಯ್ಯುತ್ತಿದ್ದಾನೆ! ಠಾಣ್ಯದ ಹೊರಗಾರೂ ನಿಂತಿರಲಿಲ್ಲ. ಅಂತೆ ಇವನು ಆಕೆಯನ್ನು ಬಾಗಿಲೊಳಕ್ಕೊಯ್ದನು.

ಅವರು ಅಲ್ಲಿ ಪ್ರವೇಶ ಮಾಡುತ್ತಿರುವಾಗಲೆ ನನಗೊಂದು ವಿಚಿತ್ರ-ವಾದ ಅನುಭವ ಬಂತು. ಏನಾಯಿತೋ, ತಿಳಿಯೆ. ಒಮ್ಮಿಂದೊಮ್ಮೆಲೆ ಆ ಕ್ಷಣಕ್ಕೆ ಆ ಹುಡಿ ಮುಸುಕಿದ ಮೂರ್ತಿಯು ಮಹಾಕಾರವನ್ನು ತಾಳುತ್ತ ಅವನು ಮುಂದೆ ನಡೆ ನಡೆದಂತೆ ವಿರಾಟಾಕಾರನಾಗಿ ಅವನ ತಲೆಯೆತ್ತರ ಕಾಣಲು ನನಗೆ ಮೊಗ ಮೇಲಕ್ಕೆತ್ತಬೇಕಾಗಿ ಬಂತು. ಅದೇ ಕಾಲಕ್ಕೆ ಅವನತ್ತಣಿಂದ ಯಾವುದೋ ಒಂದು ಶಕ್ತಿಯು ನನ್ನನ್ನು ಸುತ್ತುಗಟ್ಟಿ ಮೈಯನ್ನು ಮುದ್ದೆ ಮಾಡಿದಂತಾಯಿತು. ನನ್ನ ಉಣ್ಣೆಬಟ್ಟೆಯ ನಿಲುವಂಗಿಯೊಳಡಗಿದ ಕ್ಷುದ್ರತನವನ್ನೆಲ್ಲ ನನ್ನಿಂದ ಹೊರದೂಡಿದಂತೆ ಆಗ ತೋರಿತು. ಶಕ್ತಿಪಾತ ವಾದಂತೆ ನಾನು ದುರ್ಬಲನಾದೆ. ರಕ್ತ ಹೆಪ್ಪುಗಟ್ಟಿದಂತೆ ಒಳಗೆ ಅದರ ಚಲನೆ ನಿಂತಿತು. ಅಲುಗದೆ ಮರವಟ್ಟು ವಿಚಾರರಹಿತನಾಗಿ ನಾನು ಕುಳಿತಿದ್ದೆ. ಆಗ ಆ ಠಾಣ್ಯದೊಳಗಿಂದ ಒಬ್ಬ ಅಧಿಕಾರಿಯು ಹೊರ-ಬಿದ್ದನು. ಅವನು ನನ್ನ ಹತ್ತಿರ ಬರುತ್ತಿರುವಾಗಲೆ ನಾನು ರಿಕ್‌ಷಾವಿನಿಂದ ಕೆಳಗಿಳಿದೆ.

“ ಇನ್ನೊಂದು ‘ ರಿಕ್‌ಷಾ ’ ನೋಡಿಕೊಳ್ಳಿ ” ಎಂದು ಅಧಿಕಾರಿ ಹೇಳಿದ. “ ಈ ಮನುಷ್ಯ ಇನ್ನು ಮೇಲೆ ನಿಮ್ಮನ್ನು ಎಳೆಯಲಾರ. ”

ಸ್ವಾಭಾವಿಕವಾಗಿಯೆ ನನ್ನ ಕೈ ನನ್ನ ಜೇಬಿನೊಳಕ್ಕೆ ಹೋಗಿ ಒಂದು ಹಿಡಿ ಕಾಸುಗಳನ್ನು ಹೊರಕ್ಕೆ ತೆಗೆದಿತು.

“ ಅವನಿಗೆ ಇವನ್ನು ಕೊಡಿ, ” ಎಂದು ನಾನಂದೆ.

ಗಾಳಿ ತೀರ ನಿಂತಿತ್ತು. ಬೀದಿಯಲ್ಲಿನ್ನೂ ಶಾಂತತೆ ಇತ್ತು. ನಡೆಯುತ್ತಿರುವಾಗ ನನ್ನ ತಲೆಯಲ್ಲಿ ವಿಚಾರ ನಡೆದಿದ್ದರೂ ನನ್ನ ಬಗ್ಗೆ ವಿಚಾರ ಮಾಡಲು ಮಾತ್ರ ನಾನೇ ಹೆದರಿದ್ದೆ. ಆದ ಸಂಗತಿ ಮರೆತು ಹೋಗಲಿ, ಎಂದು ಬಿಟ್ಟರೂ ಆ ಹಿಡಿ ಕಾಸು ಕೊಟ್ಟ ಕಾರಣವನ್ನು ನಾನು ಹುಡುಕಾಡಿದೆ. ಅಹುದು; ಏಕೆ ಕೊಟ್ಟೆ? ಇನಾಮೇ? ಆ 'ರಿಕ್‌ಷಾ' ಎಳೆಯುವವನ ನಡತೆಯನ್ನು ಕುರಿತು ನಿರ್ಣಯ ಕೊಡಲು ನಾನು ತಕ್ಕವನೆಂದು ನನ್ನ ತಿಳುವಳಿಕೆಯೆ? ನನ್ನ ಮನಸ್ಸಾಕ್ಷಿಯೆದುರು ನನಗೆಯೇ ಉತ್ತರವಿಲ್ಲದಾಯಿತು.

ಇಂದಿಗೀಗಲೂ ಆ ಅನುಭವದ ಕಿಡಿಯು ನನ್ನ ನೆನವಿನಲ್ಲಿ ಹೊತ್ತುತ್ತಿದೆ. ಎಷ್ಟೋ ಹವಣಿಸಿ ಎಷ್ಟೋ ಕಷ್ಟದಿಂದ ಅದನ್ನು ಕುರಿತು ನಾನು ಒಳಗೊಳಗೆ ವಿಚಾರಮಾಡುವೆ. ಈ ಕೆಲ ವರ್ಷಗಳ ರಾಜಕೀಯ ಮತ್ತು ಸಾಂಗ್ರಾಮಿಕ ನಾಟಕವು. ನಾನು ಚಿಕ್ಕಂದಿನಲ್ಲೋದಿದ ಪ್ರೌಢ ಗ್ರಂಥಗಳಂತೆಯೆ ನೆನವಿನಲ್ಲುಳಿದಿವೆ. ಅದರ ಒಂದು ಸಾಲೂ ನನ್ನ ತಲೆಯಲ್ಲಿ ಒರದು. ಆದರೆ ಈ ಸಂಗತಿಯು ಯಾವಾಗಲೂ ಕಣ್ಣೆದಿರು ಕಟ್ಟಿ ನನಗೆ ಛೀ ಹಾಕಿ ಶುದ್ಧ ಮಾಡಿ ಆತ್ಮಶುದ್ಧಿಗೆ ನನ್ನನ್ನು ಪ್ರೇರಿಸಿ, ನನ್ನ ಆಶೆ ಸಾಹಸಗಳಿಗೆ ಬಲವನ್ನಿತ್ತು ತನ್ನ ನಾಟ್ಯವನ್ನಾಡುತ್ತಿದೆ. ಅದು ನಡೆದ ದಿನದಂತೆಯೇ ಚಾ-ಚೂ ಬಿಡದೆ ವಿವರವಿವರವಾಗಿ ನಾನದನ್ನು ಸ್ಪಷ್ಟವಾಗಿ ಕಾಣುತ್ತಿದ್ದೇನೆ.

# ಕುಂಗ್-ಇ-ಚಿ 

ಲೋಚಿಂಗ್‌ದೊಳಗಿನ ಹೆಂಡದಂಗಡಿಯ ರೀತಿಯೇ ಬೇರೆ; ಚೀನದ ಉಳಿದ ಜಿಲ್ಲೆಗಳೊಳಗಿನವುಗಳ ರೀತಿಯೇ ಬೇರೆ. ಇಲ್ಲಿಯ ರೀತಿಯೆಂದರೆ, ಒಂದು ಕಾಟಕೋನಾಕಾರದ ಟೇಬಲ್ಲು, ಅದರ ಮರೆಗೆ ಹೆಂಡವನ್ನು ಬಿಸಿ ಮಾಡಲು ಸಜ್ಜುಮಾಡಿಟ್ಟ ಎಸರುನೀರು, ಇದ್ದೇ ಇರತಕ್ಕದ್ದು. ಮಧ್ಯಾನ್ಹವೊ ಸಾಯಂಕಾಲದಲ್ಲಿಯೊ ಕೂಲಿಯವರು ತಮ್ಮ ಕೆಲಸ ಬಿಟ್ಟೊಡನೆ ಈ ಅಂಗಡಿಗಳಿಗೆ ಬಂದು ಒಂದು ಗೊಬ್ಬೆ ಹೆಂಡ ಕುಡಿಯುವರು. ಈಗ ಇಪ್ಪತ್ತು ವರ್ಷಗಳ ಪೂರ್ವದಲ್ಲಿ ನಾಲ್ಕು ದುಡ್ಡು ಅದರ ಬೆಲೆ ಇತ್ತು. ಈಗ ಹತ್ತಾಗಿದೆ. ಆ ಟೇಬಲ್ಲಿನ ಹತ್ತಿರವೇ ನಿಂತು ಆ ಕೂಲಿಯವರು ಆ ಬಿಸಿ-ಬಿಸಿ ಪೇಯವನ್ನು ಕುಡಿದು ತಮ್ಮ ಮನಸ್ಸು ಸಮಾಧಾನಪಡಿಸಿಕೊಂಡು ಹೋಗುವರು. ಒಂದು ದುಡ್ಡು ಕೊಟ್ಟರೆ ಒಂದು ಮಾಪು ಬಿದರಗಳಲಿನ ಉಪ್ಪಗಾಯಿ ಅಥವಾ ಅವರೀ ಡಬ್ಬಗಾಯಿಗಳು ಹೆಂಡದ ಕೂಡ ವ್ಯಂಜನ ಪದಾರ್ಥ ಎಂದು ಕೊಳ್ಳಬಹುದು. ಹತ್ತು ದುಡ್ಡು ಕೊಟ್ಟರೆ ಎಂತದೋ ಒಂದು ಮಾಂಸದ ಪದಾರ್ಥ ಸಿಕ್ಕುವದು. ಆದರೆ ಬರುವ ಗಿರಾಕಿಗಳಲ್ಲಿ ಬಹಳ ಜನರು ಗಿಡ್ಡಂಗಿಯ ಗೆಣೆಯರು. ಯಾರ ಜೇಬಿನಲ್ಲಿಯೂ ಒಂದು ಹತ್ತು ಕಾಸಿಗಿಂತ ಹೆಚ್ಚಿರಲಾರದು. ಉದ್ದಂಗಿಯ ಜನರು ಮಾತ್ರ ಟೇಬಲ್ಲಿನ ಹತ್ತಿರ ನಿಲ್ಲದೆ ಒಳಗಿರುವ ಕೋಣೆಯಲ್ಲಿ ಎದೆ ಸೆಟೆಸಿ ಹೊಕ್ಕು ಹೆಂಡ ಮಾಂಸದ ಚೆಲ್ಲಾಟವಾಡಿ ಸಾಕಷ್ಟು ಹೊತ್ತು ಕಳೆಯುವರು.

ನಾನು ಹನ್ನೆರಡು ವರ್ಷದವನಿರುವಾಗ 'ಲೋಚಿಂಗ'ದ 'ವಿಶ್ವ ಭಾಗ್ಯ' ಎಂಬ ಹೆಸರಿನ ಒಂದು ಹೆಂಡದಂಗಡಿಯಲ್ಲಿ ಮಾಣಿಯಾಗಿದ್ದೆ. ಅಂಗಡಿ ಊರ ಬಾಗಿಲಿಗೇ ಇತ್ತು. ಅಂಗಡಿಯವನಿಗೋ ನಾನು ತೀರ

ಪೆದ್ದನಾಗಿ ಕಂಡಿರಬೇಕು. ಅವನು ನನ್ನನ್ನು ಉದ್ದಂಗಿಯ ಅತಿಥಿಗಳ ಕಡೆಗೆ ಬಿಡದೆ ಬಿಸಿನೀರಿನ ಹತ್ತಿರ ಕೆಲಸಕ್ಕಿರಿಸಿದನು. ಗಿಡ್ಡಂಗಿಯ ಗಿರಾಕಿಗಳು ವ್ಯವಹಾರಕ್ಕೆ ಸರಳರು. ಆದರೆ ಬಲು ಬಾಯಿಬಡಕರು. ಇಲ್ಲದ ತೊಂದರೆ ಹುಟ್ಟಿಸಿ ತೊಂದರೆ ಮಾಡಿಕೊಳ್ಳುವವರು. ಪಿಪಾಯಿಯೊಳಗಿದ್ದ ಹೆಂಡವನ್ನು ಹುಟ್ಟಿನಿಂದ ತೆಗೆಯುವಾಗ ಬಕಪಕ್ಷಿಗಳಂತೆ ಗೋಣೆತ್ತಿ ಒಳಕ್ಕೆ ಹಣಿಕಿ ಹಾಕುವದೂ, ಒಳಕ್ಕಿರುವದು ನೀರೋ, ಹೆಂಡವೋ ಎಂದು ನೋಡುವುದು, ಅವರ ಹೆಂಡವನ್ನು ಕಾಸಿ ಕೊಡಲು ಮಗಿಯನ್ನು ಬಿಸಿನೀರಿನಲ್ಲದ್ದುವಾಗ ಅದರಲ್ಲೇನಾದರೂ ನೀರು ಬೆರೆಸುವೆವೋ ಎಂದು ಮುಂದೆ ಮೂಗು ಚಾಚುವದು, ಇವೇ ಮೊದಲಾದ ಕಿರುಕಳ ಚಟಗಳು ಅವರಿಗಿದ್ದವು. ಇಷ್ಟೆಲ್ಲ ಚಿಕಿತ್ಸೆ ಮಾಡುತ್ತಿರುವಾಗ ನಾನಾದರೂ ಹೆಂಡದಲ್ಲಿ ನೀರು ಬೆರಸುವದೆಂತು ? ನಾನು ಈ ಕೆಲಸಕ್ಕೆ ಬಾರದ ಮುಡ್ಡ ಎಂದು ನಮ್ಮ ಅಂಗಡಿಯ ಯಜಮಾನನಿಗೆ ಕೆಲ ದಿವಸದಲ್ಲಿ ತಿಳಿಯಿತು. ಸುದೈವದಿಂದ ನನ್ನ ಕೆಲಸ ಹಚ್ಚಿಕೊಟ್ಟವರು ದೊಡ್ಡವರು. ಅವರ ಮೋರೆ ನೋಡಿ ನನ್ನನ್ನು ಕೆಲಸದಿಂದ ತೆಗೆದು ಹಾಕದೆ ಬರಿ ಹೆಂಡ ಬಿಸಿಮಾಡುವ ಬೇಸರದ ಕೆಲಸಕ್ಕೆ ನನ್ನನ್ನು ನಿಯಮಿಸಲಾಯಿತು.

ನಾನು ಹಗಲೆಲ್ಲ ಮೇಜಿನ ಹಿಂದೆ ನಿಂತು ದಕ್ಷನಾಗಿ ನನಗೊಪ್ಪಿಸಿದ ಕೆಲಸ ಮಾಡುತ್ತಿದ್ದೆನು. ಕೆಲಸವನ್ನೇನೊ ತೃಪ್ತಿಕರವಾಗಿಯೆ ಮಾಡುತ್ತಿದ್ದೆ. ಆದರೆ ಒಂದರಂತೆ ಒಂದೇ ಇರುವ ದಿನದ ವ್ಯವಹಾರದ ಬೇಜಾರು ನನಗೂ ಒಮ್ಮೊಮ್ಮೆ ಬರುತ್ತಿತ್ತು. ಅಂಗಡಿಯ ಯಜಮಾನನು ಒಳ್ಳೆ ಗಂಟುಮೋರೆಯವನು. ಗಿರಾಕಿಗಳು ಒರಟು,ಕಿರಿಚಾಡುವ ಜನ. ಹೀಗಿರುವಾಗ ಉಲ್ಲಾಸದಿಂದಿರುವುದು ಹೇಗೆ! ಕುಂಗ್-ಇ-ಚಿ ಕುಡಿಯಲು ಬಂದಾಗ ಮಾತ್ರ ನಾನೂ ನಗುವವರೊಡನೆ ನಗುತ್ತಿದ್ದೆ. ಅಂತೆಯೆ ಇಂದಿಗೂ ಅವನನ್ನು ನೆನೆಸುತ್ತೇನೆ.

ಮೇಜಿನ ಹತ್ತಿರ ನಿಂತು ಹೆಂಡ ಕುಡಿಯುವ ಉದ್ದಂಗಿಯವನೆಂದರೆ ಕುಂಗ್-ಇ-ಚಿ ಒಬ್ಬನೇ ಒಬ್ಬ: ಅವನ ನಿಲುವು ಎತ್ತರ. ಒಟ್ಟಿನಲ್ಲಿ ಮಹಾಕಾಯದ ಮನುಷ್ಯ. ಮುಖ ಸಪ್ಪಗೆ; ಅದರ ಮೇಲೆ ಅಲ್ಲಲ್ಲಿ ಕಪ್ಪು

ನೀಲಿಯ ಛಾಯೆ. ಮೋರೆಯೆಲ್ಲ ನಿರಿಗೆ ನಿರಿಗೆ. ಮತ್ತು ಆ ಗೆರೆಗಳಲ್ಲಿ ಅಲ್ಲಲ್ಲಿ ಚಿವುರುಗಾಯಗಳ ಕಲೆ. ಗದ್ದಕ್ಕೆ ಒಂದು ಕುರುಚಲು ಗಡ್ಡ ಜೋತಾಡುತ್ತಿತ್ತು. ಅವನು ತೊಟ್ಟ ಬಟ್ಟೆಯೇನೋ ನಿಲುವಂಗಿಯೇ. ಆದರೆ ಬಹಳೇ ಹರಕು ಹರಕು. ಹೋದ ಹತ್ತು ವರ್ಷಗಳಲ್ಲಿ ಮಡಿ ಮಾಡಿತ್ತೋ ಇಲ್ಲವೋ ಎಂಬುವಷ್ಟು ಕೊಳೆ. ಸಿಂಪಿಗರವನ ಮುಖವನ್ನು ಎಷ್ಟೋ ದಿವಸಗಳಲ್ಲಿ ಅದು ಕಂಡಿರಲಿಲ್ಲ. ಅವನ ಬಾಯಲ್ಲಿ ಯಾವಾಗಲೂ ಚಿ-ಹೂ-ಚೆ-ಎ-ಗಳಂಥ ಜೊಳ್ಳು ನಿಪಾತಗಳೇ ತುಂಬಿರುತ್ತಿದ್ದವು. ಶ್ಲೋಕಗಳಲ್ಲಿ ಬರುವ 'ಚ-ವೈ-ತು-ಹಿ 'ಗಳಂಥ ಈ ಮಾತುಗಳ ಅರ್ಥ ಸಾಧಾರಣ ಜನರಿಗೆ ಆಗುತ್ತಿರಲಿಲ್ಲ. ಇವನು ಅಂಗಡಿಯೊಳಗೆ ಬಂದನೆಂದರೆ ಎಲ್ಲರೂ ಅವನನ್ನು ನೋಡಿ 'ಲಕ್ಕಿ ಹೊಡೆ 'ಯುವರು. 'ಏನು ಕುಂಗ್-ಇ-ಚಿ, ಮೋರೆಯ ಮೇಲೆ ಹೊಸ ಚಿವುರುಗಾಯ ಕಾಣುತ್ತಿವೆಯಲ್ಲ ?' ಎಂದು ಯಾರಾದರೂ ಒಬ್ಬರು ಅಂದುಬಿಡುತ್ತಿದ್ದರು.

ಅವನು ಅದನ್ನು ಕೇಳಿಯೂ ಕೇಳದಂತಿರುತ್ತಿದ್ದನು. ಮೇಜಿನ ಕಡೆಗೆ ಮುಖ ತಿರುವಿ 'ಎರಡು ಮಗಿ ಹೆಂಡ ಕಾಸಿರಿ. ಮತ್ತೆ ಒಂದು ಪ್ಲೇಟು ಅವರೇ ಡಬ್ಬಗಾಯಿ ಕೊಡಿ' ಎಂದು ಅಧಿಕಾರವಾಣಿಯಿಂದ ಹೇಳಿ ತನ್ನ ಒಂಬತ್ತು ದುಡ್ಡುಗಳನ್ನು ಸಾಲಾಗಿ ಮೇಜಿನ ಮೇಲಿಡುವನು.

ಮೋಜಿನ ಪ್ರೇಕ್ಷಕರಲ್ಲೊಬ್ಬನು ಒಮ್ಮೆ ಸುಳ್ಳೇ ದೊಡ್ಡ ದನಿಯಲ್ಲಿ 'ನೀನು ಮತ್ತೆ ಕಳ್ಳತನ ನಡೆಸಿರಬೇಕು ?' ಎಂದ. ಕುಂಗ್-ಇ-ಚಿಯು ಇಷ್ಟಗಲ ಕಣ್ತೆರೆದು 'ಏನಯ್ಯಾ, ಏನೂ ಪ್ರಮಾಣವಿಲ್ಲದೆ ಒಬ್ಬನ ಪ್ರಾಮಾಣಿಕತೆಯನ್ನೇ ಶಂಕಿಸಬೇಕೇ ?' ಎಂದು ಕೇಳಿದನು.

"ಏನು ! ಪ್ರಾಮಾಣಿಕತೆಯೇ ? 'ಹೋ' ಕುಟುಂಬದವರ ಪುಸ್ತಕಗಳನ್ನು ನೀನು ಕದ್ದಾಗ ನಿನ್ನನ್ನವರು ಥಳಿಸುವದನ್ನು ನಾನು ಕಣ್ಣಾರೆ ಕಂಡಿಲ್ಲವೆ ?"

ಇದಕ್ಕೆ ಉತ್ತರ ಕೊಡುವಾಗ ಕುಂಗ್-ಇ-ಚಿಯ ಮುಖವು ಮುದುಡಿಯಾಗಿ ಹಣೆಯ ಮೇಲಿನ ನೀಲಿ ನರಗಳು ಉಬ್ಬಿ ನಿಲ್ಲುತ್ತಿದ್ದವು.

"ಪುಸ್ತಕ ಕಳವು ಮಾಡಿದರೆ ಅದೇನು ತುಡುಗಾಗಲಿಲ್ಲ. ಪುಸ್ತಕ ಕಳವು ಮಾಡುವದು ಪಂಡಿತರ ಕೆಲಸ. ಅದಕ್ಕೇ ನೀವು ತುಡುಗು ಎನ್ನು-ವಿರೋ?" ಇಷ್ಟಂದು ಎಲ್ಲೆಲ್ಲಿಯವೊ ಅಬದ್ಧ ಸುಬದ್ಧ ಸುಭಾಷಿತಗಳನ್ನು ಅವನು ಹೇಳಲಾರಂಭಿಸುವನು. 'ಮನಸಿ ಚ ಪರಿತುಷ್ಟೇ, ಕೋರ್ಥವಾನ್ ಕೋ ದರಿದ್ರಃ' 'ದರಿದ್ರಸ್ಯ ಗತಿರ್ನಾಸ್ತಿ' 'ನಾಸ್ತಿ ಧರ್ಮಸಮೋ ಬಂಧುಃ' 'ಚವ್ವೈತುಹಿ, ಚವ್ವೈತುಹಿ' ಎಂದನೆಂದರೆ ತೀರಿತು. ಅಲ್ಲಿ ಕೂಡಿದ ಜನದ ಗುಂಪೆಲ್ಲ ಖೊಳ್ಳೆಂದು ನಗುತ್ತಿತ್ತು. ಏಕೋ ಏನೋ! ಎಲ್ಲರಿಗೂ ಸಂತೋಷ.

ಕುಂಗ್-ಇ-ಚಿ ಇಲ್ಲದಾಗ ಜನರು ಅವನು ಮಹಾ ಗ್ರಂಥಗಳನ್ನು ಓದಿರುವನೆಂದೂ ಅವನಿಗೆ ವಿದ್ಯಾಲಯ ಪ್ರವೇಶ ದೊರೆಯಲಿಲ್ಲವೆಂದೂ ಹೇಳುತ್ತಿದ್ದರು. ಹೊಟ್ಟೆ ಹೊರೆದುಕೊಳ್ಳುವ ಸಾಧನವೇ ಇಲ್ಲದಾಗಿ ಬರಬರುತ್ತ ಅದು ಬಿಗಿಯಾಗಿದ್ದರಿಂದ ಸುಮಾರು ತಿರುಕತನಕ್ಕೇ ಅವನ ಗತಿ ಬಂದಿತ್ತು. ಅವನು ಚಿತ್ರ-ಚಿತ್ರವಾಗಿ ಅಕ್ಷರ ಬರೆಯುವುದರಲ್ಲಿ ಜಾಣನಾಗಿದ್ದನು. ಹೊಟ್ಟೆಗೆ ಹಿಡಿ ಅಕ್ಕಿ ದೊರಕಿಸಲು ಅವನು ಈ ಬರೆಯುವ ಕೆಲಸವನ್ನೇ ಕೈಕೊಳ್ಳಬಹುದಿತ್ತು. ಆದರೇನು? ಅವನು ವ್ಯೈಗಳ್ಳ, ಹೆಂಡ ಕುಡುಕ. ಕೆಲ ದಿನ ಗ್ರಂಥ ನಕಲು ಮಾಡುವ ಕೆಲಸ ನಡೆಸಿರುವಾಗಲೆ ಪುಸ್ತಕ, ಹಾಳೆ, ಕುಂಚ, ಮಸಿದೌತಿ, ಎಲ್ಲ ತಕ್ಕೊಂಡು ಓಟ ಬಿಡುತ್ತಿದ್ದನು. ಮತ್ತೆ ಮತ್ತೆ ಹೀಗೆ ಮಾಡಿದ್ದರಿಂದ ಕೆಲಸ ದೊರೆಯುವದು ಕಷ್ಟವಾಗಿ ಬೇರೆ ಉದ್ಯೋಗವಿಲ್ಲದ್ದರಿಂದ ಆಗೀಗ ಚಿಕ್ಕ ಪುಟ್ಟ ಕಳವು ತುಡುಗು ಮಾಡುತ್ತಿದ್ದನು.

ನಮ್ಮ ಹೆಂಡದಂಗಡಿಯ ಮಟ್ಟಿಗೆ ಮಾತ್ರ ಕುಂಗ್-ಇ-ಚಿಯ ನಡತೆ ಯಾವಾಗಲೂ ಚೊಕ್ಕಾಗಿತ್ತು. ನಮ್ಮಂಗಡಿಯ ಸಾಲ ಸರಿಯಾಗಿ ತೀರಿಸುತ್ತಿದ್ದನು. ಇನ್ನೇನು, ಒಮ್ಮೊಮ್ಮೆ ಹಣ ಇಲ್ಲದಾಗ ಸಾಲ ಬಹಳ ದಿನ ಉಳಿದು ಬಾಕಿ ಲೆಕ್ಕದಲ್ಲಿ ಅವನ ಹೆಸರು ಹಲಗೆಯ ಮೇಲೆ ಬರೆಯಲಾಗುತ್ತಿತ್ತು. ತಿಂಗಳ ಕೊನೆಗೆ ಅವನು ಕೊಡುವ ಹಣ ಕೊಟ್ಟುಬಿಡುತ್ತಿದ್ದನು. ಅವನ ಹೆಸರು ಅಳಿಸಿಹೋಗುತ್ತಿತ್ತು.

ಆಗಲೇ ಒಂದು ಕಥೆ ಹೇಳಿದೆನಲ್ಲ, ಆ ದಿನ ಒಂದರ್ಧ ಪಾಗಿ ಹೆಂಡ ಅವನು ಸೇವಿಸಿದ್ದ. ಸ್ವಾಭಾವಿಕವಾದ ಸಪ್ಪನ್ನಕಳೆಯು ಮತ್ತೆ ಅವನ ಮುಖಕ್ಕೆ ಬಂದಿತ್ತು. ಯಾರೋ ಅವನನ್ನು ಕೇಳಿದರು. "ನಿಜವಾಗಿ ನಿನಗೆ ಅಕ್ಷರ ಬರುತ್ತವೆಯೇ ?" ಇವನು ಆ ಪ್ರಶ್ನೆಯನ್ನೇ ದುರ್ಲಕ್ಷಿಸಿದ. ಪ್ರಶ್ನೆ ಕೇಳು ವವನು ಕೇಳುತ್ತಲೇ ಇದ್ದ. 'ಹೌದು, ನಿನಗೆ ಅಕ್ಷರಜ್ಞಾನವಿದ್ದರೆ 'ಶಿ-ಟ್ಸಾ-ಐ' ಎಂಬ ಬಿರುದಿನ ಒಂದು ತುಣುಕಾದರೂ ನಿನಗೇಕೆ ದೊರೆಯ ಲಿಲ್ಲ ?"

ಕೂಡಲೆ ಕುಂಗ್-ಇ-ಚಿಯ ಮನಸ್ಸು ನಿರಾಶೆಯಿಂದ ತುಂಬಿ ಅವನ ಸಪ್ಪನ್ನ ಮುಖವು ಕರಿ ಬಿಳಿದಾಗಿ, ಅವನ ಬಾಯಿಂದ ಅಸಂಬದ್ಧ ಪ್ರಲಾಪದ ಅಣಿಮುತ್ತುಗಳು ಉರುಳಿ ಬೀಳುತ್ತಿದ್ದವು. ಅದಕ್ಕೆ ಅರ್ಥ, ಶೂನ್ಯ. ಕೂಡಿದ ಜನರ ಗುಂಪಿಗೆ ಅದೇ ನಗೆಗೆ ಮೂಲ. ಆಯಿತು, ಅಲ್ಲಿಯ ವಾತಾವರಣ ವೆಲ್ಲ ಆನಂದೋತ್ಸಾಹದಿಂದ ಗಲಗಲಿಸಿಬಿಡುತ್ತಿತ್ತು.

ಇಂಥ ಕಾಲಕ್ಕೆ ನಾನೂ ಜನರೊಡನೆ ನಕ್ಕು ಕೆಲೆದರೆ ನಮ್ಮ ಅಂಗಡಿಯ ಯಜಮಾನನೇನೂ ಬೈಯ್ಯುತ್ತಿರಲಿಲ್ಲ. ಅವನಿಗೆ ತನ್ನ ಗಿರಾಕಿ ಗಳು ರಂಜನೆಗೊಂಡದ್ದೇ ಲಾಭ. ಅಂತೆಯೇ ಅವನು ಜನರನ್ನು ನಗಿಸುವು ದಾಗಿ ಕುಂಗ್-ಇ-ಚಿಯುನ್ನು ಒಮ್ಮೊಮ್ಮೆ ಕೇಳಿಕೊಳ್ಳುತ್ತಿದ್ದನು. ಆದರೆ ಕುಂಗ್-ಇ-ಚಿಯು ಗಿರಾಕಿಗಳ ಕೂಡ ಮಾತು ಬೆಳೆಸುವ ಹುಚ್ಚಾಟ ಬಿಟ್ಟು ಅಲ್ಲಿಯೇ ಜಿಗಿದಾಡುತ್ತಿರುವ, ಓಡಾಡುತ್ತಿರುವ ಚಿಕ್ಕ ಮಕ್ಕಳೊಡನೆ ಆಟ ವಾಡತೊಡಗುತ್ತಿದ್ದನು.

ಒಮ್ಮೆ ಅವನು ನನಗೆ ಕೇಳಿದನು. "ನೀನೇನಾದರೂ ಪುಸ್ತಕ ಓದಿದ್ದೀಯಾ ?" ನಾನು ತಲೆ ಹಾಕಿದೆ.

"ಹಾ ! ಸರಿಯಾಯಿತು. ನಿನ್ನ ಪರೀಕ್ಷೆ ತೆಗೆದುಕೊಳ್ಳುತ್ತೇನೆ ಈ ಮಸಾಲೆ ಅವರೆಕಾಯಿಗಳಿಂದ 'ವಿ' ಎಂಬ ಅಕ್ಷರ ಹೇಗೆ ಬರೆಯುತ್ತೀ, ತೋರಿಸು ?"

ನಾನೆಂದುಕೊಂಡೆ, "ಈ ತಿರುಕನ ಮಗ ನನ್ನ ಪರೀಕ್ಷಕನಾಗಲು ಯೋಗ್ಯನೇ ?" ನನ್ನ ಮುಖ ಇನ್ನೊಂದು ಕಡೆಗೆ ತಿರುವಿ ನಾನು ಅವನನ್ನು

ತಿರಸ್ಕರಿಸಿದೆ. ಅವನು ಸ್ವಲ್ಪ ಹೊತ್ತು ಕಾದು ಬಹಳೇ ಆಸಕ್ತಿಯಿಂದ ಅಂದ. "ಅಂತೂ ನಿನಗೆ ಬರಿಯಲಿಕ್ಕೆ ಬರುವದಿಲ್ಲ. ಬಾ, ನಿನಗೆ ನಾನು ಕಲಿಸುತ್ತೇನೆ. ಇನ್ನು ನೆನಪಿಡು, ಮುಖ್ಯವಾಗಿ 'ಅವರೀ ಡಬ್ಬಗಾಯಿ' ಇಂಥ ಮಾತುಗಳನ್ನು ಚೆನ್ನಾಗಿ ಜ್ಞಾಪಕದಲ್ಲಿಡಬೇಕು. ಒಂದಿಲ್ಲೊಂದು ದಿನ ನೀನು ಅಂಗಡೀಕಾರನಾದ ಮೇಲೆ ಲೆಕ್ಕ ಇಡಬೇಕಾದಾಗ ಈ ಮಾತಿನ ಉಪಯೋಗವಾಗುತ್ತದೆ."

"ನಾನು ಅಂಗಡಿಕಾರನಾಗುವ ಮಾತು ಎಂದಿನದೋ! ನಮ್ಮ ಅಂಗಡಿಯ ಯಜಮಾನ ತನ್ನ ಲೆಕ್ಕದ ಪುಸ್ತಕದಲ್ಲಿ 'ಅವರೀ ಡಬ್ಬಗಾಯಿ' ಬರೆದಿದ್ದನ್ನು ನಾನು ಬೇರೆ ಕಂಡಿರಲಿಲ್ಲ—"ನಾನಂದುಕೊಂಡೆ. ಅವನ ಮಾತು ನನಗೆ ತಮಾಷೆಯಾಗಿ ಅನಿಸಿತು. ಆದರೆ ತೊಂದರೆ ಕೊಡದೆ ಇರಲಿಲ್ಲ. ಅವನಿಗೆ ಉತ್ತರ ಕೊಡುವಾಗ ಅಷ್ಟೇನೂ ಉತ್ಸಾಹವಿಲ್ಲದೆ ಹೇಳಿದೆ. 'ಅಯ್ಯೋ! ನೀನು ಕಲಿಸುವದು ಯಾರಿಗೆ ಬೇಕಾಗಿದೆ? ಏನೇ ಇರಲಿ, ಮೂಲ 'ವಿ' ಅಕ್ಷರವನ್ನು 'ಹುಲ್ಲಿ'ನ ಮೂಲಾಕ್ಷರದ ಕಿಬ್ಬದಿಯಲ್ಲಿ ಬರೆಯುವರಷ್ಟೆ?"

ಕುಂಗ್-ಇ-ಚಿಗೆ ಬಹಳೇ ಖುಷಿಯಾಯಿತು. ಅವನು ಅತಿ ಉತ್ಸಾಹದಿಂದ ತನ್ನ ಎರಡು ನಡುವಿನ ಕೈ ಬೆರಳುಗಳಿಂದ ಮೇಜನ್ನು ರಪರಪನೆ ಬಡೆದನು. 'ಹೌದಪಾ! ಹೌದು. ಆದರೆ 'ವಿ' ಅಕ್ಷರವನ್ನು ನಾಲ್ಕು ವಿಧವಾಗಿ ಬರೆಯುವರು. ನಿನಗೆ ಗೊತ್ತೇ?"

ನನಗೆ ಅಪಮಾನವೆನಿಸಿತು. ನಾನು ಮೋರೆ ಕಿವುಚಿ ಹೊರಟು ಹೋದೆ. ಕುಂಗ್-ಇ-ಚಿಯು ತನ್ನ ಉದ್ದುಗುರುಗಳನ್ನು ಹೆಂಡದಲ್ಲಿದ್ದಿ ಮೇಜಿನ ಮೇಲೆ ಅಕ್ಷರಗಳನ್ನು ಬರೆದು ತೋರಿಸುವವನಿದ್ದ. ನನಗೆ ಉತ್ಸುಕತೆ ಇಲ್ಲದ್ದನ್ನು ಕಂಡು ಅವನಿಗೆ ಕೆಡಕೆನಿಸಿದಂತೆ ಅವನ ಕಣ್ಣಿನಿಂದ ಕಂಡಿತು.

ಮತ್ತೆ ಒಮ್ಮೊಮ್ಮೆ ಅವನು ಬಂದಾಗ—ಅವನೊಡನೆ ನಗೆಯ ನೆರೆ ಬಂದಾಗ—ನೆರೆಹೊರೆಯ ಚಿಕ್ಕ ಮಕ್ಕಳು ಅವನ ಸುತ್ತುಮುತ್ತು ಮಾಲೆಯಾಗಿ ನಿಲ್ಲುತ್ತಿದ್ದವು. ಅವನು ಒಬ್ಬೊಬ್ಬರಿಗೆ ಒಂದೊಂದು ಡಬ್ಬಗಾಯಿ

ಯನ್ನು ಕೊಡುತ್ತಿದ್ದ. ಅವು ಕೊಟ್ಟಿದ್ದನ್ನು ತಿಂದು, ಉಳಿದದ್ದಕ್ಕೆ ಕಣ್ಣಂಟಿಸಿ ಹಾಗೆ ನಿಲ್ಲುತ್ತಿದ್ದವು. ತನ್ನ ಚಾಚಿದ ಕೈಬೆರಳಿನಿಂದ ಅವರೇಕಾಯಿಯನ್ನು ಮುಚ್ಚಿ ಆ ಚಿಕ್ಕ ಮಕ್ಕಳ ಎತ್ತರಕ್ಕೆ ಬರುವಂತೆ ಕೆಳಬಾಗಿ " ಇಲ್ಲಿ ಸ್ವಲ್ಪೇ ಉಳಿದಿವೆ. ನನಗೆ ಬಹಳ ಸಿಕ್ಕಿರಲಿಲ್ಲ." ಎಂದು ಮೆಲ್ಲಗೆ ಅವನು ಆ ಚಿಕ್ಕ ಮಕ್ಕಳಿಗೆ ಹೇಳುತ್ತಿದ್ದನು. ಇಷ್ಟು ಹೇಳಿ ಸೆಟೆದು ನಿಂತು ' ನ ಬಹೂನಿ ಬಹೂನಿ ಚ '— ' ಬಹೂನಿತ್ತು ನ ಬಹೂನಿ ಚ ವೈತುಹಿ, ಚ ವೈತುಹಿ ' ಹೀಗೇನೇನೊ ಶಬ್ದಾಡಂಬರವನ್ನು ಮಾಡಿ ಮುಗಿಸುತ್ತಿದ್ದನು. ಚಿಕ್ಕ ಮಕ್ಕಳೂ ಕಿಲಿಕಿಲಿ ನಗುತ್ತ ಚದರಿ ಹೋಗುತ್ತಿದ್ದವು.

ಒಂದು ದಿನ ಶರನ್ಮಧ್ಯದ ಹಬ್ಬ ಮುಗಿಯುವ ಕೆಲ ದಿನ ಪೂರ್ವದಲ್ಲಿ ನಮ್ಮ ಯಜಮಾನ ಅಂಗಡಿಯ ಲೆಕ್ಕ ಮುಗಿಸಲಿದ್ದ. ಗೋಡೆಗೆ ತೂಗು ಹಾಕಿದ ಬಿಳಿ ಹಲಗೆಯನ್ನು ತಕ್ಕೊಂಡು " ಕುಂಗ್-ಇ-ಚಿಯು ಬಹಳ ದಿನಗಳಲ್ಲಿ ಬಂದಿಲ್ಲ. ಅವನು ನನಗೆ ಹತ್ತೊಂಬತ್ತು ದುಡ್ಡು ಕೊಡಬೇಕು." ಎಂದಂದನು

ಆಗ ಕುಂಗ್-ಇ-ಚಿಯು ಬರದೆ ಎಷ್ಟು ದಿನಗಳಾದವಲ್ಲಾ ಎಂದು ನನಗೆ ತೋರಿತು.

" ಅವನೇನು ತನ್ನ ತಲೆ ಬರುತ್ತಾನೆ! ಏಟು ಬಿದ್ದಿವೆ, ಏಟು! ಈ ಸಲ ಎರಡೂ ಕಾಲು ಗಚ್ಚ!" ಎಂದು ಅಲ್ಲಿಯೇ ನಿಂತ ಒಬ್ಬ ಗಿರಾಕಿ ಸುದ್ದಿ ಬೀರಿದ.

" ಹಾಂ! "

" ಹುಂ ಮತ್ತೆ ಕಳ್ಳತನದ ಕಾಯಕ. ಆ ಪ್ರಾಣಿಗೆ ಬುದ್ಧಿಯಿಲ್ಲ ಮ್ಯಾಜಿಸ್ಟ್ರೇಟ್ ' ಟಿಂಗ್ 'ನ ಮನೆಯಲ್ಲಿ ಕಳವು ಮಾಡಬೇಕೇ ? ಅಂಥಲ್ಲಿ ಮಾಡಿ ದಕ್ಕಿಸಿಕೊಳ್ಳುವದು ಹೇಗೆ ?"

" ಹೌದು ಆಯಿತೇನು ಮುಂದೆ ? "

" ಏನಾಯಿತೇ, ಮೊಟ್ಟ ಮೊದಲು ತಾನು ಕಳವು ಮಾಡಿದ್ದಾಗಿ

ಒಪ್ಪಿಗೆ ಬರೆದುಕೊಡಬೇಕಾಯಿತು. ಆಮೇಲೆ ಪ್ರಹಾರಕ್ಕೆ ಪ್ರಾರಂಭ ವಾಯಿತು. ಅದೂ ಒಂದು ಅರ್ಧ ರಾತ್ರಿಯ ವರೆಗೆ! ಆಯಿತು, ಎರಡೂ ಕಾಲುಗಣಿಕೆ ಮುರಿದುಹೋದವು.''

"ಮುಂದೆ?"

"ಮುಂದೇನು, ಹೋದವು; ಹೋಗಿವೆ."

"ಹೌದಪ್ಪಾ, ಅವನು ಆಮೇಲೆ ಹೇಗಿದ್ದಾನೆ?"

"ಯಾರು ಬಲ್ಲರು; ಸತ್ತಿರಬಹುದು."

ಅಂಗಡಿಯ ಯಜಮಾನನು ಹೆಚ್ಚು ಮಾತನಾಡದೆ ಮುಂದೆ ನೋಡಿ ಹಣದ ಬೇರೀಜು ಮಾಡಹತ್ತಿದನು.

ಶರನ್ಮಧ್ಯದ ಹಬ್ಬವು ಆಗಿಹೋಯಿತು. ದಿನದಿನವೂ ಗಾಳಿಯು ಹೆಚ್ಚು ಚಳಿಚಳಿಯಾಯಿತು. ಚಳಿಗಾಲ ಬಂತು. ನಾನು ಒಲೆಯು ಹತ್ತಿರವೇ ದಿನವೆಲ್ಲವೂ ನಿಂತಿದ್ದರೂ ಬೆಚ್ಚಗಿರುವದಕ್ಕಾಗಿ ದಪ್ಪನ್ನ ಕೋಟೊಂದನ್ನು ತೊಡಬೇಕಾಗುತ್ತಿತ್ತು. ಒಮ್ಮೆ ಮಧ್ಯಾಹ್ನ ಗಿರಾಕಿ ಗಳಾರೂ ಇರಲಿಲ್ಲ. ನಾನು ಕಣ್ಣುಮುಚ್ಚಿಕೊಂಡು ಹಾಗೆ ಕುಳಿತಿದ್ದೆ. "ಒಂದು ಮಗಿ ಹೆಂಡ ಬಿಸಿ ಮಾಡು'' ಎಂದಾರೋ ಎಂದರು. ನಾನು ಬೆಚ್ಚಿ ಕಣ್ದೆರೆದೆ. ದನಿಯೇನೋ ಗುರುತಿನದೇ. ಆದರೆ ಅದು ತಗ್ಗಿ ಬಹಳ ಸಣ್ಣದಾಗಿತ್ತು. ನಾನು ಅತ್ತ ನೋಡಿದೆ, ಇತ್ತ ನೋಡಿದೆ. ಅಂಗಡಿಯಲ್ಲಿ ಯಾರೂ ಇರಲಿಲ್ಲ. ಎದ್ದು ನಿಂತು ಮೇಜಿನ ಮೇಲಿಂದ ಬಾಗಿ ಕೆಳಗೆ ನೋಡಿದೆ. ಕುಂಗ್-ಇ-ಚಿಯು ಹೊಸ್ತಿಲ ಕಡೆಗೆ ಮುಖ ಮಾಡಿ ನೆಲದ ಮೇಲೆ ಕುಳಿತಿದ್ದ. ಅವನ ಮುಖ ಬಡವಾಗಿ ಕಪ್ಪಿಟ್ಟು ಅಭದ್ರವಾಗಿ ಕಾಣುತ್ತಿತ್ತು. ಮೈಯಲ್ಲಿ ಹತ್ತು ತೇಪೆಯ ಹರಕು ಕೋಟಿತ್ತು. ಅವನು ಒಂದು ಬುಟ್ಟಿಯಲ್ಲಿ ತನ್ನ ಮೊಟಕು ಕಾಲು ಮಡಿಚಿಕೊಂಡು ಕುಳಿತು ಅದನ್ನು ಹೊರಚಿಯ ಹಗ್ಗಗಳಿದ ತನ್ನ ಹೆಗಲಿಗೆ ಕಟ್ಟಿಕೊಂಡಿದ್ದ. ನನ್ನನ್ನು ಕಂಡು ಅವನು ಮತ್ತೆ ಕ್ಷೀಣಸ್ವರದಿಂದ "ಒಂದು ಮಗಿ ಹೆಂಡ ಕಾಯಿಸು" ಎಂದನು. ಅಂಗಡಿಯವನೂ ತನ್ನ ತಲೆ ಮೇಜಿನ ಮೇಲಿಂದ ಮುಂದೆ ಚಾಚಿ,

ಸ್ವಲ್ಪ ಸಿಡಿಮಿಡಿಗೊಂಡೇ " ಕುಂಗ್-ಇ-ಚಿ, ನೀನಿನ್ನೂ ನನಗೆ ಹತ್ತೊಂಬತ್ತು ದುಡ್ಡು ಕೊಡಬೇಕು. " ಎಂದನು.

ಕುಂಗ್-ಇ-ಚಿಯು ನಿರ್ಜೀವವಾಗಿ ತಲೆಯೆತ್ತಿ ಒಟಗುಟ್ಟಿದ. " ಅದೂ ಅದಿರಲಿ; ಇನ್ನೊಮ್ಮೆ ತೀರಿಸುತ್ತೇನೆ. ಇದು ನಗದು ಹಣ, ಹಾಂ; ಹೆಂಡ ಮಾತ್ರ ಸರಿಯಾಗಿರಲಿ. "

ವಾಡಿಕೆಯಂತೆ ಯಜಮಾನ ನಕ್ಕು ಕೇಳಿದ- " ಕುಂಗ್-ಇ-ಚಿ, ನಿನ್ನ ಕಳ್ಳ ಕಾಯಕ ಮತ್ತೆ ಸಾಗಿಸಿರುವಿಯಂತೆ ! "

ಅವನು ಹಾಕಾಡಲಿಲ್ಲ. ' ಇಲ್ಲ ' ಎನಲಿಲ್ಲ. ಸುಮ್ಮನೆ ಉತ್ತರ ಕೊಟ್ಟ. " ಸಾಗಲಿ ನಿಮ್ಮ ಚೇಷ್ಟೆ. "

" ಚೇಷ್ಟೆ ! ಇದು ತುಡುಗಲ್ಲದೆ ಮತ್ತೇನು ? ನಿನ್ನ ಕಾಲಗಣಿಕೆ ಏಟು ತಿಂದು ಮುರಿದೇಕೆ ಹೋದವು ? "

" ಮುರಿದೋ, ಹೌದು; ಬಿದ್ದು-ಮುರಿದವು ಬಿದ್ದು. " ಎಂದು ಅವನು ಕ್ಷೀಣಸ್ವರದಲ್ಲಿ ಉತ್ತರ ಕೊಟ್ಟ. " ಈ ಮಾತು ಮಾತ್ರ ಇಲ್ಲಿಗೇ ಸಾಕು ಮಾಡಿರಿ. " ಎನ್ನುವಂತೆ ಅವನ ಕಣ್ಣೊಳಗಿನ ಕರುಣೆ ಅಂಗಲಾಚು ವಂತಿತ್ತು.

ಇಷ್ಟೊತ್ತಿಗೆ ಅಲ್ಲಿ ಜನ ಬಹಳ ನೆರೆದಿತ್ತು. ಎಲ್ಲರೂ ಅಂಗಡಿಯವ ನೊಡನೆ ನಕ್ಕರು. ನಾನು ಹೆಂಡ ಕಾಸಿ ಹೊರಕ್ಕೆ ತಂದು ಕುಂಗ್-ಇ-ಚಿಯ ಇದಿರು ಇಟ್ಟೆ. ಅವನು ನಾಲ್ಕು ದುಡ್ಡಿಗಾಗಿ ಜೇಬಿನಲ್ಲಿ ಕೈಯಾಡಿಸಿ ಕೊನೆಗೆ ತೆಗೆದು ಕೊಟ್ಟ. ಕೊಡುವಾಗ ಅವನ ಕೈಯೆಲ್ಲ ಕೆಸರು ಕೊಳೆ ಯಾಗಿದ್ದುದು ಕಂಡಿತು. ಅವನು ಹಾದಿಯಲ್ಲಿ ಕೈಮೂರಿ ಹೊಸೆದುಕೊಂಡು ಬಂದಿರಬೇಕೆಂದು ನನಗೆ ತಿಳಿಯಿತು. ಅವನು ಹೆಂಡ ಕುಡಿದು ತೀರಿಸುವ ವರೆಗೆ ಅಷ್ಟೆ, ಅಲ್ಲಿದ್ದ. ಆಮೇಲೆ ಅಂಗಡಿಯಲ್ಲಿ ಹರಟೆ ಸಾಗಿತ್ತು. ನೋಡುತ್ತ ನಿಂತವರು ನಗೆಯಾಡುತ್ತಲೇ ಇದ್ದರು. ಇವನು ಕೈಗಳನ್ನು ಕಾಲು ಮಾಡಿ ಹೊಸೆದುಕೊಂಡು ಹೊರಟ.

ಆಮೇಲೆ ಬಹಳ ದಿವಸಗಳ ವರೆಗೆ ಅವನ ದರ್ಶನವೇ ಆಗಲಿಲ್ಲ. ವರ್ಷದ ಕೊನೆಗೆ ಅಂಗಡಿಕಾರ ಬಿಳಿಯ ಹಲಗೆ ನೋಡಿ " ಕುಂಗ್-ಇ-ಚಿ

ಇನ್ನೂ ಹತ್ತೊಂಬತ್ತು ದುಡ್ಡು ಕೊಡುವದು ಬಾಕಿ ಇದ್ದೇ ಇದೆ!" ಎಂದು ದನಿ ಎಳೆದ. ಮೂರನೆಯ ವರುಷ 'ರಾಕ್ಷಸ ನೌಕಾ' ಹಬ್ಬದ ಕಾಲಕ್ಕೆ ಮತ್ತೆ ಇದೇ ಮಾತೆಂದ. ಮುಂದೆ ಶರತ್ಕಾಲಕ್ಕೆ ಮಾತ್ರ ಇದನ್ನು ಅವನಾಡಲಿಲ್ಲ. ಅಂದಿನಿಂದ ಇಂದಿನ ವರೆಗೆ ಕುಂಗ್-ಇ-ಚಿಯನ್ನು ನಾವು ಕಂಡಿಲ್ಲ. ಪಾಪ, ಅವನು ನಿಜವಾಗಿ ಸತ್ತಿದ್ದಾನೋ ಏನೋ!

---

# ಹರಕೆ



ಚಾಂದ್ರಮಾನದಂತೆ ವರುಷ ಮುಗಿಯುವದೇ ತಡವಾದುದು. ಹೊಸ ವರುಷದ ವಾತಾವರಣವೇ ಎಲ್ಲೆಡೆಗೂ ವ್ಯಾಪಿಸಿರುವಂತೆ ತೋರುತ್ತದೆ. ಸಂಜೆಯ ಮುಂದೆ ಆಗಸದಲ್ಲಿ ಕೆಂಡುಬಣ್ಣದ ಮೋಡಗಳು ತೇಲುತ್ತಿರುವವು. ಅವುಗಳೆಡೆಗೆ ಹಾರುತ್ತಿರುವ ಮದ್ದಿನ ಸಿಡಿತದ ಕಿಡಿಗಳೂ, ಸಪ್ಪಳವೂ ಅನ್ನದೇವನ(೧) ಆಕಾಶಗಮನವನ್ನು ಸೂಚಿಸುವಂತೆ ತೋರುವವು. ರಾತ್ರಿ ಹೆಚ್ಚಿದಷ್ಟು ಎಲ್ಲೆಡೆಗೆ ಮದ್ದಿನ ಹೊಗೆ, ವಾಸನೆ, ಸಪ್ಪಳ. ಇಂಥ ಒಂದು ರಾತ್ರಿ ನಾನು ನನ್ನೂರಾದ 'ಲೋಕಿಂಗ'ಕ್ಕೆ ಬಂದೆ. ನನ್ನೂರೆಂದು ಹೇಳಿದೆ ಅಷ್ಟೆ; ಆದರೆ ಅಲ್ಲಿ ನನ್ನದಾದ ಮನೆಯೆ ಇಲ್ಲ. ನನ್ನ ಆಪ್ತನಾದ ಲೋ-ಶಿ-ಲಾ-ಯೋನ ಮನೆಯಲ್ಲಿ ಇಳಿದುಕೊಂಡೆ. ಆತ ನನಗಿಂತ ಒಂದು ತಲೆ ಹಿರಿಯ. ಚೀನೀ ರೀತಿಯಲ್ಲಿ ಹೇಳುವುದಾದರೆ "ನಾಲ್ಕನೆಯ ದೊಡ್ಡಪ್ಪ" ಎನ್ನಬಹುದು. ಅವನಿಗೆ "ಜೈನ್-ಶೆಂಗ್"(೨) ಎಂದು ಪದವಿಯಿದೆ. ಯಾವಾಗಲೂ ಹಳೆಯ ನಡೆ-ನೀತಿಗಳನ್ನು ಬೋಧಿಸುತ್ತಿರುತ್ತಾನೆ.

---

(೧) ವರ್ಷಾರಂಭದ ಈ ಕಾಲದಲ್ಲಿ ಅನ್ನದೇವನು (Kitchen God) ಸ್ವರ್ಗಾಧಿಪತಿಯೆಡೆಗೆ ಹೋಗಿ ಪ್ರತಿಯೊಂದು ಕುಟುಂಬದ ವ್ಯವಹಾರದ ವಾರ್ಷಿಕ ವರದಿಯನ್ನು ಒಪ್ಪಿಸಿ ಏಳು ದಿನಗಳ ನಂತರ ತಿರುಗಿ ಭೂಮಿಗೆ ಬರುವನೆಂದು ತಿಳಿಯುತ್ತಾರೆ.

(೨) "ಜೈನ್-ಶೆಂಗ್" ಎಂದು ಒಂದು ಗೌರವದ ಬಿರುದು. "ಸಿಯುತ್ಸಾಯಿ"ಗೆ ಸರಿಯಾದದ್ದು. ಆದರೆ "ಸಿಯುತ್ಸಾಯಿ" ಬಿರುದು ಪಂಡಿತರಾದವರಿಗೆ ಮಾತ್ರ ಕೊಡಲಾಗುತ್ತದೆ.

ಆತನಲ್ಲಿ ಏನೂ ಬದಲಾವಣೆಯಾದಂತೆ ಕಾಣಲಿಲ್ಲ. ವಯಸ್ಸೇನೊ ಹೆಚ್ಚಾಗಿದೆ. ಆದರೂ ಇನ್ನೂ ಕಲ್ಲಿಮೀಸೆ ಮೂಡಿಲ್ಲ. ಪರಸ್ಪರ ನಮಸ್ಕಾರ ವಾದ ಮೇಲೆ "ಕ್ಷೇಮವೆ?" ಎಂದುದಕ್ಕೆ ಆತ ನಾನು ವೈಬಿಟ್ಟಿ ದ್ದೇನೆಂದು ಅಂದ. ಕೂಡಲೆ "ಹೊಸ ಪಕ್ಷ" ವನ್ನು ಜರೆಯಲು ಆರಂಭ ಮಾಡಿದ 'ಹೊಸ ಪಕ್ಷ' ವೆಂದರೆ ಅವನಿಗೆ 'ಕಾಂಗ್-ಯೂ-ವೈ'ಯ (೧) ವಿಚಾರವೆಂದೇ ನಂಬುಗೆಯಲ್ಲದೆ "ಹೊಸ ವಿಚಾರವಾದ" ಎಂಬುದನ್ನು ಅರಿಯ. ಆ ವಿಷಯವನ್ನು ಇನ್ನೂ ಅವನು ಕೇಳಿರಲಿಕ್ಕೂ ಇಲ್ಲ. ನಮ್ಮಿಬ್ಬ ರಿಗೂ ಈ ವಿಷಯದಲ್ಲಿ ಹೊಂದಿಕೆಯೆ ಇಲ್ಲದ್ದರಿಂದ ನಾನು ನನ್ನ ಓದಿನಲ್ಲಿ ಮಗ್ನನಾಗಿಬಿಟ್ಟೆ.

ಮರುದಿನ ನಾನು ಎದ್ದಾಗ ಹೊತ್ತೇರಿತ್ತು. ಉಪಹಾರ ಮಾಡಿ ಕೆಲವು ಆಪ್ತರನ್ನೂ ಮಿತ್ರರನ್ನೂ ಕಾಣಲು ಹೋದೆ. ಮರುದಿನವೂ ಹಾಗೆಯೆ. ಅದರ ಮರುದಿನವೂ ಅಂತೆಯೆ. ಯಾರಲ್ಲಿಯೂ ಏನೂ ಬದಲು ತೋರದು. ಪ್ರತಿಯೊಬ್ಬರೂ ಸ್ವಲ್ಪ ದೊಡ್ಡವರಾಗಿದ್ದಾರೆ ಅಷ್ಟೆ. ಹೋದ ಲ್ಲೆಲ್ಲ ಹೊಸವರ್ಷದ 'ಹರಕೆ'ಯ ಸಿದ್ಧತೆಗಳೇ ನಡೆದಿವೆ. 'ಲೋಚಿಂಗ' ದಲ್ಲಿ ವರ್ಷಾರಂಭದ ಉತ್ಸವ ವಿಶೇಷವಾಗಿರುವದು. ಪ್ರತಿಯೊಬ್ಬನೂ ಶುಭಾ-ಕಾಂಕ್ಷೆಯಲ್ಲಿ, ಪ್ರಾರ್ಥನೆಯಲ್ಲಿ, ಮನಸ್ಸು ಹಾಕುವನು. 'ದೈವ ದೇವನ' ಹರಕೆಯನ್ನು ಹೊಸ ವರ್ಷಕ್ಕಾಗಿ ಸಂಪಾದಿಸಲು ಅದೆಷ್ಟೊ ಸಲ ಪೊಡಮಡುತ್ತಾನೆ. ನೂರಾರು ಕೋಳಿ, ಬಾತುಗೋಳಿ ಕುರಿಗಳು ಕೊಲ್ಲಲ್ಪಡುತ್ತವೆ. ಅಡಿಗೆಯ ಸಿದ್ಧತೆಗಾಗಿ ಬಿಸಿನೀರಿನಲ್ಲಿ ಅದ್ದಿ ಕೆಂಪಾದ ಕೈಗಳಿಂದ ಓಡಾಡುವ ಹೆಂಗಸರ ಗದ್ದಲವೇ ಗದ್ದಲ. ಬೇಯಿಸಿದ ಮಾಂಸ ವನ್ನು ತಾಟಿನಲ್ಲಿ ಹಾಕಿ ಜಗುಲಿಯ ಮೇಲಿಟ್ಟು ಅವುಗಳಲ್ಲಿ ಅಟ್ಟುಗಗಳನ್ನು (Chop-sticks) ಚುಚ್ಚುವರು. ಆರನೆಯ ಪ್ರಹರಕ್ಕೆ ಬಲಿಸಮರ್ಪಣೆ ಯಾಗುವದು. ಆಗ ಎಲ್ಲ ಗಂಡಸರೂ (ಹೆಂಗಸರಿಗೆ ಪ್ರವೇಶವಿಲ್ಲ) ಹರಕೆ ಗಳನ್ನೀಯುವ ಎಲ್ಲ ದೇವತೆಗಳನ್ನೂ ಪ್ರಾರ್ಥಿಸುವರು. ಊದು ಹಾಕು

---

(೧) ಮಂಚು ರಾಜವಂಶದ ಕೊನೆಯ ಭಾಗದಲ್ಲಿ "ಕು-ಅಂಗ್‌ಸು" ಚಕ್ರ ವರ್ತಿಯ ಕಾಲದಲ್ಲಿ ಸುಧಾರಣಾ ಚಳುವಳಿಯನ್ನು ಹೂಡಿದ ಪ್ರಧಾನಿ 'ಕಾಂಗ್ ಯೂವೈ' ದವಾಗರ್ ಚಕ್ರವರ್ತಿನಿ ಈ ಚಳುವಳಿಯನ್ನು ಬಗ್ಗುಬಡೆದಳು.

ವರು. ಮೇಣಬತ್ತಿಗಳನ್ನು ಹಚ್ಚುವರು. ಅದಾದ ಮೇಲೆ ಮದ್ದು ಸುಡುವದು.

ಪ್ರತಿ ವರ್ಷವೂ ಪ್ರತಿ ಮನೆಗೂ ಇದೇ ರೀತಿ. ಬಲಿ, ಊದು, ಮದ್ದು, ಕೊಳ್ಳದಷ್ಟು ಬಡವರಿದ್ದರೆ ಮಾತ್ರ ನಿರ್ವಾಹವಿಲ್ಲ. ಆದರೆ ವರ್ಷವರ್ಷಕ್ಕೆ ವ್ಯತ್ಯಾಸವೇನೂ ಇಲ್ಲ. ಆಕಾಶದಲ್ಲಿ ಎಲ್ಲೆಡೆಗೆ ಹೊಗೆ ಮುಸುಕು. ಇಳಿ ಹೊತ್ತಿನಲ್ಲಿಯೇ ಹಿಮ ಬೀಳುವದು. ಹಿಮದ ತುಣುಕುಗಳು ಬದರಿ ಹೂಗಳಂತೆ ಉದುರುತ್ತಿರುವವು. ಎಲ್ಲವೂ ಗಡಿಬಿಡಿ, ಗೊಂದಲ. ನಾನು ಮನೆ ಮುಟ್ಟುವಾಗ ಮನೆಯ ಹಂಚುಗಳಿಗೂ ಸುಣ್ಣ ಹಚ್ಚಿದೆ. ಒಳಗೆ ನನ್ನ ಕೋಣೆಯೂ ಸ್ವಚ್ಛವಾಗಿ ಬೆಳಗುತ್ತಿದೆ. ಎದುರು ಗೋಡೆಗೆ ಒಂದು ಹಲಗೆಗೆ, 'ದೀರ್ಘಾಯು' ಎಂದು ಕಡುಗೆಂಪಿನಲ್ಲಿ ಬರೆದ ಪಟ ತೂಗು ಹಾಕಿದೆ. ಹೊರಗೆ ಹಿಮದಿಂದ ಪ್ರತಿಬಿಂಬಿತವಾದ ಬೆಳಕು ಅಲ್ಲಿ ಬಿದ್ದು ಮತ್ತಷ್ಟು ಎದ್ದು ಕಾಣುತ್ತದೆ. ಚೆನ್-ತುವಾನ್-ಲಾವೊ-ಸೋನ ದಂತಕತೆಗೆ ಅದು ಸಂಬಂಧಿಸಿದ್ದು ಎಂದು ತಿಳಿಯುತ್ತದೆ. ಅದರ ಹಾಳೆಯ ಸುರಳಿಯೊಂದು ಸಡಿಲಾಗಿ ಮೇಜಿನ ಮೇಲೆ ಬಿದ್ದಿದೆ. ಮತ್ತೊಂದು ಬಿಚ್ಚಿದ್ದು ಅಲ್ಲಿ "ಕಾರ್ಯಕಾರಣವನ್ನು ಚನ್ನಾಗಿ ವಿಚಾರಿಸು, ಸೌಮ್ಯವಾಗಿರು, ಮನಸ್ಸು ಮತ್ತು ನಡೆ ಮೃದುವಾಗಿರಲಿ" ಎಂದು ನನ್ನನ್ನು ಎಚ್ಚರಿಸುವಂತಿದೆ. ಕಿಡಕಿಯ ಕೆಳಗೆ ಚಿಕ್ಕ ಮೇಜಿನ ಮೇಲೆ 'ಕಾಂಗ್-ಶಿ' ಕೋಶವೂ 'ಆಧುನಿಕ ವಿಚಾರಗಳು' ಎಂಬ ಸಂಗ್ರಹಿತ ಸಟೀಕಾ-ಗ್ರಂಥವೂ, ಮತ್ತು 'ನಾಲ್ಕು ಹೊತ್ತಿಗೆ'ಗಳೂ ಅವೆ. ಎಷ್ಟು ಉದ್ವೇಗಕರ!

ನಾಳೆಯೆ ನಗರಕ್ಕೆ ತಿರುಗಿ ಹೋಗಬೇಕೆಂದು ನಿಶ್ಚಯಿಸಿಯೂ ಆಯಿತು.

* * * *

ಶಿಯಾಂಗ್-ಲಿನ್-ಸಾವೋಳನ್ನು ಕಂಡ ಪ್ರಸಂಗವು ನನ್ನನ್ನು ಬಹಳ ಕೊರೆಯುತ್ತಿದೆ. ಇಂದು ಇಳಿಹೊತ್ತಿನಲ್ಲಿ ನಾನು ನಗರದ ಪೂರ್ವದ ಕೊನೆಗಿರುವ ಒಬ್ಬ ಮಿತ್ರನನ್ನು ಕಾಣಲು ಹೋಗಿದ್ದೆ. ತಿರುಗಿ ಬರುವಾಗ ಕಾಲುವೆಯಂಚಿನಲ್ಲಿ ಅವಳ ಭೆಟ್ಟಿಯಾಯಿತು. ಅವಳು ಕಣ್ಣುಬಿಟ್ಟು ನೋಡುವ ಆ ವಿಲಕ್ಷಣವಾದ ರೀತಿಯಿಂದ ಅವಳು ನನ್ನನ್ನು ಹುಡುಕಿಕೊಂಡು

ಬರುತ್ತಿದ್ದಾಳೆಂದು ತಿಳಿಯುವಂತಿತ್ತು. ನಾನೂ ನಿಂತೆ. ಲೋಚಿಂಗದಲ್ಲಿಯ ಉಳಿದ ಜನರಲ್ಲಿ ವಿಶೇಷ ಬದಲು ಕಾಣಿಸಲಿಲ್ಲವಾದರೂ, ಶಿಯಾಂಗ್-ಲಿನ್-ಸಾವ್ಹೊಳು ಮಾತ್ರ ಮುಂಚಿನಂತಿರಲಿಲ್ಲ. ತಲೆ ತುಂಬಾ ಬೆಳ್ಳಗಾಗಿದೆ. ಮುಖ ಬತ್ತಿದೆ. ಕಪ್ಪುಹಿಡಿದು, ನೋಡಿದರೆ ಭಯವಾಗುವಂತಿದೆ. ಆವಳು ಬಹು ಬಾಡಿ ದೀನಳಾದಂತೆ ಕಂಡಳಲ್ಲದೆ ಇನ್ನೂ ನಾಲ್ವತ್ತಾಗದ ಹೆಂಗಸಿನ ಲಕ್ಷಣವೇ ಇರಲಿಲ್ಲ. ಕಟ್ಟಿಗೆಯ ಗೊಂಬೆಯ ಮುಖದಲ್ಲಿ ತೀವ್ರ ವೇದನೆಯನ್ನು ಕೊರೆದಂತಿತ್ತು. ಕಾಂತಿಹೀನವಾದ ಕಣ್ಣುಗುಡ್ಡೆಗಳ ಸರಿದಾಡುವಿಕೆಯಿಂದ ಮಾತ್ರ ಅವಳಲ್ಲಿ ಉಸಿರಿದೆ ಎಂದು ಹೇಳಬಹುದಾಗಿತ್ತು. ಅವಳ ಒಂದು ಕೈಯಲ್ಲಿ ಬರಿದಾದ ಬುಟ್ಟಿ. ಅದರಲ್ಲಿ ಒಂದು ಒಡೆದ ಭಿಕ್ಷಾಪಾತ್ರೆ. ಬಿದಿರುಕೋಲನ್ನು ಊರಿಕೊಂಡು ನಿಂತಿದ್ದಳು. ಅವಳು ಭಿಕ್ಷುಕೆಯಾಗಿರುವಳೆಂಬುದು ಒಡೆದು ಕಾಣುತ್ತಿತ್ತು.

ಅವಳು ದುಡ್ಡು ಕೇಳಬಹುದೆಂದು ನಾನು ಯೋಚಿಸುತ್ತಿದ್ದೆ.

" ಅಂತೂ,—ತಿರುಗಿ ಬಂದದ್ದೆ ? "

" ಹೌದು. "

" ಬಹಳ ಒಳ್ಳೇದಾಯಿತು; ಮತ್ತು ಯೋಗ್ಯ ಸಮಯಕ್ಕೆ ಪಂಡಿತನಾಗಿರುವಿ ತಾನೆ! ದೇಶಗಳನ್ನು ಕಂಡಿರುವೆ ತಾನೆ? ಅನುಭವಿಕ ಮತ್ತು ಜ್ಞಾನಿಯಾಗಿರುವಿಯಲ್ಲವೆ! " ಅವಳ ಬತ್ತಿದ ಕಣ್ಣುಗಳಲ್ಲಿ ಬೆಳಕು ಕಂಡಿತು. " ನಿನಗೆ ಒಂದು ಮಾತು ಕೇಳಬೇಕಾಗಿದೆ; ಹೇಳುವಿಯಾ?" ಸಾವಿರ ಸಲ ಯೋಚಿಸಿದರೂ ಅವಳೇನು ಕೇಳಬೇಕೆಂದಿರುವಳೆಂಬುದು ನನಗೆ ತಿಳಿಯುವದು ಅಸಾಧ್ಯವಾಗಿತ್ತು. ಏನು ಹೇಳುವದಕ್ಕೂ ತೋರದೆ ಚಕಿತನಾಗಿ ಸುಮ್ಮನೆ ನಿಂತೆ.

ಅವಳು ಹತ್ತಿರಕ್ಕೆ ಬಂದು ಕಿರುದನಿಯಲ್ಲಿ ಏನೊ ಗುಟ್ಟನ್ನು ಆತುರಳಾಗಿ ಹೇಳುವಂತೆ ನುಡಿದಳು.

" ಅದು ಹೀಗೆ: ಮನುಷ್ಯ ಸತ್ತ ಮೇಲೆ ಆತ್ಮವೆಂಬುದು ಒಂದು ಇರುವದೆ ? "

ನನಗೆ ಮೈನಡುಗು. ಅವಳ ನೋಟ ಮುಳ್ಳಿನಂತೆ ಚುಚ್ಚುತ್ತಿತ್ತು. ಎಂಥ ವಿಚಿತ್ರ ಪ್ರಶ್ನೆ! ಶಿಕ್ಷಕ ಬದಿಯಲ್ಲಿ ನಿಂತು ವಿದ್ಯಾರ್ಥಿಗೆ ಒಮ್ಮೆಲೆ

ಪರೀಕ್ಷೆ ಮಾಡಿದಂತೆ! "ಆತ್ಮ"ವೆಂಬ ವಸ್ತು ಇರುವದೇ? ಎಂಬ ವಿಚಾರ ನನಗೆ ಎಂದೂ ತಲೆ ತುರಿಸಿಕೊಳ್ಳಲು ಹಚ್ಚಿರಲಿಲ್ಲ. ಮತ್ತು ಅದರ ಬಗ್ಗೆ ಸ್ವಲ್ಪ ಕೂಡ ಯೋಚಿಸಿರಲಿಲ್ಲ. ಇನ್ನು ಉತ್ತರ ಕೊಡುವದು ಹೇಗೆ? ಆ ಕ್ಷಣದಲ್ಲಿ ನನಗೆ ಲೋಕದಲ್ಲಿ ಅನೇಕ ಜನರು ಭೂತ-ಪಿಶಾಚಿಗಳನ್ನು ನಂಬುತ್ತಿರುವದೂ ಇವಳೂ ಹಾಗೆಯೆ ಏನೊ ಭಾವಿಸಿರಬೇಕೆಂದೂ ಹೊಳೆಯಿತು. 'ಇದ್ದರೂ ಇರಬಹುದು' ಎಂದು ಹೇಳಬೇಕೆಂದೆನಿಸಿತು. ಮತ್ತೆ ಅವಳಿಗೇಕೆ ಸಂಶಯದ ಗೊಂದಲವನ್ನುಂಟುಮಾಡುವದು? ಪಾಪ, ಅದರಿಂದ ಆಶೆಯಿಟ್ಟುಕೊಳ್ಳುವದಿದ್ದರೆ ಏಕೆ ಬೇಡ? ಜೀವನಯಾತ್ರೆಯ ಕೊನೆಗೆ, ಬಂದಿರುವ ಅವಳನ್ನು ನಾನೇಕೆ ಹೆಚ್ಚು ನೋಯಿಸಬೇಕು! ಅವಳಿಗಾಗಿ "ಹೌದು" ಎನ್ನುವದೇ ಒಳಿತು

ನಾನು ತಡವರಿಸುತ್ತ "ಹೌದು, ಇದ್ದಿರಬೇಕು, ಎಂದು ಅನಿಸುತ್ತದೆ." ಎಂದೆ.

"ಹಾಗಾದರೆ 'ನರಕ'ವೂ ಇರಬೇಕಲ್ಲ?"

"ಏನು! ನರಕವೆ? ಇದೇನು ಪೇಚಾಟ! ಏನಾದರೂ ಹೇಳದೆ ವಿಧಿಯಿಲ್ಲವೆಂದು— "ನರಕವೆ? ಹೌದು. ಈ ನ್ಯಾಯ ಒಪ್ಪುವದಾದರೆ ಅದೂ ಇರಲೇಬೇಕು. ಆದರೆ....ಮತ್ತೆ....ಇರಲಿಕ್ಕೂ ಇಲ್ಲ. ಅದರಿಂದ ಆಗಲೇಬೇಕಾದುದೇನು?" ಎಂದೆ.

"ಹಾಗಾದರೆ ಒಂದು ಕುಟುಂಬದ ಸತ್ತ ಜೀವಿಗಳು ಈ ನರಕದಲ್ಲಿ ಮತ್ತೆ ಭೆಟ್ಟಿಯಾಗುವರೆ?"

"ಹಾಂ! ಒಬ್ಬರಿಗೊಬ್ಬರು ಕೂಡುವದೆ?" ನಾನು ಹುಚ್ಚನಂತಾದೆ. ನನ್ನ ಜ್ಞಾನಪಾಂಡಿತ್ಯಗಳೆಲ್ಲ ಅವಳೆದುರಿಗೆ ವ್ಯರ್ಥವಾದುವು. ಮೂರು ಸರಳ ಪ್ರಶ್ನೆಗಳಿಗೆ ಉತ್ತರ ಹೇಳುವದು ನನ್ನಿಂದಾಗದೆನಿಸಿತು. ಮೊದಲು ಹೇಳಿದ್ದೆಲ್ಲ ಸುಳ್ಳು ಎಂದು ಹೇಳಿ ಈ ಗೊಂದಲ ತಪ್ಪಿಸಿಕೊಳ್ಳಬೇಕೆನಿಸಿತು. ಆದರೆ ಅವಳ ಆ ತೀಕ್ಷ್ಣ ಮತ್ತು ವೇದನಾಮಯ ನೋಟದಿಂದ ಸುಲಭವಾಗಿ ಪಾರಾಗುವದು ಸಾಧ್ಯವಿರಲಿಲ್ಲ.

"ಎಂದರೆ—ನಿಶ್ಚಯವಾಗಿ ನಾನು ಏನೂ ಹೇಳಲಾರೆ. ಮರಣಾ

ನಂತರ ಆತ್ಮವೆಂಬುದು ಇರುವದೊ ಇಲ್ಲವೊ ದೃಢವಾಗಿ ಹೇಳುವದು ಸಾಧ್ಯವಿಲ್ಲ. ”

ಆವಳೂ ಮುಂದೆ ಆಗ್ರಹಪಡಲಿಲ್ಲ. ಅವಳು ಸುಮ್ಮನಾದುದನ್ನು ಕಂಡು ಮೆಲ್ಲನೆ ನಾನು ಜಾರಿದೆ. ವೇಗವಾಗಿ ಹೆಜ್ಜೆಹಾಕುತ್ತ ‘ ನಾಲ್ಕನೆ ದೊಡ್ಡಪ್ಪ ’ನ ಮನೆಯ ಕಡೆಗೆ ನಡೆದೆ. ಮನಸ್ಸು ತುಂಬಾ ಭಾರವಾಗಿತ್ತು. ನನ್ನ ಉತ್ತರದಿಂದ ಅವಳ ಮೇಲೆ ಎಲ್ಲಿ ದುಷ್ಪರಿಣಾಮವಾಗುವದೊ ಎಂಬ ವಿಚಾರ ನನ್ನನ್ನು ಪೀಡಿಸುತ್ತಿತ್ತು. ಹೊಸ ವರುಷದ ಹರಕೆಯ ಸಂಭ್ರಮದಲ್ಲಿ ಎಲ್ಲರೂ ಇರುವಾಗ ಅವಳು ಒಬ್ಬಳೇ ಏಕೆ ಹೀಗೆ ಕೊರಗುತ್ತಿರಬೇಕೆಂಬುದೆ ತಿಳಿಯದು. ಅವಳ ಮನಸ್ಸನ್ನು ಆವುದೊ ಬೇರೆ ವಿಚಾರ ಸುತ್ತುತ್ತಿರಬೇಕು. ಅವಳಿಗೆ ಇತ್ತೀಚೆಗೆ ಏನೋ ವಿಪತ್ತು ಒದಗಿರಬೇಕು. ಹಾಗಿದ್ದರೆ ನನ್ನ ಉತ್ತರಗಳಿಂದ ಏನಾದರೂ ಆದರೆ ಅದರ ಜವಾಬದಾರಿ.... ಏತರದು? ನಡೆದ ಪ್ರಸಂಗಕ್ಕೆ ನನಗೇ ನಗು ಬಂತು, ನನ್ನದು ಕಡ್ಡಿಯನ್ನು ಗುಡ್ಡವನ್ನಾಗಿ ತಿಳಿಯುವ ಸ್ವಭಾವ ಎಂದುಕೊಂಡು. ಮನೋವಿಜ್ಞಾನಿಗಳು ನನಗೆ ತಲೆ ಸರಿಯಾಗಿಲ್ಲವೆನ್ನಬಹುದು. ಏನೇ ಆದರೂ ನಾನಂತೂ “ ನಿಶ್ಚಿತವಾಗಿ ಹೇಳಲು ಬರುವದಿಲ್ಲ ” ಎಂದು ಸ್ಪಷ್ಟವಾಗಿಯೆ ತಿಳಿಸಿದ್ದನಲ್ಲವೆ? ನನ್ನ ಎಲ್ಲ ಮಾತುಗಳು ತಪ್ಪು ಎಂದರೂ, ಅವಳಿಗೆ ಮತ್ತೇನಾದರೂ ದುರ್ಘಟನೆ ಒದಗಿದರೂ ನಾನಂತೂ ಅದಕ್ಕೆ ಜವಾಬುದಾರನಲ್ಲವಷ್ಟೆ ?

* * * *

“ ನಿಶ್ಚಿತವಾಗಿ ಹೇಳಲು ಬರುವದಿಲ್ಲ ” ಎನ್ನುವದು ಪಾರಾಗಲು ಒಳ್ಳೆಯ ಮಾತು. ಹಿಂದುಮುಂದಿನ ವಿಚಾರವಿಲ್ಲದ ಯುವಕರು ಎರಡನೆಯವರ ವಿಚಾರದಲ್ಲಿ ‘ ಇದು ಹೀಗೆಯೇ ’ ಎಂದು ದಿಟ್ಟತನದಿಂದ ನುಡಿದುಬಿಡುವರು. ಆದರೆ ಜವಾಬುದಾರಿ ಹೊತ್ತ ಅಧಿಕಾರಿಗಳೂ ಡಾಕ್ಟರರೂ* ಮಾತ್ರ ತಮ್ಮ ಮಾತುಗಳನ್ನು ತೂಗಿ ನುಡಿಯುವರು; ಏಕೆಂದರೆ ಮುಂದೆ ವಿಪರೀತವಾದರೆ ತಮ್ಮ ಅಭಿಪ್ರಾಯಕ್ಕೆ ಹೊಣೆ ಹತ್ತಬಾರದೆಂದು.

---

* ಲುಕಶೂ-ನರು ಮೊದಲು ಜಪಾನದಲ್ಲಿ ವೈದ್ಯಕೀ ಕಲಿತು ಡಾಕ್ಟರರಾಗಿದ್ದರು.

ಆದುದರಿಂದ "ನಿಶ್ಚಿತವಾಗಿ ಹೇಳಲು ಬರುವದಿಲ್ಲ" ಎನ್ನುವದೇ ಯೋಗ್ಯವಾದ ಹಾದಿ. ಮುಂದೆ ಯಾವ ತೊಂದರೆಯೂ ಇಲ್ಲ. ಆ ತಿರುಕ ಹೆಂಗಸಿನೊಡನೆ ನಡೆದ ಪ್ರಸಂಗದಿಂದಂತೂ ಈ ಮಾತಿನ ರೂಢಿಯಿಡುವದೇ ಒಳ್ಳೆಯದೆನಿಸುತ್ತದೆ. ಯಾಕಂದರೆ ಇಂಥ ವಿಷಯಗಳಲ್ಲಿಯಂತೂ ಸಂಶಯದಲ್ಲಿಡುವದೇ ಜಾಣತನದ ಪರಮಾವಧಿಯೆನಿಸುವದು.

ಏನೇ ಆದರೂ ನಡೆದ ಘಟನೆಯಿಂದ ನನ್ನ ತಲೆ ಕೆಡದಿರಲಿಲ್ಲ. ರಾತ್ರಿಯೆಲ್ಲ ನಿದ್ದೆಯಿಲ್ಲ. ಹೊತ್ತೇರಿ ಎದ್ದರೂ ಮನಸ್ಸು ಇನ್ನೂ ಅದೇ ವಿಚಾರದಿಂದ ಭಾರವಾಗಿದೆ. ಅದು ದೈವಗತಿಯ ಒಂದು ದುರ್ವಿಲಾಸವೊ ಎನಿಸುತ್ತದೆ. ಹೊರಗೆ ಹಗಲೂ ಅಷ್ಟು ಚಕಿಚಕಿತವಾಗಿಲ್ಲ. ಇನ್ನೂ ಹಿಮ ತುಣುಕು ತುಣುಕಾಗಿ ಬೀಳುತ್ತದೆ. ಕೋಣೆಯಲ್ಲಿ ಕುಂತರೆ ಈ ಮನೋವ್ಯಾಧಿ ಇನ್ನೂ ಹೆಚ್ಚುವದು. ನಾನಿನ್ನು ನಾಳೆ ನಗರಕ್ಕೆ ಹೊರಡಲೇಬೇಕು........ ........ಆದರೆ ಫೂಶಿಂಗ್‌ಲೋದಲ್ಲಿ ಇನ್ನೂ ರುಚಿಯಾಗಿ ಬೇಯಿಸಿದ ಮೀನದ ತಿಳಿಅನ್ನು ತಿನ್ನಲೇ ಇಲ್ಲ, ಒಂದು ಡಾಲರಕ್ಕೆ ಒಂದು ತಾಟುತುಂಬ ಕೊಡುವರಂತೆ. ಎಷ್ಟು ಅಗ್ಗ! ಈಗ ಬೆಲೆ ಏರಿದೆಯೆ? ಬಾಲ್ಯದ ಗೆಳೆಯರೆಲ್ಲ ಆಕಾಶದಲ್ಲಿಯ ಮೋಡಗಳಂತೆ ಅತ್ತಿತ್ತ ಹರಿದು ಹೋಗಿದ್ದಾರೆ. ಒಬ್ಬನೆಯಾದರೂ ಚಿಂತೆಯಿಲ್ಲ; ಲೋಚಿಂಗದಲ್ಲಿಯ ಮೀನದ ತಿಳಲನ್ನು ರುಚಿ ನೋಡಲೇಬೇಕು............ಏನೆ ಆಗಲಿ ನಾಳೆ ತಿರುಗಿ ಹೋಗಬೇಕು............

ಅದೆಷ್ಟೊ ಸಲ ನಾನು ಊಹಿಸಿದಂತೆಯೆ ನನ್ನ ಇಚ್ಛೆಗೆ ವಿರುದ್ಧವಾಗಿ ಸಂಗತಿಗಳು ಜರುಗಿವೆ. ಅಸಂಭವವೆಂದು ಯಾವುದೂ ನನಗೆ ಅನಿಸಿಲ್ಲ. ಆದುದರಿಂದ ಈ ಘಟನೆಯೂ ನನಗೆ ಅಷ್ಟೇನು ವಿಚಿತ್ರವೆನಿಸಲಿಲ್ಲ. ಆದರೂ ಸಂಜೆಯ ಮುಂದೆ ಒಳಗೆ ನಡುಮನೆಯಲ್ಲಿ ಮನೆಯ ಎಲ್ಲ ಜನ ನೆರೆದಿದ್ದಾರೆ. ಅವರ ಮಾತಿನ ಎಳೆಗಳಿಂದ ಯಾವದೊ ಒಂದು ಆಕಸ್ಮಿಕವಾಗಿ ಒದಗಿದ ಸಂಗತಿಯನ್ನು ಅವರು ಎಷ್ಟೊ ಮನಸ್ಸಿಗೆ ಹಚ್ಚಿಕೊಳ್ಳದೆ ಮಾತಾಡುತ್ತಿದ್ದರೆಂದು ನನಗೆ ಹೊಳೆಯಿತು. ಅಷ್ಟರಲ್ಲಿ ಎಲ್ಲ ಮೌನ! 'ನಾಲ್ಕನೆಯ ದೊಡ್ಡಪ್ಪ' ಮಾತ್ರ ಆ ಗೋಡೆಯಿಂದ ಈ ಗೋಡೆಗೆ ಹೆಜ್ಜೆಹಾಕುತ್ತ, ಹೆಜ್ಜೆಯ ಸಪ್ಪಳವನ್ನು ಮೀರಿಸಿ ಏನೋ ಅನ್ನುತ್ತಾನೆ.

" ಒಂದು ದಿನ ಮೊದಲೂ ಅಲ್ಲ; ಒಂದು ದಿನ ನಂತರವೂ ಅಲ್ಲ, ವರ್ಷದ ಇದೇ ದಿನ, ಅಂದು ಅವಳು ಹಾಗೆ ನಿಶ್ಚಯಿಸಿದ್ದು. ಅವಳು ಇಷ್ಟರಿಂದಲೇ ಮನುಷ್ಯೇತರಗತಿಯನ್ನು ಮೀರಿದವಳೆಂದು ಹೇಳಬಹುದು!" ಈ ಮಾತು ಗಳಗಲ್ಲಿ ನನಗೆ ಏನೊ ವಿಶೇಷ ಅರ್ಥವಿರುವಂತೆ ತೋರಿತು. ನನ್ನ ಕುತೂಹಲ ಕೆದರಿತು. ಹೊರಗೆ ಬಂದು ಆ ಕೋಣೆಯತ್ತ ನೋಡಿದೆ. ಎಲ್ಲರೂ ಹೋಗಿಬಿಟ್ಟಿದ್ದಾರೆ. ನನ್ನ ಆತುರವನ್ನು ಹತ್ತಿಕ್ಕಬೇಕಾಯಿತು. ಸೇವಕನು ಚಹದ ಪಾತ್ರೆಯನ್ನು ಬಿಸಿನೀರಿನಿಂದ ತುಂಬಲು ಬರುವ ದಾರಿ ಕಾಯುತ್ತಿದ್ದೆ. ಆ ವರೆಗೂ ನನ್ನ ಸಂಶಯಗಳನ್ನು ದೃಢಪಡಿಸಲು ಬರುವಂತಿರಲಿಲ್ಲ

" ಆಗಲೆ, ಯಾರನ್ನು ಕುರಿತು ನಾಲ್ಕನೆಯ ದೊಡ್ಡಪ್ಪ ಒದರಾಡುತ್ತಿದ್ದ ?"

" ಶಿಯಾಂಗ್-ಲಿನ್-ಸಾವೊಳ ವಿಷಯವಲ್ಲದೆ ಮತ್ತೇನು ?" ಎಂದು ಆತ ನಮ್ಮ ಚುರುಕಾದ ಚಿಕ್ಕ ನುಡಿಯಲ್ಲಿ ಹೇಳಿದ.

" ಅವಳಿಗೇನಾಯಿತು ?" ಎಂದು ನಾನು ಆತುರನಾಗಿ ಕೇಳಿದೆ.

" ವಯಸ್ಸು ತೀರಿತು !"*

" ಸತ್ತಳೆ ?" ನನಗೆ ಎದೆ ಹಿಡಿದಂತಾಯಿತು. ಮೋರೆ ಬಿಸಿಯೇರಿತು. ಆದರೆ ಅವನಿಗೆ ಅದು ತಿಳಿಯದು ಅವನು ತಲೆಯೆತ್ತಿ ನೋಡಲೇ ಇಲ್ಲ. ಮುಂದಿನ ವಿಷಯ ತಿಳಿದುಕೊಳ್ಳಲು ಉಮ್ಮಳ ತಡೆದುಕೊಂಡು ಮತ್ತೆ ಕೇಳಿದೆ:

" ಅವಳು ಎಂದು ಸತ್ತಳು ?"

" ಎಂದೆ ? ನಿನ್ನೆ ರಾತ್ರಿ—ಅಥವಾ ಇವತ್ತು ಬೆಳಗ್ಗೆ ಇರಬಹುದು.

---

* ಈ ಕಾಲದಲ್ಲಿ ಸಾಯು ಅಥವಾ ಅದರ ಸಮಾನಾರ್ಥಕ ಶಬ್ದಗಳನ್ನು ಹೇಳಬಾರದೆನ್ನುವರು. " ವಯಸ್ಸು ಆಯಿತು " ಇತ್ಯಾದಿ ಪರ್ಯಾಯವಾಗಿ ಹೇಳುವರು ರೂಢಿ ಸಾಮಾನ್ಯವಾಗಿ ಚೀನಿಯರು ಇತ್ತರೆಂದು ಹೇಳುವಾಗ " ಇಲ್ಲಿಲ್ಲ " ಅಥವಾ " ಹೊರಟು ಹೋದರು " ಎಂದು ಮುಚ್ಚಾಗಿ ಹೇಳುತ್ತಾರೆ

ನಾನು ನಿಶ್ಚಿತವಾಗಿ ಹೇಳಲಾರೆ ”

“ ಏನಾಗಿತ್ತು ? ”

“ ಏನಾಗಿತ್ತು ? ಏನಾಗಬೇಕು. ಬಡತನದ ಹೊಟ್ಟೆಯುರಿಯಿಂದ ಸುಟ್ಟು ಸತ್ತಿರಬೇಕು, ಮತ್ತೇನು ? ” ಅವನ ಮಾತಿನಲ್ಲಿ ಯಾವ ಮುಚ್ಚು ಮರೆಯೂ ಇಲ್ಲ. ನನ್ನ ಕಡೆಗೆ ಕಣ್ಣೆತ್ತದೆ ಅವನು ಹೋಗಿಯೂಬಿಟ್ಟ.

ನನಗೇನೊ ಮೊದಲು ಬಹು ಭಯವಾಯಿತು. ಆದರೆ ಆಗಬೇಕಾದದ್ದೆ ಆಗಿದೆ. ನಾನು ಈ ವಿಷಯ ಹಚ್ಚಿಕೊಳ್ಳಬೇಕಾದುದು ಕೇವಲ ಒಂದು ದೈವಘಟನೆ ಎಂದು ಮುಂತಾಗಿ ಸಮಾಧಾನ ಹಚ್ಚಿಕೊಂಡೆ. ಮತ್ತೆ ಮತ್ತೆ ನಾನು ಹೇಳಿದ “ ನಿಶ್ಚಿತವಾಗಿ ಹೇಳಲು ಬರುವದಿಲ್ಲ ” ಎಂಬ ಮಾತನ್ನು ಮನಕ್ಕೆ ತಂದುಕೊಂಡು ನನ್ನದೇನೂ ತಪ್ಪಿಲ್ಲವೆಂದುಕೊಂಡೆ. ಸೇವಕನೂ “ ಬಡತನದಿಂದ ಹಸಿವೆಯ ಕಿಚ್ಚಿನಿಂದ ಸತ್ತಳೆಂದನಲ್ಲವೆ ?” ಆದರೂ ಇನ್ನೂ ಒಮ್ಮೊಮ್ಮೆ ತಪ್ಪಿನ ಮುಳ್ಳು ನನ್ನ ಮಗ್ಗುಲನ್ನು ಚುಚ್ಚಿದಂತಾಗುತ್ತದೆ. ಗಂಭೀರನಾದ ನಾಲ್ಕನೆಯ ದೊಡ್ಡಪ್ಪನ ಹತ್ತಿರ ಕುಳಿತಾಗ ಶಿಯಾಂಗ್-ಲಿನ್-ಸಾವೊಳ ವಿಷಯ ತೆಗೆಯಲೆ ಎನಿಸುತ್ತದೆ. ಆದರೆ ಹೇಗೆ ಸುರುವು ಮಾಡುವದು ? ಅವನಿನ್ನೂ ಧಾರ್ಮಿಕ ನಿರ್ಬಂಧಗಳಲ್ಲಿಯೆ ಇರುವ ಮತ್ತು ವರ್ಷದ ಈ ಕಾಲದಲ್ಲಿ ಅದು ‘ ಗಹನಾಂತರಾಳ ’ದಲ್ಲಿ ನಡೆದೀತೆ. ಅನಾವಶ್ಯಕವಾಗಿ ಈ ಕಾಲಕ್ಕೆ ಯಾರೂ ಸಾವು, ನೋವು, ಪಾಪಗಳ ವಿಷಯವನ್ನು ಎತ್ತಕೂಡದು. ಹಾಗೆ ಆಡಲೇಬೇಕಾಗಿ ಬಂದರೂ, ಎಲ್ಲೆಡೆಗೂ ವ್ಯಾಪಿಸಿರುವ ಹಿರಿಯರ ಆತ್ಮಗಳಿಗೆ ಅರ್ಥವಾಗದಂತೆ ಸಾಂಕೇತಿಕ ಭಾಷೆಯಲ್ಲಿ ನುಡಿಯಬೇಕು. ಅಂತಹ ಸಾಂಕೇತಿಕ ಶಬ್ದಗಳನ್ನು ನೆನಪುಮಾಡಿಕೊಳ್ಳಲು ನಾನು ಅದೆಷ್ಟೊ ತಲೆ ಕೆದರಿಕೊಂಡೆ. ಏನೂ ಹೊಳೆಯದಿರಲು ವಿಷಯವನ್ನು ಅಲ್ಲಿಗೇ ಬಿಟ್ಟೆ.

ಊಟಕ್ಕೆ ಕುಳಿತಾಗ ನಾಲ್ಕನೆಯ ದೊಡ್ಡಪ್ಪನ ಮುಖದ ಮೇಲೆ ವಿಲಕ್ಷಣ ಗಂಭೀರತೆಯಿದೆ. ನನ್ನನ್ನೂ ಎಲ್ಲಿ ಮನುಷ್ಯೇತರ ಜಾತಿಗೆ ಸೇರಿದ ವ್ಯಕ್ತಿಯೆಂದು ತಿಳಿಯುತ್ತಾನೊ ಎಂದು ನನಗೆ ಸಂಶಯ. “ ಒಂದು ದಿನ ಮೊದಲೂ ಅಲ್ಲ, ಒಂದು ದಿನ ನಂತರವೂ ಅಲ್ಲ, ಇದೇ ಕಾಲಕ್ಕೆ ” ಎಂಬ

ಭಾವವನ್ನು ನಾನೂ ತಳೆದಿದ್ದೇನೆ. ಅವನ ಮನಸ್ಸು ಹಗುರವಾಗಿಸಲು ಮತ್ತು ಅವನ ಆತುರ ಕಡಿಮೆ ಮಾಡಲು ನಾನು ನಾಳೆ ಹೊರಡುವದಾಗಿ ಹೇಳಿದೆ. ಅವನು ಇರಲು ಅಷ್ಟೇನು ಒತ್ತಾಯಪಡಿಸಲಿಲ್ಲ. ನಾನು ಊಹಿಸಿದ್ದೆ ಸರಿಯೆನಿಸಿತು. ಅಂತು ನಿರುತ್ಸಾಹದಲ್ಲಿಯೆ ಊಟ ಮುಗಿಸಿದೆ.

ಹಗಲು ಕಳೆಯಿತು. ಮಂಜಿನ ತೆರೆ ಸ್ವಲ್ಪ ಬೇಗನೆ ಈ ತಿಂಗಳು ಸಂಜೆಯ ಮುಂದೆ ಮುಸುಕುತ್ತದೆ. ಕತ್ತಲೆಯ ಹೊದ್ದಿಕೆ ನಗರವನ್ನೆಲ್ಲ ಮುಚ್ಚಿತು. ಜನವಿನ್ನೂ ದೀಪಗಳ ಬೆಳಕಿನಲ್ಲಿ ಕೆಲಸದಲ್ಲಿ ತೊಡಗಿದ್ದಾರೆ. ಆದರೆ ನನ್ನ ಕಿಡಕಿಯಾಚೆ ನೋಡಿದರೆ ವ್ಯಾಪ್ಯವಿನ ಶಾಂತತೆ ಹಿಮ-ನೆಲದ ಮೇಲೆ ಹಾಸಿದಂತಾಗಿದೆ. ಇನ್ನೂ ಆಗಸದಿಂದ ತುಣುಕು ತುಣುಕಾಗಿ ಹಿಮ ಬೀಳುತ್ತಿದೆ. ಆದರ ' ಶೂ-ಶೂ ' ಎಂಬ ಸಪ್ಪಳ ಆ ಶಾಂತಿಯನ್ನು ಮತ್ತಿಷ್ಟು ಭೀಕರಗೊಳಿಸಿದೆ. ಹರಳೆಣ್ಣೆಯ ಹಳದಿ ಪ್ರಕಾಶದಲ್ಲಿ ಕುಳಿತಿರಲು ಮತ್ತೆ ನನ್ನ ಮನಸ್ಸು ಆ ಆರಿದ ದೀಪಶಿಯಾಂಗ್-ಲಿನ್-ಸಾವೊಳ ಕಡೆಗೆ ತಿರುಗಿತು.

ಹಿಂದೊಮ್ಮೆ ನಮ್ಮ ಮನೆಯಲ್ಲಿಯೆ ನಮ್ಮೊಡನೆ ಇದ್ದ ಈಕೆ ಈಗ ಹೊರದೂಡಲ್ಪಟ್ಟ ಹಳೆಯ ಆಟಿಗೆಯಂತೆ ಮಗುವಿಗೂ ಬೇಡಾಗಿ ಮಣ್ಣುಗೂಡಿದಳೆ! ಜೀವನ ಒಂದು ವಿಲಾಸವಾಗಿರುವವರಿಗೆ,— ಅವಳಂತಹ ಜೀವ ಯಾವ ಸುಖಕ್ಕೆ ಸವೆಯಬೇಕೊ ಅವರಿಗೆ –ಅವಳು ಇಷ್ಟು ದಿನ ಬಾಳಿದ್ದೇ ಧಾಷ್ಟ್ರ್ಯವೆನಿಸಬಹುದು. ಅಂತು ಇದೀಗ ಅವಳು ಮರೆಯಾಗಿ 'ವೂಚಾಂಗ್' ಮುಂತಾದ ಜೀವನದಿಂದ ಸೆಳೆಯಲ್ಪಟ್ಟ* ಅವರನ್ನು ಉಪಕೃತರನ್ನಾಗಿ ಮಾಡಿದ್ದಾಳೆ. ನಿಜವಾಗಿ ಒಳ್ಳೆ ಕೆಲಸ. ಸತ್ತಮೇಲೆ ' ಆತ್ಮ 'ವೆಂಬುದು ಉಳಿಯುವದೊ ಇಲ್ಲವೊ ನನಗೆ ತಿಳಿಯದು. ಆದರೆ ಶಿಯಾಂಗ್-ಲಿನ್-ಸಾವೊಳಂಥಹ ಜೀವಿಗಳು ಹುಟ್ಟದಿರುವದೇ ಲೇಸು. ಅಂದರೆ ಯಾರಿಗೂ ತೊಂದರೆಯಿಲ್ಲ; ತಿರಸ್ಕೃತರೂ ಇಲ್ಲ, ತಿರಸ್ಕರಿಸುವವರೂ

---

* ಒಬ್ಬ ' ಯಮದೂತ 'ನೆನ್ನಬಹುದು. ಜೀವಿಯಿಂದ ಕೊನೆಯ ಉಸಿರನ್ನು ಕಿತ್ತಿಕೊಳ್ಳುವವ.

ಇಲ್ಲ. ಶರತ್ಕಾಲಿಕ ಆ ಹಿಮದ “ಶೂ-ಶೂ” ಎಂದು ಬೀಳುವ ಸಪ್ಪಳದೊಡನೆ ನನ್ನ ವಿಚಾರವೂ ಮುಂದುವರಿಯಿತು ಕ್ರಮವಾಗಿ ಮನಸ್ಸು ನೆಮ್ಮದಿಗೆ ಹೇಗೊ ಬಂತು ಅದೊಂದು ಗೂಢ ಒಗಟ ಬಿಡಿಸಿದಂತೆ! ಆದರೆ ಅವಳ ಜೀವನದ ಸಂಗತಿಗಳೆಲ್ಲ ಬಿಡಿಬಿಡಿಯಾಗಿ ಕೂಡಿ ಒಂದು ಇಡಿಯನ್ನು ತೋರುತ್ತವೆ.

(೨)

ಶಿಯಾಂಗ್-ಲಿನ್-ಸಾವೊಳು ಮೊದಲು ಲೋಚಿಂಗದವಳಲ್ಲ. ಚಳಿ ಗಾಲದ ಒಂದು ಸಂಜೆ ಕೂಲಿ ತುಂಬುವ ಕೆಲಸ ಮಾಡುವ ‘ವೈ’ ಮುದುಕಿ ಯೊಡನೆ ಅಲ್ಲಿಗೆ ಬಂದವಳು ನಾಲ್ಕನೆಯ ದೊಡ್ಡಪ್ಪನಿಗೆ ಹೊಸಬಳು ಬೇಕಾಗಿತ್ತು. ‘ವೈ’ ಮುದುಕಿ ಶಿಯಾಂಗ್-ಲಿನ್-ಸಾವೊಳನ್ನು ತಂದಳು.

ಅವಳು ತಲೆಗೆ ಬಿಳಿಯ ವಸ್ತ್ರ ಸುತ್ತಿದ್ದಳು. ನೀಲವಾದ ಜಾಕೀಟು, ತಿಳಿಹಸಿರು ಕೋಟು, ಕಪ್ಪಾದ ಅಂಗಿ ಹಾಕಿಕೊಂಡಿದ್ದಳು. ಅದೇ ಇಪ್ಪತ್ತಾರು ಇಪ್ಪತ್ತೇಳು ವಯಸ್ಸು. ಸ್ವಲ್ಪ ಲಕ್ಷಣವತಿಯೂ ಅಹುದು. ತುಂಬು ಗಲ್ಲ, ಮಿನುಗುವ ಮುಖ. ‘ವೈ’ ಮುದುಕಿ ಅವಳು ತನ್ನ ತಾಯಿಯ ನೆರೆಹೊರೆಯವಳೆಂದೂ, ಗಂಡ ತೀರಿಕೊಂಡಿದ್ದರಿಂದ ಹೊರಗೆ ಕೆಲಸ ಹುಡುಕುಬೇಕಾಯಿತೆಂದೂ ಹೇಳಿದಳು

ನಾಲ್ಕನೆಯ ದೊಡ್ಡಪ್ಪ ಸ್ವಲ್ಪ ಮುಖ ಮುದುಡಿಸಿದ. ದೊಡ್ಡತ್ತೆಗೆ ಅರ್ಥವಾಯಿತು. ಅವನಿಗೆ ವಿಧವೆಯನ್ನು ಕೆಲಸಕ್ಕಿಟ್ಟುಕೊಳ್ಳುವದು ಬೇಕಾ ಗಿರಲಿಲ್ಲ. ಆದರೆ ದೊಡ್ಡತ್ತೆ ಅವಳನ್ನು ಸೂಕ್ಷ್ಮವಾಗಿ ನೋಡಿದಳು. ಕೈಕಾಲು ಗಟ್ಟಿಮುಟ್ಟಾಗಿ ಅಗಲವಾಗಿದ್ದವು. ಕಣ್ಣುಗಳು ಪ್ರಾಮಾಣಿಕತೆ ಯನ್ನು ಒಡೆದು ತೋರುತ್ತಿದ್ದವು. ಅವಳು ತನ್ನ ಪಾಲಿಗೆ ಬಂದ ಸ್ಥಿತಿಗೆ ಹೊಂದಿಕೊಂಡು ಹೋಗುವಳೆಂದೂ ಎಂಥ ಶ್ರಮದ ಕೆಲಸವನ್ನಾದರೂ ಮಾಡಬಲ್ಲಳೆಂದೂ ದೊಡ್ಡತ್ತೆಗೆ ಅನಿಸಿತು. ಅದಕ್ಕಾಗಿ ತನ್ನ ಗಂಡನಿಗೆ ಮನಸ್ಸಿಲ್ಲದಿದ್ದರೂ ಒಮ್ಮೆ ಕೆಲಸ ಕೊಟ್ಟು ನೋಡುವಾ ಎಂದು ಅವಳು ಒಪ್ಪಿದಳು. ಮೂರು ದಿನ ಸಾವೊಳು ವಿಶ್ರಾಂತಿಯೆ ತಲೆಶೂಲೆ ಎನ್ನುವಂತೆ ದುಡಿದಳು. ಅವಳ ಕೆಲಸದ ಉತ್ಸಾಹ ಮತ್ತು ಶಕ್ತಿಗಳು ಗಂಡಸರನ್ನೂ

ಮೀರಿದ್ದವು. ಆಗ ದೊಡ್ಡತ್ತಿಗೆ ತಿಂಗಳಿ ಐದುನೂರು ಚಿಲ್ಲರೆ (೧) ಗೊತ್ತು ಮಾಡಿ ಅವಳನ್ನು ಇಟ್ಟುಕೊಂಡೇಬಿಟ್ಟಳು.

ಎಲ್ಲರೂ ಅವಳನ್ನು ಶಿಯಾಂಗ್-ಲಿನ್-ಸಾವೊ ಎಂದೇ ಕರೆಯುತ್ತಿದ್ದರು. ಯಾರೂ ಅವಳ ಅಡ್ಡಹೆಸರನ್ನು ಕೇಳಿದವರಲ್ಲ. ಮುದುಕಿ ವೈ-ಚಿ-ಯಾಶಾನ್‌ದಿಂದ ಬಂದವಳು. (ವೈ ಗುಡ್ಡಗಾಡು ಪ್ರದೇಶದ ಕುಟುಂಬ) ಶಿಯಾಂಗ್-ಲಿನ್-ಸಾವೊಳೂ ಅದೇ ಹಳ್ಳಿಯಿಂದ ಬಂದವಳಾದ್ದರಿಂದ ಅವಳ ಅಡ್ಡಹೆಸರೂ 'ವೈ'(೨) ಎಂದೇ ಆಯಿತು. ಎಲ್ಲ ಗುಡ್ಡಗಾಡಿನವರಂತೆ ಅವಳು ವಿಶೇಷ ಮಾತೇ ಆಡುತ್ತಿರಲಿಲ್ಲ. ಯಾರಾದರೂ ಏನಾದರೂ ಕೇಳಿದರೆ ಏಕಾಕ್ಷರ ಶಬ್ದಗಳಲ್ಲಿ ಉತ್ತರ ಕೊಡುತ್ತಿದ್ದಳು. ಅವಳಿಗೆ ಇನ್ನೂ ಊರಲ್ಲಿ ಅತಿ ಕಾಡುವ ಅತ್ತೆಯೊಬ್ಬಳಿದ್ದಾಳೆಂದೂ ಮತ್ತು ಅವಳ ಚಿಕ್ಕ ಮೈದುನ ಕಟ್ಟಿಗೆ ಕಡಿದು ಉಪಜೀವನ ಮಾಡುತ್ತಿರುವನೆಂದೂ ತನ್ನ ಕಿಂತಲೂ ಹತ್ತು ವರ್ಷಕ್ಕೆ ಚಿಕ್ಕವನಾಗಿದ್ದ ತನ್ನ ಗಂಡ, ಕಳೆದ ವಸಂತ ಕಾಲದಲ್ಲಿ ತೀರಿಕೊಂಡನೆಂದೂ ಮತ್ತೆ ತಾನೂ ಕಟ್ಟಿಗೆ ಕಡಿದು ಜೀವನ ಸಾಗಿಸುತ್ತಿದ್ದಳೆಂದೂ ತಿಳಿದುಕೊಳ್ಳಲು ಹತ್ತುದಿನ ಹಿಡಿಯಿತು. ಯಾರು ಕೇಳಿದರೂ ಅವಳು ಹೇಳಿದ್ದು ಇಷ್ಟೆ.

ದಿನಗಳೆಷ್ಟೊ ಕಳೆದವು. ಸಾವೊಳ ಕೆಲಸದಲ್ಲಿ ಮಾತ್ರ ಏನೂ ಹೆಚ್ಚು ಕಡಿಮೆ ಇಲ್ಲ. ಅವಳು ಎಂದೂ ಕೆಲಸಕ್ಕೆ ಒಲ್ಲೆಂದುದಿಲ್ಲ, ಎಂದೂ ಊಟ ಕೆಟ್ಟೆನ್ನಲಿಲ್ಲ. ದಣಿವೆಂಬುದು ಅವಳಿಗೆ ಗೊತ್ತೇ ಇರಲಿಲ್ಲ. 'ಲೋ-ಶೀ ದೊರೆಗೆ ಒಳ್ಳೆಯ ಆಳು ಸಿಕ್ಕಿತು. ಗಂಡಸನ್ನೂ ಮೀರಿಸಿದ್ದಾಳೆ.' ಎಂದು ಜನ ಕಾಡುತ್ತಿದ್ದರು. ಹೊಸ ವರುಷದ ದಿನವೂ ಅವಳು ಪಿಟ್ಟೆನ್ನದೆ

---

೧) ಎಂದರೆ ಸಾಧಾರಣ ೫೦ ಸೆಂಟುಗಳಾಗಬಹುದು. ಈಗ ಇಂತಹ ಕೆಲಸಕ್ಕೆ ಕೂಲಿ ೨೦–೩೦ಪೇನಿಂದ ೭೦–೮೦ ವರೆಗೆ ಆಗಬಹುದು.

೨) 'ಸಾವೊ' ಎಂದರೆ ಅತ್ತಿಗೆ. ಚೀನೀಯರಲ್ಲಿ ಹಿರಿಯ ಮಗನಿಗೆ ಮದುವೆಯಾಗಲು ಅವನ ಹೆಂಡತಿಯನ್ನು ಅವನ ಹೆಸರಿಗೆ 'ಸಾವೊ' ಜೋಡಿಸಿ ಕರೆಯುವ ರೂಢಿಯಿದೆ. ಅದ್ದರಿಂದ ಅವಳ ಗಂಡನ ಹೆಸರು 'ವೈ ಶಿಯಾಂಗ್-ಲಿನ್' ಎಂದಿರಬೇಕು.

ಉಡುಗುವದು, ಸಾರಿಸುವದು, ಮೊದಲಾಗಿ ಬಲಿಯನ್ನು ತಯಾರಿಸುವ ವರೆಗಿನ ಎಲ್ಲ ಕೆಲಸವನ್ನೂ ಯಾರ ನೆರವೂ ಇಲ್ಲದೆ ಮಾಡಿಕೊಳ್ಳುತ್ತಿದ್ದಳು ಕೆಲಸವು ಅವಳಿಗೆ ಮೈಗೂಡಿದಂತಾಗಿತ್ತು. ಅವಳ ಬಣ್ಣ ತಿರುಗಿತು. ಸ್ವಲ್ಪ ಮೈಯೂ ಬಂತು.

ವರ್ಷಾರಂಭದ ಉತ್ಸವ ಕಳೆದು ಬಹಳ ದಿನವಾಗಿರಲಿಲ್ಲ. ಒಂದು ದಿನ ಅವಳು ಅಕ್ಕಿ ತೊಳೆಯಲು ಕಾಲುವೆಗೆ ಹೋದವಳು ಒಮ್ಮೆಲೆ ಓಡುತ್ತ ಬಂದಳು. ಅವಳು ಬಹು ಗಾಬರಿಯಾಗಿದ್ದಳು. ಕಾಲುವೆಯ ಆಚೆಯ ದಂಡೆಗೆ ಯಾರನ್ನೋ ನೋಡಿದಳೆಂದೂ ಅವನು ತನ್ನ ಗಂಡನ ಚಿಗಪ್ಪನ ಮಗನಾಗಿರಬೇಕೆಂದೂ ತನ್ನನ್ನು ಕರೆದೊಯ್ಯಲು ಬಂದಿರಬೇಕೆಂದೂ ಅವಳು ಹೇಳಿದಳು. ದೊಡ್ಡತ್ತೆಗೂ ಭಯವಾಯಿತು. ಸಂಶಯವೂ ಬರದಿರಲಿಲ್ಲ. ಅವನೇಕೆ—ಇವಳ ಸಲುವಾಗಿ ಬರಬೇಕು? ನಾಲ್ಕನೆಯ ದೊಡ್ಡಪ್ಪ ಈ ಕತೆ ಕೇಳಿದೊಡನೆ ಹುಬ್ಬುಗಂಟಿಕ್ಕಿ "ಇದೇನೊ ಕೇಡು ಕಾಣುತ್ತದೆ. ಅವಳು ಹೇಳದೆ ಓಡಿಬಂದಿರಬೇಕು. ಯಾರೂ ಹೊರದೂಡಿರಲಿಕ್ಕಿಲ್ಲ" ಎಂದ.

ಅವನು ಅಂದುದೆ ಸರಿಯಾಗಿತ್ತು. ಅವಳು ಓಡಿಬಂದ ವಿಧವೆಯಾಗಿದ್ದಳು.

ಇದಾದ ಹತ್ತು ದಿನಗಳ ಮೇಲೆ ಎಲ್ಲರೂ ನಡೆದ ಪ್ರಸಂಗವನ್ನು ಮರೆತಿರುವಾಗ 'ಮೈ' ಮುದುಕಿ ಒಬ್ಬ ಹೆಂಗಸಿನೊಡನೆ ಅಕಸ್ಮಾತ್ತಾಗಿ ಬಂದಳು. ಅವಳ ಜೊತೆಗೆ ಬಂದವಳು ಸಾವೊಳ ಅತ್ತೆಯೆಂದು ಅವಳೇ ಹೇಳಿದಳು ಆ ಹೊಸಬಳು ಗುಡ್ಡಗಾಡಿನವರಂತೆ ಮಾತರಿಯದವಳಾಗಿರಲಿಲ್ಲ. ಔಪಚಾರಿಕ ಮಾತು ಮುಗಿದಮೇಲೆ ತಾನು ಬಂದ ಕೆಲಸವನ್ನು ಹೇಳಿಯೇ ಬಿಟ್ಟಳು. ತಾನು ಶಿಯಾಂಗ್-ಲಿನ್-ಸಾವೊಳ ಅತ್ತೆ. ಅವಳನ್ನು ಕರೆದುಕೊಂಡು ಹೋಗಲು ಬಂದಿದ್ದು, ಮನೆಯಲ್ಲಿ ಮುದುಕರೂ ಹುಡುಗರೂ ಅಲ್ಲದೆ ಬೇರೆ ಯಾರೂ ಇಲ್ಲದ್ದರಿಂದ ಕೆಲಸಕ್ಕೆ ಅವಳ ಅವಶ್ಯಕತೆ ಬಹಳವಾಗಿದೆಯೆಂದೂ ಹೇಳಿದಳು.

"ಅವಳ ಅತ್ತೆಯೆ ಬಂದು ಬೇಡಿದರೆ ನಾನು ಬೇಡವೆನ್ನುವದು ಹೇಗೆ?"

ಎಂದ ನಾಲ್ಕನೆಯ ದೊಡ್ಡಪ್ಪ.

ಶಿಯಾಂಗ್-ಲಿನ್-ಸಾವೊಳ ಪಗಾರದ ಲೆಕ್ಕ ಮಾಡಿಯಾಯಿತು. ಒಂದುಸಾವಿರ ಏಳುನೂರಾ ಐವತ್ತು ಚಿಲ್ಲರೆ ಅವಳಿಗೆ ಸಲ್ಲಬೇಕಾಗಿತ್ತು. ಅವಳು ಒಂದು ಕಾಸನ್ನೂ ತನಗಾಗಿ ತೆಗೆದುಕೊಂಡಿರಲಿಲ್ಲ. ಎಲ್ಲವನ್ನೂ ಮಾಲಕರಲ್ಲಿಯೆ ಬಿಟ್ಟಿದ್ದಳು. ಮರುಮಾತಿಲ್ಲದೆ ಈ ಹಣವನ್ನು ಅವಳ ಅತ್ತೆಯ ಕೈಯಲ್ಲಿ ಕೊಡಲಾಯಿತು. ಆಗ ಶಿಯಾಂಗ್-ಲಿನ್-ಸಾವೊ ಅಕ್ಷರ ಲಿಲ್ಲ. ಆ ಅತ್ತೆ ಅವಳ ಬಟ್ಟೆಗಳನ್ನೆಲ್ಲ ತೆಗೆದುಕೊಂಡಳು. ನಾಲ್ಕನೆಯ ದೊಡ್ಡಪ್ಪನನ್ನು ಬೀಳ್ಕೊಂಡು ನಡೆದೇಬಿಟ್ಟಳು. ಆಗ ಮಧ್ಯಾಹ್ನವಾಗಿತ್ತು....

"ಅಯ್ಯೋ! ಅಕ್ಕಿ ಏನಾಯಿತು? ಶಿಯಾಂಗ್-ಲಿನ್-ಸಾವೊ ಅಕ್ಕಿ ತೊಳೆಯಲು ಕಾಲುವೆಗೆ ಹೋಗಿದ್ದಳಲ್ಲವೆ?"

ಕೆಲ ಹೊತ್ತಿನ ಮೇಲೆ ಚಕಿತಳಾದ ದೊಡ್ಡತ್ತೆ ಮೇಲಿನಂತೆ ಕೂಗಿದಳು. ಅವಳಿಗೆ ಹಸಿವೆಯಿಂದ ಅಕ್ಕಿಯ ನೆನಪಾಯಿತು. ಅಕ್ಕಿಯಿಂದ ಕೆಲಸಗಾರ್ತಿಯು ನೆನಪಾಯಿತು. ಇಲ್ಲವಾದರೆ ಅವಳು ಶಿಯಾಂಗ್-ಲಿನ್-ಸಾವೊಳನ್ನು ಮರತೇಬಿಟ್ಟಿದ್ದಳು.

ಕೂಡಿದವರೆಲ್ಲ ಅಕ್ಕಿಯ ಬುಟ್ಟಿ ಅತ್ತಿತ್ತ ಹುಡುಕ ಹತ್ತಿದರು. ದೊಡ್ಡತ್ತೆ ತಾನೇ ಅಡುಗೆಮನೆ, ನಡುಮನೆ, ಮಲಗುವ ಕೋಣೆ ಎಲ್ಲ ಕಡೆಗೆ ಸುತ್ತಿ ನೋಡಿದಳು. ಆದರೆ ಬುಟ್ಟಿಯ ಸುಳಿವೇ ಸಿಗಲಿಲ್ಲ. ನಾಲ್ಕನೆಯ ದೊಡ್ಡಪ್ಪ ಹೊರಗೆ ಸುತ್ತಿದ. ಏನೂ ಕಾಣಲಿಲ್ಲ. ಕೊನೆಗೆ ಕಾಲುವೆಗೆ ಬಂದ. ಅಲ್ಲಿಯೆ ದಂಡೆಯ ಮೇಲೆ ಬುಟ್ಟಿಯಿತ್ತು. ಬದಿಗೊಂದು ಝುರಡಿಯಿತ್ತು.

ಅಲ್ಲಿಯ ವರೆಗೂ ಶಿಯಾಂಗ್-ಲಿನ್-ಸಾವೊ ತನ್ನ ಅತ್ತೆಯೊಡನೆ ಹೇಗೆ ಹೋದಳೆಂಬುದನ್ನು ಯಾರೂ ವಿಚಾರಿಸಿರಲಿಲ್ಲ. ಇದೀಗ ಹೀಗೆ ಹಾಗೆ ಕಂಡೆವೆಂದು ಕೆಲವರು ಹೇಳಹತ್ತಿದರು. ಬೆಳಗಿನಲ್ಲಿ ಒಂದು ನೌಕೆ ಕಾಲುವೆಯ ದಂಡೆಯಲ್ಲಿ ಲಂಗರು ಹಾಕಿತು. ಅದರ ತುಂಬ ಬಿಳಿಯ ಛತ್ತು ಇತ್ತು. ಆ ಹೊದಿಕೆಯಿಂದ ಒಳಗಿದ್ದವರು ಕಾಣುತ್ತಿರಲಿಲ್ಲ. ಶಿಯಾಂಗ್-ಲಿ-ನ್-ಸಾವೊ ಕಾಲುವೆ ದಂಡೆಗೆ ಬಂದು ಸೀರೆಗಾಗಿ ಬಾಗುತ್ತಿರಲು ಇಬ್ಬರು ನೌಕೆಯೊಳಗಿಂದ ದಂಡೆಗೆ ಜಿಗಿದು ಅವಳನ್ನು ಹಿಡಿದರು; ಬಲಾತ್ಕಾರದಿಂದ

ಅವಳನ್ನು ನಾವಿನಲ್ಲಿ ಹಾಕಿವರು ಅವರು ಗುಡ್ಡಗಾಡಿನ ಜನರಂತಿದ್ದರು. ಅವಳನ್ನು ಜೋರಿನಿಂದ ಒಳಗೆ ಹಾಕಿದುದು ಮಾತ್ರ ನಿಜ. ಅವಳು ಸಹಾಯಕ್ಕಾಗಿ ಅನೇಕ ಸಲ ಕೂಗಿದಳು, ಚೀರಿದಳು ಮುಂದೆ ಅವಳ ದನಿ ಕೇಳಿಸಲಿಲ್ಲ. ಬಾಯಿಗೆ ಏನಾದರೂ ತುರುಕಿರಬೇಕು. ಮುಂದೆ 'ವೈ' ಮುದುಕಿಯೂ, 'ಅತ್ತೆ'ಯೂ ಬಂದುದಷ್ಟೆ ಗೊತ್ತು. ಶಿಯಾಂಗ್-ಲಿನ್-ಸಾವೊಳಿಗೆ ಏನು ಮಾಡಿದರೆಂಬುದನ್ನು ಯಾರೂ ಹೇಳರು ಯಾರಿಗೂ ತಿಳಿಯದು. ಹಣಿಕಿಕ್ಕಿ ನೋಡಿದ ಒಬ್ಬಿಬ್ಬರು ಅವಳನ್ನು ಕೈಕಾಲು ಕಟ್ಟಿ ಒಗೆದದ್ದನ್ನು ನೋಡಿದರಂತೆ!

'ಎಂಥ ಹಿಂಸೆ!' ಎಂದ ನಾಲ್ಕನೆಯ ದೊಡ್ಡಪ್ಪ. ಆದರೆ ಮತ್ತೆ ವಿಚಾರಮಗ್ನನಾಗಿ ಮೌನನಾಗಿ ಮಾತು ಮುಗಿಸಿದ. "ಆದರೆ ಏನಾದರೂ..........."

ಅಂದು ದೊಡ್ಡತ್ತೆಯೆ ಅಡುಗೆ ಮಾಡಬೇಕಾಯಿತು. ಅವಳ ಮಗ 'ಆ ನೀಯು' ಒಲೆ ಹೊತ್ತಿಸಿದ. ಮಾಧ್ಯಾಹ್ನದಲ್ಲಿ 'ವೈ' ಮುದುಕಿ ಮತ್ತೆ ಬಂದಳು.

"ಎಂಥ ಹಿಂಸೆ!" ಎಂದು ನಾಲ್ಕನೆಯ ದೊಡ್ಡಪ್ಪ ಅವಳನ್ನೂ ಬರಮಾಡಿದ.

"ಏನು ವಿಚಿತ್ರ! ಏನು ಮಾತು! ಮತ್ತೆ ನೀನೇಕೆ ನಮಗೆ ಮುಖ ತೋರಿಸಿದೆ?" ಎಂದಳು ದೊಡ್ಡತ್ತೆ ಮುಸುರೆ ತೊಳೆಯುತ್ತಾ. "ನೀನೇ ಅವಳನ್ನು ತಂದುಕೊಟ್ಟೆ. ಮತ್ತೆ ನೀನೇ ಅವಳನ್ನು ಮನೆಯಿಂದ ಕಿತ್ತಿ ಒಯ್ಯುವಂತೆ ಮಾಡಿದೆ. ಈ ಕೆಲಸ ಒಂದು ಜ್ವಾಲಾಮುಖಿ ಸಿಡಿದಂತಾಯಿತು. ಹೊರಗಿನ ಜನ ಏನಂದಾರೆಂದು ತಿಳಿಯುತ್ತೀಯೆ? ನಮ್ಮನ್ನು ಅಣಕಿಸುವದೆ? ನಿನ್ನದೇನು ಗಂಟುಹೋದದ್ದು?" ಎಂದು ಗುಡುಗಿದಳು.

"ಅಯ್-ಅಯ್ಯ ಅದಕ್ಕೇ ಹೇಳಲು ನಾನು ಬಂದೆ. ನಿಜವಾಗಿ ನಾನು ಮೋಸಹೋದೆ. ಅವಳು ಓಡಿಬಂದಿದ್ದಳೆಂದು ನನಗೇನು ಗೊತ್ತು? ಅವಳು ನನ್ನೆಡೆಗೆ ಬಂದು ಕೆಲಸ ಕೊಡಿಸೆಂದು ಬೇಡಿದಳು. ನಾನು ನಿಜವಿರಬಹುದೆಂದೆ. ಅತ್ತೆಯನ್ನೂ ಕೇಳದೆ ಅವಳಿಗೆ ತಿಳಿಸದೆ ಹೀಗೆ ಬಂದಿರುವಳೆಂದು ನನಗಾದರೂ ಏನು ಮಣ್ಣು ತಿಳಿಯಬೇಕು? ನಾನು ನಿಜ

ವಾಗಿಯೂ ನಿಮಗೆ ಮುಖ ತೋರಿಸಲಾರೆ. ದಯವಿಟ್ಟು ಈ ಹುಚ್ಚು ಮುದುಕಿಯನ್ನು ನೀವಿಬ್ಬರೂ ಕ್ಷಮಿಸಿರಿ. ನಿಮ್ಮ ಮನೆಯ ಔದಾರ್ಯ ಮತ್ತು ಕ್ಷಮಾಗುಣ ಪ್ರಸಿದ್ಧವೆ ಇವೆ. ನನ್ನಂತಹ ಬಡವಿಯನ್ನು ಶಿಕ್ಷಿಸುವದಿಲ್ಲ ತಾನೆ? ಇನ್ನೊಮ್ಮೆ ತಂದರೆ ಇದಕ್ಕೂ ಹೆಚ್ಚು ಉತ್ತಮವು ಕೆಲಸದವಳನ್ನು ತಂದುಕೊಡುವೆ. ಎಂದರೆ ಈ ಪಾಪವಾದರೂ ತೊಳೆದೀತು...."

"ಆದರೆ —" ದೊಡ್ಡತ್ತೆ ಏನೊ ಹೇಳಬೇಕೆಂದಳು. ಹೊಳೆಯಲಿಲ್ಲ.

ಅಂತೂ ಒಮ್ಮೆ ಶಿಯಾಂಗ್-ಲಿನ್-ಸಾವೊಳ ಪ್ರಕರಣ ಮುಗಿದಂತಾಯಿತು. ದೊಡ್ಡತ್ತೆಗೆ ಮುಂದೆ ಒಳ್ಳೇ ಕೆಲಸಗಾರ್ತಿ ಸಿಕ್ಕಿದ್ದರೆ ಅವಳ ನೆನಪೂ ಬರುತ್ತಿರಲಿಲ್ಲ. ಆದರೆ ಅಂಥ ಆಳೇ ಸಿಕ್ಕಲಿಲ್ಲ. ಇಲ್ಲ ಬಹಳ ಆಲಸ್ಯ, ಅಥವಾ ಕೂಳುಬಕ್ಕ ಅಥವಾ ಎರಡೂ; ಅಂತೂ ಒಂದೂ ಆಳು ಸರಿಬೀಳಲಿಲ್ಲ. ಅದರಿಂದಾಗಿ ದೊಡ್ಡತ್ತೆ ಮೇಲೆ ಮೇಲೆ ಶಿಯಾಂಗ್-ಲಿನ್-ಸಾವೊಳ ಹೆಸರು ಎತ್ತುತ್ತಿದ್ದಳು, ಇದ್ದರೆ ಹಾಗಿರಬೇಕೆಂದು! ಅವಳು "ಈಗ ಅವಳು ಹೇಗಿದ್ದಾಳೋ?" ಎಂದು ಮತ್ತೆ ಮತ್ತೆ ಅನ್ನುವಳು. ಮನಸ್ಸಿನಲ್ಲಿ ಅವಳು ಏನಾದರೂ ಕಷ್ಟಕ್ಕೆ ಸಿಕ್ಕಿ ಅಲ್ಲಿಂದ ಪುನಃ ಓಡಿಬರಲಿ ಎನ್ನುತ್ತಿರಬೇಕು. ಹೀಗೆ ವರ್ಷವೂ ಕಳೆಯಿತು. ಇನ್ನು ಅವಳು ಬರುವ ಆಶೆ ತಪ್ಪಿತೆಂದು ಅವಳು ಸುಮ್ಮನಾಗಬೇಕಾಯಿತು.

ವರ್ಷದ ಮೇಲೆ ಹಬ್ಬ ಮುಗಿಯುತ್ತಿರುವಾಗ ಒಂದು ದಿನ 'ವೈ' ಮುದುಕಿ ಬಂದು 'ಕು-ಜಾ-ತಾ-ಜಾ'[1] ಮಾಡಿದಳು; ಮತ್ತು ಶುಭ ಕೋರಿದಳು. ಅವಳು ಆಗ ತುಂಬಾ ಕುಡಿದು ಅರೆಮರೆವಿನ ಸ್ಥಿತಿಯಲ್ಲಿಯೇ ಇದ್ದಳು. 'ವೈ' ಹಳ್ಳಿಯಲ್ಲಿಯ ತನ್ನ ತೌರುಮನೆಗೆ ಹೋಗಿದ್ದರಿಂದ ಹಬ್ಬದ ಹರಕೆ ಸಲ್ಲಿಸಲು ಬಂದಿರುವದಕ್ಕೆ ತಡವಾಯಿತೆಂದು ಹೇಳಿದಳು. ಮತ್ತು ಮಾತಿನ ಭರದಲ್ಲಿ ಶಿಯಾಂಗ್-ಲಿನ್-ಸಾವೊಳ ವಿಷಯವು ಬಂತು.

"ಅವಳೆ!" ಮದ್ಯದ ತಂದ್ರಾವಸ್ಥೆಯಲ್ಲಿಯೆ 'ವೈ' ಮುದುಕಿ ಚೀರು ದನಿಯಲ್ಲಿ "ಅವಳು ಭಾಗ್ಯಶಾಲಿ! ಅವಳ ಅತ್ತೆ ಇಲ್ಲಿಗೆ ಬರುವ ಮೊದಲೆ

೧) ಹರಕೆ ಬೇಡುವಾಗ ಉದ್ದಕ್ಕೆ ನೆಲದ ಮೇಲೆ ಬೀಳುವದು.

ಅವಳನ್ನು ಹೂ ಹಳ್ಳಿಯ ಹಾ-ಲಾ-ಪೊ-ಲಿನು ಎಂಬಾತನಿಗೆ ಮಾತುಕೊಟ್ಟು ಬಂದಿದ್ದಳು. ಕೆಲವು ಕಾಲ ಮನೆಯಲ್ಲಿ ಉಳಿದ ಮೇಲೆ ತೀವ್ರವೆ ಅವಳನ್ನು ಹೂವಿನ ಮಂಚವನ್ನೇರಿಸಿ ಕಳಿಸಲಾಯಿತು!"

"ಅಯ್ಯ! ಎಂಥ ಅತ್ತೆ!" ಎಂದಳು ದೊಡ್ಡತ್ತೆ.

"ಅಯ್ಯ, ಏನು ತಾಯಿ! ನೀವು ಹೆಬ್ಬಾಗಿಲ(೧) ಹಿಂದಿನಿಂದ ಮಾತಾಡುತ್ತೀರಿ."

"ನಮಗೇನು ಗುಡ್ಡಗಾಡು ಜನ. ಕಿರಿಬಾಗಿಲಿನವರು. ಅವಳಿಗೆ (ಶಿಯಾಂಗ್-ಲಿನ್-ಸಾವೊ)ಗೆ ಚಿಕ್ಕ ಮೈದುನನಿರುವನಷ್ಟೆ. ಅವನ ಮದುವೆ ಯಾಗಬೇಕಾಗಿತ್ತು. ಶಿಯಾಂಗ್-ಲಿನ್-ಸಾವೊಳನ್ನು ಮದುವೆ ಮಾಡಿಕೊಡ ದಿದ್ದರೆ ಮೈದುನನ ಮದುಮಗಳಿಗೆ ಉಡುಗೊರೆಯ ಹಣವೆಲ್ಲಿಂದ ತರ ಬೇಕು? ಅದರಿಂದ ಆ ಅತ್ತೆ ಹುಚ್ಚಿಯಲ್ಲ. ನಿಜವಾಗಿ ಲೆಕ್ಕ ಹಾಕುವವಳು. ಇದಲ್ಲದೆ ಅವಳು ಸೊಸೆಯನ್ನು ಕೆಳಗಾಡಿನವರಿಗೆ ಮದುವೆ ಮಾಡಿ ಕೊಟ್ಟಳು. ಯಾಕೆ ಗೊತ್ತೆ? ಅದೇ ಪ್ರದೇಶದಲ್ಲಿ ಮದುವೆ ಮಾಡಿ ಕೊಟ್ಟಿದ್ದರೆ ಇಷ್ಟು ರೊಕ್ಕ ಬರುತ್ತಿರಲಿಲ್ಲ. ಕೆಳಗಾಡಿನ ಜನವನ್ನು ಮದುವೆ ಯಾಗಲು ಒಪ್ಪುವವರೇ ಕಡಿಮೆ. ಅದರಿಂದ ತೆರವೂ ಹೆಚ್ಚು ಬಂತು. ಶಿಯಾಂಗ್-ಲಿನ್-ಸಾವೊಳಿಂದ ಎಂಬತ್ತು ಸಾವಿರ ಚಿಲ್ಲರೆ ಬಂತು. ಕಡಿಮೆ ಯಾಯಿತೆ? ಈಗ ಮನೆಯ ಮಗನದೂ ಮದುವೆಯಾಯಿತು. ಮದು ಮಗಳಿಗೆ ಐದುಸಾವಿರ ಚಿಲ್ಲರೆ ಮಾತ್ರ ಉಡುಗೊರೆ ಕೊಟ್ಟ. ಮದುವೆಯ ವೆಚ್ಚ ಹೋಗಿ ಹತ್ತುಸಾವಿರ ಚಿಲ್ಲರೆ ಉಳಿಯಿತಂತೆ ಎಂದ ಮೇಲೆ ಆಕೆ ಜಾಣಳಲ್ಲವೆ?"

"ಮತ್ತೆ ಶಿಯಾಂಗ್-ಲಿನ್-ಸಾವೊ ಇದೆಲ್ಲಕ್ಕೆ ಒಪ್ಪಿದಳೆ?"

"ಒಪ್ಪುವ ಪ್ರಶ್ನೆಯೆ ಇಲ್ಲ. ಇನ್ನು ಜಗ್ಗಾಟ ಇಂಥ ಪ್ರಸಂಗದಲ್ಲಿ ತಪ್ಪಿದ್ದಲ್ಲ. ಮೊದಲು ಕೈಕಾಲು ಕಟ್ಟಿಹಾಕುವದು. ಜುಲುಮೆಯಿಂದ

---

೧) ಎಂದರೆ ದೊಡ್ಡ ಮನೆತನದ ಜನ. ದೊಡ್ಡತ್ತೆ ಇಲ್ಲಿ ತಿರಸ್ಕರಿಸುವದು ಅತ್ತೆಯ ಕ್ರೂರತನವನ್ನಲ್ಲ. ಆದರೆ ವಿಧವೆ ಸೊಸೆಯನ್ನು ಮತ್ತೆ ಮದುವೆ ಮಾಡಿ ಕೊಟ್ಟ ವಿಚಾರವನ್ನು.

ಹೂಮಂಚದ ಮೇಲೆ ಕೂಡ್ರಿಸಿ ವರನ ಮನೆಗೆ ಹೊತ್ತುಕೊಂಡು ಹೋಗು ವದು, ಅವಳ ತಲೆಯ ಮೇಲೆ ಬಾಸಿಂಗ ( ಹೂ-ಟೊಪ್ಪಿಗೆ ) ಹಾಕಿ ದೇವರ ಮನೆಯಲ್ಲಿ ಕು-ಜಾ-ತ-ಜಾ ( ಉದ್ದಕ್ಕೆ ಬೀಳು ) ಮಾಡಿಸುವದು, ಆ ಮೇಲೆ ಅವಳನ್ನು ಕೋಣೆಯಲ್ಲಿ ಗಂಡಿನೊಡನೆ ಹಾಕಿಬಿಡುವದು. ಎಂದರೆ ಕೆಲಸ ಮುಗಿಯಿತು.

" ಅಯ್ಯೋ ! "

" ಆದರೆ ಶಿಯಾಂಗ್-ಲಿನ್-ಸಾವೊ ಹೆಚ್ಚಾಗಿಯೆ ಜಗ್ಗಾಡಿದಳು. ಅವಳು ಭಯಂಕರವಾಗಿ ಗುದ್ದಾಡಿದಳೆಂದು ಜನರು ಹೇಳುತ್ತಾರೆ. ನಿಜ ವಾಗಿ ಅವಳು ಸಾಮಾನ್ಯ ಹೆಂಗಸಲ್ಲ. ಅದರಲ್ಲಿಯೂ ನಿಮ್ಮಂಥ ಓದಿ ದವರ, ದೊಡ್ಡವರ ಮನೆಯಲ್ಲಿ ದುಡಿದವಳು. ತಾಯಿ, ನಾನು ಈ ವಯಸ್ಸಿಗೆ ಏನೇನೋ ಕಂಡಿದ್ದೇನೆ ಮದುವೆಯಾಗುವ ವಿಧವೆಯರು ಅಳುವದನ್ನೂ ಚೀರುವದನ್ನೂ ನೋಡಿದ್ದೇನೆ. ಎಷ್ಟೋ ಜನ ಆತ್ಮಹತ್ಯೆ ಯಿಂದಲೂ ಹೆದರಿಸುವರು. ಮತ್ತೆ ಕೆಲವರು ವರನ ಮನೆ ಮುಟ್ಟಿದ ಮೇಲೆ ಸ್ವರ್ಗದ ಮತ್ತು ಭೂಮಿಯ ದೇವತೆಗಳಿಗೆ ಕು-ಜಾ-ತ-ಜಾ ಮಾಡಲು ಒಪ್ಪದೆ, ಬಾಸಿಂಗ ಹರಿದುಹಾಕಿ ಸಿಂಗಾರ ಕೋಣೆಯಲ್ಲಿಯ ಹೂ-ದೀಪಗಳನ್ನು ಜಜ್ಜಿಬಿಡುವರು ! ಆದರೆ ಶಿಯಾಂಗ್-ಲಿನ್-ಸಾವೊ ಮಾತ್ರ ಹೀಗೆ ಯಾರಂತೆಯೂ ಮಾಡಲಿಲ್ಲ.

" ಮೊದಲೇನೋ ಅವಳು ಹೆಣ್ಣುಹುಲಿಯಾಗಿದ್ದಳು. ಅತ್ತಳು; ಚೀರಿದಳು. ಆದರೆ ' ಹೂ ' ಹಳ್ಳಿಗೆ ಮುಟ್ಟುವಷ್ಟರಲ್ಲಿ ಅವಳ ದನಿಯೇ ಬಿದ್ದಿತು ಅವಳನ್ನು ಇಬ್ಬರು ಹೂಮಂಚದಿಂದ ಎಳೆದುದಾಯಿತು. ದೇವರ ಮನೆಗೆ ಒಯ್ಯಲು ಕು-ಜಾ-ತ-ಜಾ ಮಾಡಲೊಪ್ಪಲಿಲ್ಲ. ಹಿಡಿ ದವರು ಸ್ವಲ್ಪ ಕೈ ಸಡಿಲಿಸಿದರೊ ಇಲ್ಲವೊ ಅಷ್ಟರಲ್ಲಿ ಕೊಸರಿಕೊಂಡು ಜಗು ಲಿಗೆ ಜೋರಾಗಿ ಹಾಯ್ದು ತಲೆಯಪ್ಪಳಿಸಿದಳು. ಅಯ್ಯಯ್ಯೊ ! ಬುದ್ಧ ದೇವಾ! ಅವಳ ತಲೆಯಲ್ಲಿ ಭೋಕು ಬಿದ್ದು ರಕ್ತ ಪುಟಿಯಹತ್ತಿತು. ಎರಡು ಹಿಡಿ ಧೂಪದ ಹುಡಿಯನ್ನು ಗಾಯಕ್ಕೆ ತುಂಬಿ ಎರಡು ಬಟ್ಟುದಪ್ಪ ಕೆಂಪು ಅರಿವೆ ಸುತ್ತಿದರೂ ರಕ್ತ ನಿಲ್ಲಲಿಲ್ಲ. ಗಂಡಿನ ಕೋಣೆ ಹೊಗಿಸುವವರೆಗೂ

ಅವಳು ಗುದ್ದಾಟ ಬಿಡಲಿಲ್ಲ ಅಲ್ಲಿಯೂ ಶಪಿಸುತ್ತಿದ್ದಳಂತೆ. ಪ್ರತೀಕಾರವೆಂದರೆ ಹೀಗಿರಬೇಕು. ನಿಜವಾಗಿ ಆದದ್ದು ಹೀಗೆ, ತಾಯೀ ! "

ಜಡೆಗಟ್ಟಿದ ತಲೆಯನ್ನವಳು ಅಲ್ಲಾಡಿಸುತ್ತ ಸುಮ್ಮನಾಗಿ ನೆಲ ನೋಡುತ್ತ ನಿಂತಳು.

"ಮುಂದೇನಾಯಿತು ? "

"ಅವಳು ಆ ದಿನವೂ ಮರುದಿನವೂ ಏಳಲೇ ಇಲ್ಲವಂತೆ! "

"ಆಮೇಲೆ ?"

"ಆಮೇಲೆಯೆ ? ಅಂತೂ ಒಮ್ಮೆ ಎದ್ದಳಂತೆ. ವರುಷದಲ್ಲಿಯೆ ಅವಳಿಗೆ ಒಂದು ಗಂಡುಮಗುವಾಯಿತು. ನಾನು ತಾಯಿಯ ಮನೆಯಲ್ಲಿ ಇರುವಾಗ ಕೆಲವು ಜನ 'ಹೂ' ಹಳ್ಳಿಯಿಂದ ಬಂದವರು ಅವಳನ್ನು ಕಂಡೆವೆಂದು ಹೇಳಿದರು. ತಾಯಿ-ಮಕ್ಕಳಿಬ್ಬರೂ ಪುಷ್ಟವಾಗಿದ್ದರಂತೆ. ಅಲ್ಲಿ ಸುದೈವದಿಂದ ಅತ್ತೆಯೂ ಇರಲಿಲ್ಲ. ಅವಳ ಗಂಡ ಗಟ್ಟಿಗ ಮತ್ತು ಒಳ್ಳೆಆಳು. ಸ್ವಂತ ಮನೆಯಿದೆ. ನಿಜವಾಗಿಯೂ ಅವಳು ದೈವಶಾಲಿ ತಾಯೀ! "

ಅಂದಿನಿಂದ ದೊಡ್ಡತ್ತೆ ಶಿಯಾಂಗ್-ಲಿನ್-ಸಾವೊಳ ಕೆಲಸದ ವಿಷಯ ಮರೆತಳು. ಮತ್ತು ಅವಳ ಹೆಸರನ್ನು ಕ್ವಚಿತ್ತಾಗಿ ಎತ್ತುತ್ತಿದ್ದಳು

* * * *

## ( ೩ )

ಮತ್ತೆ ಎರಡು ವರ್ಷ ಕಳೆದ ಮೇಲೆ ಶರತ್ಕಾಲದಲ್ಲಿ 'ವೈ' ಮುದುಕಿ ಒಂದು ದಿನ ಶಿಯಾಂಗ್-ಲಿನ್-ಸಾವೊಳೊಡನೆ ಬಂದುಬಿಟ್ಟಳು. ಶಿಯಾಂಗ್-ಲಿನ್-ಸಾವೊ ಮೊದಲಿನಂತೆಯೆ ತಲೆಗೆ ಬಿಳಿಯ ಬಟ್ಟೆ ಸುತ್ತಿ, ಕಪ್ಪು ಅಂಗಿ, ನೀಲಿ ಜಾಕೀಟು, 'ಬೆಳ್ದಿಂಗಳ ಬಣ್ಣದ' ನಿಲುವಂಗಿ ಹಾಕಿಕೊಂಡಿದ್ದಳು. ಮುಖಚರ್ಯೆ ಮೊದಲಿನಂತೆಯೆ. ಆದರೆ ಗಲ್ಲ ಒಳಸೇರಿದ್ದವು. ಕಣ್ಣು ಹನಿಗೂಡಿದ್ದವು. ಮೊದಲಿನ ಅವುಗಳ ಕಾಂತಿ ಅಳಿದುಹೋಗಿತ್ತು. ಅವಳು ತಂದುದು ಒಂದು ಬುಟ್ಟಿ; ಒಂದು ಹಾಸಿಗೆ ಸುರುಳಿ. ಎರಡನ್ನೂ ಪಡಸಾಲೆಯ ಮೇಜಿನ ಮೇಲಿಟ್ಟಳು. ಜೊತೆಗೆ ಬಂದ 'ವೈ' ಮುದುಕಿ ದೈನ್ಯ ಮುಪ್ರೆಯಿಂದ ದೊಡ್ಡತ್ತೆಗೆ ಹೇಳಹತ್ತಿದಳು: "ದೈವದಾಟ ವಿಚಿತ್ರ

ವೆನ್ನುವದು ಸುಳ್ಳಲ್ಲ." ("ಆಗಸವು ಎಂಥ ಗಾಳಿ ಮೋಡಗಳನ್ನು ತರು ವದೋ ತಿಳಿಯದು") ಅವಳ ಗಂಡ ಗಟ್ಟಿಗನಾಗಿಯೆ ಇದ್ದ. ಉಕ್ಕುವ ತಾರುಣ್ಯದಲ್ಲಿಯೆ ಅವನು ಜ್ವರಕ್ಕೆ ತುತ್ತಾಗಬಹುದೆಂದು ಯಾರು ಬಗೆದಿದ್ದರು ? ಜ್ವರ ಬಿಟ್ಟು ಗುಣವಾಗಿತ್ತು; ಆದರೆ ತಂಗಳ ಅನ್ನ ತಿನ್ನಬೇಕೆ ? ಮತ್ತೆ ಬಂದ ಜ್ವರ ಬಿಡಲಿಲ್ಲ. ಪಾಪ ! ಮಗುವನ್ನು ನೋಡಿಕೊಂಡು ಕಟ್ಟಿಗೆ ಕಡಿದೊ, ಚಹದೆಲೆ ಆರಿಸಿಯೊ, ರೇಸಿಮೆಹುಳ ಕೂಡಿಸಿಯೊ—ಇವೆಲ್ಲವುಗಳಲ್ಲಿ ಅವಳದು ನುರಿತ ಕೈ -- ಜೀವನ ಸಾಗಿಸುತ್ತಿದ್ದಳು. ಆ ಬೆಳಕೂ ನಂದಿ ಹೋಗಬೇಕೆ ? ತೋಳ ಎತ್ತಿಕೊಂಡು ಹೋದೀತೆಂದು ಯಾರು ತಿಳಿದಿದ್ದರು ? ನಿಜಕ್ಕೂ ಮಗುವು ತೋಳಕ್ಕೆ ಬಲಿಯಾಯಿತು !

ಬೇಸಿಗೆ ಅರ್ಧಗಳಿದಿತ್ತು. ತೋಳಗಳ ಭಯವು ಆಗ ಸಾಮಾನ್ಯವಾಗಿ ಇರುವದೇ ಇಲ್ಲ. ದುರ್ದೈವ ! ತೋಳಕ್ಕೆ ಮಗು ಸಿಕ್ಕು ಸಾಯಬೇಕೆ ? ಐ-ಯಾ ! ಇದೀಗ ಅವಳು ಪರದೇಶಿ. ಅವಳ ಗಂಡನ ಭಾವ ಬಂದು ಮನೆಮಾರು ದೋಚಿಕೊಂಡ; ಮತ್ತು ಒಂದು ಕಸೂ ಕೊಡದೆ ಇವಳನ್ನು ಹೊರದೂಡಿದ. ಇವಳೇನು ಮಾಡಬೇಕು? "ಹಾದಿಯಿಲ್ಲ, ಬಟ್ಟೆಯಿಲ್ಲ'' ಎಂಬಂತೆ ದಿಕ್ಕುಗೇಡಿಯಾಗಿದ್ದಾಳೆ. ಮತ್ತೆ ನಿಮ್ಮ ಆಶ್ರಯಕ್ಕೆ ಬಂದಿದ್ದಾಳೆ. ಈಗ ಹಿಂದೆ ಯಾವ ಅತ್ತೆಯ ಪೀಡೆಯೂ ಉಳಿದಿಲ್ಲ. ನಿಮಗೂ ಒಳ್ಳೆ ಆಳು ಬೇಕಾಗಿದೆಯೆಂದು ನನಗೆ ಗೊತ್ತಿದ್ದುದರಿಂದ ನಾನೇ ಕರೆದುಕೊಂಡು ಬಂದೆ. ನಿಮ್ಮ ಮನೆಯ ನಡಾವಳಿಯನ್ನೆಲ್ಲ ಇವಳು ಬಲ್ಲವಳಾದ್ದರಿಂದ ಹೊಸ ಆಳಿಗಿಂತ ಲೇಸು."

"ನಾನೇ ಮಂಕು ನಿಜ !'' ಎಂದು ಶಿಯಾಂಗ್-ಲಿನ್-ಸಾವೊ ಬಾಡಿದ ಕಣ್ಣುಗಳನ್ನು ಒಂದು ಕ್ಷಣ ಮೇಲೆತ್ತಿ ದೀನಸ್ವರದಿಂದ ಸುರುವು ಮಾಡಿದಳು: "ಬೆಟ್ಟದ ಮೇಲೆ ಹಿಮ ಬೀಳುತ್ತಿರುವಾಗ ಕಾಡು ಮೃಗಗಳು ಕೊಪ್ಪಕ್ಕೆ ನುಗ್ಗುವವಲ್ಲದೆ ಆಹಾರಕ್ಕಾಗಿ ಹಳ್ಳಿಗಳಲ್ಲಿಯೂ ಬರುವವೆಂದು ಮಾತ್ರ ನನಗೆ ಗೊತ್ತಿತ್ತು. ಬೇಸಿಗೆ ಬಲಿತ ಮೇಲೂ ಅವು ಹೀಗೆ ಭಯಂಕರವಾಗುವವೆಂದು ತಿಳಿದಿರಲಿಲ್ಲ. ಒಂದು ದಿನ ನಾನು ಬೆಳಿಗ್ಗೆ ಎದ್ದೆ ಒಂದು ಸಣ್ಣ ಬುಟ್ಟಿಯಲ್ಲಿ ಅವರೆಕಾಯಿ ಹಾಕಿ 'ಆ-ಮಾವೊ'

ನಿಗೆ ಅವುಗಳನ್ನು ಸುಲಿಯುತ್ತ ಬಾಗಿಲಲ್ಲಿ ಕುಳಿತಿರಲು ಹೇಳಿದೆ. ಅವನು ಒಲು ಚುರುಕು ಮತ್ತು ಹೇಳಿದಂತೆ ಮಾಡುವವ. ಅಂತೆಯೆ ಅವನನ್ನು ಬಾಗಿಲಲ್ಲಿ ಕುಳ್ಳಿರಿಸಿ ಹಿತ್ತಲಲ್ಲಿ ಕಟ್ಟಿಗೆ ಕಡಿದು ಅಕ್ಕಿ ಒಕ್ಕಲು ನಾನು ಹೋದೆ. ಅಕ್ಕಿ ತೊಳೆದು ಪಾತ್ರೆ ಸುರುವಿ ಅವರೆ ಬೇಯಿಸಬೇಕೆಂದು 'ಆ-ಮೊವೊ' ನನ್ನು ಕೂಗಿದೆ. ಉತ್ತರ ಬರಲಿಲ್ಲ. ಬಾಗಿಲಕ್ಕೆ ಓಡಿದೆ. 'ಆ-ಮೊವೊ' ಇರಲಿಲ್ಲ. ಅವರೆ ಸುತ್ತಲೂ ಚೆಲ್ಲಾಡಿದ್ದವು. ಅವನೆಂದೂ ಹೇಳದೆ ಆಟಕ್ಕೆ ಹೊರಗೆ ಹೋಗುತ್ತಿರಲಿಲ್ಲ. ನಾನು ಗಾಬರಿಯಿಂದ ಮನೆಮನೆಗೆ ಅಲೆದೆ. ಯಾರೂ ಅವನನ್ನು ಕಂಡುದಾಗಿ ಹೇಳಲಿಲ್ಲ. ನನಗೆ ಭಯ ವಾಯಿತು. ಅವನನ್ನು ಹುಡುಕಲು ನೆರವಾಗಬೇಕೆಂದು ಊರವರಿಗೆ ಕೇಳಿದೆ. ಹತ್ತಾರು ಜನ ಕೂಡಿ ಬೆಳಗಿನಿಂದ ಇಳಿಹೊತ್ತಿನ ವರೆಗೆ ಅಡ ವಿಯ ಮೂಲೆಮೂಲೆ ಸುತ್ತಿದೆವು ಕೊನೆಗೆ ಒಂದು ಕಂಟಿಯ ಮೇಲೆ ಅವನ ಚಿಕ್ಕ ಕೆರವು ಕಾಣಿಸಿದವು. ಆಗಲೆ ಎಲ್ಲರೂ ಅವನನ್ನು ತೋಳ ಒಯ್ದಿರಬೇಕೆಂದು ಊಹಿಸಿದರು. ಆದರೆ ನನಗೆ ನಂಬಿಗೆಯಾಗಲಿಲ್ಲ. ಕಾಡಿನಲ್ಲಿ ಇನ್ನೂ ಸ್ವಲ್ಪ ಮುಂದೆ ಹೋಗಲು ಅವನ ದೇಹ ಹುಲ್ಲ ಮೇಲೆ ಬಿದ್ದಿತ್ತು ಕಿವಿ ಮೂಗು ಕಿತ್ತಿಹೋಗಿದ್ದವ. (೧) ಒಂದು ಕೈಯಲ್ಲಿ ಅವರೆಯ ಬುಟ್ಟಿ ಇನ್ನೂ ಗಟ್ಟಿಯಾಗಿಯೆ ಹಿಡಿದಂತಿತ್ತು." ಮುಂದೆ ಅವಳಿಗೆ ಮಾತು ಬರಲಿಲ್ಲ. ದುಃಖದ ಆವೇಗದಿಂದ ತಡವರಿ ಸುತ್ತ ಹಾಗೊಂದು ಹೀಗೊಂದು ಶಬ್ದ ಆಡಹತ್ತಿದಳು.

ದೊಡ್ಡತ್ತೆ ಮೊದಲೇನೊ ಅನುಮಾನಿಸುತ್ತಿದ್ದಳು ಈ ಕರುಣ ಕತೆ ಕೇಳಿದ ಮೇಲೆ ಅವಳ ಕಣ್ಣೂ ಹನಿಗೂಡಿದವು. ಒಮ್ಮೆಲೆ ಆಕೆಗೆ ಸಾಮಾನು ಒಳಗಿಡಲು ಹೇಳಿದಳು. 'ವೈ' ಮುದುಕಿ ಏನೋ ಭಾರ ಇಳುಹಿದಂತೆ ನಿಟ್ಟುಸಿರಿಟ್ಟಳು. ಶಿಯಾಂಗ್-ಲಿನ್-ಸಾವೊ ಹೇಗೊ ಸಮಾಧಾನ ತಂದು ಕೊಂಡು ಮರುಮಾತಿನ ದಾರಿ ಕಾಯದೆ ತನ್ನ ಬುಟ್ಟಿ ಮತ್ತು ಹಾಸಿಗೆ ಒಳಗೆ ತೆಗೆದುಕೊಂಡು ಹೋದಳು ಮನೆ ಅವಳ ಪರಿಚಯದ್ದೇ ಆಗಿತ್ತು.

ಹೀಗೆ ಮತ್ತೆ 'ಲೋಚಿಂಗ' ದಲ್ಲಿ ಅವಳು ಕೆಲಸಕ್ಕೆ ಸೇರಿದಳು.

---

೧) ಪೂರಾ ಛಿನ್ನವಿಚ್ಛಿನ್ನವಾಗಿತ್ತು.

ಜನರು ಅವಳನ್ನು ಮೊದಲಿನ ಗಂಡನ ಹೆಸರಿಂದೇ 'ಶಿಯಾಂಗ್-ಲಿನ್-ಸಾವೊ ಎಂದು ಕರೆಯುತ್ತಿದ್ದರು.

ಆದರೆ ಅವಳು ಮೊದಲಿನ ಶಿಯಾಂಗ್-ಲಿನ್-ಸಾವೊ ಆಗಿರಲಿಲ್ಲ. ಆ ಕೆಲಸದ ಹುರುಪೂ, ಅಚ್ಚುಕಟ್ಟುತನವೂ ಎಲ್ಲಿಯೊ ಹೋಗಿದ್ದವು. ಕೈಕಾಲು ಜಡವಾದಂತೆ ಇದೀಗ ಅವಳು ದುಡಿಯುತ್ತಿದ್ದಳು. ನಗೆಯಂತೂ ಅವಳ ಮುಖದ ಮೇಲಿಂದ ಮಾಯವಾಗಿತ್ತು. ಅದನ್ನು ಹೆಣದ ಕಳೆ ಆವರಿಸಿತ್ತು. ಸ್ವಲ್ಪ ಆರವು-ವರವೂ ಬಂದಿತ್ತು. ಇದರಿಂದಾಗಿ ಅವಳ ವಿಷಯ ದೊಡ್ಡತ್ತೆಗೆ ಬೇಗನೆ ಬೇಸರಕ್ಕಿಟ್ಟಿತು ನಾಲ್ಕನೆ ದೊಡ್ಡಪ್ಪನೂ ಹಾಗೆಯೆ. ಅವನು ಮೊದಲೆ ಅವಳನ್ನು ಇಟ್ಟುಕೊಳ್ಳಲು ಒಪ್ಪದವ ಆದರೂ 'ಏನೊ ಹೋಗಲಿ' ಎಂದು ಸುಮ್ಮನಿದ್ದ. ಈಗಂತೂ ಅವನಿಗೆ ಇದೆಲ್ಲ ತಲೆಶೂಲೆಯಾಯಿತು. ಇದಲ್ಲದೆ ಅವನು ಧರ್ಮಭೀರು. ಎರಡು ಸಲ ವಿಧವೆಯಾದವಳನ್ನು ಮನೆಗೆಲಸದಲ್ಲಿ ಸೇರಿಸಿಕೊಂಡರೆ ದೇವ ಪಿತೃಗಳು ಕೋಪಿಸುವರೆಂದು ಅಂಜಿಕೆ ಅವಳಾದರೂ ಭೂಮಿಗೂ ಭಾರ; ಸ್ವರ್ಗಕ್ಕೂ ಬೇಡ ಎಂಬಂತಿದ್ದಳು ಕೆಲಸ ಮಾಡಿದರೆ ಮಾಡುತ್ತಿರವಲ್ಲ ಆತ್, ಆದರೆ ದೇವಪಿತೃಕಾರ್ಯಗಳಲ್ಲಿ ಅವಳು ಅಡುಗೆ ಮಾಡಬಾರದು, ಯಾವ ಪದಾರ್ಥವನ್ನೂ ಮುಟ್ಟಬಾರದು. ಅಂದು ದೊಡ್ಡತ್ತೆಯೆ ಎಲ್ಲ ಮಾಡಬೇಕು. ಎಂದು ಹೇಳಿದ.

ನಾಲ್ಕನೆಯ ದೊಡ್ಡಪ್ಪನ ಮನೆಯಲ್ಲಿ ಮೊದಲಿನಿಂದ ನಡೆದುಬಂದ ದೇವಪಿತೃಕಾರ್ಯಗಳು ಬಹಳ ಮುಖ್ಯ. ಅವನೂ ಅವುಗಳನ್ನು ಚಾಚೂ ತಪ್ಪದೆ ನಡೆಸುವ. ಈ ಸಲದ ಕಾರ್ಯದಲ್ಲಿ 'ಶಿಯಾಂಗ್-ಲಿನ್-ಸಾವೊ' ಮೊದಲಿನಂತೆ ಜಗುಲಿಯನ್ನು ಸಿಂಗರಿಸುವದು, ಅದರ ಮೇಲೆ ಮದ್ಯದ ಬಟ್ಟಲುಗಳು, ಅನ್ನದ ತಟ್ಟೆಗಳು ಮೊದಲಾದವುಗಳನ್ನು ಇಡುವ ಎತ್ತುಗಡೆಯಲ್ಲಿದ್ದಳು. ಆಗ ದೊಡ್ಡತ್ತೆ ಬಂದು "ಶಿಯಾಂಗ್-ಲಿನ್-ಸಾವೊ, ಅದಿರಲಿ ಬಿಡು, ನಾನೆಲ್ಲ ನೋಡಿಕೊಳ್ಳುತ್ತೇನೆ" ಎಂದು ಕೂಗಿದಳು. ಆಕೆ ಗಾಬರಿಯಿಂದ ಹಿಂದೆ ಸರಿದು ಮೇಣಬತ್ತಿಗಳನ್ನು ತರ ಹೋದಳು. ಮತ್ತೆ ದೊಡ್ಡತ್ತೆ "ಬೇಡ, ಬೇಡ, ನಾನೇ ಎಲ್ಲ ಮಾಡು

ತ್ತೇನೆ.” ಎಂದಳು.

‘ಶಿಯಾಂಗ್-ಲಿನ್-ಸಾವೊ’ಳಿಗೆ ಏನು ಮಾಡುವದಕ್ಕೂ ತೋಚದು. ಏನಾದರೂ ಮುಟ್ಟಹೋಗಲು ದೊಡ್ಡತ್ತೆ ದೂರದಿಂದಲೇ ‘ಸರಿ’ ಎಂದು ಕೂಗುತ್ತಿದ್ದಳು. ಅಂತೂ ಅಂದು ಅವಳಿಗೆ ಒಲೆ ಉರಿಸುತ್ತ ಕೂಡುವದರ ಹೊರತು ಮತ್ತೇನೂ ಕೆಲಸವಿರಲಿಲ್ಲ.

‘ಲೋಚಿಂಗ’ದಲ್ಲಿ ಎಲ್ಲರೂ ಅವಳನ್ನು ‘ಶಿಯಾಂಗ್-ಲಿನ್-ಸಾವೊ’ ಎಂದೇ ಇನ್ನೂ ಕರೆಯುತ್ತಿದ್ದರು. ಆದರೆ ಈಗ ಅವರ ದನಿಯಲ್ಲಿಯೂ ಒಂದು ತರದ ಆಕಾರವಿರುತ್ತಿತ್ತು. ಅವಳೊಡನೆ ಮಾತಾಡಿದರೂ ಸಹಾನುಭೂತಿಯಿರಲಿಲ್ಲ. ಒಂದು ಬಗೆಯ ತಿರಸ್ಕಾರದಿಂದ ಮೆಲ್ಲನೆ ನಕ್ಕುಬಿಡುತ್ತಿದ್ದರು. ಅವಳಿಗೆ ಇದಾವದೂ ತಿಳಿಯದು. ಅವಳು ವಿಶೇಷ ಲಕ್ಷಿಸುತ್ತಲೂ ಇರಲಿಲ್ಲ. ತನ್ನ ಮನವನ್ನು ಕೊರೆಯುತ್ತಿದ್ದ ಕತೆಯನ್ನು ಜನ ಕೇಳಲಿ ಕೇಳದಿರಲಿ ಹೇಳುವದನ್ನು ಆರಂಭಿಸಿಯೆ ಬಿಡುತ್ತಿದ್ದಳು.

“ಅಯ್ಯೋ, ನಾನೇ ತಿಳಿಗೇಡಿ” ಎಂದು ಮತ್ತೆ ಮತ್ತೆ ಅನ್ನುವಳು. “ಬೆಟ್ಟದ ಮೇಲೆ ಹಿಮ ಬಿದ್ದಾಗ ಕಾಡುಮೃಗಗಳು ಕೆಳಗೆ ಬರುವವೆಂದಷ್ಟೆ ನನಗೆ ಗೊತ್ತು. ಆದರೆ ಬೇಸಿಗೆ ಬಲಿತ ಮೇಲೂ ಅವು ಹೀಗೆ ನುಗ್ಗುವವೆಂದು ನನಗೇನು ಗೊತ್ತು!............”

ಹೀಗೆ ಕತೆ ಸುರುಮಾಡಿ ದೊಡ್ಡ ದನಿ ತೆಗೆದು ಅಳುತ್ತ ಎದೆ ಎದೆ ಬಡಕೊಂಡಾಗ ಅವಳ ಕತೆ ಮುಗಿಯುತ್ತಿತ್ತು.

ಯಾರು ಕೇಳಿದರೂ ಮರುಕ ತೋರದಿರುತ್ತಿರಲಿಲ್ಲ. ಹೆಂಗಸರಂತೂ ಅವಳು ಎರಡು ಸಲ ಮದುವೆಯಾಗಿ ಇಬ್ಬರೂ ಗಂಡಂದಿರನ್ನೂ ಒಂದು ಮಗುವನ್ನೂ ನೀಗಿದ ಪಾಪಿಯೆಂದು ತಿರಸ್ಕರಿಸುತ್ತಿದ್ದ ಭಾವನೆಯನ್ನು ಬಿಟ್ಟು ಅವಳ ಕರುಣಕತೆಗೆ ಕಂಬನಿಗರೆಯುತ್ತಿದ್ದರು. ಅವಳು ಯಾರು ಭೆಟ್ಟಿಯಾದರೂ ಎಷ್ಟುಸಲವಾದರೂ ತನ್ನ ಕತೆಯನ್ನು ಸುರುಮಾಡುವಳು.

ಆದರೆ ಜನ ಎಷ್ಟುಸಲ ಕೇಳೀತು! ಮುದುಕಿಯರೂ, ಬುದ್ಧ-ಭಕ್ತರೂ ಕೂಡ ಕೇಳಿ ಬೇಸತ್ತರು. ಅವರಿಗೂ ಅವಳ ಕತೆ ಕೇಳುತ್ತ ಕಣ್ಣು ಹನಿ ತರಬೇಕಾದರೆ ಕಷ್ಟವಾಗುತ್ತಿತ್ತು. ಇದೀಗ ಪಟ್ಟಣದಲ್ಲಿ ಎಲ್ಲ

ರಿಗೂ ಆ ಕತೆ ಪಾಠವಾಗಿತ್ತು. ಹತ್ತಾರು ಸಲ ಕೇಳಿದ್ದನ್ನೆ ಮತ್ತೆ ಕೇಳುವ ದೆಂದರೆ ಎಷ್ಟು ತಲೆಬೇಸರ!

“ಅಯ್ಯೊ, ನಾನೇ ತಿಳಿಗೇಡಿ” ಎಂದು ಅವಳು ಸುರುವು ಮಾಡು ವಳು.

“ಹೌದು. ನಿಮಗೆ ಬೆಟ್ಟದ ಮೇಲೆ ಹಿಮ ಬಿದ್ದಾಗಷ್ಟೆ ಕಾಡು ಮೃಗ ಕೆಳಗೆ ಬರುವವು ಮತ್ತು ಆಹಾರಕ್ಕಾಗಿ ಹಳ್ಳಿಗಳನ್ನು ನುಗ್ಗುವ ವೆಂದು ಗೊತ್ತು..........” ಎಂದು ಎದುರಿಗಿದ್ದವರು ಅನ್ನಹತ್ತುವರು. ಮತ್ತೊಬ್ಬರು ಮುಂದಿನ ವಾಕ್ಯ ಹೇಳುವರು. ಅವಳಿಗೆ ಮಾತಾಡಲು ಅವ ಕಾಶವೇ ಸಿಗದಂತಾಗುತ್ತಿತ್ತು. ಮತ್ತು ಕೇಳಿಯೂ ಕೇಳದಂತೆ ಜನ ಹೋಗಿ ಬಿಡಹತ್ತಿದರು.

‘ಶಿಯಾಂಗ್-ಲಿನ್-ಸಾವೊ’ ಬಾಯ್ದೆರೆದು ಹಾಗೆ ನಿಂತುಬಿಡುವಳು. ಅವಳಿಗೆ ಯಾರನ್ನೊ ಅದೇ ಮೊದಲು ಕಂಡಂತಾಗುತ್ತಿತ್ತು. ಕೊನೆಗೆ ತನ್ನ ಮುಗಿಯದಾಯುಷ್ಯಕ್ಕೆ ಬೇಸತ್ತಂತೆ ಹೆಜ್ಜೆ ಹಾಕುವಳು. ಆದರೆ ಅವಳ ಮನವನ್ನು ಮುಚ್ಚಿದ ಆ ನೆನಪಿನಿಂದ ಅವಳಿಗೆ ಶಾಂತಿಯೇ ಇರಲಿಲ್ಲ ಅವಳು ಹೇಗಾದರೂ ಅದನ್ನು ಆಡಿಕೊಂಡರೇ ಸಮಾಧಾನ. ಅದಕ್ಕಾಗಿ ಯಾರನ್ನು ಕಂಡರೂ ಒಂದಿಲ್ಲೊಂದು ಬಗೆಯಿಂದ ಮಾತನ್ನು ತನ್ನ ಕತೆಗೆ ತಿರುಗಿಸುವಳು. ಎಲ್ಲಿಯಾದರೂ ಅವರೆಕಾಳು, ಒಂದು ಬುಟ್ಟಿ, ಹೆರವರ ಮಕ್ಕಳು ಕಂಡರೆ ಸಾಕು, ತನ್ನ ‘ಆ ಮೊವೊ’ನ ಕತೆಯನ್ನೆ ಹೇಳಹತ್ತು ವಳು. ಮೂರು ನಾಲ್ಕು ವರುಷದ ಮಗು ಕಣ್ಣಿಗೆ ಬಿದ್ದರೆ “ಆ-ಮೊವೊ, ಬದುಕಿದ್ದರೆ ಇಷ್ಟೆ ಆಗುತ್ತಿದ್ದ” ಎನ್ನುವಳು.

‘ಶಿಯಾಂಗ್-ಲಿನ್-ಸಾವೊ’ಳ ನೋಟದಲ್ಲಿ ಭಯಾನಕತೆ ಬಂದಿತ್ತು. ಅವಳು ನೋಡುತ್ತಿರುವಳೆಂದು ಮಕ್ಕಳು ತಿಳಿದ ಕೂಡಲೆ ಗಾಬರಿಯಿಂದ ಓಡಿ ತಾಯಂದಿರ ಸೆರಗಿನಲ್ಲಿ ಮರೆಯಾಗಲೆತ್ನಿಸುವವು. ‘ಸಾವೊ’ ಓಡಿದ ಮಕ್ಕಳನ್ನು ನೋಡುತ್ತ ನಿಂತುಬಿಡುವಳು. ಇದೂಕೂಡ ಬರಬರುತ್ತ ಚೇಷ್ಟೆಯಾಗಹತ್ತಿತು. ಅವಳು ಎಲ್ಲಿಯಾದರೂ ಆಶೆಯಿಂದ ಮಗು ವೊಂದನ್ನು ನೋಡುತ್ತ ನಿಂತಿರಲು, ಯಾರಾದರೂ “ಶಿಯಾಂಗ್-ಲಿನ್-

ಸಾವೊ, ಆ–ಮೊವೊ ಬದ.ಕಿದ್ದರೆ ಇಷ್ಟೆ ಆಗುತ್ತಿದ್ದನಲ್ಲವೆ?" ಎಂದು ಹೇಳಿ ನಗುತ್ತಿದ್ದರು.

ತನ್ನ ನೋವು ಹೀಗೆ ಪರರಿಗೆ ವಿನೋದವಾಗಿದೆಯೆಂದು ಅವಳಿಗಿನ್ನೂ ತಿಳಿದಿರಲಿಲ್ಲವೇನೊ! ಮೊದಲಿನ ಮಮತೆಯ ಮಾತುಗಳನ್ನು ಅವಳೀಗ ಕೇಳದಿದ್ದರೂ, ಬೇಸರವನ್ನು ಎಲ್ಲರೂ ತೋರಿದಂತೆ ಮಾಡಿದರೂ, ಅಪರ ಚೇಷ್ಟೆ ಅವಳ ಮುಚ್ಚಿದ ಮನವನ್ನು ಚುಚ್ಚದಿರಲಿಲ್ಲ. ಯಾರಾದರೂ ಚೇಷ್ಟೆ ಮಾಡಿದರೆ ಅವರ ಕಡೆಗೆ ಅವಳು ನೋಡುತ್ತಿದ್ದಳಷ್ಟೆ ಹೊರತು ಒಂದು ಮಾತನ್ನೂ ಪಿಟ್ಟೆನ್ನುತ್ತಿರಲಿಲ್ಲ.

(೪)

'ಲೋಚಿಂಗದ'ಲ್ಲಿ ಹೊಸ ವರುಷದ ಹಬ್ಬವೆಂದರೆ ಇಂದಿಗೂ ಉತ್ಸಾಹಕ್ಕೆ ಕಡಿಮೆಯಿಲ್ಲ. ಚಾಂದ್ರಮಾನದ ಹನ್ನೆರಡನೆಯ ತಿಂಗಳದ ಇಪ್ಪತ್ತನೆಯ ದಿನಕ್ಕೆಯೆ ಹಬ್ಬ ಆರಂಭವಾಗುವದು.

ನಾಲ್ಕನೆಯ ದೊಡ್ಡಪ್ಪ ಮಗುವರ್ಷದ ಹಬ್ಬದ ಹೊತ್ತಿಗೆ ಒಂದು ಗಂಡಾಳನ್ನೂ, 'ಲಿಯುಮಾ' ಎಂಬ ಹೆಣ್ಣಾಳನ್ನೂ ಹೆಚ್ಚಿಗೆ ಕೆಲಸಕ್ಕಿಟ್ಟು ಕೊಂಡಿದ್ದ. 'ಲಿಯುಮಾ'ಳು ನಿಜವಾಗಿ ಒಳ್ಳೆ ಹೆಂಗಸು. ಬುದ್ಧಭಕ್ತಳು. ಶಾಕಾಹಾರಿ. ಪ್ರಾಣಿಹಿಂಸೆ ಎಂದೂ ಮಾಡುವದಿಲ್ಲವೆಂಬ ವ್ರತವನ್ನು ಪಾಲಿಸುವವಳು. ಪಾಪದಿಂದ ಕೊಟ್ಟ ಕೈಯವಳಾದ ಶಿಯಾಂಗ-ಲಿನ್-ಸಾವೊ ಏನೂ ಮುಟ್ಟುವಂತಿರಲಿಲ್ಲ. ಒಲೆ ಉರಿಸುತ್ತ 'ಲಿಯುಮಾ' ಮಾಡುತ್ತಿದ್ದ ಕೆಲಸಗಳನ್ನು ನೋಡುತ್ತ ಕೂಡುವಳು. ಹೊರಗೆ ಹಿಮ ನೆಲಕ್ಕೆ ಹಾಸಿದಂತೆ ಬಿದ್ದಿತ್ತು.

"ಅಯ್ಯೊ! ನಾನೇ ತಿಳಿಗೇಡಿ" ಎಂದು ಶಿಯಾಂಗ-ಲಿನ್-ಸಾವೊ ಮುಗಿಲನ್ನು ನಿಟ್ಟಿಸುತ್ತ ನಿಟ್ಟುಸಿರಿಟ್ಟಳು.

"ಶಿಯಾಂಗ-ಲಿನ್-ಸಾವೊ, ನೀನು ಮತ್ತೆ ಅದೇ ಕತೆ ನಡೆಸಿದೆಯಲ್ಲ" ಎಂದು ಸ್ವಲ್ಪ ಸಿಟ್ಟಿನಿಂದಲೆ 'ಲಿಯುಮಾ' ನುಡಿದಳು. "ನಾನು ಹೇಳುವದನ್ನಾದರೂ ಕೇಳು; ನಿಜವಾಗಿಯೂ ನೀನು ಅಂದು ಜಗ್ಗಾಡಿ ಜಗಲಿಗೆ ಹಣೆ ಅಪ್ಪಳಿಸಿದೆಯಾ? ಅದರದೆ ಕಲೆಯೊ ನಿನ್ನ ಹಣೆಯ ಮೇಲೆ?"

“ ಹೂಂ ”

“ ಹಾಗಾದರೆ ನಾನು ಕೇಳುವದಿಷ್ಟೆ. ನಿನಗೆ ಅಷ್ಟು ಬೇಡಾಗಿದ್ದರೆ ಕೊನೆಗೆ ನೀನು ಅವನಿಗೆ ಅನುಕೂಲಳಾದುದು ಹೇಗೆ ? ”

“ ನಾನೇ ? ”

“ ಹೂಂ, ನೀನೇ ! ನೀನೇನೊ ಅರ್ಧ ಸಮ್ಮತಿಸಿರಬೇಕೆಂದೇ ನನಗೆ ತೋರುತ್ತದೆ. ಇಲ್ಲವಾದರೆ........”

“ ಅಯ್ಯೋ ! ಅವನ ತೋಳುಗಳ ಬಲವೆಷ್ಟೆಂಬುದು ನಿನಗೆ ತಿಳಿಯದು. ”

“ ಛೀ, ಅದನ್ನು ನಾನು ನಂಬಲಾರೆ. ನಿನ್ನಂತಹ ಗಟ್ಟಿಗಳಿಗೆ ಅವನನ್ನು ತಡೆಯುವದು ಅಸಾಧ್ಯವಿರಲಿಲ್ಲ. ನಿನಗೂ ಅದು ಬೇಕಾಗಿರಬೇಕು. ”

“ ಹಾಯ್,ನೀನೂ ಹೀಗೆ ಹೇಳುವದೆ ! ನಾನೂ ನೋಡುತ್ತಿದ್ದೆ, ನೀನೆ ನನ್ನ ಸ್ಥಿತಿಯಲ್ಲಿದ್ದರೆ ಎಷ್ಟು ಹೊತ್ತು ತಡೆಯುತ್ತಿದ್ದೆ. ”

‘ಲಿಯುಮಾ’ಳ ಸುಪ್ಪು ಆವರಿಸಿದ ಮೊಗದಲ್ಲಿ ನಗೆ ತೋರಿತು. ಉಪ್ಪು ಹಾಕಿದ ಅಕ್ರೋಡದ ಕಾಯಿಯಂತೆ ಮಿಂಚಿತು. ಅವಳು ಶಿಯಾಂಗ-ಲಿನ್-ಸಾವೊಳ ಹಣೆಯ ಕಲೆಯನ್ನೇ ಲಕ್ಷ್ಯಗೊಟ್ಟು ನೋಡಿದಳು. ಮತ್ತೆ ಅವಳ ಕಣ್ಣುಗಳನ್ನು ಆಮೇಲೆ “ ನೀನು ನಿಜವಾಗಿ ಬುದ್ಧಿವಂತಳಲ್ಲ. ಅಂದು ಪ್ರಾಣ ಕೊಡಲು ಇನ್ನೊಮ್ಮೆ ಯತ್ನಮಾಡಿದ್ದರೆ ನೆಟ್ಟಗಿತ್ತು. ಆದರೇನು, ನೀನು ಎರಡನೆಯ ಗಂಡನೊಡನೆ ಬಾಳಿದುದು ಎರಡೇ ವರ್ಷ. ನಿನ್ನ ತಪ್ಪಿಗೆ ಅದೆ ಶಿಕ್ಷೆಯಾಯಿತು. ನೀನು ಪರಲೋಕಕ್ಕೆ ಹೋದರೆ ಏನಾಗುವದು ವಿಚಾರಿಸಿದ್ದೀಯಾ ? ನಿನ್ನ ಗಂಡಂದಿರಿಬ್ಬರ ಆತ್ಮಗಳೂ ನಿನ್ನನ್ನು ಜಗ್ಗುವವು. ಆಗ ಏನು ಮಾಡುವದು ? ನರಕದ ದೇವನಾದ ಯೆನ್-ಲು-ತ ‘ ಆ ’ನು ನಿನ್ನನ್ನು ಕರಗಸದಿಂದ ಎರಡು ಹೋಳಾಗಿ ಸೀಳಿಸಿ ಇಬ್ಬರಿಗೂ ಹಂಚಬಹುದು. ಹೀಗೆಯೆ ಆಗುವದೆಂದು ನಾನು ತಿಳಿಯುವೆ ” ಎಂದಳು.

ಶಿಯಾಂಗ-ಲಿನ್-ಸಾವೊಳ ಮುಖದ ಮೇಲೆ ಆಶ್ಚರ್ಯವೂ ಭಯವೂ

ಕೂಡಿಯೆ ತೋರಿದವು. ಈ ವಿಚಾರ ಅವಳಿಗೆ ಹೊಸದು. ಮೊದಲಿಂದೂ ಯೋಚಿಸಿರಲಿಲ್ಲ. ಅವಳ ಗುಡ್ಡಗಾಡಿನ ಹಳ್ಳಿಯಲ್ಲಿಯೂ ಯಾರೂ ಹೇಳಿರಲಿಲ್ಲ.

" ಇನ್ನೂ ಪ್ರಾಯಶ್ಚಿತ್ತಮಾಡಿಕೊಳ್ಳಲು ಅವಕಾಶವಿದೆ. ' ತು-ತಿ ' ದೇವಾಲಯಕ್ಕೆ ಹೋಗಿ ಒಂದು ಹೊಸ್ತಿಲ ಹಾಕಿಸು. ಅದನ್ನು ಸಾವಿರಾರು ಜನ ತುಳಿದಾಗ* ನಿನ್ನ ಪಾಪಕ್ಕೆ ಶಾಂತಿಯಾದೀತು. ಇದರಿಂದ ಸತ್ತಮೇಲೆ ಒದಗುವ ಹಿಂಸೆ ತಪ್ಪಬಹುದು. ನಾನು ಹೇಳುವದು ಇಷ್ಟೇ."

ಶಿಯಾಂಗ-ಲಿನ್-ಸಾವೊ ಪಿಟ್ಕೆನ್ನಲಿಲ್ಲ. ಎದೆಯ ನೋವು ತನ್ನನ್ನು ಹಿಚುಕುತ್ತಿರುವಂತೆನಿಸಿತು ಅವಳಿಗೆ. ಮರುದಿನ ದುಃಖದ ಕೌನೆಳಲು ಅವಳ ನೋಟವನ್ನು ಆವರಿಸಿತ್ತು. ನ್ಯಾರಿಯಾದೊಡನೆ ತು-ತಿ ಗುಡಿಗೆ ನಡೆದಳು. ಪೂಜಾರಿಗೆ ಹೊಸ್ತಿಲ ಹಾಕಲು ಏಷ್ಟು ಹತ್ತುವದೆಂದು ಕೇಳಿದಳು. ಅವನು ಮೊದಲು ಒಪ್ಪಲೇ ಇಲ್ಲ. ಅವಳು ಕಣ್ಣೀರು ಕೋಡಿಯಾಗಿ ಹರಿಸಿದಾಗ ಆಗಬಹುದೆಂದನು. ಮತ್ತು ಹನ್ನೆರಡು ಸಾವಿರ ಚಿಲ್ಲರೆ ಬೇಕಾಗಬಹು ದೆಂದು ಮನಸ್ಸಿಲ್ಲದೆ ಹೇಳಿದನು

ಅವಳು ಊರಿನ ಜನದೊಡನೆ ಎಂದೂ ಮಾತು ನಿಲ್ಲಿಸಿದ್ದಳು. ತನ್ನನ್ನೂ ಕಂಡರೆ ಅವರಿಗೆ ತಿರಸ್ಕಾರವೆಂದು ಅವಳಿಗೆ ತಿಳಿದಿತ್ತು. ಆದರೆ ಇದೀಗ ಅವಳ ಮನಸ್ಸು ಉತ್ಸಾಹಗೊಳ್ಳುತ್ತಿತ್ತು. ಇದು ಜನಕ್ಕೂ ತಿಳಿಯ ಹತ್ತಿತು. ಯಾರೊಬ್ಬರೂ ಭೆಟ್ಟಿಯಾದೊಡನೆ " ಶಿಯಾಂಗ-ಲಿನ್-ಸಾವೊ, ಅಂದು ನೀನೇಕೆ ಆತನಿಗೆ ಅನುಕೂಲಳಾದೆ ? " ಎಂದು ಕೇಳುವವರು. ಮತ್ತೊಬ್ಬರು " ಪಾಪ! ಪೆಟ್ಟು ಅಷ್ಟು ಬಲವಾಗಿ ತಾಕಲಿಲ್ಲ " ಎನ್ನುವರು.

ಈ ಅಣಕ, ಈ ಕೊಂಕು ಅವಳಿಗೆ ತಿಳಿಯದಿರಲಿಲ್ಲ. ಆದರೆ ಮರು ಮಾತಾಡಿ ಪ್ರಯೋಜನವಿಲ್ಲವೆಂದು ಸುಮ್ಮನಿದ್ದುಬಿಡುವಳು. ಕೆಲಸ ಮಾತ್ರ ಮನಮುಟ್ಟಿ ಮಾಡುವಳು. ವರ್ಷ ಮುಗಿದೊಡನೆ ದೊಡ್ಡತ್ತೆಯಿಂದ

---

* ದೇವಾಲಯಕ್ಕೆ ಹೊಸ್ತಿಲ ಹಾಕಿಸುವದು ಪಾಪನಿವಾರಣೆಯ ಒಂದು ಉಪಾಯವೆಂದು ತಿಳಿಯುವರು. ಅದರ ಮೇಲೆ ಜನ ತುಳಿದಷ್ಟು ನರಕದಲ್ಲಿಯ ಶಿಕ್ಷೆ ಕಡಿಮೆಯಾಗುವದಂತೆ!

ತನಗೆ ಸಲ್ಲಬೇಕಾದ ಹಣ ಕೇಳಿ ತೆಗೆದುಕೊಂಡಳು. ಅದು ಒಟ್ಟು ಹನ್ನೆರಡು ಬೆಳ್ಳಿ ಡಾಲರಾಗಿತ್ತು.

ಮತ್ತು ಒಡತಿಯ ಒಪ್ಪಿಗೆ ಪಡೆದು ನಗರದ ಪಶ್ಚಿಮದ ತುದಿಗಿರುವ ದೇವಾಲಯಕ್ಕೆ ನಡೆದಳು. ಮರುದಿನ ಊಟದ ಹೊತ್ತಿಗೆ ತಿರುಗಿ ಬಂದಾಗ ಅವಳ ಉದಾಸೀನತೆ ಮಾಯವಾಗಿತ್ತು. ಕಣ್ಣಿನಲ್ಲಿ ಹೊಸ ಕಾಂತಿ ಮೂಡಿತ್ತು. ಮುಖ ಉಲ್ಲಸಿತವಾಗಿತ್ತು. ದೇವಾಲಯಕ್ಕೆ ಹೊಸ್ತಿಲ ಹಾಕಿಸಿ ಬಂದಿರುವದಾಗಿ ಅವಳು ದೊಡ್ಡತ್ತೆಗೆ ಹೇಳಿದಳು.

ಶರತ್-ಹಬ್ಬದ ಹೊತ್ತಿಗೆ ಆವಳು ಎಡಬಿಡದೆ ಕೆಲಸ ಮಾಡುತ್ತಿದ್ದಳು. ಮತ್ತು ಬಲಿ ಅರ್ಪಿಸುವ ದಿನ ಎಂದಿಲ್ಲದ ಉತ್ಸಾಹದಿಂದಿದ್ದಳು. ದೊಡ್ಡತ್ತೆ ಪೂಜೆಯ ಸಾಮಗ್ರಿಯನ್ನೆಲ್ಲ ತಂದಿಟ್ಟಳು.

ಆ-ನಿಯು ನಡುಮನೆಯ ಮಧ್ಯಕ್ಕೆ ಜಗುಲಿಯನ್ನು ತಂದಿಟ್ಟ. ಶಿಯಾಂಗ್-ಲಿನ್-ಸಾವೊ ತಟ್ಟನೆ ಮದ್ಯದ ಬಟ್ಟಲುಗಳನ್ನೂ ಸೌಟುಗಳನ್ನೂ ತರಹೋದಳು.

ದೊಡ್ಡತ್ತೆ "ಬೇಡ, ಅವುಗಳನ್ನು ಮುಟ್ಟಬೇಡ" ಎಂದು ಕೂಗಿದಳು.

ಚಳಕ್ಕೆ ಹಿಡಿದಂತೆ ಅವಳು ಕೈಯನ್ನು ಹಿಂತೆಗೆದಳು. ಅವಳ ಮುಖ ಬಿಳುಪೇರಿತು. ಪೆಚ್ಚಾಗಿ ನಿಂತುಬಿಟ್ಟಳು. ನಾಲ್ಕನೆಯ ದೊಡ್ಡಪ್ಪ ಬರುವ ವರೆಗೂ ಹಾಗೆಯೇ ನಿಂತಿದ್ದಳು. ಊದು ಹಾಕಲು ಬಂದ ಆತನು ಅವಳಿಗೆ ಹೋಗಲು ಹೇಳಿಬಿಟ್ಟ.

ಅಂದಿನಿಂದ ಅವಳ ಸ್ಥಿತಿಯೆ ಬದಲಾಯಿತು. ದಿನದಿನಕ್ಕೆ ಸೊರಗ ಹತ್ತಿದಳು. ದೇಹಕ್ಕಿಂತ ಮನಸ್ಸೂ ಹೆಚ್ಚು ಕೊರಗಿತ್ತು. ಜೀವವೊಂದು ಹೇಗೋ ಅಂಟಿಕೊಂಡಿತ್ತು. ಅವಳಿಗೆ ಯಾವಾಗಲೂ ಒಂದು ಗಾಬರಿ. ಒಂದು ತರದ ಭಯ. ಯಾರನ್ನು ಕಂಡರೂ ಬೆಚ್ಚುವಳು. ಒಡೆಯ ಒಡತಿಯೆದುರೂ ಅಷ್ಟೆ. ಬೆಳಕಿಗೆ ಅದೇ ಬಿದ್ದ ಇಲಿಮರಿ ಚಡಪಡಿಸುವಂತೆ ಯಾಗಿತ್ತು ಅವಳ ಸ್ಥಿತಿ. ಆರು ತಿಂಗಳ ದಾಟಲಿಲ್ಲ. ಅವಳ ತಲೆ ತುಂಬಾ ಬೆಳ್ಳಗಾಯಿತು. ಅರವು-ಮರವು ಇನ್ನೂ ಹೆಚ್ಚಾಯಿತು. ಅಕ್ಕಿ ಇಟ್ಟು

ಕೊಂಡು ಒಕ್ಕುವದನ್ನು ಮರೆತು ಸುಮ್ಮನೆ ಕುಳಿತುಬಿಡುವಳು.

" ಏನಾಯಿತು ಇವಳಿಗೆ? ಹೀಗೇಕೆ ಅದಳು? ಆವಳು ಹತ್ತಿರ ಬಂದರೆ ಹೇಗೂ ಅನಿಸುತ್ತದೆ. ದೂರ ಹೋದಷ್ಟೂ ನೆಟ್ಟಗೆ" ಎಂದು ಅವಳೆದುರಿನಲ್ಲಿಯೆ ಹೇಳುವಳು.

ಅಂತೂ ಅವಳು ಹಾಗಾದುದೇನೊ ನಿಜ. ಅವಳು ಸುಧಾರಿಸುವಂತೆಯೂ ಕಾಣಲಿಲ್ಲ. ಆವಳನ್ನು ಮತ್ತೆ 'ವೈ' ಮುದುಕಿಯ ಕಡೆಗೆ ಕಳಿಸಿಬಿಡಬೇಕೆಂದೂ ಮಾತು ನಡೆಯಿತು. ಆದರೆ ನಾನು ಲೋಚಿಂಗದಲ್ಲಿದ್ದಾಗ ಹಾಗೇನೂ ಆಗಲಿಲ್ಲ. ಮುಂದೆ ಬಹಳ ಕಾಲ ಮಾತ್ರ ಹೋಗಲಿಲ್ಲ. ನಾಲ್ಕನೆಯ ದೊಡ್ಡಪ್ಪನ ಮನೆ ಬಿಟ್ಟಮೇಲೆ 'ವೈ' ಮುದುಕಿಯೆ ಆವಳನ್ನು ಕೆಲವು ಕಾಲ ನೋಡಿಕೊಳ್ಳುತ್ತಿದ್ದಳೊ ಅಥವಾ ಅವಳು ಒಮ್ಮೆಲೆ ತಿರುಕಿಯಾದಳೊ ನಿಶ್ಚಿತವಾಗಿ ತಿಳಿಯದು.

* * * *

ಪಟಾಕಿಗಳ ಸಪ್ಪಳದೊಡನೆ ಎಚ್ಚರಾಯಿತು. ಮದ್ದಿನ ಹೊಗೆಯುರಿ ಎಲ್ಲ ಕಡೆಗೆ ಬೆಳಗುತ್ತಿದ್ದಿತು. ಮದ್ದು ಸುಡುವ ಸಪ್ಪಳವೂ ಹೆಚ್ಚಾಗಿತ್ತು. ಅದು ಬೆಳಗಿನ ಐದನೆಯ ಜಾವ. ಪ್ರಾರ್ಥನೆ ಸಲ್ಲಿಸುವ, ಹರಕೆಗಳನ್ನು ಬೇಡುವ ಸಮಯ. ಇನ್ನೂ ನಿದ್ದೆಗಣ್ಣಿನಲ್ಲಿಯೆ ಇದ್ದೆ. ಮದ್ದಿನ ಸಪ್ಪಳ ಹೆಚ್ಚಾಗುತ್ತಿತ್ತು. ಆಕಾಶದ ತುಂಬೆಲ್ಲ ಹೊಗೆ, ಬೆಳಕು. ಹಿಮದ ತುಣುಕುಗಳು ಮದ್ದಿನೊಡನೆ ತೂರಿಕೊಂಡು ಬೀಳುತ್ತಿದ್ದವು. ಆ ತಂಪು ಗಾಳಿ, ಮದ್ದಿನ ಗುಡುಗು ಇವುಗಳಿಂದ ಒಂದು ತರದ ಉತ್ಸಾಹವುಂಟಾಯಿತು. ಹಿಂದಿನ ದಿನದ ಮತ್ತು ಸರ್ವರಾತ್ರಿಯಲ್ಲಿಯ ದಣಿವೂ, ಭಾರವಾದ ಮನಸ್ಸೂ, ಈ ಹೊಸ ವಾತಾವರಣದಲ್ಲಿ ಹಗುರಾಗಿದ್ದವು. ಅದು ಪ್ರತಿ ಮನೆಯಲ್ಲಿಯೂ ' ಹರಕೆ 'ಗಳನ್ನು ಬೇಡುವ ಕಾಲ. ನೆಲ ಮುಗಿಲಿನ ದೇವತೆಗಳೆಲ್ಲ ಮನೆಮನೆಗಳಲ್ಲಿ ಮದ್ಯ, ಮಾಂಸಗಳನ್ನು ಸೇವಿಸಿ, ಊದಿನ ವಾಸನೆ ಮೂಸಿ ಮದ್ದಿನ ಕುಣಿತದೊಡನೆ ಅಂತರಿಕ್ಷಕ್ಕೆ ನೆಗೆಯುತ್ತಿರುವರೆಂದರೆ ಅದೆಷ್ಟು ಸಂತೋಷ! ಇಂಥ ತೃಪ್ತಿ ಉತ್ಸಾಹಗಳ ಭರದಲ್ಲಿ ಅವರು ' ಲೋಚಿಂಗ 'ದ ಒಳ್ಳೆಯ ಜನದ ಮೇಲೆ ಅನಂತ ಹರಕೆಗಳನ್ನು ಸುರಿಸದಿರುವರೆ !

*

# ಗಾಳಿ ಪಟಗಳು

ನೆಲದ ಮೇಲೆ ಇನ್ನೂ ಹಿಮವಿರುವಾಗ, ಎಲೆ ಉದುರಿದ ಮರದ ಕರಿಯ ಟೊಂಗೆಗಳು ನಿರ್ಮಲಾಕಾಶವನ್ನು ತಿವಿಯುತ್ತಿರುವಾಗ, ಪೇಕಿಂಗ್ ನಗರದ ವಸಂತ ಸಮಯದಲ್ಲಿ ಎಷ್ಟೆಷ್ಟೊ ಗಾಳಿಪಟಗಳು ಬಾನಲ್ಲಿ ಅದಾಗಲೆ ತೇಲಾಡಿ ನನಗೆ ವಿಸ್ಮಯದೊಡನೆ ಖಿನ್ನತೆಯನ್ನುಂಟುಮಾಡುವವು.

ನಮ್ಮ ಹುಟ್ಟೂರಿನಲ್ಲಿ ಗಾಳಿಪಟ ಹಾರಿಸುವ ಕಾಲವು ವಸಂತದ ದ್ವಿತಿಯ ಮಾಸ. ಗಾಳಿಗಾಲಿಗಳ ನಾದ ಕಿವಿಗೆ ಬಿದ್ದೊಡನೆ ಮೇಲೆ ತಲೆಯೆತ್ತಿದರೆ ಸಾಕು, ಕಂದಿಬಣ್ಣದ ಏಡಿಯಾಕಾರದ ಗಾಳಿಪಟವನ್ನೋ ಶತಪಾದಗಳುಳ್ಳ ಬೆಟ್ಟಬೆನಕದಾಕಾರದ ಗಾಳಿಪಟವನ್ನೋ ನೀವು ಯಾವಾಗಲೂ ಕಾಣಬಹುದು. ಹಂಚಿನಾಕಾರದ ಸಪ್ಪುಮಾಡದ ಗಾಳಿಪಟಗಳು ಗಾಳಿಗಾಲಿಗಳಲ್ಲದೆ ಕೆಳಕೆಳಗೆ ಹಾರಾಡುತ್ತ ಏಕಾಕಿಗಳಾದವರಂತೆ ಉದ್ವಿಗ್ನವಾಗಿ ಕಂಡುಬರುವವು. ಆದರೆ ಇದೇ ಕಾಲಕ್ಕೆ 'ವಿಲೋ' ಜಾತಿಯ ಮರಗಳು ಚಿಗಿತು ಮೊಳೆತು ಕೊಂಬುರೆಂಬೆಯಾಗಿ, ಮೊದಲನೆಯ ಭರದ 'ಪೀಚ್' ಮೊಗ್ಗುಗಳು ಅರಳಿ, ಚಿಕ್ಕಮಕ್ಕಳು ಆಕಾಶದಲ್ಲಿ ಹಾರಿಸಿದ ವಿವಿಧ ಭೂಷಣಗಳೊಡನೆ ಒಡಂಬಟ್ಟು, ಇವೆರಡೂ ವಸಂತದ ಸಜೀವ ಸಂದೇಶವನ್ನು ಸಾರುತ್ತಿವೆ. ಆದರೆ ಈಗ ನನ್ನದೆಲ್ಲಿಗೆ ಬಂದಿದೆ? ಚಳಿಗಾಲದ ತೀವ್ರತೆಯು ನನ್ನನ್ನು ಆವರಿಸಿದ್ದರೂ ನನ್ನ ಬಾಲ್ಯ-ತಾರುಣ್ಯಗಳ ನಮ್ಮ ಹುಟ್ಟೂರಿನ ಮನೆಯ ಗತಿಸಿದ ವಸಂತಗಳು ಇಲ್ಲಿಯ ಆಕಾಶದಲ್ಲಿ ಇನ್ನೂ ಉಸಿರಾಡುತ್ತಿವೆ.

ನನಗೆ ಗಾಳಿಪಟದ ಪ್ರೀತಿಯಿರಲಿಲ್ಲ. ಅವನ್ನು ಕಂಡರೆ ನನಗೆ ಅಸಹ್ಯ ಎಂಬುದೇ ನಿಜ. ಕೆಲಸಕ್ಕೆ ಬಾರದೆ ಕೂಸುಗಳ ಆಟದೊಡವೆಗಳು ಅವು ಎಂದು ನನ್ನ ಅಭಿಪ್ರಾಯ. ಆದರೆ ಅವೆ ನನಗಿಂತಲೂ ಹತ್ತು ವರ್ಷ

ಗಳಿಂದ ಚಿಕ್ಕವನಾದ ನನ್ನ ತಮ್ಮನಿಗೆ-ಯಾವಾಗಲೂ ಅವನು ರೋಗಿಯಾಗಿಯೂ ತೆಳ್ಳಗೆ ಬೆಳ್ಳಗೆ ಆಗಿಯೂ ಇದ್ದರೂ-ಗಾಳಿಪಟವೆಂದರೆ ಅತಿ ಪ್ರೀತಿ. ಅವನು ನನ್ನೊಡನಾಡುವಂತಿಲ್ಲ; ಗಾಳಿಪಟ ಅವನಿಗೆ ದೊರೆಯುವಂತಿಲ್ಲ. ಹೀಗಾಗಿ ಅವನು ಬೆರಗಿನಿಂದ ಬಾಯ್ತೆರೆದು ಮುಗಿಲಿಗೆ ದೃಷ್ಟಿಯಿಟ್ಟು ಹಗಲರ್ಧದಷ್ಟು ಕಾಲ ಪ್ರತಿಸಲ ಗಾಳಿಪಟದಾಟವನ್ನು ನೋಡುತ್ತ ನಿಲ್ಲುತ್ತಿದ್ದನು. ದೂರದಲ್ಲಿ ಒಂದು ಏಡಿ-ಗಾಳಿಪಟವು ದೊಪ್ಪನೆ ಬಿದ್ದರೆ ಸಾಕು, ಇವನು ಇಲ್ಲಿ ಕೂಗುತ್ತಿದ್ದ. ಹಂಚಿನಾಕಾರದ ಗಾಳಿಪಟದ ಜೋಡಿಯೊಂದು ಸೂತ್ರ ಬಿಚ್ಚಿಕೊಂಡು ಎಲ್ಲಿಯೋ ಹಾರಿಹೋದರೆ ಸಾಕು, ಇವನು ಇಲ್ಲಿ ಕುಣಿಯುತ್ತಿದ್ದ. ನನಗಂತೂ ಇವನು ಕೈಲಾಗದ ಹೇಡಿ ಎನಿಸುತ್ತಿತ್ತು.

ಇತ್ತೀಚೆ ನನ್ನ ತಮ್ಮನ ಹುಚ್ಚು ಕಣ್ಣಿಗೇ ಬಿದ್ದಿಲ್ಲವಲ್ಲ ಎಂದೇನೋ ಒಂದು ದಿವಸ ಹೊಳೆಯಿತು ತಾತ್ಕಾಲ ನನಗೆ ನೆನಪಾಯಿತು, ಕೆಲದಿನಗಳ ಕೆಳಗೆ ನಮ್ಮ ಹಿತ್ತಲ ತೋಟದಲ್ಲಿ ಕೊಳಕ ಬಿದಿರುಗಳನ್ನು ಆರಿಸುತ್ತ ಇವನು ಅಲೆಯುತ್ತಿದ್ದುದು. ಏನೋ ಮಹಾಘಟನೆ ನಡೆದಿರಬೇಕು ಎಂದು ತೋಚಿ ಅಡಸಲು-ಬಡಸಲು ಸಾಮಾನು ತುಂಬಿದ ನಮ್ಮ ಅಡಕಿಲ ಕೋಣೆಗೆ ಓಡುತ್ತ ನಾನು ಹೋದೆನು. ಕದ ನೂಗಿಸಿ ಧೂಳಿದ ತೊರೆಯುಲು ಸಾಮಾನು-ಸಟ್ಟುಗಳ ಮಧ್ಯದಲ್ಲಿ ದೊಡ್ಡ ಚೌಕಿಯ ಮುಂದೊಂದು ಸಣ್ಣ ಚೌಕಿಯನ್ನು ಹಾಕಿಕೊಂಡು ನಮ್ಮ ತಮ್ಮನ ಸವಾರಿಯು ಕುಳಿತದ್ದನ್ನು ಕಂಡೆನು. ನಾನು ಅವನ ದೃಷ್ಟಿಗೆ ಬಿದ್ದೊಡನೆ ಅವನು ಬೆರಗಾಗಿ ಬಣ್ಣಗುಂದಿ ನಡುಗುತ್ತ ಎದ್ದುನಿಂತನು. ಅವನಿದಿರು ಪತಂಗದಾಕಾರದ ಗಾಳಿಪಟದ ಚಟ್ಟೊಂದು ದೊಡ್ಡ ಚೌಕಿಗೆ ಆತು ನಿಲ್ಲಿಸಲಾಗಿತ್ತು. ಅದರ ಅಂಗಾಂಗಗಳು ಇನ್ನೂ ಅಂಟಿಸಿರಲಿಲ್ಲ. ಕಣ್ಣುಗಳಿಗೊಂದು ಸಿದ್ಧಪಡಿಸಿದ ಗಾಳಿಗಾಲಿಗಳ ಜೋಡಿಯೊಂದು ಕೆಂಪು ಕಾಗದದಿಂದಲಂಕೃತವಾಗಿ ಸುಮಾರು ಸಿದ್ಧವಾಗಿ ಅದರ ಬಳಿಯಲ್ಲಿತ್ತು ಈ ಕಿಡಗೇಡಿ ಪೋರನನ್ನು ನಾನು ಕಂಡುಹಿಡಿದೆನಲ್ಲಾ ಎಂಬ ತೃಪ್ತಿಯೊಂದು. ಆದರೆ ನನ್ನ ಕಣ್ಣು ತಪ್ಪಿಸಿ ಇಷ್ಟು ರಹಸ್ಯವಾಗಿ ತನ್ನ ಕಂತ್ರಾಟವನ್ನು ಇವನು ನಡೆಸಿದ್ದನಲ್ಲಾ ಎಂಬ ಸಿಡುಕೊಂದು, ಹೀಗೆ ಎರಡು ಭಾವಗಳು ನನ್ನಲ್ಲಿ ಏಕಕಾಲಕ್ಕುದಿ

ಸಿದವು. ಇಷ್ಟಾಗಿ ಇವನು ಮಾಡುವ ಎಲ್ಲ ಆಯಾಸ–ಪ್ರಯಾಸಗಳು ಮಕ್ಕಳಾಟಿದ ಒಂದು ಸೊಟ್ಟ ಆಟಿಗೆಗಾಗಿ! ನನ್ನಲ್ಲಿ ತುಚ್ಛತೆಯ ಭಾವ ಮಿತಿಮೀರಿತು. ಅವನ ಕೈಯೊಳಗಿನ ಪಟವನ್ನು ನಾನು ಕೊಸರಿದೆ. ಅದರ ದೊಂದು ಪಕ್ಕವನ್ನು ಮುರಿದೆ. ಗಾಳಿ-ಗಾಲಿಗಳನ್ನು ನೆಲಕ್ಕೆ ಬೀಸಿ ಒಗೆದು ಕಾಲಿನಿಂದ ತುಳಿದು ಅದನ್ನು ಪುಡಿ ಪುಡಿ ಮಾಡಿದೆ. ಎಷ್ಟೆಂದರೂ ಅವನಿಗಿಂತ ವಯಸ್ಸಿನಿಂದಲೂ ಶಕ್ತಿಯಿಂದಲೂ ಹಿರಿಯ ನಾನು. ಗೆಲುವು ನನಗೇ ಬಂತು. ಗೆದ್ದವನ ದರ್ಪದಿಂದ ನಾನಿತ್ತ ಹೊರಟೆ; ಅವನತ್ತ ಹೃದಯ ಭಗ್ನಿತನಾಗಿ ಸುಮ್ಮನೆ ನಿಂತುಕೊಂಡ. ಆಮೇಲೆ ಅವನಿಗೇನಾಯಿತೋ, ಅವನೇನು ಮಾಡಿದನೋ ನಾನರಿಯೆ. ನನಗದನ್ನು ತಿಳಿಯುವ ಚಿಂತೆಯೂ ಇರಲಿಲ್ಲ.

ಆದರೆ ಕೊನೆಗೊಮ್ಮೆ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವು ಬಂತು. ನಾನೂ ನನ್ನ ತಮ್ಮನೂ ಒಬ್ಬರಿಂದೊಬ್ಬರು ಅಗಲಿ ಬಹಳ ದಿನಗಳಾಗಿದ್ದವು. ನನಗಾಗಲೆ ಮಧ್ಯಮ ವಯಸ್ಸು. ದುರ್ದೈವದಿಂದಲೋ ಏನೋ ಚಿಕ್ಕಮಕ್ಕಳನ್ನು ಕುರಿತು ಪರದೇಶಿಯರೊಬ್ಬರು ಬರೆದ ಪುಸ್ತಕವನ್ನು ನಾನು ಅದೇ ಓದಿದ್ದೆ. ಆಟ-ನೋಟವೇ ಮಕ್ಕಳ ಸಹಜಪ್ರವೃತ್ತಿಯೆಂದೂ ಆಟದ ಗೊಂಬೆಯ ಜಗತ್ತೇ ಸ್ವರ್ಗವೆಂದೂ ನನಗಾಗ ಅರಿವುಂಟಾಗಿತ್ತು. ಆಗ ನನ್ನ ಬಾಲ್ಯದ ಸನ್ನೀ ಘಾತುಕತನದ ಚಿತ್ರವು ಇಪ್ಪತ್ತು ಚಳಿ ಕಳಿದರೂ ಕಂದದೆ ಕಣ್ಣೆದಿರು ಕಟ್ಟಿನಿಂತಿತು. ಅದನ್ನು ಕಂಡು ನನ್ನೆದೆ ಸೀಸ ಹೊಯ್ದಂತೆ ಅತಿ ಭಾರವಾಗಿಬಿಟ್ಟಿತು. ನಾನು ತಗ್ಗಿದೆ. ಕುಗ್ಗಿದೆ. ತೀರ ಒಮ್ಮಿಗೆಲೆ ಮುಳುಗಿಸುವಷ್ಟು ಅತಿ ಭಾರವೆನಿಸದೆ ಎದೆಯು ಒಳಗೊಳಗೆ ಕೆಳಕೆಳಗೆ ಜಗ್ಗತೊಡಗಿತು.

ಇನ್ನೇನು, ನನ್ನ ತಪ್ಪು ತಿದ್ದಿಕೊಳ್ಳುವುದು ಹೇಗೆಂಬುದು ನನಗೆ ಗೊತ್ತಿತ್ತು. ತಮ್ಮನಿಗೊಂದು ಗಾಳಿಪಟ ಕಳಿಸಿ, ಆಡಿ ನಲಿಯೆಂದು ನಾನು ಪ್ರೋತ್ಸಾಹಿಸಬಹುದಾಗಿತ್ತು. ಅಥವಾ ಮೊದಲಿಂದಲೇ ಅವನಿಚ್ಛಿಯಿದ್ದಂತೆ ಅವನೊಡಗೂಡಿ ನಾನೂ ಆಡಬಹುದಾಗಿತ್ತು. ಕೂಗಾಡಿ ಓಡಾಡಿ ನಾವು ನೆಗೆದಾಡಬಹುದಿತ್ತು. ಅಹುದು, ಆದರೇನು ? ಅವನೂ ಈ ಹೊತ್ತಿಗೆ ನನ್ನಂತೆಯೆ ಗಡ್ಡ ಬೆಳೆದವನಾಗಿರಬೇಕು. ಅಯ್ಯೋ! ಹೊತ್ತು

ಏರಿತು. ಅದಿರಲಿ ನಾನು ಅವನ ಕ್ಷಮೆ ಬೇಡಿ ಅವನು ನನಗೆ 'ಅಯ್ಯಾ, ಅದನ್ನು ಮರೆತುಬಿಡು!' ಎನ್ನಬಹುದಾದರೆ ಹೇಗೆ! ಅಹುದು. ಆಗ ನನ್ನ ಮನಸಿಗೆ ಶಾಂತಿಯಾದೀತು. ಈ ಸಮಸ್ಯೆಗೆ ಇದೇ ಪರಿಹಾರ.

ಕೆಲದಿನ ಕಳೆದ ಮೇಲೆ ನಮ್ಮ ಅವನ ಬೆಟ್ಟಿಯಾಯಿತು. ಇಬ್ಬರ ಮುಖದಲ್ಲೂ ಕಾಲವು ತನ್ನ ನೇಗಿಲ-ಗೆರೆ ಹೊಡೆದಿತ್ತು. ಅದನ್ನು ನೋಡಿ ಮತ್ತೆ ನನ್ನ ಎದೆ ಜಗ್ಗಿತು. ಆದರೂ ಆ ಮಾತು ಈ ಮಾತು ಆಗಿ ಸ್ವಾಭಾವಿಕವಾಗಿಯೆ ಹುಟ್ಟೂರು ಹುಟ್ಟುಮನೆಯ ಮಾತು ಹೊರಟು ಬಾಲ್ಯದ ನೆನಪಿನ ಮಾತೂ ಬಂತು. ನಾನು ಹಾಗೂ ಹೀಗೂ ಧೈರ್ಯ ಮಾಡಿ ಆ ಗಾಳಿಪಟದ ಸಂಗತಿಯನ್ನು ಹೇಳಿ, ಆದದ್ದೆಲ್ಲ ನನ್ನ ಯೌವನ ಮದೋನ್ಮತ್ತತೆಯ ಅಜ್ಞಾನದಾಟವೆಂದು ಒಪ್ಪಿಕೊಂಡೆ. 'ಅಯ್ಯೋ! ಅದೇನು ಮರೆತುಬಿಡು.' ಎಂದು ಅವನಿಂದ ಉತ್ತರ ಬರುವದೆಂದೂ ಅವನು ನನ್ನನ್ನು ಕ್ಷಮಿಸುವನೆಂದೂ ನನ್ನ ಹೃದಯಕ್ಕೆ ಹಗುರೆನಿಸುವುದೆಂದೂ ನಾನೆಣಿಸಿದ್ದೆ. ನಾನು ಹೇಳಿದ್ದಕ್ಕೆಲ್ಲ ಅವನು ವಿಸ್ಮಯದಿಂದ ನಸುನಕ್ಕು "ನಿಜವಾಗಿ ಹೀಗಾಗಿತ್ತೆ?" ಎಂದುಬಿಟ್ಟ. ನಾನು ಹೇಳುವದನ್ನೆಲ್ಲ ಯಾರದೊ ಇನ್ನೊಬ್ಬರ ಕಥೆ ಎಂಬಂತೆ ಕೇಳಿದ. ಆ ಘಟನೆಯ ಗಂಧವೇ ಅವನ ನೆನವಿಗಿರಲಿಲ್ಲ.

ಪೂರ್ಣ ವಿಸ್ಮೃತಿ! ದ್ವೇಷವಿಲ್ಲ, ಕ್ಷಮೆಯಿಲ್ಲ! ಅಯ್ಯೋ! ನಾನು ಅವನಿಗೆ ಕೇಳಿಕೊಳ್ಳುವದಾದರೂ ಏನು? ಎಲ್ಲವೂ ನನ್ನ ಊಹಾಪ್ರಪಂಚದಾಟವಾಯಿತಲ್ಲಾ!

ಹೆಚ್ಚಿಗೆ ಇನ್ನೇನಾಗಬೇಕು? ನನ್ನ ಜಡಾಂತಃಕರಣದಲ್ಲಿ ಈ ನೆನವಿನ ಭಾರವನ್ನು ಒಯ್ಯದೆ ಗತಿಯಿಲ್ಲ.

ಮತ್ತೆ ಇಂದು ಆಕಾಶದಲ್ಲೆಲ್ಲ ವಸಂತವು ಗರಿಗೆದರಿ ಹಾರುತ್ತಿದೆ. ನಮ್ಮ ತವರೂರಿನ ಗಾಳಿಯನ್ನೇ ಇಲ್ಲಿಯೂ ಬೀರುತ್ತಿದೆ. ಬಹುದಿನದಿಂದ ವಿಸ್ಮೃತವಾದ ನನ್ನ ಬಾಲ್ಯವು ನೆನಪಾಗಿ ಅದರೊಡನೆ ಹಿಡಿತಕೊಗ್ಗದ ಅನಿರ್ವಚನೀಯವಾದ ಖೇದವೊಂದು ನನ್ನನ್ನು ಮುಸುಕುತ್ತಿದೆ. ಒಳ್ಳೇದು, ಆ ಆಕಾಶ, ಆ ವಸಂತ ಮೇಲಿರಲಿ! ನನ್ನ ಮಣ್ಣುನೆಲವೂ ಈ ಕೊರೆಯುವ ಚಳಿಗಾಲವೂ ನನ್ನ ಪಾಲಿಗೆ ಇಲ್ಲಿ ಇದೆ.

---

# ‘ಅವ್ವನ....’*



ಚೀನಾದಲ್ಲಿ ಕೆಲದಿನ ಬಾಳಿದ ಪ್ರತಿಯೊಬ್ಬರೂ “ ಅವನ ಅವ್ವನ....” ಎಂಬ ಮಾತನ್ನೋ ಜನಬಳಕೆಯಲ್ಲಿರುವ ಅದರ ಯಾವುದೋ ಒಂದು ಪ್ರಭೇದವನ್ನೋ ಆಗಾಗ್ಗೆ ಕೇಳಿರಲು ಸಾಕು. ಈ ಬೈಗಳ ಬಳಕೆ ಹೆಜ್ಜೆಗೊಮ್ಮೆ ಎನ್ನುವಷ್ಟು ಸತತವಾಗಿದೆಯೆಂದು ನಾನೆಣಿಸಿದ್ದೇನೆ. “ ಯಾಕೆ? ಹೇಗಿದ್ದೀರಿ ?” ಎನ್ನುವ ನಮ್ಮ ಸಾಮಾನ್ಯ ಶಿಷ್ಟಾಚಾರದ ಮಾತಿನಷ್ಟೆ ಈ

---

* ಇದು ಚೀನ ಭಾಷೆಯಲ್ಲಿ ಪೂರ್ಣ ಹೇಳುವುದಾದರೆ ‘ತ್ಸಾ’-ಅ-. ಓ-ತ-ಮಾ-ತಿ-ಪಿ’ ಎಂದಾಗುವುದು. ಅದನ್ನಿಲ್ಲಿ ‘ತ-ಆಮಾ-ತಿ-ಪಿ’ (ಅವನವ್ವನ) ಎಂದು ಸಂಕ್ಷೇಪಗೊಳಿಸಲಾಗಿದೆ. ಇದನ್ನು ‘ನಾನು’ ‘ನೀನು’ ‘ಅವನು’ ಮೊದಲಾಗಿ ಹಚ್ಚಿ ಎಲ್ಲ ಪುರುಷಗಳಲ್ಲಿಯೂ ಹೇಳಬಹುದು. ಇದರ ವ್ಯಾಪ್ತಿ ಸರ್ವಮುಖವಾಗಿದೆ ಎಂದು ಲೇಖಕರು ಹೇಳುತ್ತಾರೆ. ಸಾಮಾನ್ಯವಾಗಿ ಇದರರ್ಥ ‘ಸೂಳೆಮಗ’ (ಹಾದರಕ್ಕೆ ಹುಟ್ಟಿದವ) ಎಂದಾಗುವದು. ಮಾತಾಡುವವ ಬಯ್ಯಬೇಕಾದವನ ತಂದೆ ಎಂದು ವ್ಯಂಗ್ಯವಾಗುವದು. ಆಣೆ ಇಡುವಾಗಲೂ ಇದನ್ನು ಬಳಸುವರು. ‘ಲು-ಶೂ-ನ’ರ ಮತ್ತು ಅನೇಕ ಬರಹಗಾರರ ಕತೆ ಕಾದಂಬರಿಗಳ ಪಾತ್ರಗಳ ಬಾಯಲ್ಲಿ ಈ ಮಾತು ತುಂಬಾ ಬರುತ್ತದೆ. ಮತ್ತು ಇದಕ್ಕೆ ಒಂದು ಕ್ರಾಂತಿಕರ ಹೊಸ ಅರ್ಥವೇ ತೋರುತ್ತಿದೆ. ಇದಕ್ಕಾಗಿಯೆ ಲು-ಶೂನರ ಈ ವಿಷಯದ ಪ್ರಬಂಧವನ್ನು ಇಲ್ಲಿ ಸೇರಿಸಿದೆ.

ವಿ ಸೂ. ಕನ್ನಡದಲ್ಲಿಯೂ ‘ಅವ್ವನ’ ಎನ್ನುವುದು ಬಳಕೆಯಲ್ಲಿದ್ದರೂ ವಿಶೇಷ ತಿರಸ್ಕಾರದಲ್ಲಿ ಮಾತ್ರ ಬರುವುದು. ‘ಆಣೆ’ ತೆಗೆದುಕೊಳ್ಳುವಾಗ ಉಪಯೋಗವಾಗುವ ರೀತಿ ಬೇರೆ. ಮರಾಠಿಯಲ್ಲಿಯೂ ‘ಆಯಿಚಾ’ ಎಂದು ಹೇಳುವರು. ಚೀನದಲ್ಲಿ ಇದು ಹೇಗೆ ಎಷ್ಟು ವ್ಯಾಪಕವಾಗಿದೆಯೆಂಬುದು ಅಲ್ಲಿಯ ಜೀವನವನ್ನೂ ಭಾಷೆಯನ್ನೂ ಕಂಡಾಗಲೆ ಹೇಳಬಹುದು. ಆದರೂ ಆ ಕಲ್ಪನೆಯ ಛಾಯೆಯೂ ನಮ್ಮಲ್ಲಿಯ ಉಪಯೋಗದ ಸಾಮ್ಯವೂ ಹೊಳೆಯಲೆಂದು ಇಲ್ಲಿ ಸೇರಿಸಿದೆ.

ಬೈಗಳು ಸರ್ವಸಾಮಾನ್ಯವಾಗಿದೆ. ಪೇಪೆ ಹೂವು ಚೀನದ ರಾಷ್ಟ್ರೀಯ ಪುಷ್ಪವೆಂದು ಕೆಲ ಜನರು ಸಾರುವದಿಲ್ಲವೆ? ಅದು ನಿಜವೆ ಆದರೆ 'ಅವ್ವನ....' ಎಂಬುದು ನಿಸ್ಸಂಶಯವಾಗಿಯೂ ನಮ್ಮ ರಾಷ್ಟ್ರೀಯ ಬೈಗಳು.

ನಾನು ಮೂಡಲ ಚೆಕಿಯಾಂಗ್ ಪ್ರದೇಶದಲ್ಲಿ ಹುಟ್ಟಿ ಬೆಳೆದವನು. ಅಲ್ಲಿ ಈ ಬೈಗಳಿಗೆ ಮೂಲ ಸ್ವಾಭಾವಿಕತೆ ಇನ್ನೂ ಇದೆ. ಆ ಪ್ರದೇಶದಲ್ಲಿ ನಿಮ್ಮ ತಾಯಿಯನ್ನಷ್ಟೆ ಕುರಿತು ಈ ಶಪಥ ಪ್ರಯೋಗವಾಗುವದು. ನಿಮ್ಮ ಕುಟುಂಬದ ಉಳಿದ ಯಾರಿಗೂ ಇದರ ಧಕ್ಕೆ ತಗಲುವದಿಲ್ಲ. ಆ ನಾಡನ್ನು ಬಿಟ್ಟು ಚೀನಾದ ಬೇರೆ ಬೇರೆ ಪ್ರಾಂತ್ಯಗಳಿಗೆ ನಾನು ಹೋದಾಗ ಈ ಬೈಗಳ ವಿವಿಧ ವಿಕಾರಗಳನ್ನೂ ಅದರ ತಿವಿತನ ಚೂಪನ್ನೂ ಕಂಡು ವಿಸ್ಮಿತ ನಾದೆ. ಏಳು ತಲೆಯ ಪಿತೃಗಳು, ಅಕ್ಕ-ತಂಗಿಯರು, ಮುಂದಿನ ಪೀಳಿಗೆ ಯವರು, ಯಾರಾರೂ ಈ ಸರ್ವಗ್ರಾಸಿಯಾದ ಬೈಗಳ ತೆಕ್ಕೆಯೊಳಗಿಂದ ಬಿಡಿಸಿಕೊಳ್ಳಲಾರರು ಎಂದು ಮನಗಂಡೆ. ಕಾಲ ಇದರಿದರು ಕುಂಟು ಬೀಳುವದು. ಪೀತನದಿ, ಹ್ಯಾನ್‌ನದಿಗಳಂತೆ ಈ ಬೈಗಳು ನಿಸ್ಸೀಮ ವಾಗಿದೆ.

ಈ ಬೈಗಳು ಮನುಷ್ಯರಿಗಷ್ಟೇ ಮರ್ಯಾದಿತವಾಗಿಲ್ಲ. ಅದರ ಪ್ರಯೋಗ ಪಶುಗಳ ಮೇಲೂ ಆಗುವದು. ಹೋದ....ಅಲ್ಲ, ಆಚೆ ವರ್ಷ ನಾನು ಕಲ್ಲಿದ್ದಲಿ ಬಂಡಿಯನ್ನು ಕಂಡೆ. ಅದು ಒಳ್ಳೆ ಹುದುಲೊಳಗೆ ಕುಸಿ ಬಿದ್ದಿತ್ತು. ಬಂಡಿಯವನು ರೊಚ್ಚಿಗೆದ್ದು ಟಣಪುಣ ಅತ್ತಿತ್ತ ಜಿಗಿದಾಡಿ ಬಂಡಿಗೆ ಹೂಡಿದ ಆ ಪಾಪ ಕತ್ತೆಯನ್ನು ತನಗೆ ಬಲವಿದ್ದಷ್ಟು ಬಲವಾಗಿ ಇತ್ತ ಕುಟ್ಟುತ್ತಿದ್ದ; ಅತ್ತ "ನಿನ್ನಕ್ಕನ....ನಿನ್ನಕ್ಕನ...." ಎಂದು ಒಂದೇ ಸವನೆ ಕಿರಚುತ್ತಿದ್ದ.

ಉಳಿದ ದೇಶಗಳಲ್ಲಿ ವಾಗ್ವ್ಯವಹಾರ ಏನಿದೆಯೋ ನನಗೆ ಗೊತ್ತಿಲ್ಲ. 'ಅವ್ವನ....' ಸರಿಜೋಡಿಗೆ ಬರುವ ಬೈಗಳು ಇದೆಯೋ ಇಲ್ಲವೋ ತಿಳಿಯೆ.

ನಾರ್ವೇ ದೇಶದ ನಟ್‌ಹಾಮ್‌ಸನ್ನನ 'ಹಸಿವೆ' ಎಂಬ ಕಾದಂಬರಿ ಯಲ್ಲಿ ತುಂಟ ಬೈಗಳನ್ನೆಷ್ಟೊ ಓದಿದ್ದು, ನೆನಪಿದೆ. ಆದರೆ ನಮ್ಮೀ ಸ್ಥಲು

ಗೆಯು ಬೈಗಳ ಸರಿಸಾಟಿಗೆ ಅವು ಬರಲಾರವು. 'ಗೋರ್ಕಿ'ಯು ಕಾದಂಬರಿ ಯಲ್ಲಿ ಎಷ್ಟೋ ಘಟಿಂಗರಿದ್ದಾರೆ. ಆದರೆ ನಾನು ಓದಿದವುಗಳಲ್ಲಿ ಇದರ ಉಪಮಾನಕ್ಕೆ ಬರುವ ಶಪಥವನ್ನು ಕಾಣೆ. ಆರ್ಟಿಬಾಶೇವನು ಪೆದ್ದ ಆಲ್ದಜೀವನನ್ನು 'ನಿನ್ನಾವ್ವನ' ಎಂದೆನ್ನುವಂತೆ ಒಮ್ಮೆ ಮಾಡಿದ್ದಾ ನೆಂಬುದೇನೋ ನಿಜ. ಆದರೆ ಆಲ್ದಜೀವನು ಪ್ರೀತಿಗಾಗಿ ತ್ಯಾಗಮಾಡಲು ನಿಶ್ಚಯಿಸಿದ್ದ. ಮತ್ತು ಯಾವ ಚೀನೀ ವಾಚಕನಿಗೂ ಅವನ ಆ ಪರಸ್ಪರ ವಿರುದ್ಧ ಮಾತು ಕೇಳಿ ಒಂದಿಷ್ಟೂ ನಗು ಬರಲಾರದು. ಈ ಬೈಗಳನ್ನು ಚೀನಿ ಭಾಷೆಯಲ್ಲಿ ಸಹಜ ಲೀಲೆಯಿಂದ ಭಾಷಾಂತರಿಸಬಹುದಾಗಿದೆ. ಆದರೆ ಉಳಿದ ಭಾಷೆಗಳಲ್ಲಿ ಅದೋಂದಿಷ್ಟು ಬಿಗಿ. ಜರ್ಮನ್ ಭಾಷಾಂತರ ದಲ್ಲಿ "ನಾನು ನಿನ್ನಾವ್ವನ....ಬಳಸಿದೆ" ಎಂಬ ರೂಪದಲ್ಲಿಯೂ ಜಪಾನಿ ಭಾಷಾಂತರದಲ್ಲಿ "ನಿನ್ನಾವ್ವ ನನ್ನ ನಾಯಿ...." ಎಂಬ ರೂಪದಲ್ಲಿಯೂ ರೂಪುಗೊಂಡಿವೆ. ಈ ಭಾಷಾಂತರ ಹೇಳಿ ಕೇಳಿ ಸುಕ್ತು ಬಳಸಿದ ಮಾತು.

ಏನೇ ಇದ್ದರೂ ನಮ್ಮಂತಹದೊಂದು ಬೈಗಳು ರಶಿಯಾ ದೇಶ ದಲ್ಲಿಯೂ ಇತ್ತು, ಎಂಬುದು ಸಿದ್ಧ. ಆದರೆ ಇದರ ನಯು, ಇದರ ವಿಶ್ವವ್ಯಾಪಕತೆ, ಇದರ ಸರ್ವಾಲಿಂಗನಸಾಮರ್ಥ್ಯ ಅದಕ್ಕಿಲ್ಲ. ಈ ಕೀರ್ತಿ ನಮ್ಮದು! ಇದು ಬಹಳ ದೊಡ್ಡ ಮಾನದ ವಿಷಯವೂ ಮೂಲತಃ ಇರ ಲಿಕ್ಕಿಲ್ಲ. ರಶಿಯನ್ನರು ಈ ನಮ್ಮ ಬಿರುದನ್ನು ಕಿತ್ತಿಕೊಳ್ಳಲು ತವಕಪಡ ಲಿಕ್ಕು ಇಲ್ಲ. ನಿಜವಾಗಿಯೂ 'ನಿನ್ನ ಬೋಳ ಶೇವಿಸಾ' ಎಂಬ ಹೊಸ ಶಪಥದ ಪ್ರಾತಿಭ ಪ್ರಕಾಶದ ಮುಂದೆ "ಅವ್ವನ...." ಎಂಬುವದು ಯಾವ ಕಿಡಿ! ಲಬ್ಧಪ್ರತಿಷ್ಠಿತರು, ಕುಲೀನರು, ಶಿಷ್ಟರು 'ಅವ್ವನ....' ಎಂಬ ಶಪಥ ಕೇಳಿ ಏನೂ ಅದರಂತೆ ಹೆದರಿ ಸಾಯುವದಿಲ್ಲ.

ಇಷ್ಟಾಗಿಯೂ ಚೀನದೊಳಗಿನ ಕೆಳಗಿನ ಜನರೆನಿಸಿಕೊಳ್ಳುವವರೇ ತಮ್ಮ ಮಾತಿನಲ್ಲಿ ಈ ಬೈಗಳ ಗರಮ್ ಮಸಾಲೆಯನ್ನು ಹಾಕುವರು. ಬಂಡಿ ಹೊಡೆಯುವವರಿಗೂ ಅವರ ಸಬಾಂಧವರಿಗೂ ಅದರ ಬಳಕೆ ಸೊತ್ತಾ ಗಿದೆ. ಅಧಿಕಾರಸಂಪನ್ನರೂ ರಾಜಪುರುಷರೆಂದೆನಿಸಿಕೊಳ್ಳುವ ಮಹಾ ಜನರೂ ಈ ಬೈಗಳು ತಮ್ಮ ಕುಟಿ ಮೀರದಂತೆ ಎಚ್ಚರಿಕೆ ಪಡುತ್ತಿದ್ದರು.

ಆದರೆ ಹಳೆಯ ಗ್ರಂಥಗಳಲ್ಲಿ ಈ ಬೈಗಳು ಇಲ್ಲ. ಅಲ್ಲಿ ಇವರ ಲೆಕ್ಕಣಿಕೆ ಯೇನೂ ಕೈ ಆಡಿಸಿರಲಾರದಷ್ಟೆ!

ನಾನು 'ಚೌ' ರಾಜಮನೆತನದಷ್ಟು ಹಳಬನಾದರೆ ಮಾತ್ರ 'ಟಾ-ಘೂ' ಅಥವಾ 'ಶೀ' ರಾಜಪುರುಷರಂತೆ ಆಗಬಹುದು. ಆದರೆ ನಾನೀ ಕಾಲದವನು. ನನ್ನ ಲೇಖನಿ ತನಗೆ ತಿಳಿದಂತೆ ತಾನು ಆಟವಾಡುವದು. ದೊಡ್ಡ ಮನೆತನದ ಲಾಂಛನವಿನ್ನೂ ನನ್ನ ಮನದಿಂದ ತೊಳೆದು ಹೋಗಿರಲಾರದಾದುದರಿಂದಲೋ ನಾನು ಎಂದೂ ಬಂಡಿ ಹೊಡೆಯದಿರುವದರಿಂದಲೋ ಯಾವದೊ ವಿಷಯವು ನನ್ನ ಸ್ವಾತಂತ್ರ್ಯದ ಕಾಲು ಕಟ್ಟಿ ಈ ಬರೆವಣಿಗೆಯಲ್ಲಿಯೂ ಬೈಗಳ ಸಂಕ್ಷೇಪವನ್ನೇ ನಾನೂ ಉಪಯೋಗ ಮಾಡುವಂತೆ ಮಾಡಿದೆ. ಆ ಬೈಗಳೊಳಗೆ ಕ್ರಿಯಾಪದವಿಲ್ಲ; ಕರ್ಮವಿಲ್ಲ. ದ್ವಿತಿಯ ಪುರುಷದ ಬದಲು ತೃತಿಯ ಪುರುಷದ ಯೋಜನೆಯಾಗಿದೆ. ಬೈಗಳು ಇಷ್ಟು ಹದವಾಗಿ ಮಾರ್ಪಟ್ಟಿದೆ.

'ಅವ್ವನ....' ಎಂಬ ವಾಕ್ಪ್ರಚಾರವು ಚೀನಿಗಳೊಳಗಿನ ಒಂದು ವರ್ಗಕ್ಕೇ ಸೇರಿರುವದರಿಂದ ಇದನ್ನು ರಾಷ್ಟ್ರೀಯ ಬೈಗಳೆಂದು ಕರೆಯುವದು ಅತಿಶಯೋಕ್ತಿಯಾಗಬಹುದೆಂದು ಕೆಲವು ವಿಮರ್ಶಕರು ಲಘುವಾಗಿ ಹೇಳಬಹುದು. ನಾನಿದನ್ನೆಂದೂ ಒಪ್ಪಲಾರೆ. ನೀವೇ ನೋಡಿ, ಕೆಳಗಿನ ವರ್ಗದವರೆಂದಾದರೂ ಉಪವನಪಾಲಿತ ವರ್ಧಿತವಾದ ಪೇದೆ ಹೂವನ್ನು ವೈಭವ ವಿಲಾಸದ ಹೂವೆಂದೂ ಅದು ರಾಷ್ಟ್ರೀಯ ಚಿನ್ಹೆಯಾಗಲಾರದೆಂದೂ ಹೇಳಿರುವರೇ ?

( ೨ )

'ಅವನೌವ್ವನ....' ಎಂಬ ಶಪಥದ ಚಾರಿತ್ರಿಕ ಉಗಮವೆಲ್ಲಿದೆಯೋ, ಅದು ಜನಪದಸಂಪ್ರೀತಿಯನ್ನು ಮೊದಲೆಂದು ಪಡೆಯಿತೋ ನಾವರಿಯೆ. ಬಖರುಗಳಲ್ಲಿಯೂ ಧರ್ಮಶಾಸನಗಳಲ್ಲಿಯೂ ಅಲ್ಲಲ್ಲಿ ತಲೆಯೆತ್ತುವ ಶಪಥಗಳಲ್ಲಿ ದಶ್ಯೂ, ಶೂದ್ರ, ಪ್ರೇತ, ಅಥವಾ ಇದಕ್ಕೂ ಬಿರುಸಾಗಿ 'ಮುದಿನಾಯಿ, ಹಂದಿಯ ಮಗ, ಇತ್ಯಾದಿಯಾಗಿ ಬೈಗಳಿವೆ. ಆದರೆ ಇದಿಲ್ಲ. ಯಾರ ಪಿತೃಗಳಿಗೂ ಅಪಮಾನ ಮಾಡುವ ಅತಿ ಕೆಟ್ಟ ಬೈಗಳೆಂದರೆ

' ತೊತ್ತಿನ ಮಗನೆ ' ( ದಾಸೀಪುತ್ರ ) ಅಥವಾ ' ಷಂಢಪುತ್ರ ' ಎಂದಾಗಲಿ ಇವೆ. ಆದರೆ ಇದುವರೆಗೂ ನನಗೆ ' ಅವ್ವನ....' ಎಂದಾಗಲಿ ಅದರ ಸಮೀಪದಿನ್ನೊಂದು ಪ್ರತಿಶಬ್ದವಾಗಲಿ ಗ್ರಂಥಗಳಲ್ಲಿ ಸಿಕ್ಕಿಲ್ಲ. ಬಹಳ ಮಾಡಿ ಶಿಷ್ಟರು ಮಡಿವಂತ ಹಳೆಯ ಎಲ್ಲ ಉಲ್ಲೇಖಗಳೊಳಗಿಂದ ತೊಡೆದು ಅದಕ್ಕೆ ಅರೆದಾಳ ಹಚ್ಚಿರಬೇಕು. ' ಕ್ವಾನ್-ಹಂಗ್-ನಿಂಗ್‌ಸೀ ' ಎಂಬ ಗ್ರಂಥದಲ್ಲಿ ಉತ್ತರದ ' ವೀ ' ರಾಜಮನೆತನದ ' ಇಂಗ್-ಸೂ-ಶಿ ' ಎಂಬ ಪಂಡಿತನೊಬ್ಬನನ್ನು ಕುರಿತು ಇರುವ ಸಂವಾದದಲ್ಲಿ ಮನೋರಂಜಕವಾದ ಕೆಲ ಮಾತಿವೆ:

" ಹೆಂಗಸರ ಪಾತಿವ್ರತ್ಯದ ಬಗ್ಗೆ ನಿಕರವಾಗಿ ಹೇಳಲು ಬರುವದಿಲ್ಲವೆಂದು, ಅವನ ಅಭಿಪ್ರಾಯವಿತ್ತು. ಅವನು ತನ್ನ ಗೆಳೆಯನಾದ ' ವಾಂಗ್-ಇಂಗ್-ಚಿಂಗ 'ನನ್ನು ನಿನ್ನ ನಿಜವಾದ ಅಡ್ಡಹೆಸರು ' ವಾಂಗ್ ' ಎಂತಲೇ ಏನು ನಿಶ್ಚಯ ? '

ವಾಂಗ್ ನಾಚಿಕೊಂಡ. ಇಂಗ್-ಸೂ-ಶಿಯು ಮುಂದುವರಿಸಿದ:

" ವಾಸ್ತವಿಕವಾಗಿ ನನ್ನ ಅಡ್ಡಹೆಸರೂ ' ಇಂಗ್ ' ಎಂದೇ ಇರಬೇಕೆಂಬ ಬಗ್ಗೆ ನನಗೂ ನಿಶ್ಚಯವಿಲ್ಲ. ಯಾರೂ ತಮ್ಮ ತಮ್ಮ ಐದು ತಲೆಮಟ್ಟಿಗಾದರೂ ಇದನ್ನು ಪ್ರಮಾಣಿಸಿಕೊಡುವರೇ ? "

ಇದರ ಮೇಲಿಂದ ಆ ಕಾಲಕ್ಕೆ ' ಅವ್ವನ ' ಎಂಬ ಶಪಥದಂತೆ ಯಾವುದೋ ಮಾತು ಅದಾಗಲೆ ಜನಬಳಕೆಯಲ್ಲಿ ಇದರ ಕುರುಹಾಗಿರಬೇಕೆಂದು ತೋರುವದು. ' ಚೀನ್ ' ರಾಜಮನೆತನದ ಕಾಲಕ್ಕೆ ಮನೆತನದ ಕುಲಪ್ರತಿಷ್ಠೆಯ ಬಗ್ಗೆ ಅತಿ ವಿಶೇಷವಾದ ಮಹತ್ವವಿತ್ತೆಂದು ತೋರುತ್ತದೆ. ಶಿಷ್ಟರು ಕುಲೀನರು ಆದವರ ಸಂತತಿಯವರು ರಾಜಾಧಿಕಾರಿಗಳಾಗುವದು ಸುಲಭವಿತ್ತು. ಅವರು ಬರಿ ಅಕ್ಕಿಯ ಚೀಲಗಳಾಗಿಯೊ ಸರಾಯಿಯ ಪೀಪಾಯಿಗಳಾಗಿಯೊ ಇದ್ದುಕೊಳ್ಳಲಿ. ಉನ್ನತ ಪದವಿಯವರಲ್ಲಿ ಅವರ ಸ್ಥಿತಿಗೆ ಚ್ಯುತಿ ಬರುತ್ತಿರಲಿಲ್ಲ. ' ಟೋಪಾ ' ಟಾರ್ತರು ಉತ್ತರ ಚೀನವನ್ನು ಪಾದಾಕ್ರಾಂತ ಮಾಡಿದ್ದರೂ ಪಂಡಿತರು ತಮ್ಮ ಮನೆತನದ ಅದರ ಕುಲಚಿನ್ಹೆ ಮೊದಲಾದವುಗಳ ಬಗ್ಗೆ ಇರುವ ಧಾರ್ಮಿಕ ಭಕ್ತಿ

ಯನ್ನು ಒಂದಿಷ್ಟೂ ತಗ್ಗಿಸಲಿಲ್ಲ. ಅವರು ತಮ್ಮ ಕುಲಪತಿಷ್ಠೆಯನ್ನು ಕಾಯ್ದುಕೊಂಡರಲ್ಲದೆ ಅಧಿಕಾರಪದವಿಗೇರಿದ ಸಾಮಾನ್ಯಜನರನ್ನು ಹೆಚ್ಚಿನವರೆಂದು ಎಂದೂ ಒಪ್ಪಿಕೊಳ್ಳಲಿಲ್ಲ.

ಜನಸಾಮಾನ್ಯದ ಮೇಲೆ ತಮ್ಮ ಅಧಿಕಾರವನ್ನು ನಡೆಸಿ ಪ್ರಾಚೀನ ಗೌರವವನ್ನು ಉಳಿಸಿಕೊಂಡು ಹೋಗಲು ಇಳಿಗಾಲಕ್ಕೆ ಬಂದ ಪ್ರತಿಷ್ಠಾಸಂಪನ್ನರು ಇನ್ನೂ ಪ್ರಯತ್ನಪಡುತ್ತಲೇ ಇದ್ದರು. ಆಳುವವರು ಗರ್ವಿಷ್ಠರು, ಉದ್ಧಟರು, ಮದೋನ್ಮತ್ತರು ಆಗಿ ಜನರ ತಿರಸ್ಕಾರಕ್ಕೆ ಪಾತ್ರರಾಗಿದ್ದರು. ತಮ್ಮ ಪಿತೃಗಳನ್ನು ಮನೆತನ ಸಂರಕ್ಷಿಸುವ ಯಂತ್ರಗಳನ್ನಾಗಿಯೋ ಕುಲದೇವತೆಗಳನ್ನಾಗಿಯೊ ಇವರು ಮಾಡಿಕೊಂಡಿದ್ದರಿಂದಲೇ ತುಳಿಯಲ್ಪಟ್ಟ ಸಾಮಾನ್ಯ ಜನರು ಇವರ ಈ ಪೂರ್ವಜರನ್ನೂ ತಮ್ಮ ವೈರಿಗಳನ್ನಾಗಿಯೆ ಸ್ವಾಭಾವಿಕವಾಗಿ ಭಾವಿಸಿದರು. ಮೇಲುದಾಹರಿಸಿದ 'ಇಂಗ್ ಸೂಶಿ'ಯ ಮಾತುಗಳು ತನ್ನ ಕಾಲಕ್ಕಿರುವ ಸಾಮಾಜಿಕ ಪರಿಸ್ಥಿತಿಯನ್ನನುಲಕ್ಷಿಸಿ ಇದ್ದವೋ ಇಲ್ಲವೊ ಎಂಬುದು ಸ್ಪಷ್ಟವಿರದಿದ್ದರೂ ಮನೆತನವನ್ನು ಮುಂದೆ ಮಾಡಿ ತಮ್ಮ ಅಧಿಕಾರದ ಪ್ರತಿಷ್ಠೆಯನ್ನುಳಿಸಿಕೊಳ್ಳುವವರ ಡಂಭವನ್ನು ವಿಡಂಬಿಸುವ ವ್ಯಂಗ್ಯವಂತೂ ಅದರಲ್ಲಿ ಒಡಮೂಡಿದೆ. ತಮ್ಮ ವೈಭವ, ತಮ್ಮ ಒಣ ಜಂಭ, ತಮ್ಮ ಅಧಿಕಾರ ಇವೆಲ್ಲವುಗಳ ಅಸ್ತಿವಾರದ ಮಹಾಯಂತ್ರವೆಂದರೆ ಈ ಪೂರ್ವಜರು. ಈ ಅಸ್ತಿವಾರವನ್ನೆ ಒಮ್ಮೆ ಅಗಿದೊಗೆದರೆ ಮೇಲಿನ ಕಟ್ಟಡವು ತಾನೆ ಹುಡಿಗೂಡುವದು. ಅಪ್ಪ ಅಜ್ಜಂದಿರ ಹೆಸರು ಹೇಳಿ ಬಾಳುವ ಎಲ್ಲರ ಗತಿಯೇ ಹೀಗೆ.

'ಇಂಗ್-ಸೂ-ಶಿ'ಯು ಮಾತಿನೊಳಗಿನ ಅರ್ಥವನ್ನೇ ಗರ್ಭೀಕರಿಸಿದರೂ ಅದರ ಲಾಲಿತ್ಯ ಥಳಕುಗಳಿಲ್ಲದೆ ಸರ್ವಸಾಮಾನ್ಯರ ಬಾಯಿಮಾತಿನಲ್ಲಿ 'ಅವನೌವ್ವನ....' ಎಂಬ ಮಾತು ಈ ಧೋರಣೆಯಿಂದ ಬಂದಿದೆ. ಎತ್ತರ ಬಾಗಿಲದ ದೊಡ್ಡ ಮನೆಯವರ ದೊಡ್ಡಿಸ್ತಿಕೆಯ ಈ ದುರ್ಗವನ್ನು ನೆಲಸಮ ಮಾಡಲು ಅವರ ಸಂಬಂಧಿಕರ ಗರ್ಭಕ್ಕೇ ಕೈಹಾಕಿದ್ದುದು ಅಸಾಧಾರಣವಾದ ಬುದ್ಧಿಯ ಸಂಗ್ರಾಮನೈಪುಣ್ಯವೆಂದು ಒಪ್ಪಿಕೊಳ್ಳಲೇಬೇಕು. "ಅವನೌವ್ವನ...." ಎಂಬ ಅಸ್ತ್ರವನ್ನು ಕಂಡುಹಿಡಿದವನು ದೊಡ್ಡ ಪ್ರತಿಭಾ

ಪುತ್ರನಾಗಿರಬೇಕು. ಆದರೆ ಪಾಪ, ಸಭ್ಯಗೃಹಸ್ಥ ಎಂದು ಮಾತ್ರ ಹೇಳಲಾರೆ.

( ೩ )

ಟ್ಯಾಂಗ್ ರಾಜಮನೆತನದ ನಂತರ ತಮ್ಮ ಮಹಾಮನೆತನದ ಜಂಭ ಕೊಚ್ಚುವ ವಾಡಿಕೆ ಹೋಯಿತು. ಸುವರ್ಣರಾಜವಂಶದವರು, ಮೋಂಗಲ ರಾಜವಂಶದವರು ಇವರೆ ಮೊದಲಾದ ಬರ್ಬರರು ನಮ್ಮ ಚಕ್ರವರ್ತಿಗಳಾದಾಗ ಯಾವ ರಾಜಾಧಿಕಾರಿಯೂ ಅಥವಾ ಮಂತ್ರಿಯೂ ಕಟುಕನ ಅಥವಾ ಹೆಂಡಗಾರನ ಮಗನಿದ್ದರೇನು ! ಅಂಥ ತಾರತಮ್ಯವೆನಿಸುತ್ತಿರಲಿಲ್ಲ. ಮುಂದೆ ಬಹಳ ಕಾಲದ ವರೆಗೂ ಚೀನಾದ ವರ್ಗಗಳಲ್ಲಿ ವಿಭೇದ ಮಾಡಿ ವಿಂಗಡಿಸಿ ಹೇಳುವದೆ ಬಿಗಿಯಾಗುತ್ತ ಬಂತು. ಎಲ್ಲರೂ ಪರಪಾದಾಕ್ರಾಂತರಾದ ಗುಲಾಮರೆ !

ಹೀಗಿದ್ದರೂ ಮೇಲಿನ ವರ್ಗಕ್ಕೆ ತಮ್ಮನ್ನೇರಿಸಿಕೊಂಡು ಅಡ್ಡ ಹೆಸರಿನಿಂದ ಮನೆತನದ ಉದ್ಧಾರ ಮಾಡುವ ಹವ್ಯಾಸವು ಹಲಕೆಲ ಜನರಲ್ಲಿ ಇದ್ದೇ ಇತ್ತು. ' ಲೂ–ಷಿ–ಚಂಗ 'ನು ತನ್ನೊಂದು ನಾಟಕದಲ್ಲಿ ಈ ಮಾರ್ಮಿಕ ಮಾತುಗಳನ್ನಾಡಿದ್ದಾನೆ:

" ಬೀದಿಯ ಜನರ ನಗೆಗೇಡು ಏನು ಹೇಳಲಿ ! ಅವರ ಬೆರಿಕೆತನವೂ ಎದೆಗಾರಿಕೆಯೂ ದೊಡ್ಡವು ! ಹೊಳೆ-ಕೊಳಗಳ ಈ ನನ್ನ ಮಕ್ಕಳು ಮಹಾ-ಶೀಲ-ವೈಭವಗಳ ಹೆಸರಿನಿಂದ ಒಬ್ಬರನ್ನೊಬ್ಬರು ಕರೆದುಕೊಳ್ಳುತ್ತಾರೆ. ಒಬ್ಬರನ್ನೊಬ್ಬರು ಇವರು ಅಭಿನಂದಿಸುವಾಗ ಇವರು ಉಪಯೋಗಿಸುವ ಮಾತಿನಲ್ಲಿ ಎಂಥ ಲಾಲಿತ್ಯ ! ಏನು ಶಿಷ್ಟಾಚಾರ ! ಒಂದೇಂದೇ ಹೇಳುತ್ತೇನೆ ಕೇಳಿ: ಅಕ್ಕಿ ಅಂಗಡಿಯವನಿಗೆ ' ಅಯಾಂಗ್ ಅರಸಯ್ಯಾ ' ಎಂದು ಹೆಸರು. ಮಾಂಸ ಮಾರುವವನ ಹೆಸರು ' ಮಹಾ-ಚಂಗ್ !' ಊಟದ ಮಠ ಹಾಕಿಕೊಂಡವನು ರಾಜಮಣಿ ! ಬೀಸುವವನು ಗುಣನಿಧಿ ! ನಿಜವಾಗಿಯೂ ಹೀಗೆ ಎಲ್ಲಾದರೂ ಉಂಟೆ ? "

ಇವರೇ ಆ ಕಾಲದ ನಿಮ್ಮ ಮಧ್ಯಮ ವರ್ಗದ ಪ್ರತಿಷ್ಠಿತ ನಾಗರಿಕರು !

ಮೇಲಿನ ಬಗೆಯ ಉತ್ತುಂಗ ಶೈಲಿಯೊಳಗಿನ ಮಾತು ಹುಟ್ಟುವ ಮೊದಲು ಸರ್ವಸಾಧಾರಣ ಜನರ ಬಾಯಲ್ಲಿ 'ಅವನೌವ್ವನ' ಎಂಬುದರ ಅನೇಕ ರೂಪಾಂತರಗಳು ಬಳಸಾಡಿ ಹೋಗಿರಬೇಕು. ಹಾಗೂ ಹೀಗೂ ಕಂತ್ರಾಟ ಮಾಡಿ ಒಂದು ಅಧಿಕಾರ ದೊರಕಿಸಿ ಅಂತೂ ಇಂತೂ 'ಅಕ್ಷರವಂತ' ಎನಿಸಿಕೊಳ್ಳುವಂತೆ ನಾಲ್ಕು ಅಕ್ಷರ ಗೀಚಿ ಯಾವನೊ ಅಕಸ್ಮಾತ್ತಾಗಿ ಶಿಷ್ಟನಾಗಿಬಿಡುತ್ತಾನೆ. ಆಮೇಲೆ ದೊಡ್ಡದೊಂದು ಅಡ್ಡಹೆಸರು, ಯಾವುದೋ ದೊಡ್ಡ ಮನೆತನದ ಸಂಬಂಧ, ಅದೇ ಪ್ರಕಾರ ಪಿತಾಮಹ ಪ್ರಪಿತಾಮಹಗಳ ಒಂದು ವಂಶವೃಕ್ಷ; ಕೆಲಸವಾಯಿತು. ಆ ವಂಶವೃಕ್ಷದ ಬುಡಕಟ್ಟಿಗೆ ಯಾವುದೊ ಮಹಾ ವಿದ್ವಾಂಸನನ್ನೋ ಸೂತಶೌನಕರಂಥವರ ಪುತ್ರನನ್ನೋ ಶಿಷ್ಯನನ್ನೋ ಕಂಡುಹಿಡಿಯಲಾಗುವದು.

ಇದೇ ಜನ ಬರಬರುತ್ತ ಬಿಳಿಛಾಯೆಯ ಮಹಾಶೀಲವಂತರಾಗಿ ತಿದ್ದಿದ ನುಡಿ ತಿದ್ದಿದ ನಡೆಗಳಿಂದ ತಮ್ಮ ಕುಲೀನ ಪೂರ್ವಜರ ಅನುಕರಣ ನಡಿಸುವರು. ಆದರೆ ಈ ಕಿಳ್ಳಿಕೇತರಾಟದ ಹಿಂದಿರುವ ಸೂತ್ರಧಾರಕ ಶಕ್ತಿಯ ಪೊಳ್ಳುತನವನ್ನು ಕಂಡುಹಿಡಿಯುವ ಚತುರರು ಜನಸಾಮಾನ್ಯರಲ್ಲಿ ಯಾವಾಗಲೂ ಇದ್ದೇ ಇದ್ದರು. ಇಂಥ ಉದಾಹರಣೆಗಳಿಗೆ ಸರಿಹೋಗುವ ಗಾದೆಮಾತನ್ನೊಂದು ಬಹಳ ವರ್ಷಗಳ ಪೂರ್ವದಲ್ಲಿ ಅವರೇ ಬಳಕೆಗೆ ತಂದಿದ್ದಾರೆ. 'ವಿಧಿ, ವಿಜ್ಞಾನ, ದಾನ, ಧರ್ಮ ಇವು ಅವರ ನಾಲಿಗೆಯಲ್ಲಿವೆ.' ಎಂದು ಗಾದೆಮಾತಿನ ಅರ್ಥ. ಅವರ ಅಂತಃಕರಣದಲ್ಲೂ ಗಂಡಸರೆಲ್ಲರೂ ಕಳ್ಳರು, ಹೆಂಗಸರು ಸೂಳೆಯರು. ಅಂತು ಕೆಳಜಾತಿಯವರು ತೋರುವಷ್ಟು ಸರಳರಾಗಿರಲಿಲ್ಲ.

ಈ ಡಂಭಾಚಾರಿಗಳ ವಿರುದ್ಧ ಬಂಡು ಹೂಡಿದ ಅವರ ರಣಘೋಷವೇ 'ಅವನೌವ್ವನ' ಎಂಬುದು.

( ೪ )

ಜನರು ವಿಚಾರವಿಲ್ಲದೆ ಇನ್ನೊಬ್ಬರ ಪಿತೃಗಳನ್ನು ತಮ್ಮವರನ್ನಾಗಿ

ಮಾಡಿಕೊಳ್ಳುವದು, ಈ ವಂಶ ವೈಭವದ ಕಲ್ಪನೆಯನ್ನು ತೊಡೆದು ಹುಡಿ ಹುಡಿ ಮಾಡಲು ಒಪ್ಪದಿರುವದು ( ಅದು ತನ್ನ ಸಲವಾಗಿರಲಿ—ಇನ್ನೊಬ್ಬರ ಸಲುವಾಗಿರಲಿ ) ಬಹಳ ವಿಸ್ಮಯಕರವಾಗಿದೆ. ಯಾವ ಸಭ್ಯಗೃಹಸ್ಥನಿಗೂ ಇದು ಒಪ್ಪಿಗೆಯಾಗಲಾರದು.

ಕೆಲವು ಸಲ ಜನಜಂಗುಳಿಯು ' ಅವನೌವ್ವನ ' ಎಂಬುದರ ಬದಲಾಗಿ ಹಾಗೆ ಮಾಡಿಯೇ ಬಿಟ್ಟದೆ. ಇಂಥ ಸಂಗತಿಗಳು ಕೈತಪ್ಪಿಯೋ ಅವಿವೇಕದಿಂಲೊ ಆಗಿರುವದರಿಂದ ಇತಿಹಾಸದಲ್ಲಿ ಗಣನೆಗೆ ಬಂದಿಲ್ಲ. ಅಂತೆಯೆ ಇಂಥ ಕೃತಿಗಳು ಅಸಭ್ಯವೆಂದು ಇಂದಿಗೂ ಎಣಿಸಲಾಗಿದೆ. ಇಂದಿಗೂ ಚೀನೀ ಜನರನ್ನು ಈ ಓರೆಗೆ ತಿಕ್ಕಿ ವರ್ಗಭೇದ ಮಾಡುವವರಿದ್ದಾರೆ. ಇಂದಿಗೂ ಮನೆತನದ ಪ್ರತಿಷ್ಠೆ ಆ ಮನೆತನದ ಮೂಲ ಮಹಾಪುರುಷನನ್ನು ಅವಲಂಬಿಸಿದೆ.

ಈ ಬಗೆಯ ಕಲ್ಪನೆಗಳಿರುವ ವರೆಗೂ, ಅವುಗಳ ವಿನಾಶವಾಗುವ ವರೆಗೂ, ನಿಮ್ಮ ಕಿವಿಗೆ ಬೀಳಲಿ, ಬೀಳದಿರಲಿ, ನಮ್ಮ ಈ ಪ್ರಖ್ಯಾತವಾದ ರಾಷ್ಟ್ರೀಯ ಬೈಗಳ ಅಸ್ತ್ರವು ಇದ್ದೇ ಇರತಕ್ಕದ್ದು. ಶಾಂತಿಯ ಕಾಲದಲ್ಲಿ ಇಂಥವರ ಬಗ್ಗೆ ಇರುವ ತಿರಸ್ಕಾರವನ್ನು ' ಅವರ ಅವ್ವನ ' ಎಂಬ ಮಾತಿನಿಂದಲೂ, ಬಂಡು ಹಾವಳಿಗಳ ಕಾಲದಲ್ಲಿ ಅದರರ್ಥವನ್ನು ಕೃತಿಯಿಂದಲೂ ಜನವು ನಡಿಸಿಯೇ ತೀರುವದು.

ಈ ವಾಕ್ಪ್ರಚಾರದ ಲಕ್ಷಣಾರ್ಥದ ವ್ಯಾಪ್ತಿಯನ್ನು ಕುರಿತು ಕೆಲವು ಅಪವಾದಗಳೂ ಇವೆ. ವಿಸ್ಮಯ, ಹುರುಪು, ಸ್ತುತಿ ಇವುಗಳಲ್ಲೂ ' ಅವನೌವ್ವನ ' ಎಂಬ ಮಾತು ಹವಣಾಗಿ ಬರುವದು. ಒಮ್ಮೆ ನಮ್ಮ ಹಳ್ಳಿಯಲ್ಲಿ ಒಬ್ಬ ಹರೆಯದ ಒಕ್ಕಲಿಗನೂ ಅವನ ಮುದುಕ ತಂದೆಯೂ ಇಬ್ಬರು ಊಟಮಾಡುವಾಗ ಮಾತಾಡುತ್ತಿರುವದನ್ನು ಕಂಡೆ. ಅವನು ಊಟದೊಳಗಿನ ಒಂದು ಪದಾರ್ಥವನ್ನು ತೋರಿಸಿ ಅಂದನು:

" ಅದು ಬೇಸೈತೋ, ನಿನ್ನೌವ್ವನ, ತಿಂದಾದರೂ ನೋಡು. "

ಇದಕ್ಕೆ ಮುದುಕ ಉತ್ತರ ಕೊಟ್ಟ:

“ಅದು ನನಗೆ ಸೇರೂದುಲ್ಲೊ; ನೀನ್ಸ ತಿನ್ನಪಾ ನಿನ್ಸ್ವ್ವನ....”

ಈ ಮಾತಿನಲ್ಲಿ ಅದಕ್ಕೆ ಬಹಳೇ ನಯ ಬಂದಿದೆ. ಇತ್ತೀಚೆ, ಕಲಿತವರ ಬಾಯಲ್ಲಿ ‘ಪ್ರಿಯ, ಪ್ರಿಯೆ,’ ಎಂಬ ಮಾತಿಗಿರುವ ಲಕ್ಷಣವೇ ಇದಕ್ಕೂ ಇದೆ.

---

# ಸೋಡಚೀಟಿ 

" ಮೂ ದೊಡ್ಡಪ್ಪ ಬಂದಾನಲ್ಲ! ನಮಸ್ಕಾರ ದೊಡ್ಡಪ್ಪ. ಎಲ್ಲ ಕ್ಷೇಮವೇ? ಹೊಸ ವರುಷಕ್ಕೆ ಎಲ್ಲ ನೆಟ್ಟಗೆ ತಾನೆ?"

" ಪಾ–ಸಾನ್, ನಿನಗೆ ಕುಶಲವಷ್ಟೆ? ಹೊಸ ವರುಷ ಶುಭವಾಗಲಿ!"

" ಐ, ಐ, ನಮಸ್ಕಾರ! ಅಂತೂ 'ಐ–ಕೂ'ಳೂ ಬಂದಾಳಲ್ಲ!"

" ಮೂ ಅಜ್ಜ, ಶರಣು, ಶರಣು........"

ಮೂ-ಲಿನ್-ವ್ಹಾರ್ಫ ಸೇತುವೆಯ ಹತ್ತಿರ ಚು-ಆಂಗ್ ಮೂ-ಸಾನ್ (ಮೂ ದೊಡ್ಡಪ್ಪ)ನು ತನ್ನ ಮಗಳಾದ ಐ-ಕೂಳನ್ನು ಕರೆದುಕೊಂಡು ನಾವೆಯನ್ನೇರಲು, ಆ ನಾವೆಯ ಚಿಕ್ಕ ಕೋಣೆಯಿಂದ ಅನೇಕ ಮುಖಗಳು ಮೇಲಿನಂತೆ ಏಕಸ್ವರದಲ್ಲಿ ಕೂಗಿದವು. ಕೆಲವರು ಚಪ್ಪಾಳೆ ತಟ್ಟಿದರು. ನಮಸ್ಕಾರ ಮಾಡಲು ಕೈ ಮೇಲೆ ಕೆಳಗೆ ಮಾಡಿದರು. ಬಂದ ಇಬ್ಬರಿಗೂ ಸ್ಥಳ ಮಾಡಿಕೊಡಲು ನಾಲ್ವರು ತಮ್ಮ ಜಾಗೆ ಬಿಟ್ಟಿದ್ದರು. ಚು-ಆಂಗ್ ಮೂ-ಸಾನನು ಎಲ್ಲರಿಗೂ ಪ್ರತಿಯಾಗಿ ನಮಸ್ಕಾರ ಮಾಡುತ್ತ ಒಂದೆಡೆಗೆ ಕುಳಿತನು. ಅವನ ಉದ್ದವಾದ ಚಿಲಿಮಿ ನಾವಿನ ಅಂಚನ್ನು ಆಶ್ರಯಿಸಿ ನಿಂತಿತ್ತು. ಐ-ಕೂ ಅವನ ಎಡಕ್ಕೆ ಪಾ-ಸಾನನ ಎದುರಿಗೆ ಕುಳಿತುಳು.

ಆಮೆಯ ಡುಬ್ಬದಷ್ಟು ಅಗಲವಾದ ಮುಖದವನೊಬ್ಬ " ಮೂ ಅಜ್ಜ, ನಗರಕ್ಕೆ ಹೊರಟಿರುವಿಯಷ್ಟೆ?" ಎಂದ.

" ಛೇ ಇಲ್ಲ. ನಗರಕ್ಕಲ್ಲ." ಎಂದ ಮೂ ಅಜ್ಜ. ಅವನ ದನಿ ಬೇಸರವನ್ನು ತೋರುತ್ತಿತ್ತು. ಆದರೆ ಅವನ ಮುದುಡಿದ ಮುಖದ ಮೇಲೆ ವಿಶೇಷ ಬದಲಾವಣೆಗಳೇನೂ ಆಗಿರಲಿಲ್ಲ. ಬಿಸಿಲಿಗೆ ಸ್ವಲ್ಪ ಆರಕ್ತ ಮಾತ್ರ ಆಗಿತ್ತು. " ಪ-ಆಂಗ್' ಹಳ್ಳಿಯ ತನಕ ಹೋಗಿಬರಬೇಕೆಂದು ಹೊರಟಿದ್ದೇನೆ, ಅಷ್ಟೆ."

ಒಂದು ಕ್ಷಣ ನಿಶ್ಶಬ್ದ. ಎಲ್ಲರೂ ಆ ಮುದುಕನನ್ನೂ ಅವನ ಮಗಳನ್ನೂ ದಿಟ್ಟಿಸಿ ನೋಡುತ್ತಿದ್ದರು.

"ಮತ್ತೆ ಐ-ಕೂಳ ವಿಚಾರಕ್ಕೆ ಹೊರಟಿದ್ದೀಯಾ?" ಎಂದು ಕೊನೆಗೆ ಪಾ-ಸಾನನೇ ಕೇಳಿದ.

"ಹೌದು. ಅದೇ ಮಾತು. ಅದರಿಂದ ನನ್ನ ಜೀವ ಹಿಂಡಿ ಹಿಪ್ಪೆಯಾಗುತ್ತಿದೆ ಮೂರು ವರ್ಷವಾಯಿತು ನಡೆದೇ ಇದೆ. ಎಷ್ಟು ಸಲ ಜಗಳಾಡಿದ್ದಾಯಿತು; ಎಷ್ಟು ಸಲ ರಾಜಿಯ ವಿಚಾರವಾಯಿತು, ಎಂಬುದಕ್ಕೆ ಲೆಕ್ಕವಿಲ್ಲ. ಕೊನೆಗೂ ಇನ್ನೂ ಒಂದು ಗತಿಗೆ ಹತ್ತಿಲಿಲ್ಲ...."

"ಹಾಗಾದರೆ ಮತ್ತೆ 'ವೈ' ಮನೆಗೇ ಹೋಗುತ್ತಿದ್ದೀರಾ?"

"ಹೌದು, ಅಲ್ಲಿಗೇ. ಐ-ಕೂ ಮತ್ತು ಅವಳ ಗಂಡನ ನಡುವಿನ ಈ ಜಗಳವನ್ನು ಅವನು ಬಗೆಹರಿಸಲು ಎಷ್ಟೋಸಲ ಪ್ರಯತ್ನ ಮಾಡಿದ್ದಾನೆ. ಆದರೆ ನಾನೇ ಅವನ ಕರಾರುಗಳನ್ನು ಒಪ್ಪಿಲ್ಲ. ಅದಿರಲಿ, ಈ ಸಲ ಅವರು ಯುಗಾದಿಯ ಹಬ್ಬವನ್ನೂ ಮಾಡುವವರಿದ್ದಾರೆ; ಮತ್ತು ಹಿರಿಯ ಸಪ್ತಮು ಬಾಬುವೂ ಬರುವವನಿದ್ದಾನೆ."

"ಏನು ಸಪ್ತಮುಬಾಬುವೆ?" ಪಾ-ಸಾನ್ ಕಣ್ಣುಬಿಟ್ಟು ಕೇಳಿದ. "ಈ ವಿಷಯದಲ್ಲಿ ಸಪ್ತಮುಬಾಬುವೂ ಬಾಯಿ ಹಾಕುವನೇ?"

"ಅಂತೂ ನಿಜವಾಗಿ ಹೇಳುವದಾದರೆ ಹೋದ ವರುಷ ನಾವು ಅವರ ಮನೆಯ ಒಲೆ ಕಿತ್ತಿ ಒಗೆದೆವು. ಬಾಯಿಗೆ ಬಂದಂತೆ ಅಂದೆವು. ಐ-ಕೂ ಈಗ ಗಂಡನ ಮನೆಗೆ ಹೋಗುವದರಲ್ಲಿ ಅರ್ಥವೇ ಇಲ್ಲ. ಅದಕ್ಕೆ ಕಾಲ ಮೀರಿಹೋಯಿತು." ಎಂದು ಮೂ ದೊಡ್ಡಪ್ಪ ದೃಷ್ಟಿ ಕೆಳಗೆ ಹಾಕಿ ಅಂದ.

ಐ-ಕೂ ಒಮ್ಮೆಲೆ ಸಿಡುಕಿನಿಂದ "ಮತ್ತೆ ನಾನೆಲ್ಲಿ ತಿರುಗಿ ಹೋಗಬೇಕೆಂದಿದ್ದೇನೆ? ಅದನ್ನು ಮರೆಯುವದೆ! ವಿಚಾರ ಸ್ವಲ್ಪೂ ಬೇಡವೇ? ಆ ಪ್ರಾಯದ ಪಶು ವಿಧವೆಯೊಬ್ಬಳು ಸಿಕ್ಕಕೂಡಲೆ ನನ್ನ ಸಂಬಂಧ ಕಡಿದುಕೊಳ್ಳಬೇಕೆಂದ. ಆದರೆ ಕೈಹಿಡಿದ ಹೆಂಡತಿಯನ್ನು ಬಿಡುವದೇನು ಸುಲಭವೇ? ಆ ಮುದಿಹದ್ದು ತನ್ನ ಮಗನ ಬಾಜು ಹಿಡಿದು ನನ್ನನ್ನು ದೂಡಬೇಕೆಂಡ. ಬಹು ಸುಲಭ ಕೆಲಸ ತಾನೆ! ಸಪ್ತಮು ಬಾಬುವಿನ ಮಾತೇನು.

ಮ್ಯಾಜಿಸ್ಟ್ರೇಟನ ಬಂಧುತ್ವವನ್ನು ಪ್ರತಿಜ್ಞೆಗೈದಾಕ್ಷಣಕ್ಕೆ ಅನ್ಯಾಯ ಮಾಡ ಬಲ್ಲನೆ? ಅವನು 'ವೈ'ಯಷ್ಟು ಅನ್ಯಾಯ ಮಾಡಲಾರ. ಮತ್ತು ಬೇರೆ ಬೇರೆಯಾಗಿದ್ದು ಬಿಡಿರಿ ಎಂದೇನೂ ಹೇಳಲಾರ. ಇಷ್ಟು ವರುಷ ನಾನು ಎಷ್ಟು ಕಷ್ಟಪಟ್ಟಿದ್ದೇನೆಂಬುದನ್ನು ಅವನಿಗೆ ಹೇಳಿಬಿಡುವೆ. ಆವಾಗ ಯಾರದು ನ್ಯಾಯವೆಂದು ಆತನು ಹೇಳುವನೋ ನೋಡುವಾ."

ಐ-ಕೂಳ ಈ ಮಾತಿನ ಮಳೆಗೆ ಪಾ-ಸಾನು ಸುಮ್ಮನಾದ. ಎಲ್ಲವೂ ನಿಶ್ಯಬ್ದ. ನಾವಿನ ಅಂಚಿಗೆ ತೆರೆಗಳು ಅಪ್ಪಳಿಸುವ ಸಪ್ಪಳ ಮಾತ್ರ ತಾಲ ಬದ್ಧವಾಗಿತ್ತು. ಚು-ಆಂಗ್-ಮು-ಸಾನ್ ತನ್ನ ಕೊಳವೆ ತೆಗೆದು ತುಂಬಿದ. ಪಾ-ಸಾನ್ ಹತ್ತಿರಕ್ಕೆ ಕುಳಿತ ಸ್ಥೂಲಕಾಯನೊಬ್ಬ ಚಕಮುಕಿ ಕಟಿದು ಕಿಡಿ ಇಟ್ಟ.

"ಛೆ, ಛೆ, ಬಹಳ ಮಾಡಿದಿರಿ." ಎಂದು ಕೃತಜ್ಞತೆಯನ್ನು ಸೂಚಿಸುತ್ತ ಮೂ ದೊಡ್ಡಪ್ಪ ಅಂದ.

"ನಾನು ನಿಮ್ಮ ಹೆಸರು ಆ ಮೊದಲೇ ಕೇಳಿದ್ದೆ. ಆದರೂ ನಿಮ್ಮನ್ನು ನೋಡಿದ್ದು ಇದೇ ಮೊದಲು. ಕರಾವಳಿಯಲ್ಲಿರುವ ಹದಿನೆಂಟು ಹಳ್ಳಿಗಳಲ್ಲಿ ನಿಮ್ಮ ಹೆಸರನ್ನು ಕೇಳದವರಾರು? 'ಶೀ' ಮನೆತನದ ಆ ತರುಣ ವಿಧವೆಯೊಬ್ಬಳನ್ನಿಟ್ಟುಕೊಂಡದ್ದೂ ನಮಗೆ ತಿಳಿದಿದೆ. ನೀವು ಅವರ ಮನೆಗೆ ನಿಮ್ಮ ಆರೂ ಮಕ್ಕಳೊಡನೆ ಹೋಗಿ ಅವರ ಒಲೆ ಹಾಳು ಮಾಡಿದಾಗ ಅವರಿಗೆ ಒಳ್ಳೆ ಶಿಕ್ಷೆಯಾಯಿತೆಂದೇ ಎಲ್ಲರೂ ಅಂದರು. ದೊಡ್ಡ ದೊಡ್ಡ ಮನೆಗಳಲ್ಲಿ ನಿಮಗೆ ಪ್ರವೇಶವಿದೆ. ಹತ್ತಾರು ಜನರ ಪರಿಚಯವಿದೆ. ಎಂದ ಮೇಲೆ ಅವರೇನು ಮಾಡಬಲ್ಲರು?" ಎಂದ ಸ್ಥೂಲಕಾಯದವ.

ಐ-ಕೂ ಉತ್ಸಾಹಗೊಂಡು "ಅಂತೂ ಇಲ್ಲಿ ತಿಳಿದಾತನೊಬ್ಬ ನಿದ್ದಾನೆ; ಇವನಾರೆಂಬದು ನನಗೆ ತಿಳಿಯದಿದ್ದರೂ ಚಿಂತೆಯಿಲ್ಲ!" ಎಂದಳು.

"ವಾಂಗ್-ತ್ಸೆ-ಕೂಯಿ' ಎಂದು ನನಗೆ ಹೇಳುತ್ತಾರೆ." ಎಂದು ತಟ್ಟನೆ ಆತ ಹೇಳಿದ.

"ಅವರು ನನ್ನನ್ನು ಹೀಗೆ ದೂಡಲಾರರು. ಸಪ್ತಮ ಬಾಬುವಿರಲಿ,

ಅಷ್ಟಕ್ಕು ಬಾಬುವಿರಲಿ ನನಗೇನು? ಅವರ ಮನೆ ಹಾಳಾಗಲಿ! ಅವರ ಮಂದಿಯಲ್ಲಾ ಸಾಯಲಿ! ನಾನೇನು ನನಗೆ ನ್ಯಾಯವಾಗಿ ಸಲ್ಲಬೇಕಾದ್ದನ್ನು ಬಿಡುವವಳಲ್ಲ! ನಾಲ್ಕು ಸಲ 'ವೈ' ರಾಜಿಗಾಗಿ ಹೆಣಗಲಿಲ್ಲವೆ? ಅವನು ರಾಜಿಗಾಗಿ ಕೊಡಲೊಪ್ಪಿದ ಹಣವನ್ನು ನೋಡಿ ನಮ್ಮ ತಂದೆಗೂ ಕೂಡ ತಲೆ ದಿಮ್ಮೆಂದಿತು." ಐ-ಕೂ ಒಳ್ಳೆ ಆವೇಶದಿಂದ ನುಡಿದಳು.

"ನಿನ್ನವ್ವನ....!" ಎಂದು ಮೂ ದೊಡ್ಡಪ್ಪ ಉಸುರಿದ.

"ಮೂ ದೊಡ್ಡಪ್ಪ, 'ಶೀ' ಮನೆಯವರು 'ವೈ' ಹಿರಿಯನಿಗೆ ಔತಣ ಮಾಡಿಸಿದರಂತೆ. ನಿಜವೇ?" ಎಂದು ಆನೆ ಡುಬ್ಬದ ಮುಖದ ಪಾ-ಸಾನ್ ಅಂದ.

"ಅದೇನು ಬಿಡು; ಬರೀ ಔತಣಕ್ಕೆ, ಮನುಷ್ಯ ನ್ಯಾಯಕ್ಕೆ ಕುರುಡಾಗುವಷ್ಟು ಮನಸೋಲಬಹುದೇ? ಹಾಗಿದ್ದರೆ ನಾನೂ ಅವರಿಗೆ ಸೀಮೆಯ ಮೇಜವಾನಿ ಮಾಡಿಸಬಹುದು. ಈ ಪುರಾಣ ಓದಿದವರೂ, ವಿವೇಕಿಗಳೂ ಆದವರು ಎಂದಿಗೂ ಅನ್ಯಾಯವಾದದ್ದನ್ನು ಹೇಳಲಾರರು. ಯಾರಿಗಾದರೂ ಅನ್ಯಾಯವಾಗುತ್ತಿದ್ದರೆ ಅವರು ಅದನ್ನು ಸ್ಪಷ್ಟವಾಗಿ ಹೇಳುವರಲ್ಲದೆ ಅವನನ್ನು ಎತ್ತಿಹಿಡಿಯುವರು. ಅದರಿಂದ ಮಧ್ಯ ದೊರಕೀತೇ ಎಂದು ಕಾಯುವುದಿಲ್ಲ. ಹೋದವರ್ಷ ನಮ್ಮ ಕಗ್ಗಹಳ್ಳಿಗೆ ಯಂಗ-ತಾಯೀ ಪೇಶಿಂಗದಿಂದ ತಿರುಗಿ ಬಂದ. ಆತ ನಮ್ಮಹಾಗೆ ಅಲ್ಲ. ಎಷ್ಟೋ ದೇಶ ನೋಡಿದವ. 'ಕು-ಆಂಗ' ದೊರೆಸಾನಿಯ ವಿಷಯ ಆತ ಹೇಳುತ್ತಿದ್ದ........" ವಾಂಗ-ತ್ಸೆ-ಕುಯಿ ಮಾತಿಗಾರಂಭಿಸಿದ್ದ ಅಷ್ಟರಲ್ಲಿ.

"ವಾಂಗ-ಚೆಟಿ!" ಎಂದು ಅಂಬಿಗ ಕೂಗಿದ. 'ವಾಂಗ-ಚೆಟಿ'ಗೆ ಇಳಿಯುವರು ಏಳಿರಿ!"

"ಹಾಂ!" ಎಂದು ತನ್ನ ಚಿಲುಮೆ ಎತ್ತಿಕೊಂಡು ಸ್ಥೂಲಕಾಯದವ ಎದ್ದು ನಿಂತ. ದಂಡೆಯ ಹತ್ತಿರಕ್ಕೆ ನಾವೆ ಬಂದೊಡನೆ ಕೆಳಕ್ಕೆ ಹಾರಿದ. ಮತ್ತು ನಾವಿನಲ್ಲಿದ್ದವರಿಗೆ ಕೈಮುಗಿದ. ನಾವೆಯು ಮುಂದಕ್ಕೆ ಸರಿಯಿತು. ಹುಟ್ಟುಗಳ 'ಚಪ್‌ಚಪ್' ಎಂಬ ಸಪ್ಪಳದ ಹೊರತು ಎಲ್ಲವೂ ಸ್ತಬ್ಧ.

ಐ-ಕೂಳಿಗೆ ಎದುರಾಗಿ ಅವಳ ಪಾದಗಳನ್ನು ನಿಟ್ಟಿಸುತ್ತ ಕುಳಿತ ಪಾ-ಸಾನನಿಗೆ ನಿದ್ದೆ ಹತ್ತಿತ್ತು. ಹಿಂದಿನ ಬದಿಗೆ ಕುಳಿತಿದ್ದ ಇಬ್ಬರು ಮುದುಕಿಯರು ಜಪಮಾಲೆಯನ್ನು ಎಣಿಸುತ್ತ ಬುದ್ಧನ ಜಪ ಮಾಡುತ್ತಿದ್ದರು; ಐ-ಕೂಳನ್ನು ನೋಡುತ್ತ ಏನೋ ತಿಳಿದವರಂತೆ ತಲೆ ಹಾಕುತ್ತಿದ್ದರು.

ಐ-ಕೂ ನಾವಿನ ಛತ್ತನ್ನು ನೋಡುತ್ತ ಏನನ್ನೊ ಧ್ಯಾನಿಸುತ್ತಿದ್ದಳು. ತನ್ನ ಗಂಡನ ಮನೆಯವರನ್ನು— ಅವರ ಮನೆ ಹಾಳಾಗಿ ಮನೆಮಂದಿಯೆಲ್ಲ ಸತ್ತರೂ ಚಿಂತೆಯಿಲ್ಲ—ಶಿಕ್ಷಿಸದೆ ಬಿಡಬಾರದು; ಅದಕ್ಕಾಗಿ ಯಾವ ಉಪಾಯ ಮಾಡಬೇಕು? ಎಂಬುದನ್ನೇ ವಿಚಾರಿಸುತ್ತಿದ್ದಳು. ಹಾಗಾದರೆ ಮಾತ್ರ ಆ ಮುದಿಹದ್ದಿಗೂ ಆ ಪ್ರಾಯದ ಪಶುವಿಗೂ ಬುದ್ಧಿ ಬರುವದೆಂದು ಅವಳು ತಿಳಿದಿದ್ದಳು. 'ವೈ' ಯನ್ನು ಅವಳು ಈ ಮೊದಲು ಅನೇಕ ಸಲ ನೋಡಿದ್ದಳು. ಅವನ ಅಂಜಿಕೆಯೇನೂ ಅವಳಿಗಿರಲಿಲ್ಲ. ಆತ ಗಿಡ್ಡ ಆಳು; ಲಠ್ಠ ದೇಹ; ದುಂಡು ತಲೆ; ಇಂತಹರು ಅವಳ ಹಳ್ಳಿಯಲ್ಲಿಯೂ ಎಷ್ಟೋ ಜನ. ಆತನಿಗಿಂತ ಸ್ವಲ್ಪ ಕಪ್ಪು ಹೆಚ್ಚು ಅಷ್ಟೆ.

ಚು-ಆಂಗ-ಮು-ಸಾನ್ ಚಿಲುಮೆ ಎಲ್ಲಾ ಸೇದಿದ್ದ. ಅದರೊಳಗಿಂದ ಕಿಡಿ ಹಾರುತ್ತಿದ್ದರೂ ಇನ್ನೂ ಎಳೆಯುತ್ತಲೇ ಇದ್ದ. 'ವಾಂಗ-ಜಿಟ' ದಾಟಿದ ಮೇಲೆ 'ಪ-ಆಂಗ' ಬೇಗ ಬರುವದೆಂದು ಆತನಿಗೆ ಗೊತ್ತು. ಈಗಾಗಲೇ ಅಕ್ಷರದೇವನಾದ "ಕು-ಯಿ-ಸೀ"ಯು ದೇವಾಲಯ ಹಳ್ಳಿಯ ಮುಂದುಗಡೆ ಕಾಣಿಸುತ್ತಿತ್ತು. ಅವನು 'ಪ-ಆಂಗ'ಕ್ಕೆ ಅದೆಷ್ಟೊ ಸಲ ಹೋಗಿ ಬಂದಿದ್ದ. ಈಗ ಹೊರಟದ್ದೂ ಅಷ್ಟೇನು ದೊಡ್ಡ ಕೆಲಸವಲ್ಲ. 'ವೈ'ಯ ವಿಚಾರವಾಗಿಯೂ ವಿಶೇಷ ಚಿಂತಿಸಬೇಕಾಗಿರಲಿಲ್ಲ. ಎಂದ ಮೇಲೆ ಯಾವ ರೀತಿಯಿಂದಲೂ ಆತ ಹೆದರಬೇಕಾಗಿದ್ದಿಲ್ಲ.

ತನ್ನ ಮಗಳು ಅಂದು ಕಣ್ಣೀರುದುರಿಸುತ್ತ ತಿರುಗಿ ಬಂದ ದಿನವನ್ನೂ ಆ ಮುದಿಹದ್ದು ಮತ್ತು ಆ ಪ್ರಾಯದ ಪಶುವನ್ನೂ ತಾನು ಬಯ್ದುದ್ದನ್ನೂ ಮತ್ತು ಸೇಡಿಗಾಗಿ ಮಾಡಿದ ಆಣೆಯನ್ನೂ ಮೂ ಅಜ್ಜ ಇನ್ನೂ ಮರೆತಿರಲಿಲ್ಲ. ಹಿಂದಿನ ಆ ಘಟನೆಯ ಚಿತ್ರವೆಲ್ಲ ಈಗ ಅವನ ಕಣ್ಮುಂದೆ ನಿಂತಿತು. ತನ್ನ ಅಳಿಯನನ್ನೂ ಆತನ ತಾಯಿ-ತಂದೆಗಳನ್ನೂ ಶಿಕ್ಷಿಸಿದ ಪ್ರಸಂಗ

ವನ್ನು ನೆನೆದು ತಿರಸ್ಕಾರದಿಂದ ಆತ ನಗುತ್ತಿದ್ದ; ಮತ್ತು ಒಂದು ಬಗೆಯ ಸಮಾಧಾನವನ್ನೂ ತಂದುಕೊಳ್ಳುತ್ತಿದ್ದ. ಆದರೆ ಈಗ ಅದೇಕೋ ತಿಳಿಯದು, ಸಪ್ತಮ ಬಾಬುವಿನಿಂದಾಗಿ ಆ ಚಿತ್ರ ಅವನಿಗೆ ಮರೆಯಾದಂತೆನಿಸುತ್ತಿತ್ತು. ಆ ದೃಶ್ಯದ ಮಧ್ಯದಲ್ಲಿ ಆತ ನಿಂತು ಎಲ್ಲವನ್ನೂ ಮರೆಮಾಡಿದಂತೆಯೂ ಮತ್ತು ಪರಿಣಾಮವನ್ನು ಪೂರ್ಣವಾಗಿ ಬದಲಿಸುವಂತೆಯೂ ಆತನಿಗೆ ಅನಿಸಹತ್ತಿತು.

ನಾವೆ ಸಾಗಿತ್ತು. ಮುದುಕಿಯರಿಬ್ಬರ ಮಂತ್ರದ ಪಿಟಿಪಿಟಿಯಲ್ಲದೆ ಬೇರೆ ಯಾರೂ ಬಾಯಿ ಬಿಟ್ಟಿರಲಿಲ್ಲ. ಎಲ್ಲರೂ ಇಷ್ಟರಲ್ಲಿಯೆ ನಡೆಯಲಿರುವ ಐ-ಕೂ ಮತ್ತು ಮೂ ಅಜ್ಜನ ವಿಷಯವನ್ನೆ ವಿಚಾರಿಸುತ್ತಿದ್ದರು.

"ಮೂ ದೊಡ್ಡಪ್ಪ, 'ಪ-ಆಂಗ' ಬಂತು. ಇಲ್ಲಿಯೆ ಇಳಿಯುವದಲ್ಲವೆ? ತಮ್ಮ ಸವಾರಿ ಹೊರಡಲಿ."

ಮೂ-ಸಾನ್ ವಿಚಾರ ಭರದಲ್ಲಿ ಮೈಮರೆತಿದ್ದ. ಈ ಕೂಗಿನಿಂದ ಒಮ್ಮೆಲೆ ಎಚ್ಚೆತ್ತು ಮುಂದೆ ನೋಡಿದ. ಎದುರಿನಲ್ಲಿಯೆ 'ಕು-ಯಿ-ಸೀ' ದೇವಾಲಯ ಕಾಣುತ್ತಿತ್ತು. ಕೂಡಲೆ ನಾವಿನಿಂದಿಳಿದ. ಐ-ಕೂವೂ ಇಳಿದು ಆತನನ್ನು ಹಿಂಬಾಲಿಸಿದಳು. ಅವರು ಗುಡಿಯ ಮುಂದೆ ಹಾಯ್ದು 'ವೈ' ದೊರೆಯ ಮನೆಯ ಕಡೆಗೆ ನಡೆದರು. ಅಲ್ಲಿಯೆ ಈ ಎರಡೂ ಮನೆಗಳ ವ್ಯಾಜ್ಯ ನಿರ್ಣಯವಾಗಬೇಕಾಗಿತ್ತು.

ದಕ್ಷಿಣಕ್ಕೆ ಸುಮಾರು ಮೂವತ್ತು ಮನೆ ದಾಟಿ ತಿರುಗಲು, ಮೂಲೆಗೆ ಆ ಮನೆ. ಹೆಬ್ಬಾಗಿಲಕ್ಕೆ ಎದುರಾಗಿ ಕಪ್ಪು ಹಾಯಿಯ ನಾಲ್ಕು ನಾವೆಗಳು ಲಂಗುರ ಹಾಕಿ ನಿಂತಿದ್ದವು.

ಕರಿ ಅರಗು ಬಳಿದ ಹೊಸ್ತಿಲವನ್ನು ದಾಟಿ ಒಳಕ್ಕೆ ಹೋಗಲು ಬಾಗಿಲ ಕಾಯುವಾತ ಆದರದಿಂದ ಕರೆದ. ಅವನ ಕೋಣೆಗೆ ಹೋಗಲು ಅಲ್ಲಿ ಎರಡು ಮೇಜುಗಳ ಸುತ್ತು ಕೆಲವು ಅಂಬಿಗರೂ, ರೈತರೂ ಕುಳಿತಿದ್ದರು. ಐ-ಕೂ ಅಲ್ಲಿ ಎಲ್ಲೆಡೆಗೆ ತೀಕ್ಷ್ಣವಾದ ದೃಷ್ಟಿ ಬೀರಿದಳು. ಆ ಗುಂಪಿನಲ್ಲಿ ಮುದಿಹದ್ದು, ಪ್ರಾಯದ ಪಶು ಸೇರಿರುವರೇನೋ ಎಂದು ಅವಳಿಗೆ ಸಂಶಯ.

ಅವರು ಹೊಸ ವರ್ಷದ ಔತಣವೆಂದು 'ಕೇಕು' ಮತ್ತು ಚಹವನ್ನು ತಂದು ಕೊಟ್ಟರು. ಐ-ಕೂಳಿಗೆ ಅಲ್ಲಿ ಅದೇಕೊ ಹಿಡಿದುಬಿಟ್ಟಂತಾಗ ಹತ್ತಿತು. ಸಪ್ತಮ ಬಾಬುವಿನ ವಿಚಾರ ಅವಳ ಮನಸ್ಸನ್ನಾವರಿಸಿತ್ತು. ಮ್ಯಾಜಿಸ್ಟ್ರೇಟನ ತಮ್ಮನೆನಿಸಿದ ಮೇಲೆ ಆತನು ನಿಷ್ಪಕ್ಷಪಾತವಾದ ತೀರ್ಪನ್ನು ಹೇಳಲಿಕ್ಕಿಲ್ಲವೆ? "ಶಾಸ್ತ್ರ ಓದಿದವರೂ ನ್ಯಾಯಪ್ರಿಯರೂ ಆದವರು ದಬ್ಬಾಳಿಕೆಗೀಡಾದವರನ್ನು ರಕ್ಷಿಸಲೇಬೇಕು" ಎಂದು ಅವಳ ಮತ. "ಸಪ್ತಮ ಬಾಬುವಿಗೆ ನಾನಂತೂ ಹದಿನೈದು ವರುಷಕ್ಕೆ ಮದುವೆ ಯಾದಂದಿನಿಂದ ಇಂದಿನ ವರೆಗಿನ ಎಲ್ಲ ವಿಷಯವನ್ನು ವಿಸ್ತಾರವಾಗಿ ಹೇಳಿ ಬಿಡುವೆ........"

ಚಹ ಮುಗಿದೊಡನೆ ತಂದೆ-ಮಗಳು ಇಬ್ಬರನ್ನೂ ಒಂದು ದೊಡ್ಡ ನಡುಮನೆಗೆ, ಮುಂದೆ, ಅದರಾಚೆಗೆ ಅತಿಥಿಗಳ ಕೋಣೆಗೆ ಕರೆದೊಯ್ಯ ಲಾಯಿತು. ಅಲ್ಲಿ ಕೋಣೆಯ ತುಂಬ ಚಿತ್ರವಿಚಿತ್ರವಾದ ಅನೇಕ ಉಪ ಕರಣಗಳಿದ್ದವು. ಅವುಗಳನ್ನೆಲ್ಲ ನೋಡಲು ಅವಳಿಗೆ ಅವಕಾಶವೆಲ್ಲಿ? ಇದ ಲ್ಲದೆ ಅಲ್ಲಿ ನೀಲಿ ಮತ್ತು ಹೊಗೆ-ಬಣ್ಣದ ಮಲ್‌ಮಲ್ ಅಂಗಿ ಧರಿಸಿದ ಅನೇಕ ಜನ ಅತಿಥಿಗಳು ನೆರೆದಿದ್ದರು. ಅದರಿಂದ ಕೋಣೆಗೆ ಒಂದು ಮೆರಗು ಬಂದಿತ್ತು. ಈ ವೈಭವದ ಮಧ್ಯದಲ್ಲಿ ಒಂದು ವ್ಯಕ್ತಿ ಗಂಭೀರ ವಾಗಿ ಕುಳಿತಿತ್ತು. ಆತನೇ ಸಪ್ತಮ ಬಾಬುವಿರಬೇಕೆಂದು ಆಕೆ ನಿರ್ಣಯಿ ಸಿದ್ದಳು. ಸ್ಥೂಲದೇಹವೂ, ದುಂಡುತಲೆಯೂ ಇದ್ದರೂ 'ವೈ' ದೊರೆ ಗಿಂತ ಆತ ಹೆಚ್ಚು ಎತ್ತರ ಮತ್ತು ಪುಷ್ಟನಾಗಿದ್ದ. ಕರ್ರಗೆ ಮಿಂಚುತ್ತಿದ್ದ ಕಲ್ಲಿಮೀಸೆಯ ಮೇಲ್ಭಾಗದಲ್ಲಿ ಸಣ್ಣ ಕಣ್ಣುಗಳು ಎದ್ದುಕಾಣುತ್ತಿದ್ದವು. ತಲೆಯ ಮಧ್ಯವೆಲ್ಲ ಬೋಳಾಗಿತ್ತು. ಆದರೆ ಮುಖದ ಮೇಲೆ ಆರಕ್ತ ಕಳೆಯಿದ್ದು ಮುಖವು ಮೃದುವಾಗಿ ಸೌಮ್ಯವಾಗಿತ್ತು. ಹೀಗೆ ಹುರಬರಕು ತೋರದಿರುವ ಆ ಮುಖದ ಕಾಂತಿಯನ್ನು ಕಂಡು ಐ-ಕೂಳಿಗೆ ಆಶ್ಚರ್ಯ ವೆನಿಸಿದರೂ, ಹಂದಿಯ ನೆಣ ಬಳಿದ ಚರ್ಮ ಅಷ್ಟು ಮಿದುವಾಗಿರ ಬೇಕೆಂದು ಅವಳು ನಿರ್ಣಯಿಸಿದ್ದಳು. "ಇನೊಂದು ಗುಂಡಿಗೆ-ಗಲ್ಲು" ಎಂದು ಸಪ್ತಮ ಬಾಬು ಒಂದು 'ಖಾಸ್' ಕಲ್ಲಿನ ತುಣುಕನ್ನು ಹಿಡಿದು

ಒಳ್ಳೆ ಅಭಿಮಾನದಿಂದ ತೋರಿಸುತ್ತ "ಅಂದಿನ ರೂಢಿಯಂತೆ ನಮ್ಮ ಪೂರ್ವಿಕರ ಸಮಾಧಿಯಲ್ಲಿ ಹೂಳಬೇಕು." ಎಂದ. ಮತ್ತು ಅದನ್ನು ಮೂಗಿನಿಂದ ಸವರುತ್ತ ಹೇಳಹತ್ತಿದ: "ಇದು ಸಾಧಾರಣ ಇತ್ತೀಚಿನದಾಗಿರ ಬೇಕು. ಅಂತೆಯೆ ಅಷ್ಟು ಚೆನ್ನಾಗಿಲ್ಲ. 'ಹಾ:ನ್' ರಾಜವಂಶದ ಕಾಲ ಕ್ಕಿಂತ ಹಿಂದಿನದಾಗಿರಲಿಕ್ಕಿಲ್ಲ. ಆದರೂ ಕಾಯ್ದಿಡಲು ಅಡ್ಡಿಯಿಲ್ಲ. ಇಲ್ಲಿ ನೋಡಿ, ಪಾರಜದ ಕಲೆ! ಆಗ ಮೃತದೇಹಗಳು ಬೇಗ ಕೆಡಬಾರದೆಂದು ಪಾರಜವನ್ನು ಹಾಕುತ್ತಿದ್ದರು." ಅದೆಷ್ಟೊ ತಲೆಗಳು ಅದನ್ನು ನೋಡಲು ಮುನ್ನುಗ್ಗಿದವು. 'ವೈ' ದೊರೆಯೂ ಆ ಗುಂಪಿನಲ್ಲಿದ್ದ. ಉಳಿದವರೆಲ್ಲ ಆ ಊರಿನ ಶ್ರೀಮಂತ ಯುವಕರಾಗಿದ್ದರು. ಐ-ಕೂ ಇವರಾರನ್ನೂ ಅಷ್ಟು ಲಕ್ಷಿಸಿರಲಿಲ್ಲ. ಸಪ್ತಮ ಬಾಬುವಿನ ವರ್ಚಸ್ಸೂ ಅದಕ್ಕೆ ಕಾರಣ ವಿರಬಹುದು. ಐ-ಕೂಗೆ ನಡೆದ ಚರ್ಚೆಯ ವಿಷಯ ಅಷ್ಟು ಹೊಳೆಯ ಲಿಲ್ಲ. ಇದೂ ಅಲ್ಲದೆ 'ಪಾರಜದ ಕಲೆ'ಯ ಸೂಕ್ಷ್ಮ ನಿರೀಕ್ಷಣೆಯ ಪೃಥ್ಥಾಪೃಥ್ಥತೆಯನ್ನು ಮಾಡಲು ಅವಳಿಗೆ ಧೈರ್ಯವೂ ಸಾಲದು. ಅವಳು ಆ ವಿಷಯವನ್ನೆ ಬಿಟ್ಟು ಕೋಣೆಯನ್ನೆಲ್ಲ ನಿರೀಕ್ಷಿಸಹತ್ತಿದಳು. ಹಿಂದಿನ ಮಗ್ಗಲು ನೋಡಲು ಬಾಗಿಲ ಬಳಿ ಗೋಡೆಗೆ ಆತು ಮುದಿಹದ್ದು, ಪ್ರಾಯದ ಪಶು ಇಬ್ಬರೂ ಅವಳ ಕಣ್ಣಿಗೆ ಬಿದ್ದರು. ಆರು ತಿಂಗಳ ಹಿಂದೆ ಅವರನ್ನು ಕಂಡಾಗಿನಕಿಂತಲೂ ಇದೀಗ ಅವರು ಹೆಚ್ಚು ವಯಸ್ಸಾದವ ರಂತೆಯೂ ಬಳಲಿದವರಂತೆಯೂ ಕಂಡರು.

ಕೂಡಲೆ ಎಲ್ಲರೂ ಹೊರಬಿದ್ದು ಹೋದರು. 'ಪಾರಜದ ಕಲೆ'ಯ ಆ ವಿಚಿತ್ರ ಕಲ್ಲು 'ವೈ' ದೊರೆಯ ಕೈಯಲ್ಲುಳಿಯಿತು. ಆತ ಅದನ್ನು ಬಹು ಆದರದಿಂದ ತನ್ನ ಬೆರಳುಗಳಿಂದ ಆಡಿಸುತ್ತ 'ಚು-ಆಂಗ-ಮುಸಾನ್'ನ ಕಡೆಗೆ ತಿರುಗಿ ಕೇಳಿದ: "ನೀವಿಬ್ಬರೇ ಬಂದಿರಾ?"

"ಹೂಂ."

"ನಿನ್ನ ಮಕ್ಕಳು ಬರಲಿಲ್ಲವೆ?"

"ಅವರಿಗೆ ಬಿಡುವಿರಲಿಲ್ಲ."

"ನಿಜವಾಗಿ ವಿಚಾರ ಮಾಡುವುದಾದರೆ ಈ ವರ್ಷಾರಂಭದಲ್ಲಿ—

ಪ್ರಥಮ ಚಂದ್ರನ ಉತ್ಸವದಲ್ಲಿ—ನೀವಾದರೂ ಏಕೆ ಇಷ್ಟು ತ್ರಾಸ ಮಾಡಿಕೊಳ್ಳಬೇಕು? ಇನ್ನೂ ಅದೇ ತಂಟೆಯೆ ತಾನೆ........? ಎರಡು ವರ್ಷಗಳು ಕಳೆದವು. ನಡೆದ ಕಲಹಗಳಿಗೇನು ಕಡಿಮೆಯಿಲ್ಲ. ಈ ಸಂಬಂಧವನ್ನು ಮತ್ತೆ ಕೂಡಿಸುವದಕ್ಕಿಂತ ಕಡಿದುಕೊಳ್ಳುವದೇ ನೆಟ್ಟಗೆಂದು ನನಗೆ ತೋರುತ್ತದೆ. ಐ-ಕೂಗೂ ಅವಳ ಗಂಡನಿಗೂ ಕೂಡಿ ನಡೆಯಲಿಲ್ಲ; ಅವಳ ಅತ್ತೆ ಮಾವಂದಿರೂ ಅವಳನ್ನು ಸೇರಲಿಲ್ಲ; ಎಂದ ಮೇಲೆ ಬೇರೆಯಾಗುವದೇ ಯೋಗ್ಯ. ನನ್ನ ಮಾತಂತೂ ನಡೆಯಲಿಲ್ಲ. ಆದರೆ ಈಗ ಸಪ್ತಮ ಬಾಬುವೂ ಬಂದಿದ್ದಾನೆ. ನ್ಯಾಯದ ಮೂರ್ತಿಯೆ ಆತ. ಅವನೂ ಕೂಡ ನನ್ನ ಅಭಿಪ್ರಾಯದವನೇ ಆಗಿದ್ದಾನೆ. ಏನೋ ದುರ್ದೈವ, ಆದದ್ದು ಆಗಿಹೋಯಿತು, ಎಂದು ಎರಡೂ ಪಕ್ಷದವರು ತಿಳಿದುಕೊಂಡು ರಾಜಿಯಾಗಬೇಕೆಂದು ಆತನ ಮತ. ಹಿಂದೆ ಗೊತ್ತುಮಾಡಿದ ಹಣಕ್ಕೆ ಮತ್ತೆ ಹತ್ತು 'ಡಾಲರ್' 'ಶೀ' ಮನೆಯವರು ಹೆಚ್ಚು ಮಾಡುವರು!"

"..............."

"ತೊಂಬತ್ತು ಡಾಲರುಗಳು! ಚಕ್ರವರ್ತಿಯ ತನಕ ಒಯ್ದರೂ ಈ ನ್ಯಾಯದಲ್ಲಿ ನಿಮಗೆ ಇಷ್ಟು ಸಿಕ್ಕಲಿಕ್ಕಿಲ್ಲ! ಸಪ್ತಮ ಬಾಬುವಂತೇ ಇಷ್ಟು ಔದಾರ್ಯ ತೋರಿದ್ದಾನೆ!"

ಸಪ್ತಮ ಬಾಬು ಕಣ್ಣುಗಳನ್ನು ಹಿಗ್ಗಿಸಿ ಚು-ಇಂಗ್-ಮುಸಾನನ್ನು ನೋಡುತ್ತ ಸಮ್ಮತಿಸೂಚಕವಾಗಿ ತಲೆ ಹಾಕಿದ.

ಇದೆಲ್ಲ ವೇಗವಾಗಿ ವಿಪರೀತಕ್ಕೆಡಹತ್ತಿದೆಯೆಂದು ಐ-ಕೂಳಿಗೆ ಅನಿಸಿತು. ತನ್ನ ತಂದೆಯ ದುರ್ಬಲತೆಯನ್ನು ಕಂಡು ಅವಳಿಗೆ ಸಿಟ್ಟು ಬಂತು. ಕರಾವಳಿಯ ಜನವನ್ನು ಬೆದರಿಸಿಕೊಳ್ಳುವದಷ್ಟೆ ಅವನಿಗೆ ಗೊತ್ತು. ಆದರೆ ಈಗ ಅವನ ಮುಗ್ಧತೆಗೆ ಕಾರಣವೇನೊ ಅವಳಿಗೆ ತಿಳಿಯದು. ಅಂಜಿಕೆಯೆನ್ನಬೇಕೆ? ಇಷ್ಟು ಹೊತ್ತಿನ ವರೆಗೆ ಸಪ್ತಮ ಬಾಬುವಿನ ಮಾತುಕತೆಯನ್ನು ಕೇಳಿದ ಅವಳಿಗೆ ಅವನ ಮಾತಿನ ಅರ್ಥ ವಿಶೇಷವಾಗಿರದಿದ್ದರೂ ಸ್ವಭಾವದ ಪರಿಚಯ ತಕ್ಕಮಟ್ಟಿಗಾಗಿತ್ತು. ಅಂಜುವಂತಹದೇನೂ ಅವನಲ್ಲಿ ತೋರಲಿಲ್ಲ. ಅವನು ದಯಾವಂತನೂ ಉದಾರನೂ ಆಗಿರಬೇಕೆಂದು ಅವಳಿಗೆ ಅನಿಸಹತ್ತಿತು. ಅದರಿಂದಾಗಿ ಅವಳು ಧೈರ್ಯದಿಂದ ಹೇಳಿದಳು:

“ ಸಪ್ತಮ ಬಾಬು ಓದಿದವರೂ ಬಲ್ಲವರೂ ಇದ್ದಾರೆ. ನಮ್ಮ ಹಾಗೆ ಹಳ್ಳಿಗಾಡಿನವರಲ್ಲ. ಅವರಿಗೆ ನ್ಯಾಯ ಯಾವುದು ಚೆನ್ನಾಗಿ ಗೊತ್ತು. ನನಗೆ ಅನ್ಯಾಯ ಮಾಡಿದ್ದಾರೆ. ಆದುದರಿಂದಲೇ ನಾನು ನ್ಯಾಯ ಬೇಡುತ್ತಿದೇನೆ........”

“ ‘ಶೀ’ ಮನೆಗೆ ನಾನು ನಡೆಯಲು ಹೋದ ಮೇಲೆ ಯೋಗ್ಯ ಸೊಸೆಯಾಗಿ, ಯಾವ ಕೆಲಸದಲ್ಲಿಯೂ ತಪ್ಪದೆ, ಒಳ್ಳೆ ಹೆಂಡತಿಯೆನಿಸಲು ಮಾಡಬೇಕಾದದ್ದನ್ನೆಲ್ಲ ಮಾಡುತ್ತಿದ್ದೆ. ಎಂದೂ ತಲೆಯೆತ್ತಿ ನಡೆಯಲಿಲ್ಲ. ಯಾವ ನಿಯಮವನ್ನೂ ಬಿಡಲಿಲ್ಲ. ಆದರೆ ಅವರು ಮೊದಲಿನಿಂದಲೇ ನನ್ನನ್ನು ಸರಿಯಾಗಿ ನಡಿಸಿಕೊಳ್ಳಲಿಲ್ಲ. ಭೂತವನ್ನು ಕಾಡುವ ದೇವನಂತೆ ನನ್ನೆದುಗು ನಟಿಸುತ್ತಿದ್ದರು. ಒಮ್ಮೆ ಒಂದು ಮುಂಗಲಿ ಅವರ ಹುಂಜವನ್ನು ಹಿಡಿಯಿತು. ಗೂಡನ್ನು ಮುಚ್ಚಲಿಲ್ಲವೆಂದು ನನ್ನ ಮೇಲೆ ತಪ್ಪು ಹೊರಿಸಿ, ಜರಿದರು. ಆದರೆ ನಿಜವಾಗಿ ನಡೆದದ್ದು ಬೇರೆ. ಅವರದೇ ಆ ಕಾಳು ನಾಯಿ— ಅದರ ತಲೆ ಕತ್ತರಸಲಿ— ಅಕ್ಕಿಯ ಆಸೆಗಾಗಿ ಗೂಡಿನ ಬಾಗಿಲ ಸರಿಸಿತ್ತು. ಇದನ್ನೆಲ್ಲ ಪೂರ್ವಾಪರ ವಿಚಾರ ಮಾಡದೆ, ಕರಿದು ಬಿಳಿದು ಯಾವುದನ್ನೂ ನೋಡದೆ, ಆ ಪ್ರಾಯದ ಪಶು ಬಂದು ನನ್ನ ಮೋರೆಯ ಮೇಲೆ ಜಜ್ಜಿಯೇ ಜಜ್ಜಿತು ! ”

ಸಪ್ತಮ ಬಾಬು ಮುಖವೆತ್ತಿ ಅವಳನ್ನು ನಿಟ್ಟಿಸಿದ.

“ ಇದಕ್ಕೆಲ್ಲ ಬೇರೆ ಕಾರಣವಿರಲೇಬೇಕೆಂದು ಆಗಲೆ ನನಗೆ ಅನಿಸಿತು. ಈಗ ನಾನು ಹೇಳುವ ಸಂಗತಿಯನ್ನು ಸಪ್ತಮ ಬಾಬುಗಳು ಲಕ್ಷ್ಯಗೊಟ್ಟು ಕೇಳಬೇಕು, ಎಂದು ಬಲ್ಲವರಾದ ಅವರಿಗೆ ಹೇಳುವ ಕಾರಣವಿಲ್ಲ. ಅಷ್ಟು ಕ್ರೂರತನದಿಂದ ನಡೆಯಲು ಕಾರಣವು ಬೇರೆಯೆ ಇತ್ತು. ಆತ ಬೀದಿಯ ಒಬ್ಬ ಸೂಳೆಯಲ್ಲಿ ಮನಸ್ಸಿಟ್ಟಿದ್ದ. ಹೇಗಾದರೂ ಮಾಡಿ ನನ್ನನ್ನು ದಬ್ಬಬೇಕೆಂದೇ ಅವನ ವಿಚಾರ. ಆದರೆ ದೈವಕ್ಕೆ ಊಟ ಹಾಕಿ ಕಂಕಣ ಕಟ್ಟಿಸಿಗೊಂಡು ಅವನ ಕೈಹಿಡಿದ ನಾನು – ಹೂವಿನ ಮಂಚ ಏರಿ ಅವನ ಮನೆಗೆ ಹೋದ ನಾನು—ಸುಮ್ಮನೆ ಬಿಟ್ಟೇನೇ ? ಅದು ಅಷ್ಟು ಸುಲಭವೇ ? ನಾನು ನ್ಯಾಯವನ್ನು ಬೇಡತಕ್ಕವಳು. ಅವರಿಗೆ ನನ್ನ ಕೈ

ತೋರಿಸಲೇಬೇಕು. ಕೋರ್ಟಿಗೆ ಹೋದರೂ ಚಿಂತೆಯಿಲ್ಲ. ಮ್ಯಾಜಿಸ್ಟ್ರೇಟ ವಿರುದ್ಧ ಮಾಡಿದರೆ ಮೇಲಿನ ಕೋರ್ಟಿದೆ........"

"ಸಪ್ತಮ ಬಾಬುವಿಗೆ ಇದೆಲ್ಲ ಗೊತ್ತೇ ಇದೆ" ಎಂದು 'ವೈ' ದೊರೆ ಬಾಯಿ ಹಾಕಿದ.

"ಐ-ಕೊ, ನೀನು ಈ ಹಟ ಬಿಡದಿದ್ದರೆ ನಿನಗೆ ಏನೂ ಸಿಗಲಾರದು. ಇನ್ನೂ ನೀನು ಮೊದಲಿನಂತೆಯೆ ಇರುವಿ. ನೋಡು, ನಿಮ್ಮ ತಂದೆ ಎಷ್ಟು ವಿಚಾರಿಯಾಗಿದ್ದಾನೆ. ಆದರೆ ನೀನೊ, ನಿನ್ನ ಆ ಅಣ್ಣ-ತಮ್ಮಂದಿರೊ....! ಒಳ್ಳೇದು, ನೀನು ಮೇಲಕ್ಕೆ ಹೋದರೇನು? ಅಲ್ಲಿಯೂ ಆ ವರಿಷ್ಠನು ಸಪ್ತಮ ಬಾಬುವನ್ನು ಕೇಳದಿರನು. ಅಷ್ಟು ಹೊತ್ತಿಗೆ ನಿನ್ನ ವಿಷಯ— ನಿನೇ ಕೆಟ್ಟವಳೆಂದು—ಜನಜಾತ್ರೆಯಾಗುವದು. ಆಗ ಯಾರು ಏನು ಹೇಳಹೋದರೂ ನಡೆಯುವದಿಲ್ಲ........"

"ಏನು ಬೇಕಾದದ್ದಾಗಲಿ, ನನ್ನ ಜೀವದ ಮೇಲೆ ಬಂದರೂ ಚಿಂತೆಯಿಲ್ಲ. ಅಷ್ಟೇ ಏಕೆ, ಎರಡೂ ಮನೆತನಗಳು ಹಾಳಾದರೂ ಆಗಲಿ!"

"ಜೀವ ಕೊಡುವಂತಹ ಮಾತೇನಿದೆ ಇದರಲ್ಲಿ?" ಎಂದು ಸಪ್ತಮ ಬಾಬು ಕೊನೆಗೆ ಹೇಳಿದ. "ನಿನಗಿನ್ನೂ ಪ್ರಾಯವಿದೆ. ಪ್ರಾಯದಲ್ಲಿ ಆದಷ್ಟು ಪರರೊಡನೆ ಪ್ರೀತಿಯನ್ನು ಬೆಳಿಸಬೇಕು. ಪ್ರೀತಿಯಿಂದಲೆ ಸಂಪತ್ತು, ಅಲ್ಲವೆ? ನಾನು ಈ ಮೊದಲೆ ಹೇಳಿದ್ದೇನೆ. ನಿನ್ನ ಗಂಡ ಇನ್ನು ಹತ್ತು ಡಾಲರು ಹೆಚ್ಚು ಕೊಡಬೇಕೆಂದು. ಇದಕ್ಕೂ ಹೆಚ್ಚಿನ ನ್ಯಾಯ ಸ್ವರ್ಗದಲ್ಲಿಯೂ ಸಿಗದು. ನಿಜವಾಗಿ ನೋಡಿದರೆ ನಿನ್ನ ಅತ್ತೆ ಮಾವ 'ಹೋಗು' ಎಂದು ಹೇಳಿದರೆ ನೀನು ಹೋಗಲೇಬೇಕು. ಇದು ಇಲ್ಲಿಯಷ್ಟೇ ಅಲ್ಲ,—ಶಾಂಘಾಯಿ, ಪೇಕಿಂಗ್, ಅಷ್ಟೇಕೆ, ಪರದೇಶಗಳಲ್ಲಿಯೂ— ಸತ್ಯವಾಗಿರುವ ಮಾತು. ನನ್ನ ಮಾತಿನಲ್ಲಿ ವಿಶ್ವಾಸವಿದ್ದರೆ ಇದೊ ಪೇಕಿಂಗದಿಂದ ಬಂದ ಯುವಕರೊಬ್ಬರಿಲ್ಲಿಯೆ ಇದ್ದಾರೆ. ಬೇಕಾದರೆ ನೀನೆ ಅವರನ್ನು ಕೇಳಿಕೊ." ಎಂದು ನೆರೆಯಲ್ಲಿಯೆ ನಿಂತ ಚೂಪುಗದ್ದದ ಯುವಕ ದೊರೆಯೊಬ್ಬನ ಕಡೆಗೆ ತಿರುಗಿ "ಅಲ್ಲವೆ?" ಎಂದ.

"ಅಷ್ಟೆ ಸರಿ." ಎಂದು ವೈ ಸೆಟೆಸಿ ದನಿ ಗಡಸುಮಾಡಿ ವಿಷಯದ

ಆವಿರ್ಭಾವದೊಡನೆ ಆತ ನುಡಿದ.

ಐ-ಕೂಗೆ ತಾನೀಗ ಅಸಹಾಯಳಾಗಿದ್ದೇನೆಂದು ಅನಿಸಹತ್ತಿತು. ಅವಳ ತಂದೆ ಮಾತೆತ್ತಲಾರದೆ ನಿಂತಿದ್ದ. ಅಣ್ಣ-ತಮ್ಮಂದಿರೊಬ್ಬರೂ ಬಂದಿರಲಿಲ್ಲ. 'ವೈ' ದೊರೆ 'ಶೀ' ಮನೆತನವನ್ನೆ ಎತ್ತಿಹಿಡಿದಿದ್ದ. ಸಪ್ತಮ ಬಾಬುವಿನ ಒಲವೂ ಅತ್ತಕಡೆಗೆಯೆ ಆಗಹತ್ತಿತು. ಆ ಚೂಪು ಗಡ್ಡದ ಯುವಕನೂ—ವಿನಯದ ಭಾವ ನಟಿಸುತ್ತಿದ್ದರೂ ಗಾಯಗೊಂಡ ತಗಣಿ ಯಂತೆ—ಮುಖ ನೋಡಿ ಮಣೆ ಹಾಕಹತ್ತಿದ್ದ. ಇದರಿಂದ ಅವಳಿಗೆ ಏನು ಹೇಳಬೇಕೊ ತಿಳಿಯದಂತಾಯಿತು. ಅಂತೂ ಕೊನೆಯ ಪ್ರಯತ್ನವೆಂದು ಅವಳು ನುಡಿದಳು:

"ನಿಜವೆ, ಸಪ್ತಮ ಬಾಬುಗಳೆ? ನೀವೂ........?" ಅವಳ ಕಣ್ಣು ಗಳಲ್ಲಿ ಆಶ್ಚರ್ಯ, ವಿಪ್ಲವ ಮತ್ತು ನಿರಾಶೆಗಳು ಕ್ಷಣದಲ್ಲಿ ತೋರಿ ಮರೆ ಯಾಗುತ್ತಿದ್ದವು.

"ಹೌದು. ನಾವು ಕಾಡು ಜನರು. ನಮಗಷ್ಟು ತಿಳಿಯದು. ಅಪ್ಪ ನಿಗೂ ಮನುಷ್ಯರ ರೀತಿ, ಜಗತ್ತಿನ ವ್ಯವಹಾರ ತಿಳಿಯವು. ಮುಪ್ಪು ಅವನ ಬುದ್ಧಿಯನ್ನು ಮಂಕಾಗಿಸಿದೆ. ಆ ಮುದಿಹದ್ದು ಆ ಪ್ರಾಯದ ಪಶುವೂ ತಾವೇ ಮನಬಂದಂತೆ ಗೊತ್ತುಮಾಡಲು ಅವನು ಬಿಡಬಾರದಾಗಿತ್ತು. ನಾಯಿಯು ತಗ್ಗಿನಲ್ಲಿ ಕಾಲು ಚಾಚಿ ಕೆಲಸ ಸಾಧಿಸಲು ಅವರಿಗೆ ಚನ್ನಾಗಿ ಗೊತ್ತು. ಲಂಚ, ಮುಖಸ್ತುತಿಗಳಿಂದ ಹೇಗೆ ಮುಂದಿಯ ಮನ ಒಲಿಸ ಬೇಕೆಂಬುದನ್ನೂ ಅವರು ಬಲ್ಲರು........"

ಇಷ್ಟು, ಹೊತ್ತಿನ ವರೆಗೆ ಅವಳ ಹಿಂದುಗಡೆ ಸುಮ್ಮನೆ ನಿರೀಕ್ಷಿಸುತ್ತ ನಿಂತಿದ್ದ ಪ್ರಾಯದ ಪಶುವು ಒಮ್ಮೆಲೆ ಹೇಳಿದ: "ನೋಡಿ, ಸಪ್ತಮ ಬಾಬು! ದೊಡ್ಡವರ ಎದುರಿನಲ್ಲಿಯೆ ಅವಳು ಹೀಗೆ ವರ್ತಿಸುತ್ತಿದ್ದಾಳೆ! ನಮ್ಮ ಮನೆಯಲ್ಲಿ ಅವಳ ಪೀಡೆಗೆ ಸಾಕಿದ ಪಶುಗಳಿಗೂ ಶಾಂತಿಯಿದ್ದಿಲ್ಲ. ನಮ್ಮ ತಂದೆಗೆ 'ಮುದಿಹದ್ದು' ಎನ್ನುತ್ತಾಳೆ. ನಾನು 'ಪ್ರಾಯದ ಪಶು', 'ಬಸವಿ ಮಗ' ಅಂತೆ!"

ಐ-ಕೂ ಅವನ ಕಡೆಗೆ ತಿರುಗಿ ಕೂಗಿದಳು: "ಏನು ನಿನಗೆ....? ಅಂಗನರಾರು? ನೀನೇ....ಹತ್ತಾರು ಸಾವಿರ ಮಿಂಡರ ಸೂಳೆಗೆ ಹುಟ್ಟಿ

ದವ....ನಿನಗೆ ಬಸವಿ-ಮಗ....ಅಂದವರಾರು ?...."

ಹೀಗೆ ಅವನ ಬಾಯಿ ಬಡಿದು ಅವಳು ಸಪ್ತಮ ಬಾಬುವಿನ ಕಡೆಗೆ ತಿರುಗಿದಳು.

"ನಿಮ್ಮೆಲ್ಲರಿಗೂ ನಾನು ಹೇಳಬೇಕಾದ್ದನ್ನು ಹೇಳಿಬಿಡುವೆ. ಅವನು ನನಗೆ ಎಂದಾದರೂ ಕರುಣೆಯಿಂದ ಅಥವಾ ಒಳ್ಳೆ ರೀತಿಯಿಂದ ಮಾತಾಡಿದ್ದು ಇಲ್ಲವೇ ಇಲ್ಲ. ಎಂದಾದರೂ ತುಟಿ ಎರಡು ಮಾಡಿದರೆ ನನ್ನನ್ನು 'ಪಾಪಕ್ಕೆ ಹುಟ್ಟಿದವಳೆ!' ಎಂದು ಕರೆಯುವದು, ನನ್ನ ತಾಯಿಯನ್ನು ಬಯ್ದು ಮುಗಿಸುವದು; ಆ ಸೂಳೆಯನ್ನು ಮನೆಯ ಯಜಮಾನಿಯಾಗಿ ಮಾಡಿದ ಮೇಲಂತೂ ನನ್ನ ಅಜ್ಜ ಮತ್ತಜ್ಜರನ್ನೂ ಬಯ್ಯಹತ್ತಿದ. ಸಪ್ತಮ ಬಾಬೂ, ಇದೆಲ್ಲ ವಿಚಾರಿಸಿ........"

ಏನನ್ನೋ ನೋಡಿ ಬೆದರಿದಂತೆ ಅವಳು ಒಮ್ಮೆಲೆ ತಡೆದಳು. ಸಪ್ತಮ ಬಾಬು ಕಣ್ಣು ಹೊರಳಿಸಿ ತಲೆ ಎತ್ತಿದ್ದ. ನಡುಗುವ ಬಿರುಸು ದನಿ ಅವನ ತೆಳ್ಳನೆಯ ಕಲ್ಲಿಮೀಸೆಯನ್ನಲ್ಲಾಡಿಸಿ ಹೊರಬಂತು.

"ಯಾರಲ್ಲಿ?" ಎಂದು ಕೂಗಿದ.

ಐ-ಕೊಳ ಎದೆಯ ಬಡಿತ ಒಮ್ಮೆಲೆ ನಿಂತತಾಯಿತು. ಮತ್ತೆ ವೇಗವಾಗಿ ಬಡಿದುಕೊಳ್ಳುವಂತೆನಿಸಿತು. ತನಗಿನ್ನು ನ್ಯಾಯ ಸಿಗದೆಂದು ಅವಳಿಗೆ ಭಾಸವಾಯಿತು. ಅವಳೀಗ ತಪ್ಪು ಹೆಜ್ಜೆಯಿಟ್ಟು ಮಡುವಿಗೆ ಸಿಕ್ಕಿಬಿಟ್ಟಿದ್ದಳು.

ನೀಲವರ್ಣದ ನಿಲುವಂಗಿಯನ್ನು ಹಾಕಿಕೊಂಡು ಮೇಲೆ ಕಪ್ಪು ಜಾಕೀಟು ಹಾಕಿದವನೊಬ್ಬ ನೇರವಾಗಿ ಸಪ್ತಮ ಬಾಬುವಿನೆದುರಿಗೆ ಬಂದು ಕಂಬದಂತೆ ಸೆಟೆದು ನಿಂತ. ಎಲ್ಲವೂ ಮೌನ. ಕಡ್ಡಿ ಕೂಡ ಚಲಿಸದು. ಸಪ್ತಮ ಬಾಬು ತುಟಿ ಅಲ್ಲಾಡಿಸಿದ. ಅವನು ಏನೆಂದನೆಂಬುದು ಉಳಿದವರಾರಿಗೂ ತಿಳಿಯದು. ಬಂದು ನಿಂತಾತ ಮಾತ್ರ ಏನೋ ತಿಳಿದವನಂತೆ ಮತ್ತಷ್ಟು ಮೈ ಸೆಟಿಸಿ, ಆ ಮಾತುಗಳು ಮಾತ್ರ ಮೈಯನ್ನೆ ಸೇರಿದುವೊ ಎನ್ನುವ ಗಂಭೀರತೆಯಿಂದ "ಜೀ ಸರಕಾರ!" ಎಂದು ಮಾರುನುಡಿದು ನಾಲ್ಕು ಹೆಜ್ಜೆ ಹಿಂದೆ ಸರಿದು ಅಲ್ಲಿಂದ ಹೊರಟು ಹೋದ.

ಐ-ಕೊಳಿಗೆ ಏನೊ ಒಂದು ದುರ್ಘಟನೆ ಒದಗಿತೆಂದು ಅನಿಸಿತು. ಆದರೆ

ಅದನ್ನು ತಡೆಯುವ ತ್ರಾಣವೂ ತನಗಿಲ್ಲವೆಂದು ತಿಳಿದಳು. ಇದೀಗ ಸಪ್ತಮ ಬಾಬುವಿನ ಶಕ್ತಿಯೂ ವರ್ಚಸ್ಸೂ ಅವಳ ಕಲ್ಪನೆಗೆ ಬರಹತ್ತಿತು. ತಾನು ಅಷ್ಟು ಸ್ವೈರವಾಗಿ ಮಾತಾಡಬಾರದಾಗಿತ್ತೆಂದು ಅವಳಿಗೆ ಹೊಳೆಯಿತು; ಅಷ್ಟು ದುರ್ಲಕ್ಷಿಸಿ ಮಾತಾಡಬಾರದಾಗಿತ್ತೆಂದು ಅವಳು ಬಗೆದಳು. ತನ್ನ ಆ ದುಡುಕಿಗಾಗಿ ಅವಳಿಗೆ ಕೆಡುಕೆನಿಸಹತ್ತಿತು. ಆ ನಡೆದುಹೋದದ್ದನ್ನು ತಿದ್ದಲೆಂದೊ ಅವಳು ತನಗೇ ತಿಳಿಯುದೆಯೆ ನುಡಿದಳು:

"ಅದೇನೆ ಇರಲಿ, ಆದದ್ದಾಯಿತು. ಸಪ್ತಮ ಬಾಬುವಿನ ತೀರ್ಪನ್ನು ನಾನು ಒಪ್ಪಿಕೊಳ್ಳಲು ಇನ್ನೂ ಸಿದ್ಧಳಿದ್ದೇನೆ."

ಮತ್ತೆ ಕೋಣೆಯೆಲ್ಲ ನಿಶ್ಶಬ್ದ. ಐ-ಕೂಳು ರೇಶಿಮೆ ಎಳೆ ಹಿಂಜಿದಂತೆ ಮೆಲ್ಲನೆ ಒಂದೊಂದೆ ಶಬ್ದವನ್ನು ನುಡಿದಿದ್ದರೂ 'ವೈ' ದೊರೆಗೆ ಆ ಮಾತು ಗಳು ಕಿವಿಗೆ ಬಿದ್ದಕೂಡಲೆ ಒಳ್ಳೆ ಉತ್ಸಾಹದಿಂದ ಪುಟಿದೆದ್ದು ಗುಡುಗಿದ: "ಶಾಬಾಶ್! ಸಪ್ತಮ ಬಾಬುವಿನ ನ್ಯಾಯವೆ ಅಂತಹದು. ಐ-ಕೂ ವಾದರೂ ತಿಳಿಗೇಡಿಯಲ್ಲ!" ಎಂದು ಹೀಗೆ ಐ-ಕೂಳನ್ನು ಉಬ್ಬಿಸಿ ಚು-ಆಂಗ-ಮುಸಾಗೆ ಹೇಳಿದ: "ಮೂ ಅಜ್ಜ, ನಿನ್ನ ಮಗಳೆ ಒಪ್ಪಿದ ಮೇಲೆ ನಿನ್ನದು ವಿರೋಧವಿಲ್ಲವಷ್ಟೆ? ನಾನು ಹೇಳಿದಂತೆ ಕೆಂಪು ಮತ್ತು ಹಸುರು ಮದುವೆಯ ಕಾರ್ಡುಗಳನ್ನು ತಂದಿದ್ದೀರಾ? ಎರಡೂ ಮನೆಯವರೂ ಅವು ಗಳನ್ನಿಲ್ಲಿ ಕೊಡಿರಿ."

ಐ-ಕೂ ತಿರುಗಿ ನೋಡಲು, ಮೂ ಅಜ್ಜ ಟೊಂಕದಲ್ಲಿ ಕೈಹಾಕಿ ಏನೊ ತೆಗೆಯಲು ತಡವರಿಸುತ್ತಿರುವಂತೆ ಕಂಡಿತು. ಅಷ್ಟರಲ್ಲಿ ಆ ನೀಲಿ ಅಂಗಿಯ ಕಂಬದಂತಹ ಮನುಷ್ಯ ಕೈಯಲ್ಲಿ ಕರ್ರಗೆ ಮಿಂಚುವ ಆಮೆ ಯಾಕಾರದ ಚಿಕ್ಕ ವಸ್ತುವೊಂದನ್ನು ತಂದು ಸಪ್ತಮ ಬಾಬುವಿಗೆ ಕೊಟ್ಟ. ಇದೇನೊ ಇನ್ನೂ ವಿಪರೀತಕ್ಕಿಡಬಹುದೆಂದು ಅವಳು ಮತ್ತೆ ತನ್ನ ತಂದೆಯ ಕಡೆಗೆ ತಿರುಗಿದಳು. ಆತ ನೀಲಿಯ ಅರಿವೆಯ ಗಂಟನ್ನು ಬಿಚ್ಚುತ್ತಿದ್ದು ದನ್ನು ಕಂಡು ಅವಳಿಗೆ ಸಮಾಧಾನವೆನಿಸಿತು.

ಸಪ್ತಮ ಬಾಬು ಆ ಆಮೆಯಾಕಾರದ ವಸ್ತುವಿನ ತಲೆಯ ಮುಚ್ಚಳ ತೆಗೆದ. ಮತ್ತು ತನ್ನ ಅಂಗೈಯಲ್ಲಿ ಅದರೊಳಗಿಂದ ಏನನ್ನೊ ಸುರುವಿ ಕೊಂಡ. ಕಂಬದಂತಹ ಆಳು ಆ ವಸ್ತುವನ್ನು ತೆಗೆದುಕೊಂಡು ಹೊರಟು

ಹೋದ. ಸಪ್ತಮ ಬಾಬು ಬೆರಳನ್ನು ಅಂಗೈಯಲ್ಲಿ ಅದ್ದಿ ಮೂಗಿಗೆ ತಿಕ್ಕಿಕೊಂಡ. ಮೇಲ್ದುಡಿಗೆಲ್ಲ ಏನೊ ಕಂದೀ ಬಣ್ಣ ಬಳಿದಂತೆ ಕಾಣುತ್ತಿತ್ತು. ಸೀನಲು ಮೂಗು ಏರಿಸಿದ.

ಚು-ಅಂಗ-ಮುಸಾನ್ ಬೆಳ್ಳಿಯ ನಾಣ್ಯಗಳನ್ನು ಎಣಿಸಿಕೊಳ್ಳುತ್ತಿದ್ದ. 'ವೈ' ದೊರೆ ನಾಣ್ಯಗಳ ರಾಶಿಯಿಂದ ಕೆಲವು ಡಾಲರುಗಳನ್ನು ಇತ್ತ ಸರಿಸಿ ಮುದಿಹಬ್ಬಿಗೆ ಕೊಟ್ಟ.

ಮದುಮಕ್ಕಳ ಜನ್ಮಕುಂಡಲಿಯನ್ನು ಬರೆದ ಮದುವೆಯ ಕೆಂಪು ಮತ್ತು ಹಸರು ಕಾರ್ಡುಗಳು ಅವರವರಿಗೆ ತಿರುಗಿ ಕೊಡಲ್ಪಟ್ಟಮೇಲೆ 'ವೈ' ಹೇಳಿದ:

" ನೀವು ಇವುಗಳನ್ನು ಚೆನ್ನಾಗಿ ಕಾಯ್ದಿದ್ದೀರಿ. ಲಾವೊ-ಮೂ, ಹಣ ಸರಿಯಾಗಿ ಎಣಿಸಿಕೊ. ಹಣದ ಕೆಲಸ, ಹುಡುಗಾಟವಲ್ಲ. "

" ಆ....ಛೀ! ಸಪ್ತಮ ಬಾಬುವು ಸೀನಿದ್ದು ಐ-ಕೂಳಿಗೆ ತಿಳಿಯಿತು. ಅವನ ಮುಖವನ್ನು ಸಿಟ್ಟಿಸಿದಳು. ಆತ ಮೂಗೇರಿಸಿದ್ದ; ಬಾಯಿ ಆs ಎಂದು ತೆಗೆದಿದ್ದ. ಆ ಆಕಾರ ಯಾರನ್ನೂ ನಗಿಸುವಂತಹದು. ಸಪ್ತಮ ಬಾಬು ಗುಂಡಿಗೆ-ಗಲ್ಲನ್ನು— ಅದೇ ಆ ಪೂರ್ವಿಕರೊಡನೆ ಹೂಳಿದ್ದೆಂಬು ಹೇಳುತ್ತಿದ್ದ—ಕಲ್ಲಿನ ತುಂಡನ್ನು ಮೂಗಿನ ಹೊರಳೆಯ ಮೇಲೆ ತಿಕ್ಕುತ್ತಿದ್ದ.

ಚು-ಅಂಗ-ಮುಸಾನ್ ಹಣವನ್ನು ಕಷ್ಟದಿಂದ ಎಣಿಸಿಕೊಂಡ. ಮದುವೆಯ ಕಾರ್ಡುಗಳನ್ನು ಒಬ್ಬರೊಬ್ಬರಿಗೆ ಕೊಟ್ಟದ್ದಾಯಿತು. ಎಲ್ಲರಿಗೂ ಭಾರವಿಳಿದಂತಾಯಿತು. ಎಲ್ಲರ ಮುಖದ ಮೇಲೂ ಗಾಂಭೀರ್ಯದ ಆ ಚರ್ಯೆ ಹೊರಟು ಹೋಗಿ ಉತ್ಸಾಹದ ಕಳೆ ತೋರಹತ್ತಿತು. ಆ ಅತಿಥಿಗಳ ಕೋಣೆಯಲ್ಲಿ ಒಂದು ತರದ ಸ್ನೇಹದ ವಾತಾವರಣವುಂಟಾದಂತಿತ್ತು.

ಎಲ್ಲರೂ ಒಬ್ಬೊಬ್ಬರಾಗಿ ಏಳಹತ್ತಿದ್ದನ್ನು ನೋಡಿ 'ವೈ' ಹೇಳಿದ: " ವಾಹ! ಅಂತೂ ನ್ಯಾಯ ಸರಿಯಾಗಿ ಬಗೆಹರಿದಂತಾಯಿತು! ಇನ್ನೇನು ಉಳಿಯಲಿಲ್ಲ. ಎರಡೂ ಮನೆತನಗಳಿಗೆ ಶುಭವಾಗಲಿ! ಮದುವೆಯ ಗಂಟು ಒಮ್ಮೆ ಬಿಡಿಸಿದಂತಾಯಿತು. ಹೊಸ ವರುಷದ ಹಬ್ಬದ ಮಧ್ಯ

ವನ್ನಾದರೂ ಎಲ್ಲರೂ ಕುಡಿದು ಏಳುವಾ. ಇಂತಹ ಪ್ರಸಂಗ ಬರುವದೂ ಅಪರೂಪವೆ."

"ಛೀ, ಜೇಡ. ನಾವು ಕುಡಿಯುವದಿಲ್ಲ. ಅದು ಮುಂದಿನ ವರ್ಷಕ್ಕೆ ಇರಲಿ." ಎಂದು ಐ-ಕೂ ಅವನ ಆಭಾರ ಮನ್ನಿಸುತ್ತ ಹೇಳಿದಳು.

"ವೈ-ಲಾವೊ'ಯೇ, ತುಂಬಾ ಉಪಕಾರವಾಯಿತು. ಸದ್ಯ ಕುಡಿಯಲು ಹೊತ್ತಿಲ್ಲ. ಇನ್ನೂ ಕೆಲಸ ಬಹಳುಂಟು." ಎಂದು ಮುದಿಹದ್ದಿ ಪ್ರಾಯದ ಪಶುವೂ ಕೂಡಿಯೆ ಹೇಳಿದವು.

ಎಲ್ಲರೂ ಹೋದ ಮೇಲೆ ಹಿಂದೆ ನಡೆದಿದ್ದ ಐ-ಕೂಳನ್ನು ನೋಡಿ 'ವೈ' "ಆಹಹ! ಒಂದು ಹನಿ ಕೂಡ ಕುಡಿದು ಹೋಗುವುದಿಲ್ಲವೆ?" ಎಂದು ಕೇಳಿದ.

"ಛೀ, ಈಗ ಬೇಡ. ತಮ್ಮ ಉಪಕಾರ ಬಹಳವಾಯಿತು. 'ವೈ' ದೊರೆ."



## ಪರಿಚಯ

### ( ಜೋ–ವು–ಶೀ )

ಚೆಕಿಯಾಂಗ ಪ್ರಾಂತದ ಚಿಕ್ಕ ನಗರವೊಂದರಲ್ಲಿ ಜೋ-ವು-ಶೀಯು ಜನ್ಮವೆತ್ತಿದ. ಮತ್ತು ಅಲ್ಲಿಯ ಪ್ರಾಂತಿಕ ಶಾಲೆಯಲ್ಲಿ ಅವನ ಶಿಕ್ಷಣ ವಾಯಿತು.ಟ್ರೇನಿಂಗ ಕಾಲೇಜು ಬಿಟ್ಟ ಮೇಲೆ ಶಿಕ್ಷಕನಾಗಿ ಕೆಲಸ ಮಾಡಿದ. ಚೆಕಿಯಾಂಗ ಪ್ರಾಂತದ ಶಾಂಘಾಯಿ ಜಿಲ್ಹೆಯಲ್ಲಿ ಸ್ವಲ್ಪ ಕಾಲ ಅವನು ವಿದ್ಯಾಖಾತೆಯಲ್ಲಿ ಮೇಲ್ವಿಚಾರಕನೂ ಆಗಿದ್ದ. ಬರಬರುತ್ತ ಅವನು ಲೇಖನ ವೃತ್ತಿಯಲ್ಲಿ ಹೆಚ್ಚು ಮನಸ್ಸು ಹಾಕಹತ್ತಿದ. ವಿಚಾರಸ್ವಾತಂತ್ರ್ಯದ ಚಳುವಳಿಯ ವರ್ಚಸ್ಸು ಅವನ ಮೇಲೆ ವಿಶೇಷವಾಗಿತ್ತು. ಆತನ ಅನೇಕ ಬರಹಗಳಲ್ಲಿ ಇದನ್ನು ನೋಡಬಹುದು.

೧೯೨೭ರ ಉಪಕ್ರಾಂತಿಯ ನಂತರ ಶಾಂಘಾಯಿಯಲ್ಲಿ ನಿರ್ಮಿತವಾದ ವಾಮಪಕ್ಷ ಲೇಖಕರ ಸಂಘದ ಅತ್ಯಂತ ಉತ್ಸಾಹಿ ಸದಸ್ಯರಲ್ಲಿ ಜೋ-ವು-ಶೀಯೂ ಒಬ್ಬನಾಗಿದ್ದ. ಕೋ-ಮಿನ್-ಟೇಂಗ್‌ವು ಈ ಸಂಘವನ್ನು ಬಹಿಷ್ಕರಿಸಿತು ಮತ್ತು ಅದರ ಸದಸ್ಯರಾಗುವವರಿಗೆ ಮರಣದಂಡನೆ ವಿಧಿಸಲಾಗುವದೆಂದು ಸಾರಿತು. ೧೯೩೧ರಲ್ಲಿ ಜೋ-ವು-ಶೀಯು ಮತ್ತೆ ಐವರು ಜೊತೆಗಾರರೊಡನೆ ಈ ಶಿಕ್ಷೆಗೆ ವೈತೆತ್ತಬೇಕಾಯಿತು. ಶಾಂಘಾಯಿಯ ಅಂತರ್‌ರಾಷ್ಟ್ರೀಯ ವಸತಿಯ ಭಾಗದಲ್ಲಿ ಅವನು ಅದೇ ವರುಷ ಬ್ರಿಟಿಶ್ ಪೋಲೀಸಿನವರಿಂದ ಬಂಧಿಸಲ್ಪಟ್ಟ. ಚಿನಾದ ಪ್ರಭುತ್ವದವರ ಬಿನ್ನಹದ ಮೇರೆಗೆ ಅವರಿಗೆ ಒಪ್ಪಿಸಲ್ಪಟ್ಟು ಫೆಬ್ರುವರಿ ೭ನೆಯ ತಾರೀಖಿನ ದಿನ 'ನಾನ್ ಶಿಂಗ'ದಿಂದ ಬಂದ ಹುಕುಮಿನ ಮೇರೆಗೆ ಅವನನ್ನು ಲಂಘವಾ ಕೋಟೆಯಲ್ಲಿ ಕೊಲ್ಲಲಾಯಿತು. 'ಫೆಂಗ್-ಕುಂಗ್' ಎಂಬ ೨೪ ವರುಷದ ಕಾದಂಬರಿಕಾರ

ಳಾದ ಬಾಲಿಕೆಯೂ ಮತ್ತು ಶಾಂಗ್-ಹೂಯಿ ೨೭, ಯಿನ್-ಫು ೨೨, ಲೀ-ವೀಸೆನ್ ೨೮ ಮತ್ತು ಹೂ-ಯೇ-ಪಿಂಗ್ ೨೬, ಹೀಗೆ ಐವರು ತರುಣ ಲೇಖಕರೂ ಅದೇ ಕಾಲದಲ್ಲಿ ಮರಣದಂಡನೆಗೆ ಗುರಿಯಾದರು.

'ಫೆಬ್ರುವರಿ', 'ನಿಸ್ಸೀಮ ವರ್ಚಸ್ಸು' ಮತ್ತು 'ಹಳೆಯ ರೂಢಿಯ ಮರಣ' ಎಂಬ ಜೋ-ವು-ಶೀಯ ಗ್ರಂಥಗಳು ಪ್ರಸಿದ್ಧವಾಗಿವೆ. ತೊತ್ತು-ತಾಯಿ (ಹೆಣ್ಣು-ಬಾಳು) ಕತೆಯು ಅವನ ಚಿಕ್ಕ ಕತೆಗಳಲ್ಲೆಲ್ಲ ಅತ್ಯುತ್ತಮವಾದುದು. ಚೀನಾದ ಸಾಹಿತ್ಯದಲ್ಲಿ ಉಂಟಾದ 'ಕ್ರಾಂತಿಕರ ವಾಸ್ತವ-ವಾದ'ದ ಚಳುವಳಿಯ ಮೇಲೆ ಈ ಕತೆಯು ನಿರಂತರವಾದ ವರ್ಚಸ್ಸನ್ನುಂಟುಮಾಡಿತು ಎಂದು ಹೇಳಲಾಗುತ್ತದೆ.

---

# ಹೆಣ್ಣು-ಬಾಳು 

ಅಥವಾ

# ತೊತ್ತು-ತಾಯಿ 

ಆಕೆಯ ಗಂಡ ಚರ್ಮದ ವ್ಯಾಪಾರಿಯಾಗಿದ್ದ. ಪಶುಗಳ ತೊಗಲುಗಳನ್ನೂ, ಬೇಟೆಗಾರರಿಂದ ಕಾಡುಮೃಗಗಳ ತೊಗಲುಗಳನ್ನೂ ಕೂಡಿಸಿ ಪೇಟೆಗೆ ಒಯ್ದು ಮಾರುತ್ತಿದ್ದ. ಬಿಡುವಿನ ವೇಳೆಯಲ್ಲಿ ಹೊಲದ ಕೆಲಸವನ್ನೂ ಪೂರಕವೃತ್ತಿಯೆಂದು ಮಾಡುತ್ತಿದ್ದ. ಅಗಿ ನೆಡುವ ಕಾಲದಲ್ಲಿ ಅಗಿಗಳನ್ನು ಹಚ್ಚಲು ಒಕ್ಕಲಿಗರಿಗೆ ನೆರವಾಗುತ್ತಿದ್ದ. ಸಾಲಾಗಿ ಅಗಿಗಳನ್ನು ಹಚ್ಚುವವರಲ್ಲಿ ಅವನು ನುರಿತ ಕೈಯಾದ್ದರಿಂದ ನಾಲ್ಕಾರು ಆಳುಗಳ ಮೇಲೆ ನಿರೀಕ್ಷಕನಾಗಿ ಅವನನ್ನು ಭತ್ತದ ಗದ್ದೆಯಲ್ಲಿ ಕೆಲಸಕ್ಕೆ ತೆಗೆದುಕೊಳ್ಳುತ್ತಿದ್ದರು. ಇಷ್ಟಾದರೂ ಅವನಿಗೆ ದೈವ ಅನುಕೂಲವಾಗಿರಲಿಲ್ಲ. ವರುಷ ವರುಷಕ್ಕೆ ಅವನ ಸಾಲ ಹೆಚ್ಚುತ್ತಲೇ ಬಂದಿತು. ಈ ದುಃಸ್ಥಿತಿಯ ಫಲವಾಗಿಯೊ ಎನ್ನುವಂತೆ ಅವನಿಗೆ ಜೂಜು, ಕುಡಿತ, ಮತ್ತು ಸೇದುವ ಚಟಗಳೂ ಹತ್ತಿದವು. ಅವುಗಳಿಂದಾಗಿ ಅವನು ಹಟದ ಮತ್ತು ಸಿಡುಕಿನ ಸ್ವಭಾವದವನಾದ. ದಿನದಿನಕ್ಕೂ ಬಡತನ ಬೆಳೆಯುತ್ತ ನಡೆಯಿತು. ಅವನಿಗೆ

---

( ಈ ಕತೆಗೆ 'Slave-Mother' ಎಂಬ ಹೆಸರಿದೆ. ಆದರ ಸರಿಯಾದ ಅನುವಾದವು ಸಾಧ್ಯವಾಗದ್ದರಿಂದ ಅದೇ ಅರ್ಥವು ಬರುವಂತೆ 'ತೊತ್ತು-ತಾಯಿ' ಎಂದೂ ಕತೆಯ ವಸ್ತುವಿಗೆ ಅರ್ಥವಾಗುವಂತೆ 'ಹೆಣ್ಣು-ಬಾಳು' ಎಂದೂ ಹೆಸರು ಕೊಡಲಾಗಿದೆ. )

ಜನರು ಅಲ್ಪಸ್ವಲ್ಪ ಕೈಗಡ ಕೊಡಲು ಕೂಡ ಹಿಂದೆಮುಂದೆ ನೋಡ ಹತ್ತಿದರು.

ಬಡತನದ ಜೊತೆಯಲ್ಲಿ ಬೇನೆಯೂ ಬೆನ್ನುಹತ್ತಿತು. ಆತನ ದೇಹ ವೆಲ್ಲ ಇಳಿದು ಹೋಗಿ ಮೈತುಂಬ ಹಳದಿಯಾಯಿತು. ಹಿತ್ತಾಳೆಯ ಡಬ್ಬಿ ಯಂತೆ ಅವನ ಮುಖ ಪೂರಾ ಹಳದಿಯಾಗಿ ಮಿಸುಗಹತ್ತಿತು. ಅವನ ಕಣ್ಣುಗಳ ಬಣ್ಣವೂ ತಿರುಗಿತು. ಅವನಿಗೆ ಕಾಮಣಿಯಾಗಿದೆಯೆಂದು ಜನರು ಮಾತಾಡಹತ್ತಿದರು. ಹುಡುಗರಂತೂ ' ಹಳದೀ ಹೊಟ್ಟೆಪ್ಪ ' ಎಂದು ಕರೆಯಹತ್ತಿದರು. ಒಂದು ದಿನ ಆತ ಹೆಂಡತಿಗೆ ಹೇಳಿದ:

" ನನಗೆ ಇನ್ನೇನೂ ಮಾಡುವದು ಶಕ್ಯವಿಲ್ಲ. ಹೀಗೆಯೆ ಸಾಗಿದರೆ ಇದ್ದುಬಿದ್ದುದನ್ನೂ ಮಾರಬೇಕಾಗುವದು. ನಿನಗೆ ಮೈ ಕೈ ಗಟ್ಟಿಮುಟ್ಟಾ ಗಿವೆ. ನಿನ್ನ ಶರೀರದಿಂದ ನಮ್ಮನ್ನು ರಕ್ಷಿಸುವದು ಈಗ ಯೋಗ್ಯವೆಂದು ತೋರುತ್ತದೆ. ಹೀಗೆ ನನ್ನ ಜೊತೆಯಲ್ಲಿದ್ದು ಉಪವಾಸವನ್ನನುಭವಿಸು ತ್ತಿದ್ದರೆ ನಾನಾದರೂ ಏನು ಮಾಡಬಲ್ಲೆ ? "

ಆಕೆ ಮಣ್ಣಿನ ಒಲೆಯ ಆಚೆಗೆ ತನ್ನ ಮೂರು ವರ್ಷದ ಮಗುವಿಗೆ ಮೊಲೆ ಕೊಡುತ್ತ ಕುಳಿತಿದ್ದಳು. ದೀನವಾದ ದನಿಯಿಂದ ತಡವರಿಸುತ್ತ ಕೇಳಿದಳು:

" ನನ್ನ ಮೈಯಿಂದಲೆ ? "

" ಹೌದು, ಅದರಿಂದಲೆ ! ನಾನು ಈಗಾಗಲೆ ನಿನ್ನನ್ನು ಒತ್ತೆ ಹಾಕಿ ದ್ದೇನೆ........" ಎಂದು ಕ್ಷೀಣಸ್ವರದಲ್ಲಿ ಆತ ನುಡಿದ.

" ಅಂದರೆ ಏನು ? " ಎಂದು ಪ್ರಜ್ಞೆ ತಪ್ಪುತ್ತಿರುವಂತ ಅವಳು ಕೇಳಿದಳು.

ಒಂದು ಕ್ಷಣ ಕೋಣೆಯಲ್ಲಿ ಮೌನ. ದೀರ್ಘವಾಗಿ ಉಸಿರು ಎಳೆಯುತ್ತ ಆತ ಹೇಳಹತ್ತಿದ:

" ತೋಳನಂತಿರುವ ಆ ವಾಂಗನು ತನ್ನ ಸಾಲ ಕೇಳಲು ಬಂದು ಹೋಗಿ ಇಂದಿಗೆ ಮೂರು ದಿನಗಳಾದವು. ಅವನನ್ನು ಹೇಗೋ ಕಳಿಸಿಕೊಟ್ಟು ನಾನೂ ಹೊರಬಿದ್ದೆ. ಒಂಬತ್ತೆಕರೆ ಕೆರೆಯ ಹತ್ತಿರಕ್ಕೆ ಹೋದಾಗ ಜೀವಕ್ಕೆ ಬೇಸರವೆನಿಸಹತ್ತಿತು. ಒಂದು ಗಿಡದ ಕೆಳಗೆ ಕುಳಿತು, ಆ ಗಿಡವೇರಿ ಕೆರೆ ಯಲ್ಲಿ ಬಿದ್ದುಬಿಡುವದಷ್ಟೆ ಉಳಿದಿತ್ತು. ಹಾಗೆ ಮಾಡುವದಕ್ಕೆ ವಿಚಾರ

ಮಾಡಿಯೆ ಮಾಡಿದೆ; ಆದರೆ ಹಾರಿಕೊಳ್ಳುವ ಧೈರ್ಯವಾಗಲಿಲ್ಲ. ಗೂಗೆಯೊಂದು ಕಿರುಚುತ್ತಲೇ ಇತ್ತು. ಅದರಿಂದ ನನ್ನ ಎದೆ ತಣ್ಣಗಾದಂತೆನಿಸಿತು. ಹಾಗೆಯೆ ಅಲ್ಲಿಂದ ತಿರುಗಿದೆ. ದಾರಿಯಲ್ಲಿ ಒಬ್ಬ ಕುಂಟಲಗಿತ್ತಿ ಕೂಡಿದಳು. "ಇಷ್ಟು ಹೊತ್ತಿನಲ್ಲಿ ಇಲ್ಲಿ ಏನು ಮಾಡುತ್ತಿದ್ದೆ?" ಎಂದು ಕೇಳಿದಳು. ಅವಳಿಗೆ ನನ್ನ ಸ್ಥಿತಿಯನ್ನೂ ಕೆರೆಯಲ್ಲಿ ಹಾರಿಕೊಳ್ಳಬೇಕೆಂದಿದ್ದ ವಿಚಾರವನ್ನೂ ಹೇಳಿದೆ. ಮತ್ತು ನನಗೆ ಎಲ್ಲಿಯಾದರೂ ಸಾಲ ಕೊಡಿಸುವ ಎತ್ತುಗಡೆ ಮಾಡಬೇಕೆಂದೂ ಇಲ್ಲವಾದರೆ ಯಾವದಾದರೂ ಹುಡುಗೆಯ ಬಟ್ಟೆ ಅಥವಾ ಮಣಿಗಳನ್ನೂ ಕಡವಾಗಿ ಕೊಡಿಸಿದರೆ ಅವನ್ನು ಒತ್ತೆಯಿಡಬಹುದೆಂದೂ ಅದರಿಂದ ವಾಂಗನ ತೋಳದಂತಹ ಕ್ರೂರದೃಷ್ಟಿಯಿಂದ ತಪ್ಪಿಸಿಕೊಳ್ಳಬಹುದೆಂದೂ ಹೇಳಿದೆ. ಆದರೆ ಆ ಹೆಂಗಸು ವಿಕಟವಾಗಿ ನಕ್ಕು ಹೇಳಿದಳು :

"ನೀನು ಇಷ್ಟು ಅಶಕ್ತನಾಗಿದ್ದರೂ ಇನ್ನೂ ಏಕೆ ನಿನ್ನ ಹೆಂಡತಿಯನ್ನು ಮನೆಯಲ್ಲಿಟ್ಟುಕೊಂಡು ಹೊಟ್ಟೆಗೆ ಹಾಕಲು ಕಷ್ಟಬಡುತ್ತಿದ್ದೀಯೆ ?"

'ನಾನು ತಲೆ ತಗ್ಗಿಸಿ ಸುಮ್ಮನಿದ್ದೆ.'

"ನಿನಗೂ ಒಬ್ಬನೆ ಮಗ. ಅವನನ್ನು ಬಿಡಲಾರೆ. ಆದರೆ ಹೆಂಡತಿಯನ್ನು........"

'ಇವಳು ಹೆಂಡತಿಯನ್ನು ಮಾರು ಎಂದು ಹೇಳುತ್ತಿರಲಿಕ್ಕಿಲ್ಲವಷ್ಟೆ?' ಎಂದು ನಾನು ಅಂದುಕೊಂಡೆ.

ಆದರೆ ಆಕೆ ಹಾಗೆಯೆ ಮುಂದುವರಿಸಿದಳು: "ಆದರೆ ಹೆಂಡತಿಯನ್ನು —ಹೆಂಡತಿಯಾದರೇನಾಯಿತು?—ನಿನಗೆ ಬಡತನ....ಅದಕ್ಕೆ ಬೇರೆ ಉಪಾಯವಿಲ್ಲ. ಅವಳನ್ನು ಮನೆಯಲ್ಲಿಟ್ಟುಕೊಂಡು ಮಾಡುವದಾದರೂ ಏನು ?" ಎಂದು ಅವಳು ನೇರವಾಗಿ ವಿಷಯವನ್ನು ಎತ್ತಿದಳು; ಮತ್ತು ಹೇಳಿದಳು:

"ನೆರೆಯ ಹಳ್ಳಿಯಲ್ಲಿಯೆ ಒಬ್ಬ '*ಶಿ-ಯು-ತ್ಸಾಯಿ' ಇದ್ದಾನೆ. ಐವತ್ತು ವಯಸ್ಸಾದರೂ ಮಕ್ಕಳಿಲ್ಲ. ಅವನಿಗೆ ಇನ್ನೊಂದು ಮದುವೆ ಮಾಡಿ

---

*'ಶಿ-ಯು-ತ್ಸಾಯಿ' ಎಂಬುದು ಚೀನದಲ್ಲಿ ಪಾಂಡಿತ್ಯದ್ಯೋತಕ ಪದವಿ. ಸುಮಾರಾಗಿ ಬಿ.ಎ ಕ್ಕೆ ಸರಿಯೆನ್ನಬಹುದು.

ಕೊಳ್ಳಬೇಕೆಂದು ಮನಸ್ಸಿದೆ. ಆದರೆ ಅವನ ಹೆಂಡತಿ ಒಪ್ಪುವದಿಲ್ಲ. ಮೂರು ಅಥವಾ ಐದು ವರ್ಷ ಒಬ್ಬಳನ್ನು ಒತ್ತೆಯಾಗಿ ತಂದಿಟ್ಟುಕೊಳ್ಳಲು ಅವಳು ಸಮ್ಮತಿಸಿದ್ದಾಳೆ. ಅದರಿಂದ ಆತ ಯೋಗ್ಯ ಹೆಣ್ಣೊಂದನ್ನು ನೋಡಲು ನನಗೆ ಹೇಳಿದ್ದಾನೆ. ಸುಮಾರು ಮೂವತ್ತು ವರುಷದವಳಿರಬೇಕು; ಎರಡು ಮೂರು ಹಡೆದಿರಬೇಕು; ಮತ್ತು ಸೌಮ್ಯಸ್ವಭಾವದವಳೂ ನೆಚ್ಚಿಗೆಯವಳೂ ಇದ್ದು ತನ್ನ ಹೆಂಡತಿಗೆ ಅನುಕೂಲಳಾಗಿರಬೇಕು, ಎಂದಿದ್ದಾನೆ. ಮೊನ್ನೆ ತಾನೆ 'ಶಿ-ಯು-ತ್ಸಾಯಿ'ಯ ಹೆಂಡತಿಯೂ ನನಗೆ ಈ ವಿಷಯವನ್ನು ಹೇಳಿದಳು. ಮತ್ತು ಯೋಗ್ಯ ಕಂಡರೆ ಎಂಬತ್ತರಿಂದ ನೂರು ಡಾಲರುಗಳ ವರೆಗೂ ಬೆಲೆ ಕೊಡಬಹುದೆಂದಳು. ಅಂತಹ ಹೆಣ್ಣನ್ನು ಹುಡುಕಹತ್ತಿ ಎಷ್ಟೊ ದಿನಗಳಾದವು. ಇನ್ನೂ ಯೋಗ್ಯ ಸ್ಥಳ ಸಿಕ್ಕಿಲ್ಲ."

'ಆಮೇಲೆ, ಅವಳು ನನ್ನನ್ನು ಕಂಡೊಡನೆ ನಿನ್ನ ವಿಚಾರ ಬಂದಿತೆಂದೂ ನೀನು ಎಲ್ಲ ರೀತಿಯಿಂದಲೂ ಯೋಗ್ಯಳಾದವಳೆಂದೂ ಅಂದಳು. ಮತ್ತು ನನ್ನ ಅಭಿಪ್ರಾಯವೇನು ಎಂದು ಸ್ಪಷ್ಟವಾಗಿ ಕೇಳಿದಳು. ನಾನು ಸ್ವಲ್ಪ ಅತ್ತು-ಕರೆದು ಕೊನೆಗೆ ಅವಳ ಮಾತಿಗೆ ಸೋತೆ.'

ಇಷ್ಟು ಹೇಳಿ ಅವನು ಸುಮ್ಮನಾದ. ದನಿ ಮಂದವಾದರೂ ಏನೊ ಗೊಣಗುತ್ತಿರುವಂತೆ ತೋರುತ್ತಿತ್ತು. ಅವನ ಹೆಂಡತಿ ಏನೂ ಹೇಳಲೇ ಇಲ್ಲ. ಅವಳು ದಂಗುಬಡೆದವಳಂತಾಗಿದ್ದಳು. ಮತ್ತೆ ಒಂದು ಕ್ಷಣ ಬಿಟ್ಟು ಅವನು ಹೇಳಿದ:

'ನಿನ್ನೆ ಆ ಕುಂಟಲಗಿತ್ತಿ 'ಶಿ-ಯು-ತ್ಸಾಯಿ'ಯ ಮನೆಗೆ ಹೋಗಿದ್ದಳಂತೆ. ಆತನು ಈ ವಿಷಯವಾಗಿ ಬಹಳ ಆತುರವಿದ್ದನಂತೆ. ಅವನ ಹೆಂಡತಿಗೂ ಸಂತೋಷವಂತೆ. ಬೆಲೆ ನೂರು ಡಾಲರು ಕೊಡುವರು ಮತ್ತು ಒತ್ತೆಯ ಅವಧಿ ಮೂರು ವರ್ಷ. ಅಷ್ಟರಲ್ಲಿ ಮಗುವಾಗದಿದ್ದರೆ ಮತ್ತೆ ಎರಡು ವರುಷ. ಆ ಹೆಣ್ಣುಮಗಳು ದಿನವನ್ನೂ ಗೊತ್ತು ಮಾಡಿಕೊಂಡು ಬಂದಿದ್ದಾಳೆ. ಇಂದಿಗೆ ಐದು ದಿನದ ಮೇಲೆ. ಇಂದೇ ಅವಳು ಒತ್ತೆಯ ಕಾಗದವನ್ನು ಕಳಿಸುವಳು.'

ಆಕೆಗೆ ಮೈಯಲ್ಲಾ ನಡುಗು. ಮಾತೇ ಬರದು. ಆದರೂ ತಡವರಿಸುತ್ತ "ಮೊದಲೇ ಏಕೆ.... ಈ ವಿಷಯ ಹೇಳಲಿಲ್ಲ?" ಎಂದಳು.

‘ ನಿನ್ನೆ ನಿನ್ನ ಮುಂದೆ ಮೂರು ಸಲ ಸುತ್ತಾಡಿದೆ. ಆದರೆ ಹೇಳಲು ಧೈರ್ಯವಾಗಲಿಲ್ಲ. ನಿಜವಾಗಿ, ಸತ್ಯವಾಗಿ ಹೇಳುವೆ. ನಿನ್ನನ್ನು ಅನಿವಾರ್ಯವಾಗಿ ಕೊನೆಯ ಉಪಾಯವೆಂದು ಉಪಯೋಗಿಸುತ್ತಿದ್ದೇನಲ್ಲದೆ ಬೇರೆ ವಿಚಾರವಿಲ್ಲ. ಮತ್ತು ಉಳಿದದ್ದೇನೂ ನಡೆಯುವಂತಿಲ್ಲ. ’’

‘ ಅಂತೂ ಮುಗಿಸಿಯೆಬಿಟ್ಟಿದ್ದೀರಾ ? ’ ಎಂದು ಆಕೆ ಕೇಳಿದಳು. ಅವಳ ತುಟಿ ನಡುಗುತ್ತಿದ್ದವು.

‘ ಕರಾರು-ಪತ್ರ ಬರೆಸುವದೊಂದೇ ಉಳಿದಿದೆ. ’

‘‘ ಅಯ್ಯೋ! ಎಂಥ ನಾಚಿಕೆಗೇಡು ! ಬೇರೆ ದಾರಿಯೆ ಇಲ್ಲವೆ ನನ್ನ ‘ ವಸಂತನಿಧಿಯ ’ ಹಡೆದಾತ ? ” ಎಂದಳಾಕೆ. ವಸಂತನಿಧಿಯೆಂಬುದು ಅವಳ ಬಗಲಲ್ಲಿಯ ಮಗುವಿನ ಹೆಸರು.

‘‘ ನಾಚಿಕೆಗೇಡೆ ! ಹೌದು. ಅದೆಲ್ಲ ನಾನು ವಿಚಾರಿಸಿದ್ದೇನೆ. ಆದರೇನು ? ನಾವು ಬಡವರು. ಆದರೆ ಬದುಕುವ ಆಶೆಯಿದೆ. ಮತ್ತೇನು ಮಾಡಬಲ್ಲೆವು ? ಈ ವರುಷ ಹೊಲದ ಕೆಲಸ ಮಾಡುವದೂ ನನ್ನಿಂದಾಗಲಿಕ್ಕಿಲ್ಲ. ’’

‘‘ ‘ ವಸಂತನಿಧಿ ’ಯ ವಿಚಾರವನ್ನು ಯೋಚಿಸಿದ್ದೀಯಾ ? ಅವನಿಗೆ ಇದೀಗ ಮೂರೇ ವರುಷ. ತಾಯಿಯಿಲ್ಲದೆ ಅವನೇನು ಮಾಡಬೇಕು ? ”

‘‘ ನಾನು ಆತನನ್ನು ನೋಡಿಕೊಳ್ಳುವೆ. ಹೇಗೂ ಆತನು ಮೊಲೆ ಬಿಡುವ ವಯಸ್ಸಿಗೆ ಬಂದಿದ್ದಾನೆ. ”

ಅವನಿಗೆ ಮೆಲ್ಲನೆ ಸಿಟ್ಟೊ ಬರಹತ್ತಿತು. ಬಾಗಿಲಿಂದ ಹೊರಗೆ ಹೆಜ್ಜೆ ಇಟ್ಟ. ದುಃಖ ಏರಿ ಬಂದು ಬಿಕ್ಕಿಬಿಕ್ಕಿ ಅಳಹತ್ತಿದ.

ಒಂದು ವರುಷದ ಹಿಂದೆ ನಡೆದ ದುರ್ಘಟನೆ ಅವಳ ಸ್ಮೃತಿಪಥದಲ್ಲಿ ಎದ್ದು ಬರಹತ್ತಿತು. ಅವಳು ಅದೇ ಒಂದು ಹೆಣ್ಣುಮಗುವನ್ನು ಹೆತ್ತಿದ್ದಳು. ದುರ್ಬಲಳಾಗಿ ಹಾಸಿಗೆಯ ಮೇಲೆ ಹೆಣದ ಹಾಗೆ ಬಿದ್ದಿದ್ದಳು; ಹೆಣಕ್ಕೂ ಕಡೆಯನ್ನಬೇಕು. ನೆಲದ ಮೇಲೆ ಒಣ ಹುಲ್ಲಿನ ಹಾಸಿಗೆಯ ಮೇಲೆ ಅದೇ ಹುಟ್ಟಿದ ಕೂಸು ‘‘ ಚಾ-ಚಾ ” ಎಂದು ಅಳುತ್ತಿತ್ತು. ಮತ್ತು ಕೈಕಾಲು ಬಡಿದುಕೊಳ್ಳುತ್ತಿತ್ತು. ಹುರಿ ಇನ್ನೂ ಹೊಕ್ಕಳಲ್ಲಿ ಸುತ್ತಿಕೊಂಡಿತ್ತು. ಅವಳು

ಎದ್ದು ಕೂಸನ್ನು ತೊಳೆಯಬೇಕೆಂದಳು. ಆದರೆ ತಲೆಯೆತ್ತಬೇಕಾದರೆ ಸಾಕುಬೇಕಾಯಿತು. ಮೈಯೇಳಲಿಲ್ಲ. ಅಷ್ಟು ನಿತ್ರಾಣವಾಗಿತ್ತು. ತಲೆ ಎತ್ತಿದಾಗ ತನ್ನ ಗಂಡ ಉರಿಮೋರೆಯಿಂದ ಮಗುವಿನ ಹತ್ತಿರಕ್ಕೆ ಬರುವ ದನ್ನು ಕಂಡಳು. ಅವನ ಕೈಯಲ್ಲಿ ಎಸರು-ನೀರಿನ ಒಂದು ಬಕೀಟು ಇತ್ತು. ಅವಳು " ಅಯ್ಯೋ, ತಡೆ, ತಡೆ!" ಎಂದು ಕೂಗಿದಳು. ಆದರೆ ಆ ಪಶು ಮಾತಿಗೆ ಅವಕಾಶವನ್ನು ಕೊಡಲಿಲ್ಲ. ಚಟುಕ ಕುರಿಯನ್ನು ಹಿಡಿಯುವಂತೆ ಆ ಕೂಸನ್ನು ಆತ ಕೈಯಲ್ಲಿ ಎತ್ತಿಹಿಡಿದು ಪಳಕ್ಕನೆ ಉಗಿ ಹಾಯುತ್ತಿರುವ ನೀರಿನಲ್ಲಿ ಎದ್ದಿಬಿಟ್ಟ. ಅವಳಿಗೆ ನೀರಿನ ಉಗಿಯೊಡನೆ ' ಹಿಸ್ ' ಎಂಬ ಸಪ್ಪಳ ಮಾತ್ರ ಕೇಳಿಸಿತು. ಕೂಸು ಅಳಲಿಲ್ಲ ಕೂಡ. ಅದೇಕೆ ಚೀರ ಲಿಲ್ಲವೊ ಎಂದು ಅವಳಿಗೆ ಆಶ್ಚರ್ಯವಾಯಿತು. ಅದೂ ಕೂಡ ಈ ದುರ್ಮರ ಣಕ್ಕೆ ತಾನಾಗಿ ಸಮ್ಮತಿಸಿತೊ ಎನ್ನುವಂತೆ ತೋರಿತು. ಆದರೆ ಪಾಪ! ತನ್ನ ಎದೆಯನ್ನೆ ಕೊಯ್ಯುತಿರುವ ಆ ಕ್ರೂರ ಕೆಲಸವನ್ನು ನೋಡಲಾರದೆ ತಾನು ಮೂರ್ಛೆಹೋದದ್ದು ಅವಳಿಗೆ ಆ ಮೇಲೆ ನೆನಪಾಯಿತು.

ಇದೆಲ್ಲ ನೆನಪಾಗಲು ಅವಳ ಕಣ್ಣೀರು ಅಟ್ಟಿಸಿಹೋದವು. " ಅಯ್ಯೋ ದುರ್ದೈವವೆ ! " ಎಂದು ಮೆಲ್ಲನೆ ಉಸುರಿದಳು.

'ವಸಂತನಿಧಿ' ಮೊಲೆ ಬಿಟ್ಟು ಮುಖವೆತ್ತಿ " ಮಾ, ಮಾ," ಎಂದ.

* * * *

ಹೊರಡುವ ಮುನ್ನಾದಿನದ ಸಂಜೆಗೆ ಅವಳು ಒಂದು ಮೂಲೆ ಹಿಡಿದು ಕತ್ತಲಲ್ಲಿ ಕುಳಿತಿದ್ದಳು. ಒಲೆಯ ಮುಂದೆ ಎಣ್ಣೆಯ ದೀಪ ಹೊನ್ನೆಹುಳದಷ್ಟು ಪ್ರಕಾಶದಿಂದ ಉರಿಯುತ್ತಿತ್ತು. ಅವಳು ' ವಸಂತನಿಧಿಯ 'ನ್ನು ಬಗಲಲ್ಲಿ ಎತ್ತಿಕೊಂಡಿದ್ದಳು. ಅವನ ತಲೆಯ ಮೇಲೆ ತಲೆ ಇಟ್ಟು ಏನೊ ಧೇನಿಸು ತ್ತಿದ್ದಳು. ಅವಳ ವಿಚಾರಲಹರಿ ದೂರ-ದೂರ ಹೋಗಿಬರುತ್ತಿತ್ತು. ಮಗು ವನ್ನು ಮೈದಡವಿ ನುಡಿದಳು:

" ವಸಂತ-ನಿಧಿ, ನನ್ನ ಚಿನ್ನಾ ! "

ಅವಳ ಎದೆಯ ಮೇಲೆ ಕೈಯಾಡಿಸುತ್ತ " ಮಾ " ಎಂದಿತು ಕೂಸು.

" ಮಾ, ನಿನ್ನನ್ನು ಬಿಟ್ಟು ನಾಳೆ ದೂರ ಹೋಗುವಳು.... ಆಂ..... ...."

" ಊಹೂಂ," ಎಂದು ತಿಳಿದಂತೆಯೊ ತಿಳಿಯದಂತೆಯೊ ಮಗು ಅವಳ ತಲೆಗೆ ತಲೆ ತಿಕ್ಕುತ್ತ ಹೇಳಿತು.

" ಮಾ ತಿರುಗಿ ಬರುವದಿಲ್ಲ ! ಮೂರು ವರ್ಷ ಮಾ ತಿರುಗಿ ಬರಲಾರಳು ! "

ಅವಳು ಕಣ್ಣೊರಸಿಕೊಂಡಳು.

ಮಗು ಮೊಲೆ ಬಿಟ್ಟು " ಮಾ ಎಲ್ಲಿ ಹೋಗುತ್ತಾಳೆ....ಗುಡಿಗೆ ? " ಎಂದು ಕೇಳಿತು.

" ಅಲ್ಲ, ಅವಳು ಹತ್ತು ಮೈಲು ಆಚೆಗೆ ' ಲೀ ' ಮನೆಗೆ ಹೋಗುವಳು. "

" ನಾನೂ ಹೋಗುವೆ. "

" ನನ್ನ ಚಿನ್ನಾ, ಅಲ್ಲಿ ನೀ ಬರಬಾರದು."

"ಉಹುಂ" ಎಂದು ಮಗು ಅಸಮ್ಮತಿಯಿಂದ ಮತ್ತೆ ಹನಿಗೂಡಿದ್ದ ಮೊಲೆಗೆ ಬಾಯಿ ಹಾಕಿತು.

" ನನ್ನ ಚಿನ್ನಾ, ನೀ ಇಲ್ಲಿಯೆ ಇರಬೇಕು. ಅವರು ನಿನ್ನನ್ನು ನೋಡಿಕೊಳ್ಳುವರು. ಉಣಿಸುವರು. ಆಡಿಸುವರು. ನೀನು ಅವರೊಡನೆಯೆ ಮಲಗಬೇಕು. ಅವರು ಹೇಳಿದಂತೆ ಕೇಳಬೇಕು. ಮೂರು ವರ್ಷದ ಮೇಲೆ...."

" ಅಪ್ಪ ಬಡಿತಾರೆ ! " ಎಂದು ಅಳು-ದನಿಯಲ್ಲಿ ಮಗು ಹೇಳಿತು.

" ಇನ್ನುಮುಂದೆ ಬಡಿಯುವದಿಲ್ಲ. " ಎಂದು ಮಗುವಿನ ಬಲ ಕೆನ್ನೆಯ ಮೇಲೆ ಇದ್ದ ಕಲೆಯನ್ನು ತಟ್ಟುತ್ತ ಆಕೆ ಹೇಳಿದಳು. ಹೆಣ್ಣು-ಕೂಸನ್ನು ಕೊಂದ ಮೂರನೆಯ ದಿನ ಕುರಪಿಯ ಹಿಡಿಕೆಯಿಂದ ಆತ ಮಗುವಿನ ಕೆನ್ನೆಗೆ ಹೊಡೆದಿದ್ದ. ಅದರ ಕಲೆಯಿನ್ನೂ ಕಪಾಳದ ಮೇಲೆ ಎದ್ದು ಕಾಣುತ್ತಿತ್ತು.

ಅವಳು ಮಗುವಿನೊಡನೆ ಇನ್ನೂ ಏನೇನೊ ಹೇಳಬೇಕೆಂದಿದ್ದಳು. ಅಷ್ಟರಲ್ಲಿ ಆತ ಎಡವುತ್ತ ಬಾಗಿಲಲ್ಲಿ ಕಾಲಿಟ್ಟ. ಅವಳ ಹತ್ತಿರಕ್ಕೆ ಬಂದು ಕಿಸೆಯಲ್ಲಿ ಕೈಹಾಕಿಕೊಂಡು ಹೇಳಿದ:

" ಈಗಲೇ ಎಪ್ಪತ್ತು ಡಾಲರು ಕೊಟ್ಟುಬಿಟ್ಟಿದ್ದಾರೆ. ಉಳಿದ ಮೂವತ್ತು ನೀನು ಅಲ್ಲಿ ಮುಟ್ಟಿದ ಹತ್ತು ದಿನಕ್ಕೆ ಕೊಡುವರು. "

ಒಂದು ಕ್ಷಣ ಮೌನ.

" ಮತ್ತೆ ನಿನಗಾಗಿ ಒಂದು ಮೇಣೆಯನ್ನು ಕಳಿಸುವದಾಗಿಯೂ ಹೇಳಿದ್ದಾರೆ. "

ಮತ್ತೂ ಮೌನ.

"ಮತ್ತು ಭೋಯಿಗಳು ನ್ಯಾರಿ ಮಾಡಿದ ಕೂಡಲೆ ಇಲ್ಲಿಗೆ ಬರುವರು"

ಇಷ್ಟು ಹೇಳಿ ಆತ ಅವಳನ್ನು ಅಲ್ಲಿಯೆ ಬಿಟ್ಟು ಮತ್ತೆ ಹೊರಗೆ ಹೋದ. ಅಂದು ರಾತ್ರಿ ಗಂಡ-ಹೆಂಡರಿಬ್ಬರೂ ಬಾಯಿ ಮುಸುರೆ ಮಾಡಲಿಲ್ಲ.

* * * *

ಮರುದಿನ ಮಳೆ ಜಿಟಿಜಿಟಿಯಾಗಿತ್ತು.

ಮೇಣೆ ಹೊತ್ತಿಗಿಂತ ಮುಂಚೆಯೆ ಬಂದಿತು. ಅವಳಿಗೆ ಇಡಿ ರಾತ್ರಿ ನಿದ್ದೆಯಿರಲಿಲ್ಲ. ವಸಂತ-ನಿಧಿಯ ಹರಕು ಬಟ್ಟೆಯನ್ನೆಲ್ಲ ಹೊಲಿದಿಟ್ಟಳು. ವಸಂತಋತು ಕಳೆಯುತ್ತ ಬೇಸಿಗೆ ಹಣಿಕಿ ಹಾಕುತ್ತಿತ್ತು. ಆದರೂ ಅವನ ಚಳಿಗಾಲದ ಹರಿದ ದಪ್ಪ ಕೋಟನ್ನು ಹೊರಗೆ ತೆಗೆದಳು. ಮತ್ತು ಅವನ ಎಲ್ಲ ಸಾಮಾನುಗಳನ್ನೂ ಪತಿಯ ಹತ್ತಿರದಲ್ಲಿಟ್ಟಳು. ಆತನಾಗಲೇ ನಿದ್ದೆ ಹೋಗಿದ್ದ. ಹತ್ತಿರ ಕುಳಿತು ಮಾತು-ಕತೆಯಾಡಲು ಯತ್ನಿಸಿದಳು. ಆದರೆ ಒಂದು ಮಾತನ್ನೂ ಹೇಳುವದಾಗಲಿಲ್ಲ. ಒಂದೆರಡು ಸಲ ಅವನನ್ನು ಎಬ್ಬಿಸಬೇಕೆಂದು ಅಸ್ಪಷ್ಟವಾಗಿ ಕರೆದಳು. ಅವನಿಗೆ ಎಚ್ಚರಾಗಲಿಲ್ಲ. ಕೊನೆಗೆ ಮೌನದಿಂದ ಅಲ್ಲಿಯೆ ಒರಗಿದಳು. ರಾತ್ರಿ ಚಳಿಯನ್ನು ಹೊತ್ತುಕೊಂಡು ಸರಿಯುತ್ತಿತ್ತು.

ಅವಳಿಗೆ ಅದೇ ಜಂಪು ಹತ್ತಿತ್ತು. ಮನಸ್ಸು ಏನೇನೋ ಕನಸಿನಲ್ಲಿ ತೇಲುತ್ತಿತ್ತು. ಅಷ್ಟರಲ್ಲಿ ವಸಂತ-ನಿಧಿ ಎದ್ದ. ತಾಯಿಯನ್ನು ಕೈಯಿಂದ ತಡವರಿಸುತ್ತ ಎಬ್ಬಿಸಿಬಿಟ್ಟ. ಅವಳೂ ಎದ್ದು ಅವನಿಗೆ ಬಟ್ಟೆ ತೊಡಿಸಿದಳು. ಮತ್ತು " ನನ್ನ ಚಿನ್ನಾ, ಇನ್ನು ಮುಂದೆ ಒಳ್ಳೆಯ ಹುಡುಗನಾಗಬೇಕು. ಅಳಬಾರದು. ಅವರಿಂದ ಬಡಿಸಿಕೊಳ್ಳಬಾರದು. ನಾನು ನಿನಗೆ ಕಲ್ಲುಸಕ್ಕರೆ ತಂದು ಕೊಡುವೆ. ನನ್ನ ಮುತ್ತೂ, ಅಳಬಾರದು ಆಂ....” ಎಂದು ಮಗುವಿಗೆ ಹೇಳಿದಳು.

ಮಗುವು ಉತ್ಸಾಹದ ಭರದಿಂದ ‘ ಆಽ ’ ಎಂದು ಹಾಡಹತ್ತಿತು.

“ ಹಾಡಬೇಡಾ, ಅವರು ಎದ್ದಾರು ! ” ಎಂದು ಮಗುವಿಗೆ ಮುದ್ದಿಡುತ್ತ ಆಕೆ ಅಂದಳು.

ಬಾಗಿಲ ಹತ್ತಿರ ಒಂದು ಬಾಕಿನ ಮೇಲೆ ಭೋಯಿಗಳು ( ಮೇಣೆ ಹೊರುವವರು ) ಉದ್ದುದ್ದಾದ ಚಿಲಿಮೆ ಸೇದುತ್ತ, ಕತೆ ಹೇಳುತ್ತ ಕುಳಿತಿದ್ದರು. ಸ್ವಲ್ಪ ಹೊತ್ತಿನಲ್ಲಿ ಆ ಹೆಣ್ಣುಮಗಳು ನೆರೆಯೂರಿಂದ ಬಂದಳು. ಅವಳು ಮದುವೆಯಾಗಿದ್ದು, ಸಂಸಾರದ ಅನುಭವವನ್ನು ವಿಶೇಷ ಹೊಂದಿದ್ದು ಮದುವೆ ಕೂಡಿಸುವ ಕೆಲಸವನ್ನು ಮಾಡುತ್ತಿದ್ದಳು. ನಿಲುವಂಗಿಯ ಮೇಲಿನ ಮಳೆ-ಹನಿಗಳನ್ನು ಒಂಡುತ್ತ ಅವಳು ಒಳಗೆ ಬಂದು ನುಡಿದಳು:

“ ಮಳೆ ಸುರಿಯುತ್ತಿದೆ. ಮಳೆ ಒಳ್ಳೆ ಲಕ್ಷಣ; ಇನ್ನು ಮುಂದೆ ನಿನ್ನ ಮನೆ ಏರುಪದರಲ್ಲಿ ಸಂಶಯವಿಲ್ಲ. ”

ಅವಳು ಮನೆಯಲ್ಲಿ ಇತ್ತಿಂದತ್ತ ಎಡೆಯಾಡಿದಳು. ಆತನೊಡನೆ ಒಂದೆರಡು ಮಾತು ಹೇಳಿದಳು. ತನಗೆ ಈ ವ್ಯವಹಾರದಲ್ಲಿ ಏನಾದರೂ ಮುಂಗಾಣಿಕೆ ಸಿಕ್ಕಬೇಕೆಂಬುದೇ ಅದರ ಆಶಯವಾಗಿತ್ತು. ಅವಳ ಪ್ರಯತ್ನವಿಲ್ಲದೆ ಇಷ್ಟು ಸುಲಭವಾಗಿ, ಲಾಭದಾಯಕವಾಗಿ ಈ ಒತ್ತೆಯ ವ್ಯವಹಾರ ಆಗುತ್ತಿರಲಿಲ್ಲ.

“ ನಿಜವಾಗಿ ಹೇಳಬೇಕಾದರೆ ಇನ್ನೊಂದು ಐವತ್ತು ಡಾಲರು ಕೊಟ್ಟಿದ್ದರೆ ಆ ಮುದುಕ ಒಬ್ಬ ವೇಶ್ಯೆಯನ್ನು ಕೊಂಡುಕೊಳ್ಳಬಹುದಾಗಿತ್ತು. ” ಎಂದಳಾಕೆ.

ಮತ್ತೆ ಆಕೆಗೆ ಹೊರಡಲು ಅವಸರಮಾಡುತ್ತ ಮುದುಕಿ ಅಲ್ಲಿಯೆ ಕುಳಿತೇಬಿಟ್ಟಳು. ಆದರೆ ಆಕೆ ವಸಂತ-ನಿಧಿಯನ್ನು ಬಿಟ್ಟು ಕದಲಲೇ ಇಲ್ಲ. ಆಗ ಮುದುಕಿ ಚೀರಿಕೊಂಡಳು:

“ ಮೇಣೆಯ ಆಳುಗಳು ಊಟಕ್ಕೆ ತಮ್ಮ ಊರಿಗೆ ತಿರುಗಿ ಬರಬೇಕು. ಆದ್ದರಿಂದ ಬೇಗ ಹೊರಡುವದು ಲೇಸು. ”

“ ನನಗೆಲ್ಲಿ ಹೋಗುವದು ಬೇಕಾಗಿದೆ. ಇಲ್ಲಿಯೆ ಉಪವಾಸ ಸತ್ತರೂ ಚಿಂತೆಯಿಲ್ಲ ” ಎನ್ನುವಂತೆ ಆಕೆ ತಿರಸ್ಕಾರದಿಂದ ನಕ್ಕಳು ಮಾತ್ರ.

ಮುದುಕಿಗೆ ಇದು ತಿಳಿಯದಿರಲಿಲ್ಲ. ಆಕೆ ಅವಳನ್ನು ರಮಿಸುವಂತೆ ಅವಳ ಹತ್ತಿರಕ್ಕೆ ಹೋಗಿ "ನೀನು ಏನೂ ತಿಳಿಯದ ಹುಚ್ಚಿ. ಈ ರೋಗಿಷ್ಠ ನಿನಗೇನು ಕೊಡಬಲ್ಲ? ಅಲ್ಲಿಯಾದರೂ ತಿಂದುಂಡು ಇರಲಿಕ್ಕೆ ಬೇಕಾದಷ್ಟಿದೆ. ಎರಡು ನೂರು ಎಕರೆ ಜಮೀನು, ಸ್ವಂತ ಮನೆ, ಆಳು-ಹೋಳು, ದನ-ಕರು, ಕೈತುಂಬ ಹಣ, ಎಲ್ಲ ಇದೆ. ಇದಲ್ಲದೆ ಮನೆಯ ಯಜಮಾನಿ ಬಹು ಒಳ್ಳೆ ಯವಳು, ಎಲ್ಲರಿಗೂ ಬೇಕಾಗಿದ್ದಾಳೆ. ಯಾರು ಹೋದರೂ ಅನ್ನ ಹಾಕದೆ ಕಳಿಸುವದಿಲ್ಲ. ಇನ್ನು ಮುದುಕನ ವಿಷಯವೆ? ಅವನು ನಿಜವಾಗಿ ವಯ ಸ್ಸಾದವನಲ್ಲ. ಮುಖ ಬಿಳುಪಾಗಿದೆಯಲ್ಲದೆ ಗಡ್ಡ ಮೀಸೆ ಕೂಡ ಹುಲುಸಾಗಿ ಬಂದಿಲ್ಲ. ಓದಿ ಓದಿ ತೆಳ್ಳಗೆ ಗುಂಡಾಗಿದ್ದಾನೆ. ಇಷ್ಟೆಲ್ಲ ನಾನು ಹೇಳು ವದೂ ಬೇಡ. ಅಲ್ಲಿ ಹೋಗಿ ಮೇಣೆ ಇಳಿದೊಡನೆಯೆ ನಿನಗೇ ಎಲ್ಲ ಗೊತ್ತಾ ಗುವದು. ಮದುವೆ ಗಂಟುಹಾಕುವವರಲ್ಲಿ ನಾನೆಂದೂ ಸುಳ್ಳಾಡಿದವಳಲ್ಲ.

ಆಕೆ ಕಣ್ಣೀರು ತೊಡೆದುಹಾಕಿದಳು.

"ವಸಂತ-ನಿಧಿ, ನನ್ನ ಚಿನ್ನಾ, ಹೇಗೆ ಬಿಟ್ಟು ಹೋಗಲಿ!" ಎಂದು ನಿಟ್ಟುಸಿರಿಟ್ಟಳು.

"ಅವನ ಚಿಂತೆಯೇ ಬೇಡ," ಎಂದು ಅವಳ ಭುಜವನ್ನು ತಟ್ಟಿ ಸ್ನೇಹದಿಂದ ಮುದ್ದಿಡುತ್ತ ಮುದುಕಿ ಹೇಳಿದಳು: "ಅವನಿಗೆ ಈಗಾಗಲೆ ಮೂರು ತುಂಬುತ್ತ ಬಂದಿವೆ. ಮೂರು ಅಥವಾ ನಾಲ್ಕಕ್ಕ ಅವನು ತಾಯಿ ಯನ್ನಗಲುತ್ತಾನೆ ಎಂದು ಈ ಮೊದಲೆ ದೈವಜ್ಞರು ಹೇಳಿದ್ದಾರೆ. ನೀನು ಅಲ್ಲಿ ಹೋಗಿ ಹೇಗಾದರೂ ಒಂದೆರಡು ಹೆತ್ತರೆ ತೀರಿತು; ಎಲ್ಲ ಸರಿ ಹೋಗುವದು."

ಹೊರಗೆ ಮೇಣೆಯ ಆಳುಗಳು ಹೊರಡಲು ಅವಸರ ಮಾಡುತ್ತಿದ್ದರು.

"ಇಷ್ಟು ಅತ್ತು-ಕರೆ ಮಾಡಲಿಕ್ಕೆ ಅವಳೇನು ಮೊದಲಗಿತ್ತಿಯೆ?" ಎಂದು ಅವರು ಗುಣಗುಡುತ್ತಿದ್ದರು.

ಮುದುಕಿ ವಸಂತ-ನಿಧಿಯನ್ನು ಅವಳಿಂದ ಕಿತ್ತಿಕೊಂಡಳು.

"ಅವನನ್ನು ನನ್ನ ಜೊತೆಗೆ ಕರೆದೊಯ್ಯುವೆನು." ಎಂದಳಾಕೆ.

ಆದರೆ ಮುದುಕಿ ಅವನನ್ನು ಬದಿಯ ಬಾಗಿಲಿನಿಂದ ಹೊರಗೆ ಒಯ್ದು

ಬಿಟ್ಟಳು. ಕೂಸು ಚಡಪಡಿಸಿತು; ಚೀರಿತು.

ಮೇಣೆಯನ್ನೇರುತ್ತ ಅವಳು ಕೂಗಿದಳು: "ಒಳಕ್ಕೆ ತನ್ನಿ, ಹೊರಗೆ ಮಳೆಯಾಗುತ್ತಿದೆ. ಥಂಡಿಯಾದೀತು."

ಆತ ಅಂಗೈಯಲ್ಲಿ ತಲೆಯಿಟ್ಟುಕೊಂಡು ಕುಳಿತಿದ್ದ. ಕದಲಲಿಲ್ಲ ಮತ್ತು ಪಿಟ್ಟೆನ್ನಲಿಲ್ಲ.

*  *  *  *

ಅಲ್ಲಿಂದ ಹತ್ತು ಮೈಲು ಆ ಹಳ್ಳಿಗೆ. ಆದರೆ ಆಳುಗಳು ಎರಡನೆಯ ಸಲ ಮೇಣೆ ಇಳಿಸುವ ಹೊತ್ತಿಗೆ ಅಲ್ಲಿಗೆ ಮುಟ್ಟಿಬಿಟ್ಟರು. ವಸಂತದ ಜಿಟಿ-ಮಳೆ ಮೇಣೆಯ ಪಡದೆಯನ್ನು ನೆನೆಯಿಸಿ ಒಳಗೆ ಇಳಿದು ಅವಳ ಬಟ್ಟೆಯನ್ನೂ ತೊಯ್ಸಿತ್ತು. ಸುಮಾರು ಐವತ್ತುನಾಲ್ಕು—ಐವತ್ತೈದು ವರುಷದ ತುಂಬಿದ ಮೊಗದ ತೀಕ್ಷ್ಣ ಕಂಗಳ ಮುದುಕಿ ಅವಳನ್ನು ಸ್ವಾಗತಿಸಿದಳು. "ಅವಳೇ ಹೆಂಡತಿಯಿರಬೇಕು" ಎಂದು ಆಕೆ ಮನಸ್ಸಿನಲ್ಲಿ ಅಂದುಕೊಂಡು ಅವಳನ್ನು ಸುಮ್ಮನೆ ಆಶ್ಚರ್ಯದಿಂದ ನೋಡಿದಳು. ಅವಳು ಮುಂದಕ್ಕೆ ಬಂದು ಇವಳನ್ನು ಕೈಹಿಡಿದು ಪಾವಟಿಗೆ ಹತ್ತಿಸಿಕೊಂಡು ಹೋದಳು. ಆಗ ಗೌರವರ್ಣದ ತೆಳ್ಳನೆಯ ದೇಹದ, ದುಂಡುಮೊಗದ ಎತ್ತರವಾದ ಗೃಹಸ್ಥ ಹೊರಗೆ ಬಂದು ಬಂದಾಕೆಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ನಗುತ್ತ ನುಡಿದ:

"ಅಂತೂ ಎಷ್ಟು ಬೇಗ ಬಂದದ್ದಾಯಿತು? ಬಟ್ಟೆ ತೊಯ್ದಿವೆಯೆ?"

ಆತ ಬಂದದ್ದನ್ನೇ ಆ ಮುದುಕಿ ಲಕ್ಷಿಸಲಿಲ್ಲ.

"ಮೇಣೆಯಲ್ಲಿ ಸಾಮಾನು ಏನಾದರೂ ಅದೆಯೊ?" ಎಂದು ಕೇಳಿದಳು.

"ಇಲ್ಲ, ನಾನು ಏನೂ ತರಲಿಲ್ಲ." ಎಂದಳಾಕೆ.

ನೆರೆಹೊರೆಯ ಅದೆಷ್ಟೋ ಹೆಂಗಸರು ಬಾಗಿಲ ಹೊರಗೆ ಬಂದಿದ್ದರು. ಮನೆಯ ಒಳಕ್ಕೆ ಹಣಿಕಿಹಾಕುತ್ತಲೂ ಇದ್ದರು.

ತಾನೇಕೆ ಒಂದಿನದನ್ನು ನೆನೆಯುತ್ತ ಕೂಡಬೇಕೊ, ತನ್ನ 'ವಸಂತ ನಿಧಿ'ಯನ್ನೇಕೆ ಮರೆಯಬಾರದೊ ಅವಳಿಗೆ ತಿಳಿಯದಾಯಿತು. ನಿಜವಾಗಿ ನೋಡಿದರೆ ಅವಳು ತನ್ನ ಮುಂದಿನ ಮೂರು ವರ್ಷದ ಹೊಸ ಜೀವನಕ್ಕಾಗಿ

ಉತ್ಸಾಹಗೊಳ್ಳಲೇಬೇಕಾಗಿತ್ತು. ಈಗ ಬಂದಿರುವ ಮನೆಯೂ ಮನೆಯ ಯಜಮಾನನೂ ಮೊದಲಿನವುಗಳಿಗಿಂತ ಎಷ್ಟೋ ಪಾಲು ಒಳ್ಳೇದು ಎನ್ನ ಬಹುದು. ಶಿ-ಯು-ತ್ಸಾಯಿಯೂ ಬಹು ಒಳ್ಳೆಯ ಮನುಷ್ಯನಾಗಿದ್ದ. ಅವನ ನಡೆ-ನುಡಿ ಶಾಂತವೂ ಸ್ನೆಹಮಯವೂ ಆಗಿ ತೋರಿದವು. ಯಜಮಾನಿಯು ನಿರೀಕ್ಷಿಸಿದ್ದುದಕ್ಕಿಂತಲೂ ಒಳ್ಳೆಯವಳಾಗಿದ್ದಳು. ಅವಳ ಆದರೋಪ ಚಾರವು ನಡದೇ ಇತ್ತು. ಆದರೆ ಅವಳು ಹರಟೆಪ್ರಿಯಳು. ಒಂದು ಕ್ಷಣ ಕೂಡ ಸುಮ್ಮನಿರಳು. ಮೂವತ್ತು ವರ್ಷದ ತನ್ನ ವೈವಾಹಿಕ ಜೀವನದ ಕತೆಯು ನ್ನೆಲ್ಲ ಮದುವೆಯ ಸುಂದರ ಪ್ರಸಂಗದಿಂದ ಮೊದಲು ಮಾಡಿ ಹೇಳಿದಳು. ಹದಿನೈದು ಹದಿನಾರು ವರ್ಷಗಳ ಹಿಂದೆ ಒಂದು ಗಂಡುಮಗುವನ್ನು ಹೆತ್ತು ದಾಗಿಯೂ, ಅದು ಮುದ್ದಾಗಿದ್ದುದನ್ನೂ, ಪತ್ತು ತಿಂಗಳಾಗುವಷ್ಟರಲ್ಲಿಯೆ ಪ್ಯೆಲಿಬೇನೆಯಿಂದ ಸತ್ತುಹೋದುದನ್ನೂ ಹೇಳಿದಳು. ಅದರ ಮುಂದೆ ಮತ್ತೆ ಹಡೆಯಲೇ ಇಲ್ಲ. ಒಬ್ಬ ವೇಶ್ಯೆಯನ್ನೆ ತಂದು ಮದುವೆ ಮಾಡಿ ಕೊಳ್ಳಬೇಕೆಂದು ಅವಳು ಗಂಡನಿಗೆ ಎಂದೊ ಸೂಚಿಸಿದ್ದಳು. ಆದರೆ ತನ್ನ ಮೇಲಿನ ಪ್ರೀತಿಯೊ ಅಪ್ರೀತಿಯೊ ಅವನು ಒಪ್ಪಿದ್ದಿಲ್ಲ. ಅವಳ ಕತೆಯನ್ನು ಕೇಳುತ್ತಿದ್ದಂತೆ ಆಕೆಗೆ ಒಮ್ಮೆ ಆನಂದವೂ ಮತ್ತೊಮ್ಮೆ ವಿಷಾದವೂ ಉತ್ಸಾ ಹವೂ ನಿರುತ್ಸಾಹವೂ, ಉಂಟಾಗುತ್ತಿದ್ದವು. ಕೊನೆಗೆ ಆ ಮುದುಕಿ ತನ್ನ ಆಕಾಂಕ್ಷೆಯನ್ನೂ ಹೇಳಿದಳು. ಅದನ್ನು ಕೇಳಿ ಆಕೆ ನಸು ಲಜ್ಜೆಯಿಂದ ತಲೆಬಾಗಿದಳು. ಮುದುಕಿ ಮತ್ತೆ ಹೇಳಿದಳು:

"ಈಗಾಗಲೇ ನೀನು ಎಷ್ಟೋ ಮಕ್ಕಳನ್ನು ಹಡೆದಿರುವಿ. ಅಂತೂ ನಿನಗೆ ಅದೆಲ್ಲ ಗೊತ್ತಿದೆ. ನಾನು ಹೇಳಬೇಕಾದ್ದೇನೂ ಇಲ್ಲ." ಇಷ್ಟು ಹೇಳಿ ಜೇರೆಡೆಗೆ ನಡೆದಳು.

ಅಂದು ರಾತ್ರಿ, ಶಿ-ಯು-ತ್ಸಾಯಿ ಅವಳಿಗೆ ವಣಿತನದ ವಿಷಯವನ್ನು ವಿಸ್ತಾರವಾಗಿ ಅಭಿಮಾನವನ್ನು ತೋರುತ್ತಲೂ, ಅವಳ ಮನಸ್ಸನ್ನು ರಂಜಿಸು ತ್ತಲೂ ವಿವರಿಸಿದ. ಒಂದು ಸಣ್ಣ ಕೆಂಪು ವರ್ಣದ ಕಟ್ಟಿಗೆಯ ಪೆಟ್ಟಿಗೆಯ ನ್ನಿಟ್ಟುಕೊಂಡು ಅವಳು ಕುಳಿತಿದ್ದಳು. ಅಂತಹ ಪೆಟ್ಟಿಗೆಯನ್ನು ತನ್ನ ಮನೆ ಯಲ್ಲಿ ಅವಳು ಕಂಡಿರಲಿಲ್ಲ. ಅದನ್ನು ಕುತೂಹಲದಿಂದ ದಿಟ್ಟಿಸಿ ನೋಡು

ತ್ತಿರುವಾಗ ಆತ ಬಂದು ಎದುರಿನಲ್ಲಿ ಕುಳಿತ.

"ನಿನ್ನ ಹೆಸರು?" ಎಂದು ಕೇಳಿದ.

ಆಕೆ ಮಾತು ಆಡಲಿಲ್ಲ, ಮುಗಳ್ನಗೆಯನ್ನೂ ಬೀರಲಿಲ್ಲ. ಸುಮ್ಮನೆ ಎದ್ದು ಹಾಸಿಗೆಯ ಕಡೆಗೆ ನಡೆದಳು. ಆತ ಅವಳ ಹಿಂದೆಯೆ ನಡೆದ. ಮತ್ತೆ ನಗುತ್ತ ಕೇಳಿದ: "ನಾಚಿಕೆಯೆ? ಓಹೊ! ಪತಿಯ ನೆನಪಾಗಿರುವದೆ? ಛೀ, ಇನ್ನು ಮುಂದೆ ನಾನೇ ನಿನ್ನ ಪತಿ." ಹೀಗೆ ಹೇಳುವಾಗ ಅವನ ದನಿ ಮೃದುವಾಗಿತ್ತು. ಮೆಲ್ಲನೆ ಕೈಹಾಕಿ ಅವಳ ನಿರಿಗೆ ಜಗ್ಗಿದ. "ಸುಮ್ಮನೆ ಖಿನ್ನಳಾಗಬೇಡ. ಮಗುವನ್ನು ನೆನೆಸುತ್ತಿದ್ದೀಯಾ? ಆದರೆ...."

ಏನೊ ಅನ್ನಬೇಕೆಂದಿದ್ದ ಮಾತನ್ನು ಅಷ್ಟಕ್ಕೆ ನಿಲ್ಲಿಸಿದ. ನಗುಮೊಗದಿಂದ ತನ್ನ ಮೇಲಂಗಿಯನ್ನು ಕಳೆಯಹತ್ತಿದ.

ಹೊರಗೆ ಯಜಮಾನಿಯ ದನಿ ಜೋರಾಗಿತ್ತು. ಆರನ್ನೊ ಬಯ್ಯುವಂತಿತ್ತು. ಆದರೆ ಯಾಕೆಂಬುದು ತಿಳಿಯಲಿಲ್ಲ. ತನ್ನನ್ನೊ ಅಥವಾ ಅಡಿಗೆಯವನನ್ನೊ ಬಯ್ಯುತ್ತಿರಬೇಕೆಂದು ಬಗೆದಳು. ಮತ್ತೆ ಅದಕ್ಕೆ ತಾನೇ ಕಾರಣಳಿರಬಹುದು ಎಂದುಕೊಂಡಳು.

"ಮಲಗಬಾರದೆ?" ಎಂದು ಲಿ-ಯು-ತ್ಸಾಯಿ ಹಾಸಿಗೆಯ ಮೇಲಿಂದಲೇ ಕರೆದ. ಅವಳು ಯಾವಾಗಲೂ ಹಾಗೆಯೆ. ಕೆಲಸದ ಆಳಿನ ಮೇಲೆ ಇವಳಿಗೆ ಅದೇಕೊ ಹೆಚ್ಚು ಆದರ. ಅವನು ಅಡಿಗೆಯಾಕೆಯಾದ ವಾಂಗಳನ್ನು ಹೆಚ್ಚು ಸೇರುತ್ತಾನೆ. ಅಂತೆಯೆ ಇವಳು ಅಡಿಗೆಯಾಕೆಯ ಮೇಲೆ ಯಾವಾಗಲೂ ಅಕ್ಕಸ ಮಾಡುತ್ತಾಳೆ.

* * * *

ದಿನಗಳು ಒಂದೊಂದಾಗಿ ಕಳೆಯಹತ್ತಿದವು. ಕ್ರಮವಾಗಿ ಅವಳ ಮೊದಲ ಮನೆಯ ವಿಚಾರಗಳೂ ದೂರಾಗುತ್ತ ಹೊಸ ಪ್ರಪಂಚಕ್ಕೆ ಅವಳು ಹೊಂದಿಕೊಳ್ಳಹತ್ತಿದಳು. ಒಮ್ಮೊಮ್ಮೆ ತನ್ನ 'ವಸಂತನಿಧಿ' ಅಳುತ್ತಿರುವಂತೆ ಅವಳಿಗೆ ಭಾಸವಾಗುತ್ತಿತ್ತು. ಕನಸಿನಲ್ಲಿಯೂ ಅವನನ್ನು ಕಾಣದಿರುತ್ತಿರಲಿಲ್ಲ. ಆದರೆ ಬರಬರುತ್ತ ಹೊಸ ಸಂಸಾರದ ಕೆಲಸಗಳು ಹೆಚ್ಚಾದಂತೆ ಹಿಂದಿನ ಜೀವನದ ಕನಸುಗಳೂ ದೂರಾಗಹತ್ತಿದವು. ಮೇಲೆ ಮಾತ್ರ

ಯಜಮಾನಿಯಾದ ಮುದುಕಿ ಬಹು ಉದಾರಳಾಗಿಯೂ ಒಳ್ಳೆಯವಳಾಗಿಯೂ ತೋರುತ್ತಿದ್ದಳು. ಆದರೆ ಒಳಗೆ ಅವಳಲ್ಲಿ ಮಾತ್ಸರ್ಯದ ಕಿಡಿ ಚನ್ನಾಗಿ ಹೊತ್ತುತ್ತಿತ್ತು. ಈ ಹೊಸ ಹೆಂಗಸಿನೊಡನೆ ತನ್ನ ಗಂಡನ ವ್ಯವಹಾರವನ್ನು ಅವಳು ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದಳು. ಆ ಶಿ-ಯು-ತ್ಸಾಯಿ ಮನೆಗೆ ಬಂದೊಡನೆ ಮೊದಲು ಹೊಸ ಹೆಂಡತಿಯೊಡನೆ ಮಾತಾಡಿದರೆ ಸಾಕು, ಅವಳಿಗೇನೆ ಒಳ್ಳೆ ಕಾಣಿಕೆ ತಂದುಕೊಟ್ಟಿರಬೇಕೆಂದು ಊಹಿಸಿ, ಅವನನ್ನು ರಾತ್ರಿ ತನ್ನ ಕೋಣೆಗೆ ಜಗ್ಗಿಕೊಂಡು ಹೋಗಿ ಮಾತಿನ ಮಳೆಯನ್ನು ಸುರಿಸುತ್ತಿದ್ದಳು: " ನೀನು ಒಂದು ಹೆಣ್ಣುನಾಯಿಗೆ ಮನಸೋತೆಯಾ ? ನಿನ್ನ ಮೂಳೆ ಎಷ್ಟು ಭಾರವಾಗಿದೆ ಗೊತ್ತಿದೆಯೆ ? " ಎಂದು ಮುಂತಾಗಿ ಮೂದಲಿಸುವಳು. ಈ ಗೊಂದಲವನ್ನು ತಪ್ಪಿಸಲು ಶಿ-ಯು-ತ್ಸಾಯಿ ಬಂದಾಗ ಒಬ್ಬಳೆ ಇರುವದನ್ನು ಆಕೆ ತಪ್ಪಿಸಹತ್ತಿದಳು. ಮುದುಕಿ ಹತ್ತರವಿದ್ದರಂತೂ ಏನಾದರೂ ಕೆಲಸದ ನೆವ ತೆಗೆದು ಹೋಗಿಬಿಡುತ್ತಿದ್ದಳು. ಇಲ್ಲವಾದರೆ ಮುದುಕಿ ತನ್ನನ್ನು ದುಷ್ಟಳನ್ನಾಗಿ ಮಾಡಬೇಕೆಂದು ಹೀಗೆ ಮಾಡಿದೆಯ ಎಂದೂ ಜರೆಯುತ್ತಿದ್ದಳು. ಬರಬರುತ್ತ ಮನೆಗೆಲಸದವಳೊ ಎನ್ನುವಂತೆ ಅವಳ ಮೇಲೆ ಕೆಲಸದ ರಾಸಿಯೆ ಬಿದ್ದಿತು. ಮುದುಕಿಯ ಬಟ್ಟೆಗಳನ್ನು ಕೂಡ ಒಮ್ಮೊಮ್ಮೆ ಆಕೆ ಒಗೆಯುತ್ತಿದ್ದಳು. ಆಗ ಮುದುಕಿ 'ನನ್ನ ಬಟ್ಟೆಗಳನ್ನು ನೀನೇಕೆ ಒಗೆಯುತ್ತೀ ? ನಿನ್ನವೂ ಸಹ ವಾಂಗ್ ಆಳಿಗೆ ಕೊಡಬಾರದೇ ? ಎನ್ನುವಳು.

ಒಮ್ಮೊಮ್ಮೆ ಮುದುಕಿ " ಹಟ್ಟಿಗೆ ಹೋಗಿ ಹಂದಿಗಳನ್ನು ನೋಡಿ ಬಾ, ತಂಗೀ, ಆ ಎರಡು ಹಂದಿಗಳು ಬಹಳ ತ್ರಾಸ ಕೊಡುತ್ತವೆ. ವಾಂಗಳು ಕೂಡ ಅವುಗಳನ್ನು ನೋಡಿಕೊಳ್ಳಲು ಒಲ್ಲೆನ್ನುತ್ತಾಳೆ " ಎಂದು ಕೆಲಸ ಸಹಜವಾಗಿಯೆ ಹೇಳಿಬಿಡುವಳು.

ಹೀಗೆ ಎಂಟು ತಿಂಗಳು ಕಳೆಯುತ್ತಿರುವಲ್ಲಿ ಅವಳ ಕೆಳಹೊಟ್ಟೆ ಮಾರ್ಪಾಟವಾಗಹತ್ತಿತು. ಅನ್ನ ಕಟ್ಟಾಗಹತ್ತಿತು. ಹಸಿ ಗಜ್ಜರಿ, ಬಟಾಟೆಗಳನ್ನೆ ಅವಳು ಹೆಚ್ಚು ತಿನ್ನುತ್ತಿದ್ದಳು. ಬರಬರತ್ತ ಇವೂ ಬೇಡವಾದವು. ಅನ್ನ ಹೆಚ್ಚು ತಿಂದರೆ ದಕ್ಕುತ್ತಿರಲಿಲ್ಲ. ದ್ರಾಕ್ಷೆ ತಿನ್ನಬೇಕೆನಿಸುವದು. ಆದರೆ ಅದು ಯೋಗ್ಯ ಕಾಲವಾಗಿರಲಿಲ್ಲ. ಈ ಎಲ್ಲ ಲಕ್ಷಣಗಳ ಅರ್ಥ ' ಶಿ-ಯು-

ತ್ಸಾಯಿ 'ಗೆ ಹೊಳೆಯದಿರಲಿಲ್ಲ. ಅವನ ಉತ್ಸಾಹಕ್ಕೆ ಪಾರವೇ ಉಳಿಯಲಿಲ್ಲ. ಇಡೀ ದಿನ ನಕ್ಕು ಕೆಲೆದ. ಅವಳು ಬಯಸಿದ್ದನ್ನೆಲ್ಲ ಎಲ್ಲಿದ್ದರೂ ತರಿಸಿಕೊಟ್ಟ. ಸ್ವತಃ ಪೇಟೆಗೆ ಹೋಗಿ ಅವಳಿಗಾಗಿ ಪಕ್ವವಾದ ಕಿತ್ತಳೆಗಳನ್ನು ತಂದ. ತನ್ನಷ್ಟಕ್ಕೆ ಏನೊ ಹೇಳಿಕೊಳ್ಳುತ್ತ ಪಡಸಾಲೆಯಲ್ಲಿ ಇತ್ತಿಂದತ್ತ ತಿರುಗಾಡುತ್ತಿದ್ದ. ಒಮ್ಮೆ ಆಕೆ ಹೊಸ ವರುಷದ ಹಬ್ಬಕ್ಕಾಗಿ ಹಿಟ್ಟು ಬೀಸಲಿಕ್ಕೆ ವಾಂಗಳಿಗೆ ಹಿಡಿಯುತ್ತಿದ್ದುದನ್ನು ನೋಡಿದ. ಇನ್ನೂ ಮೂರು ಮುಕ್ಕು ಹಾಕಿರಲಿಲ್ಲ— ಅಷ್ಟರಲ್ಲಿ ಕೂಗಿದ '' ಸಾಕು, ವಿಶ್ರಾಂತಿ ತೆಗೆದುಕೊ, ಕೂಲಿಯಾಳು ಎಲ್ಲ ಮಾಡುವರು. ಹೇಗೂ ಅವರಿಗೆ ಹೋಳಿಗೆ ಹಾಕುತ್ತೇವೆ." ಎಂದ.

ಒಮ್ಮೊಮ್ಮೆ ಸಂಜೆಯ ಮುಂದೆ ಎಲ್ಲರೂ ಹರಟೆಹೊಡೆಯುತ್ತಿರುವಾಗ ' ಗೀತಗಳ ಹೊತ್ತಿಗೆ ' ಇಟ್ಟುಕೊಂಡು ಓದುತ್ತ ಕೂಡ್ರುವನು. ಆಗ ಆಳು '' ಇನ್ನೂ ಏಕೆ ಈ ಅಭ್ಯಾಸ ಮಾಡುತ್ತಿರುವಿರಿ ? ಇನ್ನೇನು ಪರೀಕ್ಷೆಗೆ ಕಟ್ಟಬೇಕಾಗಿಲ್ಲವಲ್ಲ ! '' ಎಂದು ಕೇಳುವಳು. ಆಗ ಆತ ತನ್ನ ನುಣುಪಾದ ಗಲ್ಲಗಳ ಮೇಲೆ ಕೈಯಿಳೆಯುತ್ತ ಉತ್ಸಾಹದಿಂದ ಹೇಳುವನು:

'' ಓಹೊ ! ನಿನಗೂ ಬಾಳ್ವೆಯ ಸೊಗಸು ಗೊತ್ತೇ ?

' ಮದುವೆಯ ರಾತ್ರಿಯ ದೀಪದ ಜ್ವಾಲೆ
ಪರೀಕ್ಷೆ ಇಳಿದಾ ಹೆಸರಿನ ಮಾಲೆ '

ಇವುಗಳ ಅರ್ಥವಾಯಿತೆ ? ಮನುಷ್ಯನ ಆಯುಷ್ಯದಲ್ಲಿ ಅತ್ಯಂತ ಆನಂದದ ಸಂಗತಿಗಳು ಇವೆರಡು. ಇವೆರಡನ್ನೂ ನಾನು ಪಡೆದಿದ್ದೇನೆ. ಆದರೆ ಇವುಗಳಿಗಿಂತ ಹೆಚ್ಚಿನ ಆನಂದ ಇನ್ನು ಕಾಯ್ದಿದೆ."

ಹೀಗೆ ಅವನು ಹೇಳುವಾಗ ಅವನ ಇಬ್ಬರು ಹೆಂಗಸರ ಹೊರತು ಎಲ್ಲರೂ ಬಿದ್ದುಬಿದ್ದು ನಗುವರು.

ಇವೆಲ್ಲ ಮುದುಕಿಗೆ ಬೇಸರವಾಗುತ್ತಿದ್ದವು. ' ಶಿ-ಯು-ತ್ಸಾಯಿ ' ಹೊಸ ಹೆಂಗಸಿನೊಡನೆ ವಿನೋದವಾಡಿದೊಡನೆಯಂತೂ ಅವಳಿಗೆ ಕಿಡಿಕಿಡಿಯಾಗುತ್ತಿತ್ತು. ತನ್ನ ಹೊಟ್ಟೆಗೂ ಈ ಋಣ ತೀರಿಸುವ ಭಾಗ್ಯ ಬರಲಿಲ್ಲವೆಂದು ಅವಳು ಒಳಗೊಳಗೆ ಕುದಿಯುತ್ತಿದ್ದಳು.

ಮರುವರ್ಷದ ಮೂರನೆಯ ತಿಂಗಳಲ್ಲಿ ಒಂದು ದಿನ ಹೊಸ ಹೆಂಡತಿ

ಸ್ವಲ್ಪ ದೇಹಾಲಸ್ಯದಿಂದ ಮೂರು ದಿನ ಹಾಸಿಗೆ ಹಿಡಿದಳು. ಶಿ-ಯು-ತ್ಸಾಯಿ ಅವಳಿಗೆ ವಿಶ್ರಾಂತಿ ತಗೆದುಕೊ ಎಂದು ಎಡಬಿಡದೆ ಹೇಳುತ್ತಿದ್ದ. ಮತ್ತು ಏನಾದರೂ ಬೇಕೇ,ಹೇಗೆ ಎಂದು ಮೇಲೆ ಮೇಲೆ ಕೇಳುತ್ತಿದ್ದ. ಇದು ಮುದುಕಿಗೆ ಸಹನವಾಗಲಿಲ್ಲ. ಅವಳು ಸೋಗು ಹಾಕಿದ್ದಾಳೆಂದು ವಟಗುಟ್ಟಿದಳು. ಮತ್ತು ಇಲ್ಲಿ ಬಂದ ಮೇಲೆ ಅವಳಿಗೆ ಇಲ್ಲದ ಸೊಕ್ಕು ಬಂದಿದೆಯೆಂದೂ ಸೂಳೆಯಂತ ಬೆಡಗು-ಬಿನ್ನಾಣ ಕಲಿತಿರುವಳೆಂದೂ ಅಂದಳು. ಮತ್ತು ತನ್ನ ಮನೆಯಲ್ಲಿ ಓಣಿಯಿಂದ ಓಣಿಗೆ ಮರಿಗಳನ್ನು ಹೊಟ್ಟೆಗೆ ಹಚ್ಚಿಕೊಂಡು ಅನ್ನಕ್ಕಾಗಿ ಅಲೆಯುವ ಹೆಣ್ಣುನಾಯಿಯಂತಿದ್ದವಳೀಗ ಎಷ್ಟು ಏರಿದ್ದಾಳೆ ಎಂದು ಜರಿದಳು. ಅದಕ್ಕೆಲ್ಲ ಆ ಮುದಿಹದ್ದಿನ ( ಅವಳ ಗಂಡನನ್ನು ಹೇಳುವದು ಹೀಗೆ ) ಸಲಿಗೆಯೆ ಕಾರಣ. ಅದರಿಂದಾಗಿಯೆ ಇಷ್ಟು ನಾಜೂಕು ಇಳಿಸಿದ್ದಾಳೆ ಎಂದು ಅಣಕವಾಡಿದಳು.

" ಗಂಡು-ಮಗುವೆ ?" " ನಮಗೇನು ಯಾರಿಗೂ ಮಕ್ಕಳಾಗಿಲ್ಲವೆ ? ನಾನೇ ಹತ್ತು ತಿಂಗಳು ಹೊತ್ತು ಹೆತ್ತಿದ್ದೇನೆ. ಇಷ್ಟು ನೋವು ಆಗುವದೆನ್ನುವದು ಸುಳ್ಳು. ಎಲ್ಲಾ ಸೋಗು ! ಇನ್ನೂ ಆ ಮಗು ಏನಿದೆಯೊ ಎಂತಿದೆಯೊ ಚಿತ್ರಗುಪ್ತರಿಗೆ ಗೊತ್ತು. ಅದು ಕಾಡು ಮುದ್ದಿ ಆಗುವದಿಲ್ಲವೆಂದು ಯಾರು ಬಲ್ಲರು ? ಹಡೆಯಬೇಕು, ಆಮೇಲೆ ಅದು ತಲೆಯೆತ್ತಿ ನನ್ನ ಮುಂದೆ ನಡೆದಾಡಬೇಕು. ಆಗ ನನ್ನ ಮುಂದೆ ಬಡಿವಾರ ಮಾಡಿದರೆ ನಡೆದೀತು. ಇನ್ನೂ ಮಾಂಸದ ಮುದ್ದೆಯಾಗಿರುವಾಗಲೆ ಇಷ್ಟು ಬಿಂಕ ಬಡೆದರೆ ಯಾರು ಕೇಳಬೇಕು ?" ಎಂದು ವಾಂಗಳ ಎದುರಿಗೆ ಹ[illegible] ವಳು.

ಅಂದು ರಾತ್ರಿ ಆಕೆ (ಹೊಸ ಹೆಂಡತಿ) ಊಟ ಮಾಡಿರಲಿಲ್ಲ. ಹಾಸಿಗೆಯಲ್ಲಿ ಮಲಗಿರುವಾಗಲೆ ಈ ಎಲ್ಲ ಅಪಮಾನದ ಮಾತುಗಳನ್ನು ಕೇಳುತ್ತಿದ್ದಳು. ಮತ್ತು ತನ್ನಷ್ಟಕ್ಕೆ ಕಣ್ಣೀರುಗರೆದಳು. ಹಾಸಿಗೆಯ ಮೇಲೆ ಅದೆ ಬಟ್ಟೆಯಲ್ಲಿ ಕುಳಿತ ಶಿ-ಯು-ತ್ಸಾಯಿ ಅವಳ ಕಣ್ಣೀರು ಕಂಡು ನಡುಗಿದ. ಮೈಯೆಲ್ಲಾ ಬೆವತಿತು. ಬಟ್ಟೆ ಹಾಕಿಕೊಂಡು ಎದ್ದುಹೋಗಿ ಆ ರಕ್ಕಸಿಯನ್ನು ಕೂದಲು ಹಿಡಿದೆಳೆದು ಚನ್ನಾಗಿ ಹೊಡೆಯಬೇಕೆಂದ. ಆದರೆ ಆವೇಶಕ್ಕೆ ಸರಿಯಾದ ಬಲವಿರಲಿಲ್ಲ. ಕೈಬೆರಳು ನಡುಗುತ್ತಿದ್ದವು. " ಅಯ್ಯೊ, ಅವಳಿಗೆ ನಾನು

ಎಷ್ಟು ಮಮತೆ ತೋರಿದೆ. ಮದುವೆಯಾದ ಈ ಮೂವತ್ತು ವರುಷಗಳಲ್ಲಿ ಅವಳ ಮೇಲೆ ಒಮ್ಮೆಯೂ ಕೈಮಾಡಲಿಲ್ಲ; ಬೆರಳಿನಿಂದ ಕೂಡ ಚುಚ್ಚಿಲ್ಲ. ಈಗ ಅವಳು ಶ್ರೀಮಂತ ವಿಧವೆಯಂತೆ ಸೊಕ್ಕಿ ಸಿಡುಕು ಹಾಯುತ್ತಿದ್ದಾಳೆ." ಎಂದು ನಿಟ್ಟುಸಿರಿಟ್ಟ.

ಆ ಹೊಸ ಹೆಂಗಸಿನ ಹತ್ತಿರ ಹೋಗಿ ಕಿವಿಯಲ್ಲಿ ಹೇಳಿದ:

"ಅಯ್ಯೊ, ಅಳಬೇಡ, ಅದು ಬೊಗಳಲಿ! ಅದೊಂದು ಬಂಜೆಗೋಳಿ, ಎರಡನೆಯದು ಮರಿ ಮಾಡುವದನ್ನು ಸಹನ ಮಾಡದು. ಈ ಸಲ ನೀನು ಗಂಡು ಹಡೆದೆಯಾದರೆ ನಿನಗೆ ಎರಡು ಹರಳುಂಗುರ ಕೊಡುವೆನು. ಒಂದು ಪಚ್ಚೆ ಹರಳಿನದು, ಮತ್ತೊಂದು ಬಿಳಿಯ ಹರಳಿನದು, ಹೀಗೆ ಎರಡು ಉಂಗುರಗಳಿವೆ...."

ಹೊರಗೆ ಮೊದಲ ಹೆಂಡತಿಯ ರಂಭಾಟ ನಡದೇ ಇತ್ತು. ಅದರಿಂದ ಮಾತು ಕಟ್ಟಾಗುವಂತಾಯಿತು. ಅವನು ಬಟ್ಟೆ ಕಳೆದುಹಾಕಿ ಶಾಲು ಮುಸುಕಿಟ್ಟುಕೊಂಡ. ಮತ್ತು ತನ್ನ ಮುಖ ಅವಳ ಎದೆಯ ಮೇಲಿಟ್ಟು ಮೆಲ್ಲನೆ ಹೇಳಿದ "ನನ್ನ ಹತ್ತಿರ ಬಿಳಿ ಹರಳಿನ............"

ಪ್ರಖರವಾದ ಬೇಸಿಗೆ ಕಳೆಯುತ್ತ ಬಂದಿತ್ತು. ವರುಷದ ಆರನೆಯ ತಿಂಗಳು ಕಳೆಯುತ್ತಿರುವಾಗ ಮನೆಮಂದಿಯೆಲ್ಲಾ ಮಗುವಿನ ನಿರೀಕ್ಷಣೆಯಲ್ಲಿತ್ತು. ಶರದೃತುವಿನ ಆರಂಭದಲ್ಲಿ ತಂಗಾಳಿ ಮೊದಲಿಟ್ಟಿತು. ಆಗ ಇಷ್ಟು ದಿನ ನಿರೀಕ್ಷಿಸುತ್ತಿದ್ದ ದಿನ ಬಂದಿತು. ಮನೆತುಂಬಾ ಉದ್ವೇಗ; ಆತುರ. ಶಿ-ಯು-ತ್ಸಾಯಿಯ ಉದ್ವೇಗವಂತೂ ಹೇಳತೀರದು. ಕೈಯಲ್ಲೊಂದು ಪಂಚಾಂಗ ಹಿಡಿದುಕೊಂಡು ಏನೇನೊ ಹೇಳಿಕೊಳ್ಳುತ್ತ ಅಂಗಳ ತುಂಬಾ ಅಡ್ಡಾಡುತ್ತಿದ್ದ. "ವ್ಯಾಘ್ರ (ಸಿಂಹ)ದ ವರ್ಚಸ್ಸು ಪ್ರಬಲವಾಗಿದೆ" ಎಂದು ಗುಣಗುಡುತ್ತಿದ್ದ. ಮತ್ತೊಂದು ಕ್ಷಣಕ್ಕೆ ಕಿಡಿಕೆ ಹಾಕದ ಕೋಣೆಯ ಹತ್ತಿರ ಹೋಗಿ ಒಳಗಿನ ದಾಯಿಯ ಮೆಲುಮಾತು ಕೇಳಬಯಸುವ. ಮತ್ತೆ ಮೇಲೆ ಮೋಡಗವಿದ ಸೂರ್ಯನ ಕಡೆಗೆ ನೋಡುವ.

"ಈಗ ಹೇಗಿದೆ?" ಎಂದು ಕೋಣೆಯ ಬಾಗಿಲ ಬಳಿ ನಿಂತು ವಾಂಗಳಿಗೆ ಕೇಳಿದ. ವಾಂಗಳು ಗೋಣು ಹಾಕಿ ಅದೆಷ್ಟೋ ಸಲ ಸೂಚಿಸಿದಳು. ಮತ್ತು "ಈಗ ಮುಗಿಯುವದು.... ಈಗ ಎಲ್ಲಾ ತಿಳಿಯುವದು...."

ಎಂದು ಹೇಳಿದಳು.

ಮತ್ತೆ ಪಂಚಾಂಗ ಎತ್ತಿಕೊಂಡು ಆತ ಎಡೆಯಾಡಹತ್ತಿದ.

ಮೂರುಸಂಜೆಯ ವರೆಗೆ ಹೀಗೆಯೆ ನಡೆದಿತ್ತು. ಅಲ್ಲಲ್ಲಿ ದೀಪಗಳು ವಸಂತದ ಮೊದಲ ಹೂಗಳಂತೆ ಮಿನುಗಹತ್ತಿದವು. ಆಗ ಆಕೆ ಗಂಡು ಮಗುವನ್ನು ಹೆತ್ತಳು. ಮಗುವಿನ ಅಳುವ ದನಿ ಕೋಣೆಯಿಂದ ಹೊರಬರ ಹತ್ತಿತು. ಶಿ-ಯು-ತ್ಸಾಯಿ ಒಂದೆಡೆಗೆ ಆನಂದಪರವಶನಾಗಿ ಕುಳಿತಿದ್ದ. ಊಟದ ಏರ್ಪಾಟಾಯಿತು. ಊಟ ನಡೆದಿರುವಾಗ ಯಜಮಾನಿ ಮನೆ ಯಾಳುಗಳಿಗೆ ಹೇಳಿದಳು: "ಈ ಸುದ್ದಿ ಅನಕಾ ಹರಡಬೇಡಿರಿ. ಕೂಸಿಗೆ ದುಷ್ಟ ಗಾಳಿ ಮುಂತಾದ್ದರ ಪೀಡೆಯಾದೀತು! ಯಾರಾದರೂ ಕೇಳಿದರೆ ಹೆಣ್ಣು ಹುಟ್ಟಿದೆಯೆಂದು ಹೇಳಿರಿ."

ಆಗ ಅವರೆಲ್ಲ ತಿಳಿದವರಂತೆ ನಕ್ಕು ತಲೆ ಹಾಕಿದರು.

ಒಂದು ತಿಂಗಳು ಕಳೆಯುತ್ತಲೆ ಶರದೃತುವಿನ ಎಳೆ ಬಿಸಿಲಲ್ಲಿ ಮಗು ವನ್ನು ಹೊರಗೆ ತರಲಾಯಿತು. ಅದರ ಮುಖ ಬಿಳಿಛಾಯೆಯಿಂದ ಒಪ್ಪು ತ್ತಿತ್ತು. ಆಕೆ ಮಗವಿಗೆ ಮೊಲೆಗುಡಿಸುತ್ತ ಕುಳಿತಿರುವಾಗ ನೆರೆಹೊರೆಯ ಹೆಂಗಸರು ಕುತೂಹಲದಿಂದ ಸುತ್ತಲು ನೆರೆದಿದ್ದರು. ಕೆಲವರು ಮಗುವಿನ ಮೂಗು ಚೆನ್ನಾಗಿದೆಯೆಂದರು. ಮತ್ತೆ ಕೆಲವರು ಬಾಯಿ ಮುದ್ದಾಗಿದೆ ಯೆಂದೂ ಕೆಲವರು ಕಿವಿಗಳು ಮಾಟಾಗಿವೆಯೆಂದೂ ಹೇಳಿದರು. ತಾಯಿ ಚನ್ನಾಗಿ ಮೈ ಕೈ ತುಂಬಿಕೊಂಡಿದ್ದಾಳೆಂದು ಬೇರೆ ಕೆಲವರು ನುಡಿದರು. ಇದೆಲ್ಲ ನಡೆದಾಗ ಎಲ್ಲವನ್ನೂ ಅಜ್ಜಿಯಂತೆ ಮೇಲ್ವಿಚಾರಿಸುತ್ತ ಎಡೆಯಾಡು ತ್ತಿದ್ದ ಮುದುಕಿ ಹೇಳಿದಳು:

"ಸಾಕು ಬಿಡಿರಿ! ಮಗುವನ್ನು ಅಳಿಸಬೇಡಿರಿ ಆss"

ಕೂಸಿಗೆ ಹೆಸರಿಡುವ ವಿಚಾರವಾಗಿ 'ಶಿ-ಯು-ತ್ಸಾಯಿ' ತನ್ನ ಶಾಸ್ತ್ರ ಜ್ಞಾನವನ್ನೆಲ್ಲ ತಿರುವಿ ಹಾಕಿದ. ಆದರೆ ಯೋಗ್ಯವಾದ ಹೆಸರು ಸಿಗಲಿಲ್ಲ. "ದೀರ್ಘಾಯುಷ್ಯ, ಐಶ್ವರ್ಯ ಮತ್ತು ಮರ್ಯಾದೆ — ಅಥವಾ ಸುಖ, ಏಳ್ಗೆ, ಆನಂದ ಮತ್ತು ವಾರ್ಧಕ್ಯ" ಹೀಗೆ ಎಲ್ಲ ವಿಚಾರಗಳನ್ನೊಳಗೊಂಡ ಅಕ್ಷರಮಾಲೆಯಿಂದ ಕೂಡಿದ ಹೆಸರಿರಬೇಕೆಂದು ಮುದುಕಿಯ ಅಭಿಪ್ರಾಯ ವಾಯಿತು. 'ದೀರ್ಘಾಯುಷ್ಯ ಅಥವಾ ವಾರ್ಧಕ್ಯದ ಅರ್ಥವನ್ನು ಸೂಚಿ

ಸುವಂತಹ ಹೆಸರೇ ಹೆಚ್ಚು ಯೋಗ್ಯವೆಂದು ಅವಳ ವಿಚಾರ. ಆದರೆ ಇವೆಲ್ಲ ಮತ್ತೆ ಹಳೆಮಾತುಗಳು, ನಾವೀನ್ಯವೇನೂ ಇಲ್ಲ ಎಂದು ಶಿ-ಯು-ತ್ಸಾಯಿಯ ಮತ. ಆತ ಇತಿಹಾಸ, ಅರ್ಥಕೋಶಗಳನ್ನೆಲ್ಲ ಯೋಗ್ಯ ಹೆಸರಿಗಾಗಿ ತಿರುವಿ ಹಾಕಿದ. ಆದರೆ ಯೋಗ್ಯ ಹೆಸರು ಸಿಕ್ಕಲಿಲ್ಲ. ಹಾಗೆಯೆ, ಒಂದು ಒಂದುವರೆ ತಿಂಗಳು ಕಳೆಯಿತು. ಹೆಸರಿನಲ್ಲಿ ಮಗುವಿಗೆ ಹರಕೆಯೂ ತನಗೆ ಅದು ಉತ್ತರಾಯುಷ್ಯದಲ್ಲಿ ದೊರೆತ ರತ್ನವೂ ಎಂಬ ಅಭಿಪ್ರಾಯವಿರ ಬೇಕೆಂದು ಆತನು ಯೋಚಿಸುತ್ತಿದ್ದ. ಆದರೆ ಇದು ಸುಲಭವಾಗಿರಲಿಲ್ಲ. ಒಂದು ದಿನ ಆತ ಮೂರು ತಿಂಗಳ ಮಗುವನ್ನು ತೊಡೆಯಮೇಲಿಟ್ಟು ಕೊಂಡು ಚಾಳೀಸು ಹಾಕಿಕೊಂಡು ಒಂದು ಪುಸ್ತಕದ ಹಾಳೆ ತಿರುವಿ ಹಾಕುತ್ತ ಹೆಸರು ಹುಡುಕುತ್ತಿದ್ದ. ಮಗುವಿನ ತಾಯಿ ಒಂದೆಡೆಗೆ ಕುಳಿತು ಏನೊ ದೂರ ವಿಚಾರದಲ್ಲಿ ಮಗ್ನಳಾಗಿದ್ದಳು. ಒಮ್ಮೆಲೆ ಅವಳು ಹೇಳಿ ದಳು:

“ ಅವನನ್ನು ‘ ಶರತ್-ನಿಧಿ ’ ಎಂದು ಕರೆಯುವದು ಯೋಗ್ಯವಾದೀ ತಲ್ಲವೆ ? ” ಎಂದಳು. ಕೋಣೆಯಲ್ಲಿದ್ದವರೆಲ್ಲ ಅವಳ ಕಡೆಗೆ ತಿರುಗಿ ಹೇಳಿದರು: “ ಅವನು ಶರತ್ಕಾಲದಲ್ಲಿ ಹುಟ್ಟಿದನಲ್ಲವೆ ? ಶರತ್ಕಾಲವಿತ್ತ ಅಮೂಲ್ಯ ಕಾಣಿಕೆ ! ‘ ಶರತ್-ನಿಧಿ ’ ಎಂದೇ ಕರೆಯಿರಿ. ”

“ ಎಂತಹ ಸೊಗಸು ! ” ಶಿ-ಯು-ತ್ಸಾಯಿ ಕೂಡಲೆ ಹೇಳಿದ: “ ನಾನೆಷ್ಟು ಶ್ರಮಬಟ್ಟೆ. ಹೌದು, ನಾನೂ ಜೀವನದ ಶರತ್ಕಾಲಕ್ಕೆ ಬಂದಿ ದ್ದೇನೆ. ವಯಸ್ಸು ಐವತ್ತಕ್ಕೆ ಮಿಕ್ಕಿದೆ. ಮಗುವೂ ಶರತ್ಕಾಲದಲ್ಲಿ ಹುಟ್ಟಿತು. ಶರತ್ಕಾಲದಲ್ಲಿಯೆ ಸೃಷ್ಟಿಯೆಲ್ಲ ಫಲಿಸುವದು. ‘ ಶರತ್-ನಿಧಿ ’ ಎಷ್ಟು ಅರ್ಥ ಪೂರ್ಣವಾದ ಹೆಸರು ! ಇದಲ್ಲದೆ ಇತಿಹಾಸದಲ್ಲಿಯೂ ಈ ಹೆಸರು ಸಿಕ್ಕು ವದು. “ ಇನ್ನೂ ‘ ಶರತ್-ಕಾಲದ ಸುಗ್ಗಿ ಬರಲಿದೆ ’ ಎಂದು ನಾಣ್ಣುಡಿ. ಇದೀಗ ನನಗೆ ನಿಜವಾದ ಸುಗ್ಗಿ ಬಂದಿದೆ. ”

ಆಮೇಲೆ ಕೇವಲ ಓದು ವ್ಯರ್ಥವೆಂದೂ ಬುದ್ಧಿ ದೇವದತ್ತವೆಂದೂ ಅವನು ಚಿಕ್ಕ ಹೆಂಡತಿಯನ್ನು ಕೊಂಡಾಡಿದ. ಆದರೆ ಇದರಿಂದ ಅವಳಿಗೆ ಸಮಾಧಾನವಾಗಲಿಲ್ಲ. ಅವಳು ಕಣ್ಣು ಮುಚ್ಚಿ ತಲೆ ಕೆಳಗೆ ಮಾಡಿ ಮೆಲ್ಲಗೆ

ಅಂದಳು: "ನಾನು 'ವಸಂತ-ನಿಧಿ'ಯನ್ನು ನೆನಸಿದೆ, ಈ ಹೆಸರು ನೆನ ಪಾಯಿತು ಅಷ್ಟೆ."

'ಶರತ್-ನಿಧಿ' ಚನ್ನಾಗಿಯೆ ಬೆಳೆಯಹತ್ತಿದ. ಅವನ ಕಣ್ಣುಗಳು ವಿಶೇಷವಾಗಿ ದೊಡ್ಡವಾಗಿದ್ದವು. ಬರುಹೋಗುವವರನ್ನು ಕುತೂಹಲದಿಂದ ಕಣ್ಣುಬಿಟ್ಟು ನೋಡುವ. ತಾಯಿ ಎಲ್ಲಿದ್ದರೂ ಗುರುತಿಸುವ. ತಾಯಿ ಯನ್ನು ಬಿಟ್ಟು ಅಗಲುತ್ತಲೇ ಇರಲಿಲ್ಲ. ಶಿ-ಯು-ತ್ಸಾಯಿ ಬೇಕಾದಷ್ಟು ಮುದ್ದಿಸಿದರೂ ಅವನನ್ನು ನಂಬುತ್ತಿರಲಿಲ್ಲ. ಯಜಮಾನಿ ಮುದುಕಿ ತಾನು ಹೆತ್ತ ಮಗುವೊ ಎನ್ನುವಂತೆ ಪ್ರೀತಿ ತೋರಿಸುತ್ತಿದ್ದಳು. ಆದರೆ ಮಗುವಿಗೆ ಅದರ ಅರ್ಥವಾಗದಿರಲಿಲ್ಲ. ಅದು ಅವಳನ್ನು ಕಂಡೊಡನೆ ಯಾರೊ ಗುರು ತಿಲ್ಲದವರನ್ನು ಕಂಡಂತೆ ಬಿರಿಬಿರಿ ನೋಡುತ್ತಿತ್ತು. ಹೀಗೆ ಮಗುವು ತಾಯಿ ಯನ್ನು ಬಿಟ್ಟು ಅಗಲದಷ್ಟು ಅಭ್ಯಾಸವಾಗುತ್ತಿರುವಂತೆಯೆ ಅವಳು ತಿರುಗಿ ಹೋಗುವ ದಿನ ಸಮೀಪಿಸಹತ್ತಿದವು. ವಸಂತ ಚಳಿಯ ಹೆಜ್ಜೆ ಹೆಚ್ಚುತ್ತ ಬಂದಿತು. ಹಿಂದೆಯೆ ಬೇಸಿಗೆಯೂ ಕಾಲಿಟ್ಟಿತು. ಆಕೆಯ ಮೂರು ವರ್ಷದ ಬಾಳುವೆ ಮುಗಿಯುತ್ತ ಬಂದುದೇ ಎಲ್ಲರ ಮಾತಿನ ವಿಷಯವಾಗಿತ್ತು.

ಶಿ-ಯು-ತ್ಸಾಯಿ ಮಗನ ಮಮತೆಯಿಂದ ಮುಂದೇನು ಮಾಡಬೇಕೆಂದು ವಿಷಯವನ್ನು ಮೊದಲು ಹೆಂಡತಿಯೊಡನೆ ಎತ್ತಿದ. ಇನ್ನೊಂದು ನೂರು ಡಾಲರು ಕೊಟ್ಟು ಆಕೆಯನ್ನು ನಿರಂತರವಾಗಿ ಕೊಂಡುಕೊಂಡು ಬಿಡ ಬೇಕೆಂದ.

"ಹಾಗೆ ಕೊಂಡುಕೊಳ್ಳುವದೇ ಆದರೆ ನನಗೆ ಮೊದಲು ವಿಷ ಕೊಟ್ಟು ಬಿಡಿ." ಎಂದಳು ಯಜಮಾನಿ.

ಶಿ-ಯು-ತ್ಸಾಯಿಗೆ ಸಿಟ್ಟು ಏರಿದರೂ ಮಾತು ಬರಲಿಲ್ಲ. ಕೆಲಹೊತ್ತು ಸುಮ್ಮನಿದ್ದ; ಮತ್ತೆ ಮುಖದ ಮೇಲೆ ನಗೆ ತಂದುಕೊಂಡು ಹೇಳಿದ:

"ತಾಯಿ ಇಲ್ಲದ ಮಗುವಿನ ಅವಸ್ಥೆ ವಿಚಾರಿಸಬೇಡವೆ?"

"ಅಂತೂ ನಾನು ತಾಯಿಯಾಗಲು ಅಯೋಗ್ಯಳೆಂದೇ ತಿಳಿದಿರಾ?" ಎಂದು ಅಣಕದಿಂದ ಮುದುಕಿ ಹೇಳಿದಳು.

ಮಗುವಿನ ತಾಯಿಗೆ ಮಾತ್ರ ಮನಸ್ಸು ಇಬ್ಭಾಗವಾಗಿತ್ತು. ಮೊದಲಿಗೆ

ಯಾವಾಗಲೂ ಅವಳ ತಲೆಯಲ್ಲಿ ' ಮೂರು ವರ್ಷ 'ವೆಂಬ ನುಡಿ ಸುತ್ತು ತ್ತಿತ್ತು. ಮೂರು ವರ್ಷ ಕಳೆಯುವದೇನು ದೊಡ್ಡ ಮಾತು, ಎಂದು ಅವಳು ಈ ಶಿ-ಯು-ತ್ಸಾಯಿಯ ಮನೆಯ ದಾಸ್ಯವನ್ನು ಒಪ್ಪಿಕೊಂಡಿದ್ದಳು. ಇಂದು ಶರತ್-ನಿಧಿಯು ಎದುರಿಗೆ ಸುಳಿದು ಅವಳ ಮನಸ್ಸನ್ನು ಸೆಳೆಯುತ್ತಿರುವಷ್ಟೆ ವಸಂತ-ನಿಧಿಯ ನೆನಪೂ ಅವಳಲ್ಲಿ ನಿಚ್ಚಳವಾಗಿತ್ತು. ಯಾವುದನ್ನೂ ಬಿಡಲು ಅವಳಿಗೆ ಮನಸ್ಸಿಲ್ಲ! ಹೊಸ ಮನೆಯಲ್ಲಿಯ ಜೀವನ ಅವಳಿಗೆ ಸೊಗಸಾಗಿದ್ದು ಉಳಿದ ಆಯುಷ್ಯವನ್ನು ಇಲ್ಲಿಯೆ ಕಳೆಯಬೇಕೆಂದು ಅವಳಿಗೆ ಆಶೆಯೂ ಉಂಟಾಗಿತ್ತು. ಇದಲ್ಲದೆ ವಸಂತ-ನಿಧಿಯ ತಂದೆಯೂ ಬಹುದಿನ ಬದುಕು ವಂತಿರಲಿಲ್ಲ. ಅವನ ಬೇನೆ ಬಲಿಯುತ್ತಿದ್ದು ಮೂರು ನಾಲ್ಕು ವರುಷ ಬಹಳವಾದರೆ ಉಳಿಯಬಹುದಾಗಿತ್ತು. ಆದ್ದರಿಂದ ' ವಸಂತ-ನಿಧಿ 'ಯನ್ನು ' ಶಿ-ಯು-ತ್ಸಾಯಿ 'ಯು ಸ್ವೀಕರಿಸಿದರೆ ತಾನು ಎರಡೂ ಮಕ್ಕಳನ್ನಿಟ್ಟುಕೊಂಡು ಇಲ್ಲಿಯೆ ಉಳಿಯಬಹುದೆಂದು ಅವಳು ಯೋಚನೆ ಹಾಕುತ್ತಿದ್ದಳು.

ಹೀಗೆ ಅವಳು ಹಗಲುಗನಸುಗಳನ್ನು ಕಾಣುತ್ತಿದ್ದಳು. ಒಮ್ಮೊಮ್ಮೆ ' ಶರತ್-ನಿಧಿ 'ಯನ್ನು ಎತ್ತಿಕೊಂಡು ಅಂಗಳದಲ್ಲಿ ಕುಳಿತಾಗ ವಸಂತ-ನಿಧಿ ಹತ್ತಿರದಲ್ಲಿ ನಿಂತಂತಾಗುತ್ತಿತ್ತು. ಮೈಮರವಿನಲ್ಲಿ ಅವನನ್ನು ಸೆಳೆದುಕೊಂಡು ಮಾತಾಡಬೇಕೆಂದು ಕೈ ಚಾಚಲು ಅವನು ಕೈಗೆ ಹತ್ತದೆ ನಿರಾಶೆಯಿಂದ ಎಚ್ಚರಿಯುತ್ತಿದ್ದಳು.

ಬಾಗಿಲಲ್ಲಿ ಮುದುಕಿ ಕ್ರೂರ ನೋಟದಿಂದ ನೋಡುತ್ತ ನಿಂತಿರುತ್ತಿದ್ದಳು. ಅವಳನ್ನು ನೋಡಿ " ನಾನು ಹೋಗುವದೇ ಲೇಸು. ಈ ಹದ್ದಿನ ದೃಷ್ಟಿ ಯನ್ನು ಸಹಿಸುವದಾಗದು " ಎಂದು ತಾಯಿ ಹೇಳಿಕೊಳ್ಳುವಳು. ಆದರೆ ಬಗಲಲ್ಲಿಯ ಮಗು ಅತ್ತೊಡನೆ ಮತ್ತೆ ಏನಾದರೂ ಚಿಂತೆಯಿಲ್ಲ, ಮಗುವಿ ಗಾಗಿ ಸಹಿಸಿಕೊಂಡಿರಬೇಕು, ಎಂದುಕೊಳ್ಳುವಳು.

ಶಿ-ಯು-ತ್ಸಾಯಿ ತನ್ನ ಮೊದಲಿನ ವಿಚಾರವನ್ನು ಸ್ವಲ್ಪ ಬದಲಿಸಿದ. ಕುಂಟಲಗಿತ್ತಿ ಹೆಂಗಸನ್ನು ಕರೆಸಿಕೊಂಡು ಶರತ್-ನಿಧಿಯ ತಾಯಿಯ ಮೊದಲ ಪತಿಯೆಡೆಗೆ ಕಳುಹಿಸಿ ಇನ್ನು ಮೂವತ್ತು ಬಹಳವಾದರೆ ಐವತ್ತು ಡಾಲರು ಕೊಟ್ಟರೆ ಆತ ಮತ್ತೆ ಮೂರು ವರ್ಷ ಅವಳನ್ನು ಬಿಟ್ಟುಕೊಡಬಹುದೇ ಎಂದು

ಕೇಳಬೇಕೆಂದು ನಿಶ್ಚಯಿಸಿದ. ಮತ್ತು “ ಶರತ್-ನಿಧಿ ಐದು ವರುಷದವ ನಾಗಲು ತಾಯಿಯನ್ನು ಬಿಟ್ಟಿರಬಹುದು ” ಎಂದು ಹೆಂಡತಿಗೆ ಹೇಳಿದ.

ಮುದುಕಿ ಜಪಮಣಿ ಹಿಡಿದು ಬುದ್ಧಧ್ಯಾನದಲ್ಲಿದ್ದಳು. “ ಮಾವು ಅಮಿತ ಬ್ಯಾ ” ಎಂದು ಗುಣಿಸುತ್ತಲೇ ಹೇಳಿದಳು:

“ ಅವಳಿಗೆ ತನ್ನ ಮನೆಯಲ್ಲಿಯೂ ಒಂದು ಮಗುವಿದೆ. ತನ್ನ ಗಂಡ ನನ್ನು ಕೂಡಿಕೊಳ್ಳಲು ಅವಳಿಗೆ ಅವಕಾಶ ಕೊಡಲಿಕ್ಕೇಬೇಕು. ”

ಆತ ತಲೆ ಹಾಕುತ್ತ ಅನುಮಾನಿಸುತ್ತ ಅಂದ:

“ ಆದರೆ ಶರತ್-ನಿಧಿ ಎರಡೇ ವರುಷಕ್ಕೆ ತಾಯಿಯನ್ನು ಬಿಟ್ಟಿರ ಬೇಕಲ್ಲ ! ”

“ ನಾನು ಅವನನ್ನು ಜೋಪಾನ ಮಾಡುವೆ. ” ಜಪಮಾಲೆ ಇಡುತ್ತ ಮುದುಕಿ ಹೇಳಿದಳು: “ ಅವನನ್ನು ಬೆಳೆಸುವೆ. ಅವನನ್ನು ಕೊಲ್ಲುವೆನೆಂದು ಬಗೆದಿದ್ದೀರಾ ? ”

ಕೊನೆಯ ಮಾತು ಕೇಳಿ ಆತನಿಗೆ ಸಿಟ್ಟು ಬಂತು. ಹಾಗೆಯೆ ಎದ್ದು ಹೋದ. ಆದರೆ ಅವಳು ತನ್ನ ಮಾತನ್ನು ಮುಂದುವರಿಸಿಯೆ ಬಿಟ್ಟಳು:

“ ನನಗೆ ಜೊತೆಯಾಗಲೆಂದು ಈ ಮಗನನ್ನು ಪಡೆದುದಾಯಿತು. ಶರತ್-ನಿಧಿ ನನ್ನ ಮಗು. ಅವನಿಗೆ ಹಾನಿಯಾದರೆ ನಿಮ್ಮ ವಂಶಕ್ಕೆ ನಷ್ಟ ವಲ್ಲದೆ ನನ್ನ ವಂಶಕ್ಕಲ್ಲವೆಂಬುದು ನಿಜವಾದರೂ ನಾನು ಈ ವಂಶದ ಅನ್ನ ಉಂಡಿದ್ದೇನೆ. ನಿಮಗೆ ಮುದಿಹುಚ್ಚು ಹಿಡಿದಿದೆ. ಮಗುವಿಗಿಂತ ಮಗು ವಾಗಿದ್ದೀರಿ. ಇನ್ನೆಷ್ಟು ವರುಷ ಬದುಕಬೇಕಾಗಿದೆಯೆಂದು ಈ ಹೆಂಗಸಿನ ಬೆನ್ನುಹತ್ತಿದ್ದೀರಿ? ಅಷ್ಟು ಶಕ್ತಿಯಾದರೂ ಉಂಟೆ ? ನನಗೆ ಅಂತ್ಯಕಾಲದಲ್ಲಿ ಸವತಿಯ ಜೊತೆ ಬೇಡ ! ”

ಕೊನೆಯ ಕಟುಮಾತುಗಳು ಅವನು ದೂರ ಹೋಗಿದ್ದರಿಂದ ಅವನ ಕಿವಿಗೆ ಬೀಳಲಿಲ್ಲ.

ಬೇಸಿಗೆಯಲ್ಲಿ ಮಗುವಿನ ತಲೆಗೆ ಉಮ್ಮಗುರುವಾಯಿತು. ಸ್ವಲ್ಪ ಜ್ವರವೂ ಒಮ್ಮೊಮ್ಮೆ ಬರಹತ್ತಿದವು. ಮುದುಕಿ ದೈವ ಕೇಳುವದನ್ನು, ಬುದ್ಧ ಸಂಪ್ರದಾಯದಂತೆ ಔಷಧೋಪಚಾರ ಮಾಡುವದನ್ನು ಸುರುವು ಮಾಡಿ ದಳು. ಆದರೆ ತಾಯಿಗೆ ಇದು ಸರಿಬರಲಿಲ್ಲ. ಆಕೆಗೆ ಬೇನೆಯೇನೂ ಅಷ್ಟು

ಮಹತ್ವವಾಗಿರಲಿಲ್ಲ. ಆದರೆ ಮುದುಕಿ ಔಷಧ ತಿಕ್ಕುವದು, ಹೊಟ್ಟೆಯಲ್ಲಿ ಹಾಕುವದು ಮುಂತಾದ್ದರಿಂದ ಮಗುವನ್ನು ಅಳಿಸುವದು ಬೇಡವಾಗಿತ್ತು. ಒಮ್ಮೊಮ್ಮೆ ಮುದುಕಿ ತಂದಿಟ್ಟ ಔಷಧವನ್ನು ಹಾಕಿದೆನೆಂದು ಚಲ್ಲಿಬಿಡುವಳು.

"ನೋಡಿದೆಯಾ? ಅವಳಿಗೆ ಕೂಸಿನ ಬಗ್ಗೆ ಕಾಳಜಿಯೆ ಇಲ್ಲ. ಮಗು ದಿನದಿನಕ್ಕೆ ಸೊರಗುತ್ತಿರುವದನ್ನೂ ನೋಡಬಾರದೆ? ಹೇಗಾದರೂ ಅಂತಃಕರಣ ಬೇರೆ. ತೋರಿಕೆಯ ಮಮತೆ ಬೇರೆ." ಎಂದು ಮುದುಕಿ ಗಂಡನಿಗೆ ಹೇಳುವಳು.

ಆಕೆ ಮರೆಯಲ್ಲಿ ಕಣ್ಣೀರುಗರೆಯುವಳು. ಶಿ-ಯು-ತ್ಸಾಯಿ ಸಿಟ್ಟಿನ್ನುತ್ತಿರಲಿಲ್ಲ.

'ಶರತ್-ನಿಧಿ'ಯ ಮೊದಲ ಹುಟ್ಟುಹಬ್ಬವೂ ಬಂತು. ಸುಮಾರು ಮೂವತ್ತು ನಾಲ್ವತ್ತು ಜನ ಮೇಜವಾನಿಗೆ ಆಮಂತ್ರಿತರಾಗಿ ಬಂದರು. ಮಗುವಿಗೆ ಉಡುದಾರ, ಕೊರಳಸರ, ಬಟ್ಟೆಗಳು, ಟೊಪ್ಪಿಗೆಗೆ ಹಚ್ಚಲು ದೀರ್ಘಾಯುದೇವನ ಚಿತ್ರ, ಮುಂತಾದ ಅನೇಕ ಉಡುಗರೆಗಳು ಬಂದವು. ಯಜಮಾನನಾದ ಶಿ-ಯು-ತ್ಸಾಯಿಯ ಮುಖ ಉತ್ಸಾಹದಿಂದ ಹೊಳೆಯುತ್ತಿತ್ತು. ಆದರೆ ಅವನ ಕಣ್ಣುಗಳಲ್ಲಿ ಸಂಜೆಗೆಂಪಿನ ಛಾಯೆಯೂ ಮೂಡಿತ್ತು. ಅತಿಥಿಗಳು ಮಗುವಿಗೆ ದೀರ್ಘಾಯುಷ್ಯ, ಉನ್ನತಜೀವನ ಮೊದಲಾದ ಅನೇಕ ಹರಕೆಗಳನ್ನು ಹಾರೈಸಿದರು.

ಅಂದು ಸಂಜೆ ಮೇಜವಾನಿಯ ಊಟ ಆರಂಭವಾಗುತ್ತಿರುವಾಗ, ಸಂಜೆಯ ಮಂಜು ಮುಸುಕುತ್ತಿರುವಾಗ ಅಕಸ್ಮಾತ್ ಒಬ್ಬ ಅತಿಥಿ ಮನೆ ಅಂಗಳದಲ್ಲಿ ಬಂದ. ಕೂಡಿದವರು ಬಂದವನನ್ನು ದಿಟ್ಟಿಸಿ ನೋಡಿದರು. ಮೈಯೆಲ್ಲಾ ಹರಕು ಬಟ್ಟೆ, ಮುಖದ ಮೇಲೆ ಹುಚ್ಚು ಕಳೆ; ಬಗಲಲ್ಲಿ ಕಾಗದದಲ್ಲಿ ಏನೊ ಸುತ್ತಿ ಹಿಡಿದ್ದಾನೆ. ಯಜಮಾನ ಆಶ್ಚರ್ಯದಿಂದ ಅವನನ್ನು ಒಳಗೆ ಕರೆಯಲು ಮುಂದೆ ಬಂದ. ಮತ್ತು 'ಎಲ್ಲಿಂದ ಬಂದೆ?' ಎಂದು ಕೇಳಿದ. ಆದರೆ ಬಂದ ವ್ಯಕ್ತಿ ಉತ್ತರ ಕೊಡಲಿಲ್ಲ. ಈ ಮೌನ ಮೊದಲು ಅರ್ಥವಾಗದಿದ್ದರೂ ಕೊನೆಗೆ ಶಿ-ಯು-ತ್ಸಾಯಿಗೆ ಇವನೇ ಆ ಚರ್ಮದ

ವ್ಯಾಪಾರಿಯಿರಬೇಕು! ಎಂದು ಹೊಳೆಯದಿರಲಿಲ್ಲ.

"ಕಾಣಿಕೆಯನ್ನೇಕೆ ತಂದೆ?" ಎಂದು ಮೆಲ್ಲನಿಯಲ್ಲಿ ಕೇಳಿದ. "ನೀನು ಅಷ್ಟು ಶ್ರಮಪಡುವ ಕಾರಣವಿರಲಿಲ್ಲ."

ಮರುಮಾತಾಡುವದಕ್ಕೆ ಮೊದಲು, ಬಂದವ ಅಂಜುತ್ತ ಯಜಮಾನ ನನ್ನು ದಿಟ್ಟಿಸಿ ನೋಡಿದ, ಮತ್ತು ಹೇಳಿದ:

"ನಾನು.....ನಾನು.....ನಾನು ಆಕೆಗೆ ದೀರ್ಘಜೀವನವನ್ನು ಕೋರಲು ಮತ್ತು ಒಂದು ಸಾವಿರ............"

ನಡುವೆಯೆ ತಡೆದು ಬಗಲಲ್ಲಿಯ ಕಾಗದದ ಸುರುಳಿಯನ್ನು ಬೆರಳು ಸರಾಗಿಸುತ್ತ ತೆಗೆದ. ಮತ್ತು ಮೇಲಿನ ಹೊದಿಕೆಗಳನ್ನು ಒಂದೊಂದಾಗಿ ಬಿಚ್ಚಿದ. ಒಳಗೆ ಹಿತ್ತಾಳೆಯಿಂದ ಮಾಡಿ ಬೆಳ್ಳಿಯ ಗಿಲೀಟು ಮಾಡಿದ ನಾಲ್ಕು ಅಕ್ಷರಗಳಿದ್ದವು. ಅವು "ದಕ್ಷಿಣ ಗಿರಿಗೆ ಮೀರಿದ ದೀರ್ಘಾಯು" ಎಂದಿದ್ದವು.

ಅಷ್ಟರಲ್ಲಿ ಶಿ-ಯು-ತ್ಸಾಯಿಯ ಹೆಂಡತಿ ಅಲ್ಲಿಗೆ ಬಂದು ಅವನನ್ನು ದಿಟ್ಟಿಸಿ ನೋಡಿದಳು. ಅವಳಿಗೆ ಉಲ್ಲಾಸವೇನೂ ಅನಿಸಲಿಲ್ಲ. ಆಗ ಶಿ-ಯು-ತ್ಸಾಯಿ ಅವನನ್ನು ಪಂಕ್ತಿಯ ಕಡೆಗೆ ಕರೆದುಕೊಂಡು ನಡೆದ. ಅಲ್ಲಿ ಕುಳಿತ ಅತಿಥಿಗಳು ಆಗಲೆ ಗುಜುಗುಜು ನಡೆಸಿದ್ದರು.

ಊಟ ಎರಡು ತಾಸು ನಡೆಯಿತು. ಮದ್ಯದ ಸೇವನೆಯೂ ಆರಂಭ ವಾಯಿತು. ಅಳತೆ ಮೀರಿ ಕುಡಿದು ಮನಬಂದಂತೆ ಹರಟುವದೂ, ಲೆಕ್ಕಿ ಮುಷ್ಟಿ ಮುಂತಾದ ಆಟ ಆಡುವದೂ ಜೋರಾದವು. ಚರ್ಮ ವ್ಯಾಪಾರಿ ಮಾತ್ರ ಎರಡು ಬಟ್ಟಲಕ್ಕಿಂತ ಹೆಚ್ಚು ಕುಡಿಯಲಿಲ್ಲ. ಅವನ ಕಡೆಗೆ ಉಳಿದ ವರ ಲಕ್ಷವೂ ಇರಲಿಲ್ಲ. ಮದ್ಯದ ಜೋರು ಮುಗಿಯಲು ಕೊನೆಗೆ ಒಂದೊಂದು ತಾಟು ಅನ್ನ ಗಪಗಪ ತುಂಬಿಕೊಂಡು ಅತಿಥಿಗಳು ಧನ್ಯವಾದಗಳೊಡನೆ ಹೊರಬೀಳಹತ್ತಿದರು. ಎರಡೆರಡು ಮೂರುಮೂರರ ಗುಂಪು ಮಾಡಿ ಕೊಂಡು ಕಾಗದದ ಕಂದೀಲು ಹಿಡಿದುಕೊಂಡು ನಡೆದರು.

ಚರ್ಮದ ವ್ಯಾಪಾರಿ ಊಟ ನಡಿಸಿಯೆ ಇದ್ದ. ಆಳುಗಳು ತಾಟು ಎತ್ತಿಕೊಂಡು ಹೋಗಲು ಬರುವವರೆಗೂ ಅವನು ಏಳಲಿಲ್ಲ. ಎದ್ದು ಮುಂದು

ಗಡೆಯ ಕಟ್ಟೆಯ ಮೇಲೆ ಕತ್ತಲಲ್ಲಿ ಮೂಲೆ ಹಿಡಿದು ನಿಂತಿರಲು ಒತ್ತೆ ಕೊಟ್ಟ ಹೆಂಡತಿ ಭೆಟ್ಟಿಯಾದಳು.

"ನೀನೇಕೆ ಬಂದೆ ?" ಎಂದು ಆಕೆ ಔದಾಸೀನ್ಯದ ದನಿಯಿಂದ ಕೇಳಿದಳು.

"ನನಗೆ ಬರುವ ಆಶೆಯಾಯಿತೆನ್ನಬೇಡ, ಬರದೆ ಗತಿಯಿಲ್ಲದಂತಾದ್ದರಿಂದ."

"ಹಾಗಾದರೆ ಇಷ್ಟು ತಡವಾಗಿ ಏಕೆ ಬಂದೆ ?"

"ಉಡುಗೊರೆ ತರಲು ಹಣ ಬೇಡವೆ? ಅದಕ್ಕಾಗಿ ಎಷ್ಟು ಶ್ರಮಬಟ್ಟೆ. ಮುಂಜಾನೆಯೆಲ್ಲ ಸುತ್ತಿದೆ. ಬಿಕ್ಕೆ, ಸಾಲ ಎಲ್ಲ ಉಪಾಯ ಮಾಡಿದ್ದಾಯಿತು. ಕೊನೆಗೆ ಉಡುಗೊರೆ ಕೊಂಡುಕೊಳ್ಳಲು ಪಟ್ಟಣಕ್ಕೆ ಹೋಗಿ ಇಲ್ಲಿಗೆ ಬರಬೇಕಾದರೆ ದಣುವಂತೂ ಹೇಳತೀರದು. ಅದರಿಂದಾಗಿ ಸಾವಕಾಶವಾಯಿತು."

"ಮತ್ತೆ ವಸಂತ-ನಿಧಿ ?" ಪಕ್ಕನೆ ಕೇಳಿದಳಾಕೆ.

ಆತ ದೀರ್ಘ ನಿಟ್ಟುಸಿರು ಬಿಟ್ಟ.

"ವಸಂತ-ನಿಧಿಯ ಸಲುವಾಗಿಯೆ ನಾನಿಲ್ಲಿಗೆ ಬಂದದ್ದು."

"ವಸಂತ-ನಿಧಿಗಾಗಿಯೆ ?" ಎಂದು ಗಾಬರಿಯಿಂದ ಕೇಳಿದಳು.

"ಬೇಸಿಗೆಯಲ್ಲಿ ವಸಂತ-ನಿಧಿ ಸೊರಗಹತ್ತಿದ. ಈಗಂತೂ ಅತಿ ಬಡವಾಗಿದ್ದಾನೆ. ಅಲ್ಲದೆ ಜಡ್ಡೂ ಹಿಡಿದಿದೆ. ಔಷಧಕ್ಕಾಗಲಿ ಉಪಚಾರಕ್ಕಾಗಲಿ ಹಣವೆಲ್ಲಿಂದ ಬರಬೇಕು? ಇದರಿಂದ ಅವನ ಸ್ಥಿತಿ ತೀರ ಕೆಟ್ಟದೆ. ಈಗ ನಾವು ಏನೂ ಮಾಡದಿದ್ದರೆ ಅವನು ಬದುಕುವಂತಿಲ್ಲ. ಅದಕ್ಕಾಗಿ ನಿನಗೆ ಸ್ವಲ್ಪ ಹಣ ಕಡ ಕೇಳಲು ಧಾವಿಸಿ ಬಂದೆ........"

ಅವಳ ಹೃದಯಕ್ಕೆ ಸಾವಿರ ಚೇಳು ಕಚ್ಚಿದಂತಾಯಿತು. ಅಳಬೇಕೆಂದರೆ ಅಂದು ಶರತ್-ನಿಧಿಯ ಹುಟ್ಟಿದ ದಿನ. ಎಲ್ಲರೂ ಆನಂದದಲ್ಲಿರುವಾಗ ತಾನು ಅಳುವದು ಅಶುಭವಾದೀತೆಂದು ಹೇಗೊ ಕಣ್ಣೀರನ್ನು ಹತ್ತಿಟ್ಟುಕೊಂಡು ಹೇಳಿದಳು:

"ನನ್ನಲ್ಲಿಯೂ ಹಣವಿಲ್ಲ! ಎಲ್ಲಿಂದ ಬರಬೇಕು! ತಿಂಗಳಿಗೆ ಎರಡು

ಮಾವೊ* ನನಗೆ ಖರ್ಚಿಗೆ ಕೊಡುತ್ತಾರೆ. ಅದನ್ನು ತೆಗೆದುಕೊಂಡು ನಾನೇನು ಮಾಡುವದು ಎಂದು ಮಗುವಿಗೆ ಉಪಯೋಗ ಮಾಡಿಬಿಡುತ್ತೇನೆ. ಈಗೇನು ಮಾಡುವದು ? ”

ಒಂದು ಕ್ಷಣ ಇಬ್ಬರೂ ಮೌನ.

“ ಈಗ ‘ ವಸಂತ-ನಿಧಿ ’ಯನ್ನು ಯಾರು ನೋಡಿಕೊಳ್ಳುತ್ತಿದ್ದಾರೆ ? ” ಎಂದಳಾಕೆ.

“ ನೆರೆಯವರೊಬ್ಬರಿಗೆ ನೋಡಿಕೊಳ್ಳಲು ಹೇಳಿ ಬಂದೆ. ಸಂಜೆಗೇ ನಾನು ತಿರುಗಿ ಹೋಗಲೇಬೇಕಾಗಿತ್ತು. ಇನ್ನು ನಾನು ಹೊರಡಬೇಕು. ”

ಆತ ಕಣ್ಣೀರನ್ನು ಒರೆಸಿಕೊಂಡ.

“ ಒಂದು ಕ್ಷಣ ತಡೆ ” ಎಂದು ಬಿಕ್ಕುವ ದನಿಯಿಂದ ಆಕೆ ಹೇಳಿದಳು.

“ ಸಾಲವೇನಾದರೂ ಸಿಕ್ಕಬಹುದೊ ಅವರಿಗೆ ಕೇಳಿ ನೋಡುವೆ.”

ಆಕೆ ಒಳಗೆ ನಡೆದಳು.

* * * *

ಕೆಲವು ದಿನ ಕಳೆದವು. ಒಂದು ದಿನ ಸಂಜೆ ಶಿ-ಯು-ತ್ಸಾಯಿ ಒಮ್ಮೆಲೆ ಅವಳಿಗೆ ಕೇಳಿದ:

“ ನಾನು ಕೊಟ್ಟಿದ್ದ ಆ ಪಚ್ಚೆಯುಂಗುರ ಎಲ್ಲಿದೆ ? ”

“ಆ ರಾತ್ರಿ ಆತನಿಗೆ ಕೊಟ್ಟುಬಿಟ್ಟೆ. ಆತ ಒತ್ತೆಯಿಡಲು ಒಯ್ದ. ”

“ ನಿನಗೆ ಅಂದು ಐದು ಡಾಲರು ನಾನು ಕೊಡಲಿಲ್ಲವೆ ? ” ಎಂದು ಸಿಟ್ಟಿನಿಂದ ಕೇಳಿದ.

“ ಅಷ್ಟು ಸಾಲುತ್ತಿರಲಿಲ್ಲ. ”

“ ಹಾ ! ಹೀಗೋ ! ” ಎಂದು ಉಸಿರೆಳೆದ. “ ನಾನು ಎಷ್ಟು ಚನ್ನಾಗಿ ನಡೆಸಿಕೊಂಡರೂ ನೀನು ಯಾವಾಗಲೂ ಮೊದಲ ಗಂಡನ ಮತ್ತು ಮೊದಲ ಮಗನ ಹಂಬಲವನ್ನು ಬಿಡುವದಿಲ್ಲ. ಆಯಿತು, ಇನ್ನೆರಡು ವರ್ಷ ನಿನ್ನನ್ನು ಇಟ್ಟುಕೊಳ್ಳಬೇಕೆಂದಿದ್ದೆ. ಆದರೆ ಇನ್ನು ಬೇಡ. ವಸಂತಋತುವು ಬಂದಕೂಡಲೆ ನೀನು ಹೊರಡಬೇಕು. ”

---

* ಒಂದು ‘ಮಾವೊ’ ಎಂದರೆ ಸುಮಾರು ಅರಾಣೆ

ಆಕೆಗೆ ತುಂಬಾ ಗಾಬರಿಯಾಯಿತು. ಅಳಲೂ ಬಾರದಂತಾಯಿತು.

ಕೆಲ ದಿನ ಕಳೆದ ಮೇಲೆ ಶಿ-ಯು-ತ್ಸಾಯಿ ಮತ್ತೆ ಉಂಗುರದ ಮಾತೆತ್ತಿದ. " ಆ ಉಂಗುರ ಒಂದು ನಿಧಿ. ಅದನ್ನು ಮುಂದೆ ನೀನು ಶರತ್-ನಿಧಿಗೆ ಕೊಡಬೇಕೆಂದು ನಾನು ನಿನಗೆ ಕೊಟ್ಟಿದ್ದೆ. ಹೀಗೆ ಮೊದಲ ತುತ್ತಿಗೆಯೆ ನೀನು ಒತ್ತೆ ಇಡಲು ಕೊಡಬಹುದೆಂದು ಬಗೆದಿರಲಿಲ್ಲ. ಇನ್ನೂ ಅವಳಿಗೆ ಗೊತ್ತಿಲ್ಲವೆಂಬುದು ನಮ್ಮ ಪುಣ್ಯ. ಗೊತ್ತಾದರೆ ಮೂರು ತಿಂಗಳ ರಸಕಸಿಯಾಗುತ್ತಿತ್ತು. "

ಆಕೆ ದಿನದಿನಕ್ಕೆ ಸೊರಗಹತ್ತಿದಳು. ಮುಖ ಬೆಳ್ಳಗಾಗಿ ನಿಸ್ತೇಜವಾಗಹತ್ತಿತು. ಮೇಲೆ ಅಣಕ-ಮಾತುಗಳೂ, ಬಯ್ಗಳೂ ನಡೆದೇ ಇದ್ದವು. ಕೇಳಿ ಕೇಳಿ ಅವಳಿಗೆ ಸಾಕಾಗಿತ್ತು. ಆದರೂ ಅತ್ತ ಅವಳ ಲಕ್ಷ್ಯವಿರಲಿಲ್ಲ. ' ವಸಂತ-ನಿಧಿ 'ಯ ಆರೋಗ್ಯದ ವಿಷಯವೇ ಅವಳನ್ನು ಬಾಧಿಸುತ್ತಿತ್ತು. ಶರತ್-ನಿಧಿಯನ್ನೆತ್ತಿಕೊಂಡು ಬೀದಿಗೆ ಹತ್ತಿರುವ ಬಾಗಿಲಲ್ಲಿ ಕುಳಿತುಕೊಳ್ಳುವಳು. ಅತ್ತಕಡೆಯಿಂದ ಯಾರಾದರೂ ಬರುವರೇ, ಗುಣವಾಗಿದೆ ಎಂಬ ಸುದ್ದಿಯನ್ನು ತರುವರೇ ಎಂದು ದಾರಿ ನೋಡುವಳು. ಹಾಗೂ ಹೀಗೂ ಒಂದೆರಡು ಡಾಲರು ಕೂಡಿಸಿ ಏನಾದರೂ ತಿನಸುಗಳನ್ನು ಕಳಿಸಬೇಕೆಂದು ಯೋಚಿಸುವಳು. ಆದರೆ ಯಾರೂ ಹೋಗುವವರು ಸಿಕ್ಕದಿರಲು ನಿರಾಶಳಾಗುವಳು. ಅವಳ ಈ ರೀತಿಯ ವರ್ತನೆ ಮುದುಕಿಗೆ ಸರಿಬರಲಿಲ್ಲ. ಅವಳು ಶಿ-ಯು-ತ್ಸಾಯಿಗೆ ಪದೇಪದೇ ಹೇಳಹತ್ತಿದಳು:

" ಅವಳಿಗೆ ಇಲ್ಲಿ ಇರಲು ಮನಸ್ಸೇ ಇಲ್ಲ; ತಿಳಿಯುವದಿಲ್ಲವೆ ? ಅವಳಿಗೆ ತನ್ನ ಮನೆಯ ಹಂಬಲದ ಹೊರತು ಇನ್ನೇನೂ ಇಲ್ಲ. "

ರಾತ್ರಿ ಒಮ್ಮೆಲೆ ಆಕೆ ಚೀರುವಳು. ಮಗ್ಗುಲಲ್ಲಿಯ ' ಶರತ್-ನಿಧಿ ' ಬೆಚ್ಚಿಬೀಳುವನು. ಶಿ-ಯು-ತ್ಸಾಯಿಗೂ ಎಚ್ಚರವಾಗುವದು. ಇಂತಹ ಎಷ್ಟೊ ರಾತ್ರಿಗಳು ಕಳೆದವು. ಶಿ-ಯು-ತ್ಸಾಯಿ ಅವಳಿಗೆ ಪದೇಪದೇ ಕೇಳಹತ್ತಿದ: " ನಿನಗೆ ಏನಾಗುತ್ತದೆ, ಹೇಳಬಾರದೆ ? "

ಆಕೆ ಸುಮ್ಮನೆ ಮಗುವನ್ನು ತಟ್ಟುತ್ತ ಮಲಗುವಳು. ಪ್ರತಿ ಮಾತೇ ಇಲ್ಲ.

ಒಂದು ರಾತ್ರಿ ಅವಳು ಮತ್ತೆ ಚೀರಿದಳು. ಆಗ ಶಿ-ಯು-ತ್ಸಾಯಿ

ಕೇಳಿದ: " ನಿನ್ನ ಮೊದಲ ಮಗ ಸತ್ತಂತೆ ಕನಸು ಬಿದ್ದಿತ್ತೆ ? ಎಷ್ಟು ಕೆಟ್ಟ ದನಿಯಿಂದ ಚೀರಿದಿ ? ನನಗೆ ಪಕ್ಕನೆ ಎಚ್ಚರಾಯಿತು. "

" ಅದೇನೂ ಇಲ್ಲಾ, ಏನೊ ಒಂದು ಗೋರಿ ಕಂಡಂತಾಯಿತು ಅಷ್ಟೆ" ಎಂದು ಅವಳು ಒಡನೆ ಹೇಳಿದಳು.

ಚಳಿಗಾಲ ಕಳೆಯುತ್ತ ಬಂತು. ಚಿಕ್ಕ ಹಕ್ಕಿಗಳು ಹಾಡಹತ್ತಿದ್ದವು. ಅವಳು ಹೊರಡುವದಕ್ಕೆ ಅವು ದಸಿಗೊಡುವಂತೆ ತೋರುತ್ತಿತ್ತು. ಕೂಸಿಗೆ ಮೊದಲು ಮೊಲೆ ಬಿಡಿಸಬೇಕಾಗಿತ್ತು. ಅದರಿಂದ ಏನೂ ಬಾಧಿಸದಿರಲು ಮಾಂತ್ರಿಕರನ್ನು ಕರೆಸಲಾಯಿತು. ಕೊನೆಗೆ ತಾಯಿ-ಮಕ್ಕಳನ್ನು ಅಗಲಿಸುವ ದಿನವನ್ನು ಗೊತ್ತುಪಡಿಸಲಾಯಿತು.

ಅಂದು ವಾಂಗಳು ಯಜಮಾನಿಗೆ ಕೇಳಿದಳು: " ಮೇಣೆಯವರಿಗೆ ಹೇಳಿಬರಲೆ ? "

ಮುದುಕಿ ಜಪಮಾಲೆ ಎಣಿಸುತ್ತ ಹೇಳಿದಳು: " ನಡೆದುಕೊಂಡೇ ಹೋಗಲಿ. ಅಲ್ಲಿಗೆ ಮುಟ್ಟಿದ ಮೇಲೆ ರೊಕ್ಕ ಕೊಡಬೇಕಾಗುವದು. ಅದಕ್ಕಾಗಿ ಅವಳ ಹತ್ತಿರ ಹಣವೆಲ್ಲಿದೆ? ಅವಳ ಗಂಡನಿಗೆ ಅನ್ನಕ್ಕೆ ಗತಿಯಿಲ್ಲವಂತೆ. ಎಂದ ಮೇಲೆ ಇವಳಿಗೆ ಇಷ್ಟು ವೈಭವವೇಕ ? ಇದಲ್ಲದೆ ಆ ಊರೂ ದೂರವಿಲ್ಲ. ಆಕೆಯ ವಯಸ್ಸಿಗೆ ನಾನು ಹತ್ತು ಹದಿನೈದು ಮೈಲು ಸಹಜ ನಡೆದಿದ್ದೇನೆ. ಅವಳ ಕಾಲು ನನ್ನಕಿಂತ ಉಪ್ಪವದೆ. ಅವಳು ಮಧ್ಯಾಹ್ನದ ಹೊತ್ತಿಗೆ ಅಲ್ಲಿಗೆ ಸಹಜ ಮುಟ್ಟುವಳು. "

ಅಂದು ಮುಂಜಾನೆ ' ಶರತ್-ನಿಧಿ 'ಗೆ ಅಂಗಿ ಹಾಕುವಾಗ ಅವಳ ಕಣ್ಣೀರು ಕೋಡಿಗಟ್ಟಿ ಹರಿಯಿತು. ಮಗುವು " ಕಾಕೂ, ಕಾಕೂ" ಎಂದು ಕಿರಚುತ್ತಲೇ ಇತ್ತು. ಮುದುಕಿ ಹೀಗೆಯೆ ಹೇಳಬೇಕೆಂದೂ ತನಗೆ "ಮಾ, ಮಾ," ಎನ್ನಬೇಕೆಂದೂ ಕಲಿಸಿದ್ದಳು. ತಾಯಿ ಕೂಸಿಗೆ ಏನೊ ಹೇಳಬೇಕೆಂದಳು. ಮಾತು ಬರಲಿಲ್ಲ. " ನೀನು ಒಳ್ಳೆಯವನಾಗಿರು, ನಾನು ಇನ್ನು ಹೋಗುತ್ತೇನೆ. 'ಮಾ' ನಿನ್ನನ್ನು ನೋಡಿಕೊಳ್ಳುವಳು. ಅವಳನ್ನು ಪ್ರೀತಿಸು. ಹಟ ಮಾಡಬೇಡ " ಎಂದು ಮುಂತಾಗಿ ಹೇಳಬಯಸಿರಬಹುದು. ಪಾಪ! ಒಂದುವರೆ ವರ್ಷದ ಮಗುವಿಗೆ ಇದೆಲ್ಲ ಹೇಗೆ ತಿಳಿಯಬೇಕು !

ಶಿ-ಯು-ತ್ಸಾಯಿ ದುಃಖಭರದಿಂದ ಅವಳ ಹತ್ತಿರ ಬಂದ. ಅವಳ ತೋಳಲ್ಲಿ ತೋಳು ಹಾಕಿದ. ಕೈಯಲ್ಲಿ ಇಪ್ಪತ್ತು ಸೆಂಟಿನ ಹತ್ತು ನಾಣ್ಯಗಳಿದ್ದವು.

" ಇವನ್ನು ತೆಗೆದುಕೊ, ಮತ್ತೆ ಇವೆರಡು ಡಾಲರೂ ಇರಲಿ " ಎಂದು ಮೆಲ್ಲನೆ ಹೇಳಿದ. ಅವಳು ಮಗುವಿಗೆ ಅಂಗಿ ಹಾಕಿ ಗುಂಡಿ ಹಾಕಿದಳು. ಅವನಿತ್ತ ನಾಣ್ಯಗಳನ್ನು ತನ್ನ ಒಳಅಂಗಿಯ ಕಿಸೆಯಲ್ಲಿ ಹಾಕಿಕೊಂಡಳು.

ಶಿ-ಯು-ತ್ಸಾಯಿ ಅಲ್ಲಿಂದ ಕದಲುವಾಗ ಮುದುಕಿ ಒಳಗೆ ಬಂದಳು. ಮತ್ತು ಹೇಳಿದಳು:

" ಶರತ್-ನಿಧಿಯನ್ನಿಲ್ಲಿ ತಾ, ನೀನು ಹೊರಡುವಾಗ ಅವನು ಹಟ ಮಾಡಬಹುದು "

ಆಕೆ ಏನೂ ಹೇಳಲಿಲ್ಲ. ಮಗುವು ಮುದುಕಿಯ ಹತ್ತಿರ ಹೋಗಲು ಒಪ್ಪದಾಯಿತು. ಮುದುಕಿ ಎತ್ತಿಕೊಳ್ಳಲು ಮೋರೆಯ ಮೇಲೆ ಪಟ-ಪಟ ಹೊಡೆಯಹತ್ತಿತು. ಮುದುಕಿ ಬೇಸತ್ತು ಸಿಡುಕಿನಿಂದ " ಆಯಿತು, ಕರೆದು ಕೊಂಡು ಹೋಗು. ಉಪಹಾರವಾದ ಮೇಲೆ ಮತ್ತ ನನ್ನ ಕಡೆಗೆ ತಂದು ಕೊಡು. "

ಉಪಹಾರಕ್ಕೆ ಕೂಡ್ರಲು ವಾಂಗಳು ಅವಳಿಗೆ "ಇನ್ನಿಷ್ಟು, ಇನ್ನಿಷ್ಟು ತೆಗೆದುಕೊ." ಎಂದು ಆಗ್ರಹ ಮಾಡಿದಳು. " ನೀನು ಎರಡು ಮೂರು ವಾರವಾಯಿತು. ಹೀಗೆಯೆ ಮಾಡುತ್ತಿರುವಿ. ಅದರಿಂದ ಎಷ್ಟು ಸೊರಗಿದ್ದೀ ನೋಡಿದೆಯಾ? ಕನ್ನಡಿ ನೋಡಿಕೊ. ಒಂದು ತಾಟು ಅನ್ನವಾದರೂ ಹೊಟ್ಟೆಗೆ ಹಾಕು. ಹತ್ತು ಮೈಲು ನಡೆಯುವದದೆ."

ಆಕೆ ಸೋತಮನದಿಂದ ಹೇಳಿದಳು: " ನೀನು ತುಂಬಾ ಒಳ್ಳೆಯವಳಾಗಿದ್ದೀ."

ಸೂರ್ಯ ಮೇಲಕ್ಕೆ ಏರಿದ್ದ. ಆಕಾಶವೂ ಸ್ವಚ್ಛವಿತ್ತು. ಅವಳು ಹೊರಡುವದಕ್ಕೆ ಸಿದ್ಧಳಾದಳು. ' ಶರತ್-ನಿಧಿ ' ಅವಳಿಂದ ಇಳಿಯಲಿಲ್ಲ. ಮುದುಕಿ ಜುಲುಮೆಯಿಂದ ಕಿತ್ತಿಕೊಂಡಳು. ಮಗು ರಂಭಾಟ ಮಾಡಹತ್ತಿತು. ಮುದುಕಿಗೆ ಕಾಲಿನಿಂದ ಒದೆಯುವದು, ಅವಳ ಕಾಲು ಜಗ್ಗುವದು ಮುಂತಾಗಿ

ಮಾಡಹತ್ತಿತು. ಹಿಂದೆ ನಿಂತಿದ್ದ ತಾಯಿ ಇದನ್ನೆಲ್ಲ ನೋಡಿ " ಬೇಕಾದರೆ ನಾನೇ ಮಧ್ಯಾಹ್ನದ ಊಟವಾದ ಮೇಲೆ ಹೊರಡುವೆ " ಎಂದಳು.

ಮುದುಕಿ ಅಕ್ಕಸದಿಂದ ಹೇಳಿದಳು: " ನೀನು ನಿನ್ನ ಗಂಟು ಬೇಗ ಕಟ್ಟಿಕೊ ಮತ್ತು ಹೊರಟು ಹೋಗು. ಹೇಗೂ ನೀನು ಯಾವಾಗಾದರೂ ಹೊರಡಲೇಬೇಕು. "

ಕೂಸಿನ ಅಳುವ ದನಿ ಅವಳಿಗೆ ದೂರದಿಂದ ಬರಹತ್ತಿತು. ಗಂಟು-ಮೊಟ್ಟೆ ಕಟ್ಟಿಕೊಳ್ಳುವಾಗ ಮತ್ತೆ ಮಗುವಿನ ಚೀರುವಿಕೆ ಕೇಳಬಂತು. ವಾಂಗಳು ಅವಳ ಹತ್ತಿರ ನಿಂತು ಸಮಾಧಾನ ಹೇಳುತ್ತ ಅವಳು ಸಾವರಿಸಿ ಕೊಳ್ಳುವದನ್ನು ನೋಡಿಕೊಳ್ಳುತ್ತಿದ್ದಳು. ಕೊನೆಗೆ ತನ್ನ ಹಳೆಯ ಗಂಟು ಗದಡಿ ಬಗಲಲ್ಲಿಟ್ಟುಕೊಂಡು ಆಕೆ ಹೊರಬಿದ್ದಳು.

ಹೆಬ್ಬಾಗಿಲಿನಿಂದ ಅವಳು ಹೊರಬಿದ್ದಳು. ಮಗುವಿನ ಅಳುವ ದನಿ ಇನ್ನೂ ಕೇಳಬರುತ್ತಿತ್ತು. ಹೇಗೊ ಕಾಲು ಎಳೆಯುತ್ತ ಒಂದು ಮೈಲು ಹೋದಳು. ಇನ್ನೂ ಆ ದನಿ ದೂರದಿಂದ ಬಂದಂತಾಗುತ್ತಿತ್ತು. ಮೇಲೆ ಉರಿಯುವ ಸೂರ್ಯ. ಮುಂದೆ ಮುಗಿಯದ ಹಾದಿ. ಸ್ವಲ್ಪ ದೂರ ಹೋಗಲು ಒಂದು ಕೊಳ್ಳ ಬಳಿದಿತು. ಹಳ್ಳವೊಂದು ಅಲ್ಲಿ ಧಡಧಡ ಹರಿ ಯುತ್ತಿತ್ತು. ಕೆಳಗೆ ಹಾರಿಕೊಂಡು ಈ ದುಃಖಮಯ ಜೀವನ ಮುಗಿಸಿ ಬಿಡಬೇಕೆಂದು ಅವಳು ವಿಚಾರಿಸಿದಳು. ಅಲ್ಲಿ ಕೆಲಹೊತ್ತು ಕುಳಿತಳು. ಸ್ವಲ್ಪ ವಿಶ್ರಾಂತಿಯಾಯಿತು. ಮನಸ್ಸು ಮತ್ತೆ ಬೇರೆಯಾಯಿತು. ತನ್ನ ನೆರಳನ್ನು ಜಗ್ಗಿಕೊಂಡು ಮತ್ತೆ ಮುಂದೆ ನಡೆದಳು.

ಇಳಿಹೊತ್ತಿಗೆ ಬಂದಿತು. ಹತ್ತಿರದಲ್ಲಿ ಚಿಕ್ಕ ಹಳ್ಳಿಯೊಂದು ಕಾಣಿ ಸಿತು. ಮುದುಕ ರೈತನೊಬ್ಬ ಎದುರಾಗಿ ಬಂದ. ಆಕೆಯ ಊರು ಇನ್ನು ಐದು ಮೈಲು ಉಳಿದಿವೆಯೆಂದು ಹೇಳಿದ.

" ಕಾಕಾ, ನನಗೊಂದು ಮೇಣೆ ಮಾಡಿಕೊಡುವೆಯಾ ? ನಾನು ನಡೆಯಲಾರೆ. " ಎಂದಳು.

" ಮೈಯಲ್ಲಿ ಲಗು ಇಲ್ಲವೆ ? "

" ಹೂಂ "

ಆ ಹಳ್ಳಿಯ ಅಗಸೆಯ ಕಟ್ಟೆಯ ಮೇಲೆ ಆಕೆ ಕುಳಿತಳು.

" ಎಲ್ಲಿಂದ ಬಂದೆಯವ್ವಾ ? "

" ನಾನು ಹೀಗೆ ಮುಂದೆ ಹೋಗಬೇಕು. ಮುಂಜಾನೆ ಹೊರಟಾಗ ಸಹಜವಾಗಿ ನಡೆದುಕೊಂಡು ಹೋಗಬಹುದೆಂದು ಮಾಡಿದ್ದೆ."

ಆ ಮುದುಕ ಆಕೆಗೆ ಸ್ವಲ್ಪ ಸಮಾಧಾನ ಹೇಳಿ ಒಂದು ಮೇಣೆ (ಕುರ್ಚಿ) ಎರಡು ಹೊರುವ ಆಳುಗಳೊಡನೆ ಗೊತ್ತುಮಾಡಿಕೊಂಡು ಬಂದ. ಅದಕ್ಕೆ ಮೇಲೆ ಛತ್ತಿರಲಿಲ್ಲ. ಯಾಕಂದರೆ ಅದು ನಾಟಿಗೆಯ ಕಾಲವಾಗಿತ್ತು. (ಬಿಸಿಲು ಅಷ್ಟು ಬಲಿತಿರಲಿಲ್ಲ)

ಇಳಿಹೊತ್ತಿನ ನಾಲ್ಕುಗಂಟೆಯ ಸುಮಾರಕ್ಕೆ ಮೇಣೆಯೊಂದು ಊರ ಸಂದಿಗಳಲ್ಲಿ ಹಾಯ್ದು ಬಂದಿತು. ಅದರಲ್ಲಿ ಮಧ್ಯ ವಯಸ್ಸಿನ ಹೆಂಗಸೊಬ್ಬಳು ಕುಳಿತಿದ್ದಳು. ಅವಳ ಮುಖ ಒಣಗಿದ ಕ್ಯಾಬೀಜದ ಎಲೆಯಂತೆ ಬಾಡಿ ಹಳದಿಯಾಗಿತ್ತು. ಅವಳ ಕಣ್ಣು ಮುಚ್ಚಿದ್ದವು. ಉಸಿರು ಮಂದವಾಗಿ ಸಾಗಿತ್ತು. ಊರಲ್ಲಿಯ ಜನ ಆಶ್ಚರ್ಯದಿಂದ ನೋಡುತ್ತಿದ್ದರು. ಹುಡುಗರಂತೂ ಏನೊ ಮೋಜು ಬಂದಿತೆಂಬಂತೆ ಸುತ್ತಲು ಬೆನ್ನುಹತ್ತಿದರು.

ಹುಡುಗರ ಗುಂಪಿನಲ್ಲಿ ವಸಂತ-ನಿಧಿಯೂ ಇದ್ದ. ಉಳಿದವರಂತೆ ಅವನೂ ಹಂದಿಯ ಹಿಂಡನ್ನು ಬೆನ್ನುಹತ್ತುವಂತೆ ಕೂಗುತ್ತ ಕೇಕೆಹಾಕುತ್ತ ನಡೆದಿದ್ದ. ಆದರೆ ಮೇಣೆ ಎರಡು ಮೂರು ಓಣಿಗಳನ್ನು ದಾಟಿ ತನ್ನ ಮನೆಯ ಕಡೆಗೆಯೆ ನಡೆದುದನ್ನು ನೋಡಿ ಅವನು ದಂಗುಬಡೆದ. ಮೇಣೆ ತನ್ನ ಮನೆಯ ಮುಂದೆಯೆ ಇಳಿಯಲು ಅವನಿಗೆ ಪೂರಾ ಗಾಬರಿಯಾಯಿತು. ಏನು ಮಾಡಬೇಕೊ ತಿಳಿಯದೆ ಅಲ್ಲಿಯೆ ಒಂದು ಕಂಬಕ್ಕೆ ಆತು ನಿಂತ. ಉಳಿದ ಹುಡುಗರು ಮೆಲ್ಲನೆ ಮುಂದೆ ಸರಿದರು. ಮೇಣೆಯಿಂದ ಆಕೆ ಕೆಳಗಿಳಿದಳು. ಹುಡುಗರ ಗುಂಪನ್ನು ನೋಡುವಲ್ಲಿ ' ವಸಂತ-ನಿಧಿ 'ಯೂ ಅವರೊಳಗಿದ್ದುದನ್ನು ನೋಡಿ ಅವಳು ಬೆರಗಾದಳು. ಆತನ ಮೈತುಂಬ ಹರಕು ಬಟ್ಟೆ. ಕೂದಲು ಚದರಿವೆ. ಮೂರು ವರ್ಷದಲ್ಲಿ ಸ್ವಲ್ಪ ಮಾತ್ರ ಬೆಳೆದಿದ್ದಾನೆ. ಕುತ್ತಿಗೆ ಬಿಗಿದು ಬಂತು. ನಡುಗುವ ದನಿಯಿಂದಲೇ ಕರೆದಳು.

" ವಸಂತ-ನಿಧೀ! "

ಉಳಿದ ಹುಡುಗರಿಗೆ ಆಶ್ಚರ್ಯವಾಯಿತು. ವಸಂತ-ನಿಧಿ ಗಾಬರಿ

ಯಿಂದ ಒಳಗೆ ತಂದೆಯ ಬಳಿಗೆ ಓಡಿದ.

ಒಳಗೆ ಕೋಣೆಯಲ್ಲಿ ಹೊಲಸು. ಅಲ್ಲಿಯೆ ಆತನ ಎದುರಿಗೆ ಆಕೆ ಕುಳಿತಳು. ಬಹಳ ಹೊತ್ತು ಇಬ್ಬರಲ್ಲಿಯೂ ಮಾತಿಲ್ಲ. ಕೊನೆಗೆ ಮೂರು ಸಂಜೆಯ ಮಬ್ಬು ಕವಿದು ಬರಲು ಆತ ರಾತ್ರಿ ಊಟಕ್ಕೆ ಏನಾದರೂ ಮಾಡಲು ಹೇಳಿದ.

ಅವಳು ಹೇಗೊ ಸಾವರಿಸಿಕೊಂಡು ಎದ್ದಳು. ಕೋಣೆಯ ಮೂಲೆಯಲ್ಲಿದ್ದ ಡಬ್ಬಿಯ ಹತ್ತಿರ ಹೋಗಿ " ಅಕ್ಕಿಯ ಡಬ್ಬಿ ಬರಿದಾಗಿದೆಯಲ್ಲ! " ಎಂದಳು.

ಆತ ವ್ಯಂಗ್ಯವಾಗಿ ನಕ್ಕ.

" ನೀನು ದೊಡ್ಡವರ ಮನೆಯಲ್ಲಿದ್ದು ಬಂದಿರುವಿಯಲ್ಲವೆ? ಅಕ್ಕಿಯೆ? ಅಲ್ಲಿ ಸಿಗರೇಟ ಪೆಟ್ಟಿಗೆಯಲ್ಲಿದೆ! "

ಅಂದು ರಾತ್ರಿ ಮಲಗುವ ಮೊದಲು ಆತ ಮಗುವಿಗೆ ಹೇಳಿದ:

" ವಸಂತ-ನಿಧಿ, ನೀನು ತಾಯಿಯ ಹತ್ತಿರ ಮಲಗಿಕೊ. "

ಒಲೆಯ ಹತ್ತಿರ ನಿಂತಿದ್ದ ಮಗು ಅಳಹತ್ತಿತು. ಆಕೆ ಅವನೆಡೆಗೆ ಹೋಗಿ " ವಸಂತ-ನಿಧಿ, ಚಿನ್ನಾ! " ಎಂದು ಮೈದಡವಹತ್ತಿದಳು. ಆದರೆ ಮಗು ಬೆದರಿದಂತೆ ಜಿಗಿದು ಓಡಿತು.

" ಈಗಾಗಲೆ ಮರೆತುಬಿಟ್ಟೆಯಾ? ಏಟು ತಿಂದೀ! "

ಹೊಲಸಾದ ಚಿಕ್ಕ ಹೊರಸಿನ ಮೇಲೆ ಅವಳು ಮಲಗಿದಳು. ಕಣ್ಣಿಗೆ ಕಣ್ಣು ಹತ್ತದು. ಮಗ್ಗುಲಲ್ಲಿ ವಸಂತ-ನಿಧಿ. ಆದರೆ ಎಲ್ಲ ಮರೆತಿದ್ದಾನೆ! ಅವಳಿಗೆ ಶರತ್-ನಿಧಿಯ ನೆನಪಾಯಿತು. ಮಗ್ಗುಲಲ್ಲಿ ಮೈ ಕೈ ತುಂಬಿದ ಅದೇ ಮಗು ಮಲಗಿರುವಂತೆ ಅನಿಸಿತು. ಎದೆ ತುಂಬಿ ಬಂತು. ಕೈಚಾಚಿ ಎತ್ತಿಕೊಳ್ಳಲು ಬಯಸಿದಳು. ಮಗುವು ಮಗ್ಗುಲಾಯಿತು. ಆಕೆ ಹತ್ತಿರಕ್ಕೆ ಎಳೆದುಕೊಂಡಳು. ಸಹಜವಾಗಿಯೆ ಮಗು ತನ್ನ ಪುಟ್ಟ ಕೈಗಳನ್ನು ಚಾಚಿ ಮೊಲೆ ಹಿಡಿದುಕೊಂಡು ಬಾಯಿ ಹಚ್ಚಿತು.

ಮೃತ್ಯುವಿನಂತೆ ಶೀತಲವಾದ, ಶಾಂತವಾದ, ದೀರ್ಘವಾದ ರಾತ್ರಿ ಮುಗಿಯದೊ ಎನ್ನುವಂತೆ ಸಾಗಿತ್ತು............

---

ಪರಿಚಯ

## ಮಾವೊ-ಟನ್

( ೧೯೦೨— )

' ಮಾವೊ-ಟನ್ ' ಎಂಬುದು ಕಾವ್ಯನಾಮ ಮಾತ್ರ. ನಿಜವಾದ ಹೆಸರು ಶೇನ್-ಯೆನ್-ಪಿಂಗ್. ಹಾಗೆಯೆ ' ಪೂ-ಲಾವೊ ' ' ಪಿಂಗ್-ಶಿಂಗ್ ' ಮೊದಲಾದ ಬೇರೆ ಅನೇಕ ಗೂಢನಾಮಗಳಿಂದಲೂ ಬರೆದಿದ್ದರೂ ' ಮಾವೊ-ಟನ್ ' ಎಂಬುದರಿಂದಲೇ ಆತ ಹೆಚ್ಚಾಗಿ ಪರಿಚಿತ.

ಶಾಂಘಾಯಿಯಲ್ಲಿ ಜಗತ್‌ಪ್ರಸಿದ್ಧವಾದ ಮತ್ತು ಅತಿ ದೊಡ್ಡದಾದ ಒಂದು ಖಾಸಗಿ ಪ್ರಕಟನೆ ಸಂಸ್ಥೆ (Non Government ) ಯ ಅಚ್ಚುಮನೆಯಲ್ಲಿ ಕರಡು ತಿದ್ದುವ ( Proof-reading ) ಕೆಲಸದಿಂದ ಆತನ ಸಾಹಿತ್ಯಸೇವೆಗೆ ಆರಂಭವಾಯಿತು. ಮುಂದೆ ಸಣ್ಣ ಕತೆಗಳ ಮಾಸಪತ್ರಿಕೆಯೊಂದರ ಸಂಪಾದಕನಾದಾಗಲೆ ಆತನ ಪ್ರಸಿದ್ಧಿ. ಈ ಮಾಸಪತ್ರಿಕೆ ಪಾಶ್ಚಾತ್ಯ ಸಾಹಿತ್ಯದಲ್ಲಿಯ ಅತ್ಯುತ್ತಮವಾದ ಸಣ್ಣ ಕತೆಗಳನ್ನು ಚೀನೀ ಭಾಷೆಯಲ್ಲಿ ಪ್ರಸಿದ್ಧಿಸಿದ್ದಲ್ಲದೆ, ಚೀನದ ಅನೇಕ ಸಮಕಾಲೀನ ಶ್ರೇಷ್ಠ ಸಾಹಿತಿಗಳ ಕೃತಿಗಳನ್ನು ಪ್ರಕಟಿಸಲು ಮೊದಲುಮಾಡಿತು.

ಮುಂದೆ ಚೀನದ ರಾಷ್ಟ್ರೀಯ ಕ್ರಾಂತಿಯ ಚಳವಳಿಯನ್ನು ಕೂಡಿಕೊಂಡು ಕೊ-ಮಿಂಗ್-ಟಂಗದ ವಾಮಪಕ್ಷ ( Left-wing )ಕ್ಕೆ ಸೇರಿ ಅದರ ರಾಜಕೀಯ ವಿಭಾಗದಲ್ಲಿ ' ಮಾವೊ 'ನು ಕೆಲಸ ಮಾಡಹತ್ತಿದ. ೧೯೨೭ರಲ್ಲಿ ' ಹಾಂಕೊ ' ನಗರವು ಕೈಸೇರಲು ಅವನು ಆ ನಗರದ (ಮಿನ್-ಕು ಡೇಲಿ ಪೋಸ್ಟ ) ಎಂಬ ದಿನಪತ್ರಿಕೆಯ ಮುಖ್ಯ ಸಂಪಾದಕನಾದ. ಆಮೇಲೆ ಕೊ-ಮಿಂಗ್-ಟಂಗದ ಬಲಪಕ್ಷ (Right wing) ದ **ನಾಯಕ ಚೆಂಗ್**

ಕೈಶೇಕರ ಪ್ರತಿಕ್ರಾಂತಿಯು ಯಶಸ್ವಿಯಾಗಲು 'ಮಾವೊ' ಸಂಪಾದಕತ್ವವನ್ನು ಬಿಟ್ಟುಕೊಡಬೇಕಾಯಿತು. ಆಗ ಆತ ಶಾಂಘಾಯಿಗೆ ಬಂದು ಮತ್ತೆ ತನ್ನ ಸಾಹಿತ್ಯರಚನೆಯನ್ನು ಆರಂಭಮಾಡಿದ. ಮತ್ತು ಅಂದಿನಿಂದ ರಾಜಕೀಯ ರಂಗದಲ್ಲಿ ಯಾವ ರೀತಿಯಿಂದಲೂ ಭಾಗ ವಹಿಸಿಲ್ಲ. ಆದರೆ ಅವನ ಪ್ರಬಂಧಗಳೂ, ವಿಮರ್ಶೆಗಳೂ ಪೂರ್ಣ ಕ್ರಾಂತಿಪರವಾಗಿಯೆ ಇವೆ. ಅವನು ಏಕಾಂತ ವಾಸದ ಶಿಕ್ಷೆಗೆ ಗುರಿಯಾಗಿರುವನಲ್ಲದೆ ಅವನ ಒಂಬತ್ತೂ ಗ್ರಂಥಗಳು ಕೊ-ಮಿಂಗ್-ಟಂಗ್ ಪಕ್ಷದಿಂದ ಬಹಿಷ್ಕೃತವಾಗಿವೆ.

ಚೀನದ ಇಂದಿನ ಕಾದಂಬರಿಕಾರರಲ್ಲಿ 'ಮಾವೊ-ಟನ್'ನೇ ಹೆಚ್ಚು ಪ್ರಸಿದ್ಧನಾಗಿದ್ದಾನೆ. ಆತನ, ಇಂಗ್ಲಿಷು ಮತ್ತು ಫ್ರೆಂಚ್ ಭಾಷೆಗಳಿಗೆ ಪರಿವರ್ತಿತವಾದ "ಅವನ ಮಧ್ಯರಾತ್ರಿ" ಎಂಬ ಕಾದಂಬರಿಯೂ, "ವಸಂತದ ರೇಶಿಮೆ ಹುಳಗಳು" ಎಂಬ ಸಣ್ಣಕತೆಯೂ, ಒಂದೇ ವಿಚಾರವನ್ನೇ ವಿಸ್ತರಿಸಿರುವ ಅನ್ವೇಷಣೆ, ಅಶಾಂತಿ, ಮತ್ತು ಭ್ರಮನಿರಸನ, ಎಂಬ ಮೂರು ನಾಟಕಗಳೂ, ಇಂದಿನ ಚೀನ ಸಾಹಿತ್ಯದಲ್ಲಿಯ 'ನೈಜವಾದ' ಅಥವಾ "ಕ್ರಾಂತಿಕರ ವಾಸ್ತವವಾದ"ದ ಅಂತಃಸ್ಫೂರ್ತಿಯ ಪ್ರತೀಕಗಳಾಗಿವೆ.

ಅವನ ಸಣ್ಣಕತೆಗಳ ಅನೇಕ ಸಂಗ್ರಹಗಳಲ್ಲಿ "ಕಾಡು-ಗುಲಾಬಿಗಳು" ಎಂಬ ಸಂಗ್ರಹವು ಉತ್ತಮ ಕೃತಿಗಳ ನಿದರ್ಶನವಾಗಿದೆ. ಇದು ಅದೆಷ್ಟೋ ಆವೃತ್ತಿಗಳನ್ನು ಕಂಡಿದ್ದು, ಲೂ-ಶೂನನ "ನೊ-ಹಾನ್" ಎಂಬ ಕೃತಿಯಷ್ಟೆ ಜನಪ್ರಿಯವಾಗಿದೆ. ಇದಲ್ಲದೆ 'ಮಾ-ವೊ'ನು ಸಾಮಾಜಿಕ, ರಾಜಕೀಯ ಮತ್ತು ಸಾಹಿತ್ಯಿಕ ವಿಚಾರಗಳಲ್ಲಿಯೂ, ಸ್ನೇಹಮಯ ಸ್ವಭಾವದಲ್ಲಿಯೂ ಅದು ಹೇಗೊ ಲೂ-ಶೂನನಂತೆಯೆ ಇದ್ದಾನೆ. 'ಸಮಾಜ ಜೀವನದಲ್ಲಿಯ ಸತ್ಯವನ್ನು ಬಿಟ್ಟು ಕತೆಯು ನಿಲ್ಲಲಾರದು' ಎಂಬ ಲೂಶೂನುತನವ-ವನ್ನು ಎತ್ತಿಹಿಡಿಯುತ್ತಿದ್ದಾನೆ.

# ಆತ್ಮಹತ್ಯೆ    

ಒಂದು ಸಂಜೆ.

ಆನ್-ಶಿಯಾವೊ-ಚೀ ಶೂನ್ಯಮನಸ್ಕಳಾಗಿ ಕಿಡಿಕಿಯ ಹತ್ತರ ನಿಂತು ಮುಂಜುಗತ್ತಲೆಯಲ್ಲಿ ಸರೋವರವನ್ನು ನಿರೀಕ್ಷಿಸುತ್ತಿದ್ದಳು. ದಂಡೆಯ ಕಡೆಯಿಂದ ವಿವಿಧ ಮೆಲ್ದನಿಗಳು ಕೇಳಿಬರುತ್ತಿದ್ದವು. ಎದುರಿನಲ್ಲಿ ವಿಚಾರ ಮಗ್ನ ರಾಕ್ಷಸನಂತೆ ಪರ್ವತಶಿಖರವು ತೋರುತ್ತಿತ್ತು. ತೀರದ ಗುಂಟ ಸಾಲಾಗಿ ಮಿನುಗುತ್ತಿದ್ದ ಸಣ್ಣಸಣ್ಣ ದೀಪಗಳು ಅಲ್ಲಿಯ ಮಂದಿರಗಳನ್ನು ಬೆಳಗುತ್ತಿದ್ದವು. ಅವುಗಳಲ್ಲಿ ಸುಂದರ ಸ್ತ್ರೀ ಪುರುಷರು ವಾಸಿಸುತ್ತಿದ್ದು ಪ್ರಕೃತಿಯ ಚೆಲುವನ್ನು ತುಂಬಾ ಮೆಚ್ಚುವವರಾಗಿದ್ದರು.

ಹು-ಆನ್-ಶಿಯಾವೊ-ಚೀಗೆ ಈಗ ಇದಾವುದೂ ಬೇಕಾಗಿರಲಿಲ್ಲ. ಅವಳ ಮನಸ್ಸು ಚೂರುಚೂರಾಗಿತ್ತು. ಅವಳಿಗೆ ನೆಮ್ಮದಿಯಾಗಲಿ ಉತ್ಸಾಹ ವಾಗಲಿ ಇರಲಿಲ್ಲ. ಪ್ರಕೃತಿಯ ಚೆಲುವು ಅವಳನ್ನು ಕೆಣಕುವಂತಿತ್ತು. ತನ್ನ ಚಿಕ್ಕ ಕೋಣೆಯಲ್ಲಿ ಬಾಗಿಲ ಹಾಕಿಕೊಂಡು ಒಬ್ಬಳೆ ಕುಳಿತು ತನ್ನ ಗಾಯ ಗೊಂಡ ಹೃದಯಕ್ಕೆ ಉಪಚಾರವನ್ನು ಮಾಡಿಕೊಳ್ಳಬೇಕೆನ್ನುವಳು.

ಜನರನ್ನು ಕಾಣುವದೆ ಅವಳಿಗೆ ಬೇಡವಾಗಿತ್ತು. ತನಗೆ ಏಕಾಂತವೇ ಯೋಗ್ಯವೆಂದು ಅವಳು ತಿಳಿದಿದ್ದಳು. ಎಲ್ಲಿಯಾದರೂ ನಾಲ್ಕು ಜನ ನಿಂತು ಮಾತಾಡುತ್ತಿರಲಿ, ಅಥವಾ ನಗುತ್ತಿರಲಿ, ಅವರು ತನ್ನನ್ನು ಕುರಿತೇ ಚೇಷ್ಟೆ ಮಾಡುತ್ತಿರಬೇಕೆಂದು ಅವಳಿಗೆ ಅನಿಸುವದು. ಅವರ ಮುಖಗಳ ಮೇಲೆ "ನಮಗೆಲ್ಲಾ ಗೊತ್ತು" ಎಂದು ಸ್ಪಷ್ಟವಾಗಿ ಕಾಣುತ್ತಿರುವಂತೆ ಭಾಸವಾಗು ವದು. ತನ್ನ ಆಪ್ತ ಸ್ನೇಹಿತರು ಕೂಡ ತನ್ನೊಡನೆ ವಿಚಿತ್ರವಾಗಿ ವರ್ತಿ ಸುತ್ತಿರುವಂತೆಯೂ ಅವರ ಮೆಲ್ನಗೆಯಲ್ಲಿ ತನ್ನ ವಿಷಯವಾಗಿ ವ್ಯಂಗ್ಯವು

ಒಡೆದು ಕಾಣುವಂತೆಯೂ ಅವಳಿಗೆ ತೋರುವದು. ಮತ್ತು ಅವರು ತನ್ನ ಮೇಲೆ ದೋಷವನ್ನು ಹೊರಿಸುತ್ತಿರುವರೆಂದು ತಿಳಿಯುವಳು.

ಅವರು ಏನಾದರೂ ಪ್ರಣಯ ವಿಷಯದ ಮಾತೆತ್ತಿದರೆ ಅಥವಾ ಯಾವನೊ ಒಬ್ಬ ಅಪರಿಚಿತನ ಪ್ರೇಮ ಸಂಬಂಧವನ್ನು ಟೀಕಿಸಿದರೆ ತನ್ನನ್ನು ಅಣಕಿಸಲು ಅದೊಂದು ರೀತಿ ಎಂದು ಅವಳು ಯೋಚಿಸುವಳು. "ಪಕ್ಷದ ಹುಳಕ್ಕಾಗಿ 'ಪಾಲ್ಕರ'ವನ್ನು ಜರೆದಂತೆ" ಎಂದು ಅವಳ ಭಾವನೆ. ಯಾವಾಗಲೂ ತನ್ನ ಹೊದರಿನಲ್ಲಿ ಅಡಗಿಕೊಂಡಿರುವ ಚಿಕ್ಕ ಮೊಲದಂತೆ ಅವಳ ಸ್ಥಿತಿಯಾಗಿತ್ತು. ಮನಸ್ಸಿನ ಬೇಸರ ಕಳೆದುಕೊಳ್ಳಲು ಓದಬೇಕೆಂದು ಯಾವದಾದರೂ ಕತೆಯನ್ನೆತ್ತಿಕೊಂಡರೆ ಅಲ್ಲಿಯೂ ಪ್ರತಿಯೊಬ್ಬ ಲೇಖಕ ತನ್ನ ಗುಟ್ಟನ್ನು ಹೊರಗೆಳೆಯುತ್ತಿರುವಂತೆಯೂ ಪ್ರತಿಯೊಂದು ಕತೆಯಲ್ಲಿಯೂ ಮುಖ್ಯವಾದ ಕರುಣಾವೇಧಕ ಪಾತ್ರವು ತಾನೆಯಾಗಿರುವಂತೆಯೂ ಭಾಸವಾಗುವದು. ಇವೆಲ್ಲ ಹೇಗಿದ್ದರೂ ಒಂದು ವಿಷಯದಲ್ಲಿ ಅವಳಿಗೆ ಸಮಾಧಾನವಿತ್ತು. ಅದೆಂದರೆ ತನಗೆ ಆಶ್ರಯ ಕೊಟ್ಟಿರುವ ದೊಡ್ಡಮ್ಮನಿಗಾಗಲಿ, ಅವಳ ಮಗನಿಗಾಗಲಿ ಅಥವಾ ಅವನ ಹೆಂಡತಿಗಾಗಲಿ ತನ್ನ ಆ ಸಾಹಸದ ವಿಷಯ ಗೊತ್ತಿರಲಿಲ್ಲ. ಗೊತ್ತಿದ್ದರೆ...........

ದುಮ್ಮಾನದಿಂದ ಮುಖ ತಿರುಗಿಸಿದಳು. ಕಣ್ಣೀರು ನೋಟವನ್ನು ಮಂಜುಗೊಳಿಸಿತು. 'ಜಗತ್ತು ನಿಜವಾಗಿ ಸುಂದರವಿದೆ. ತನ್ನ ಪಾಲಿಗೆ ಮಾತ್ರ ದುರ್ದೈವ ಬೆನ್ನುಹತ್ತಿದೆ. ಇನ್ನು ಮಾನವ ಸಹಜವಾದ ಯಾವ ಸುಖವೂ ತನಗೆ ಸಿಕ್ಕದು.' ಎಂಬ ವಿಚಾರತರಂಗವು ಅವಳ ಮನಸ್ಸನ್ನು ಪ್ರಕ್ಷುಬ್ಧಗೊಳಿಸುವದು. ಬದುಕಿನ ಬೆಲೆ ಅವಳಿಗೆ ಮತ್ತಷ್ಟು ಹೊಳೆಯುವದು. ಈ ಅನಂತವಾದ ದುಃಖಕ್ಕೆ ಕಾರಣವು ಅಂದಿನ ಮನಸ್ಸಿನ ನಿರ್ಣಯವೆ ಎಂದು ಅವಳಿಗೆ ಗೊತ್ತು. ಆದರೆ ಅದರೊಡನೆ ಬಂದ ಆ ಕ್ಷಣಿಕ ಸುಖವೆಷ್ಟು ಸ್ಥಿರವಾಗಿ ಸ್ಮೃತಿಯಲ್ಲಿ ನಿಂತಿತ್ತೊ ಅಷ್ಟೆ ಆ ನಿರ್ಣಯವೂ ಅಳಿಸಲು ಬಾರದಂತಿತ್ತು. ಅದೇನೆ ಇದ್ದರೂ ಲೋಕದ ಈ ವಿಡಂಬನೆ ಮಾತ್ರ ಅವಳಿಗೆ ಮುಗಿಯುವಂತೆ ತೋರಲಿಲ್ಲ. ಪ್ರತಿಯೊಂದು ಕಣ್ಣೂ, ಮುಖವೂ ಮಾತೂ ತನ್ನನ್ನು ಅಣಕಿಸುವಂತೆ ಅವಳಿಗೆ ಮತ್ತೆ ಮತ್ತೆ ಅನಿಸುವದು.

ದಿಙ್ಮೂಢಳಾಗಿ ಅವಳು ಹಾಸಿಗೆಯಲ್ಲಿ ಬಿದ್ದುಕೊಂಡಳು. ತಲೆಗಿಂಬನ್ನು ತೋಳುಗಳಿಂದ ಗಟ್ಟಿಯಾಗಿ ಅಪ್ಪಿಕೊಂಡು ಬಿಕ್ಕಿಬಿಕ್ಕಿ ಅತ್ತಳು. ಎದೆ ಜೋರಾಗಿ ಹೊಡೆದುಕೊಳ್ಳುತ್ತ " ಆತ್ಮಹತ್ಯೆ....ಆತ್ಮಹತ್ಯೆ " ಎಂದು ಹೇಳು ವಂತಿತ್ತು. ಆದರೆ ಆತ್ಮಹತ್ಯೆಯಷ್ಟೆ ಸಾಕಾಗದು. ಇಡಿಯ ಜಗತ್ತೆ ಹಾಳಾಗ ಬೇಕು. ತಾನೆ ಕೊಳ್ಳಿಯನ್ನಿಕ್ಕಬೇಕು. ಎಲ್ಲ ಮಾನವಕುಲದ ನೆನಪು ಕೂಡ ಉಳಿಯದಂತಾಗಬೇಕು. ಅಂದರೆ ಮಾತ್ರ ಶಾಂತಿ ದೊರೆತೀತು !

ಉದ್ವೇಗದಿಂದ ಒಮ್ಮೆಲೆ ಪುಟಿದೆದ್ದಳು. ಕೋಣೆಯನ್ನೆಲ್ಲ ಸುತ್ತಿ ನೋಡಿದಳು. ಕ್ರೋಧದಿಂದ ಅವಳ ಮುಖ ಆರಕ್ತವಾಗಿತ್ತು. ಭೀಕರ ಸೌಂದರ್ಯ ಅಲ್ಲಿ ಮಿನುಗುತ್ತಿತ್ತು. ಒಂದು ' ಡ್ರಾಅರ್ ' ತೆಗೆದು ಕೀಲಿಕೈಯ ಗೊಂಚಲವನ್ನು ತೆಗೆದುಕೊಂಡು ಮತ್ತೊಂದನ್ನು ತೆರೆದಳು. ಅದರಲ್ಲಿ ಕೆಲವು ಪತ್ರಗಳೂ, ಅನೇಕ ಚಿತ್ರಗಳೂ ಇದ್ದವು. ಮತ್ತೊಂದು ತೊಗಲಿನ ಪಾಕೀಟು ಇತ್ತು. ಅದನ್ನು ತೆಗೆದುಕೊಂಡು ಆವೇಶದಿಂದ ಮುಚ್ಚಳವನ್ನು ಕಿತ್ತಿದಳು. ನಡು ಬೆರಳುಗಳಿಂದ ಚಿತ್ರವೊಂದನ್ನು ಹೊರತೆಗೆದು ಹರಿದು ಚೂರುಚೂರು ಮಾಡಿ ಹಾಕಿದಳು. ಮತ್ತೆ ಕುರ್ಚಿಯಲ್ಲಿ ಬಿದ್ದುಕೊಂಡು ಬಿಕ್ಕಿಬಿಕ್ಕಿ ಅಳ ಹತ್ತಿದಳು. ಕೊನೆಗೆ ವಿಚಾರಭರದಿಂದ " ತಪ್ಪು ಅವನದಲ್ಲ....ನನ್ನದು...." ಎಂದಳು.

ಕೆಳಗೆ ಬಿದ್ದಿದ್ದ ಚೂರುಗಳನ್ನೆಲ್ಲ ಕೂಡಿಸಿದಳು. ತನ್ನ ತೊಡೆಯ ಮೇಲೆ ಅವುಗಳನ್ನು ಸರಿಯಾಗಿ ಜೋಡಿಸಿದಳು. ತಾಯಿ ತನ್ನ ಸಿಟ್ಟಿನಲ್ಲಿ ಹೊಡೆದ ಮಗುವನ್ನು ಸಮಾಧಾನಗೊಳಿಸುತ್ತಿರುವಂತೆ ಅವಳ ಸ್ಥಿತಿಯಾಗಿತ್ತು. ನಿಜವಾಗಿ ಅವಳು ಆತನನ್ನು ಪ್ರೀತಿಸುತ್ತಿದ್ದಳು. ಅವಳ ಪ್ರೀತಿ ನಿರಂತರ ವಾಗಿತ್ತು. ವಿಕಾರವಶಳಾಗಿ ಆ ಚಿತ್ರವನ್ನೂ, ಅವನ ಕಣ್ಣು-ತುಟಿಗಳನ್ನೂ ಮುದ್ದಿಟ್ಟಳು. ತಾನೇಕೆ ಅವನನ್ನು ದೂಷಿಸಲು ಬಯಸಿದೆನೊ ಎನಿಸಿತು. ತನ್ನ ಜೀವನದಲ್ಲಿ ಅವನಷ್ಟು ಬೆಲೆಯುಳ್ಳ ವಸ್ತುವು ಅವಳಿಗೆ ಬೇರಾವದೂ ಇರಲಿಲ್ಲ. ಫೈ-ಲೀ-ಪೀಕದಲ್ಲಿ ನಡೆದ ಅಂದಿನ ಘಟನೆಯೆ ಇಂದಿನ ದುಃಖಕ್ಕೆ ಕಾರಣವಾಗಿದ್ದರೇನಾಯಿತು ? ಮತ್ತೆ ಪ್ರಣಯದ ಆ ವಿಯೋಗ ಅವಳ ಮನ ಸ್ಸನ್ನಾವರಿಸಿತು. ಅಂದಿನ ಪ್ರಣಯದ ಸ್ಮೃತಿಯನ್ನೆ ಜೀವನದಲ್ಲಿ ಒಂದು

ಬೆಡಗಿನ ಒಡವೆಯಾಗಿ ತಾನೇಕೆ ಕಾಣಬಾರದು? ಪ್ರಣಯವಿಲಾಸದ ವಿಚಾರಲಹರಿ ಅವಳ ಹೃದಯವನ್ನು ವ್ಯಾಪಿಸಹತ್ತಿದಂತೆ ಅವಳ ಮುಖ ಕೆಂಪೇರಿತು. ದೇಹ ದುರ್ಬಲವಾಯಿತು. ಅವಳು ಮೆಲ್ಲನೆ ತನ್ನಷ್ಟಕ್ಕೆ ಹೇಳಹತ್ತಿದಳು:

"ನಾನು ಅವನನ್ನು ದೂಷಿಸಲಾರೆ. ನಾನೂ ಅವನನ್ನು ಕಾಮಿಸ ಲಿಲ್ಲವೆ? ಅವನ ಆ ರೂಪು, ಮತ್ತು ಆ ಸುಂದರ ಸ್ಥಳ ಇವುಗಳನ್ನು ನೆನೆದರೆ ಮತ್ತೆ ಯಾರಿದ್ದರೂ ಪ್ರೇಮವನ್ನಲ್ಲದೆ ಇನ್ನೇನನ್ನೂ ಯೋಚಿಸುತ್ತಿರಲಿಲ್ಲ. ಅಲ್ಲಿಯ ಕಲ್ಲುಗೋಡೆಯಲ್ಲಿ ಕುಳಿತ ಬುದ್ಧನೇ ಸಾಕ್ಷಿ; ಅಂದು ಔಚಿತ್ಯ ಭಂಗದ ಯಾವ ಕಾರ್ಯವನ್ನೂ ಮಾಡಲಿಲ್ಲ. ವಿಷಯತೃಪ್ತಿಯ ವಿಚಾರವೇ ಇರಲಿಲ್ಲ. ಅದೊಂದು ಸ್ವಪ್ನದಂತಿತ್ತು. ಅವನ ಮುತ್ತುಗಳು, ಲಲ್ಲೆಮಾತು ಗಳು, ಆ ಸ್ವಪ್ನವಿಲಾಸದ ಒಂದು ಭಾಗ ಮಾತ್ರ. ಆದರೆ ಮರುದಿನ ಅವ ನನ್ನು ಕಾಣಲು ಆ ಹಾಟೆಲಕ್ಕೆ ಹೋಗಬಾರದಾಗಿತ್ತು. ಆದರೆ ಅದು ಸಾಧ್ಯವಿರಲಿಲ್ಲ. ಅದೆಂತಹದೊ ಒಂದು ಶಕ್ತಿ ನನ್ನನ್ನು ಎಳೆದೊಯ್ಯಿತು. ಅದಕ್ಕೆ ದೇವರೆ ಸಾಕ್ಷಿ."

ಅಂದಿನ ಘಟನೆಗಳನ್ನು ಒಂದೊಂದಾಗಿ ನೆನಪು ಮಾಡಿಕೊಳ್ಳಹತ್ತಿ ದಳು. ತಾನು ಹೋದುದು ಹೇಗೆ ಎಂಬುದೆ ಮುಖ್ಯ ವಿಷಯ. ಅದು ನಡೆದುದು ಹೀಗೆ. ಆತ ಸುಕುಮಾರಾಂಗಗಳನ್ನೆಲ್ಲ ಮುತ್ತಿಟ್ಟು ತಟ್ಟಿ ಮುಟ್ಟಿದ್ದ. ಕೊನೆಯ ವಿಜಯಕ್ಕೆ ತಾನು ಪ್ರತಿಭಟಿಸುವದೆ! ಈ ವಿಚಾರದ ಬಲದಿಂದ ಅವಳು ಅವನಿಗೆ ದೇಹವನ್ನೊಪ್ಪಿಸಿದ್ದಳು. ಮತ್ತು ಅದೊಂದು ವಿಶಾಲಹೃದಯದ ಔದಾರ್ಯವೆಂಬ ಸಮಾಧಾನವನ್ನು ಕಂಡಿದ್ದಳು. ಮೂರ ನೆಯ ಸಲ ಅವನನ್ನು ಕಾಣಲು ಹಾಟೆಲ್ಲಿಗೆ ಹೋದಾಗ ಅವನು ಹೊರಟು ಹೋಗಿದ್ದ. ಅವಳಿಗಾಗಿ ಒಂದು ಪತ್ರವನ್ನೂ ತನ್ನ ಫೋಟೊವನ್ನೂ ಇಟ್ಟಿದ್ದ. ಅದೆ ಕೊನೆ, ಅದೆ ಮೊದಲು, ಅಷ್ಟೆ.

ಹು-ಆನ್-ಶಿಯಾವೊ-ಚೀ ದೀರ್ಘವಾಗಿ ನಿಟ್ಟುಸಿರು ಬಿಟ್ಟು ಚಿತ್ರವನ್ನು ತೊಗಲಿನ ಚೀಲದಲ್ಲಿ ಹಾಕಿದಳು. ಮತ್ತೆ ಕಿಡಿಕಿಗೆ ಹೋಗಿ ಆಕಾಶದ ಕಡೆಗೆ ಸುಮ್ಮನೆ ನೋಡುತ್ತ ನಿಂತಳು. ಮೋಡಗಳ ಸಾಲಿನ ಅಂಚಿನಿಂದ ಪೂರ್ಣ

ಚಂದ್ರ ಮೇಲೆ ಬರುತ್ತಿದ್ದ. ಸುತ್ತಲೆಲ್ಲ ಚಿಕ್ಕಿಗಳು ಕುಣಿಯುತ್ತಿರುವ ಮಕ್ಕಳಂತಿದ್ದವು. ಮತ್ತೆ ಮನಸ್ಸಿನಲ್ಲಿ ಅದೇ ವಿಚಾರ. ಅದೆಷ್ಟೋ ರೀತಿ ಸಮಾಧಾನ ಹೇಳಿಕೊಂಡರೂ ಮತ್ತೆ ಹೊಸದೊಂದು ಕಲ್ಪನೆ ರೂಪುಗೊಳ್ಳುವದು.

ಅದೇನು ತಾನು ಕೇವಲ ಗಂಡುರಾಮಿಯಂತೆ ವರ್ತಿಸಿದೆನೆ? ವಿವೇಕಹೀನಳೆ? ಆ ಗುಹೆಯನ್ನು ಸೇರಿದುದೇಕೆ? ಅವನೊಬ್ಬ ಧೂರ್ತವಿಟನೆ? ಹೆಣ್ಣುಗಳನ್ನು ಕೆಡಿಸುವದಷ್ಟೆ ಅವನ ಕೆಲಸವೆ? ಜೇಡದಂತೆ ಬಲೆಯನ್ನು ರಚಿಸಿ ಸಿಕ್ಕಿಬಿದ್ದ ಹೆಣ್ಣುಗಳನ್ನು ಹಿಡಿದು ಅವು ತನ್ನನ್ನೆ ನೆನೆಯುತ್ತಿರುವಂತೆ ಮಾಡಿಬಿಡುವ ನೀಚ ಪ್ರವೃತ್ತಿಯವನೆ? ಅವನು ಎಲ್ಲವನ್ನು ಅಷ್ಟು ಸರಿಯಾಗಿ ಹೆಣೆದಿದ್ದಾನೆ? ಅವನು ಬರೆದ ಪತ್ರದ ಅರ್ಥವೇನು? ಹೀಗೆಯೆ ಅದೆಷ್ಟು ತರುಣಿಯರನ್ನು ಕೆಡಿಸಿರುವನೊ ಯಾರಿಗೆ ಗೊತ್ತು? ಅವನ, ಬರೆದದ್ದೆಲ್ಲ ಸುಳ್ಳು ತಾನೆ? ಅವನ ಪೊಳ್ಳುತನವನ್ನು ತಿಳಿಯದಷ್ಟು ತಾನು ಮೂಢಳಾದುದು ಹೇಗೆ? ಅಥವಾ ಅವನ ಜಾಣ್ಮೆ, ಚೆಲುವು, ಮೆಲುಮಾತು ಅಷ್ಟು ಮೋಸಕ್ಕೆ ಕಾರಣವಾದವೆ? ಅವನೊಡನೆ ಅನುಭವಿಸಿದ ಆ ಸ್ವಪ್ನಮಯ ಜೀವನಕ್ಕಾಗಿ ಇನ್ನು ಮುಂದೆ ಬದುಕಿರುವವರೆಗೆ ಬಳಲಬೇಕೆ? ಅವನ ಭೋಗತೃಪ್ತಿಯಿಂದ ತಾನು ದೂಷಿತಳಾಗಿರಬಹುದೆ?

" ಛೆ, ಆಗದು. ಅದೆಷ್ಟು ತರುಣಿಯರು ನನಗಿಂತ ಸ್ವೇಚ್ಛಾಚಾರಿಗಳಾಗಿಲ್ಲ? ಆದರೆ ಅಂತಹದೇನೂ ಅವರಿಗೆ ಒದಗಿಲ್ಲ. ಇದಲ್ಲದೆ ಅವನು ಅಷ್ಟು ದುಷ್ಟನಲ್ಲ. ಹೋಗಲೇಬೇಕಾದ್ದರಿಂದ ಹೊರಟುಹೊದ. ಅವನಲ್ಲಿ ನನಗಿನ್ನೂ ನಂಬುಗೆಯಿದೆ. ಪರರ ಸುಖಕ್ಕಾಗಿ ತನ್ನ ಸ್ವಾರ್ಥವನ್ನು ನೋಡದ ಸ್ವಭಾವದವನಾದ್ದರಿಂದ ಹೋಗಬೇಕಾಯಿತು. ಅವನು ನಿಜವಾಗಿಯೂ ಉತ್ತಮ. ಅವನ ಕೆಲಸದ ಜವಾಬದಾರಿಯೂ ಕಡಿಮೆಯದಲ್ಲ. ಪ್ರೇಮ ಮತ್ತು ಮದುವೆಯ ವಿಚಾರದ ಮಾತನ್ನು ಅವನು ಉದ್ದೇಶಪೂರ್ವಕ ಹತ್ತಿಡುವನು....ಅವನ ಕಾರ್ಯಗೌರವದಿಂದ ನೋಡಿದರೆ ಅವನು ಹಾಗೆ ಮಾಡುವದರ ಹೊರತು ಬೇರೆ ಮಾರ್ಗವಿಲ್ಲ."

" ಆದರೆ ತಾನು ಭೋಗಪ್ರಿಯನೆಂದೂ, ವಿಕಾರವಶನೆಂದೂ ತರುಣಿಯರ ಬೆಡಗಿನ ಸೆಳತಕ್ಕೆ ಎದುರು ನಿಲ್ಲಲಾರದವನೆಂದೂ ತಾನೆ ಹೇಳಿದನಲ್ಲ!"

ಶಿಯಾವ್ರೊ-ಚೀ ಮತ್ತೆ ಹಿಂದಿನ ಘಟನೆಯನ್ನು ಒಂದೊಂದಾಗಿ ನೆನಪಿಗೆ ತಂದು ಹೊಂದಿಸಹತ್ತಿದಳು. ತಾನೆ ಅವನನ್ನು ಮೋಹಕ್ಕೆ ಎಳೆದುದಾಗಿಯೂ, ತನ್ನ ಆಲಿಂಗನವನ್ನು ಪ್ರೇರಿಸಿದುದಾಗಿಯೂ ನೆನಪು ತಂದುಕೊಂಡಳು. ಮತ್ತೆ ನಾಚಿಕೆ ಆವರಿಸಿತು. ಕೈಗಳಿಂದ ಮುಖ ಮುಚ್ಚಿಕೊಂಡಳು. ಅವನು ಹೋದುದು ತಿಳಿದ ಕೂಡಲೆ ತಾನೂ ಹಿಂದೆ ಹೋಗಬೇಕಾಗಿತ್ತು. ಅವನನ್ನು ಎಲ್ಲ ಪರಿಸ್ಥಿತಿಯಲ್ಲಿಯೂ ಎಲ್ಲಿ ಹೋದರೂ ಹಿಂಬಾಲಿಸಬೇಕಾಗಿತ್ತು ಎಂದು ಅವಳಿಗೆ ತೀವ್ರ ವಿಷಾದವೆನಿಸಹತ್ತಿತು. ಮತ್ತೆ ಆಶೆಯೊಂದು ಹೃದಯದಲ್ಲಿ ಮೂಡಿ ಮೈ ನವಿರುಗೊಳಿಸಿತು. ಅವನು ತಿರುಗಿ ಬಂದರೆ—? ತನ್ನ ಜೀವವನ್ನು ಉದಾತ್ತಕಾರ್ಯಕ್ಕಾಗಿ, ಲೋಕಸೇವೆಗಾಗಿ ಒಡ್ಡಿದ ವೀರ ತನ್ನ 'ನಲ್ಲ' ಎಂಬ ಭಾವನೆಯಲ್ಲಿ ಎಂತಹ ಗೌರವವಿದೆ! ತನಗೂ ಅದು ಬರಬಹುದೆ!

"ಆದರೆ ಅವನ ಪತ್ರವನ್ನು ನೋಡಿದರೆ ಕ್ರಾಂತಿ ಯಶಸ್ವಿಯಾದ ಹೊರತು ಅವನು ಹಿಂತಿರುಗುವದು ಸಾಧ್ಯವಿಲ್ಲ. ಜೀವವಿರುವ ವರೆಗೂ ತಾನು ಹೋರಾಡಲೇಬೇಕು. ಆದರೆ ಕಾರ್ಯಕ್ಕೆ ವಿಮುಖನಾಗುವದು ಶಕ್ಯವಿಲ್ಲವೆಂದು ಅವನೇ ಹೇಳಿದನಲ್ಲ? ಮತ್ತು ಅಲ್ಲಿಗೆ ನನ್ನನ್ನು ಕಟ್ಟಿಕೊಂಡು ಹೋಗಿ ಸುಮ್ಮನೆ ಬಲಿಗೊಡುವದಕ್ಕಿಂತ ಒಬ್ಬನೆ ಹೋಗುವದು ಲೇಸು ಎಂದೂ ಹೇಳಿ ಹೋದ."

ಇರುಳಿನ ಕತ್ತಲೆ ಅವಳ ಹೃದಯವನ್ನು ವ್ಯಾಪಿಸಿತು. ಅದರಿಂದ ಒಂದು ಬಗೆಯ ಸಮಾಧಾನವೂ ಅವಳಿಗೆ ತೋರಹತ್ತಿತು. ಶಾಂತವಾಗಿ ವಿಚಾರಿಸಹತ್ತಿದಳು. ಅವನು ನಿಜವಾಗಿಯೂ ಅಯೋಗ್ಯನಲ್ಲವೆಂದೂ, ತಮ್ಮ ಪ್ರಣಯ ಪವಿತ್ರವಾದುದೆಂದೂ ಅವಳಿಗೆ ಅನಿಸದಿರಲಿಲ್ಲ. ಅದರಿಂದ ಹೃದಯದ ಭಾರ ಇಳುಹಿದಂತಾಯಿತು. ಮೆಲ್ಲಗೆ ಮೊಗದಲ್ಲಿ ಸುಳಿದಿತು. ಇಷ್ಟು ಮೊದಲೇ ಏಕೆ ತಿಳಿಯಲಿಲ್ಲ, ಎಂದುಕೊಂಡಳು. ತಮ್ಮ ಪ್ರಣಯ ಪಾಪವೆಂದೇಕೆ ಬಗೆಯಬೇಕಾಗಿತ್ತು! ತಾನು ಜಗತ್ತಿನಿಂದ ಏನನ್ನು ಮುಚ್ಚಿಡಬೇಕಾಗಿಲ್ಲ. ತಾನು ಪುರುಷನೊಬ್ಬನನ್ನು ಪ್ರೀತಿಸಿದ್ದೂ ಮತ್ತು ಅದನ್ನು ಸಫಲವಾಗಿಸಿದ್ದೂ ನಿಜ. ಮತ್ತು ಆ ಪ್ರೇಮವನ್ನು ಆತ ಲೋಕಸೇವೆಗಾಗಿ

ರಾಷ್ಟ್ರಹಿತಕ್ಕಾಗಿ ಬಲಿಕೊಡಬೇಕಾಯಿತಲ್ಲದೆ ಬೇರೆಯಿಲ್ಲ. ಎಂತಹ ಉದಾತ್ತ ವಿಚಾರ!

ರಾತ್ರಿಯು ಕೋಮಲ ಬಾಹುಗಳನ್ನಾಶ್ರಯಿಸಿ ಅವಳು ನಿದ್ದೆಹೋದಳು. ಅದರಲ್ಲಿ ಒಂದು ಕನಸು. ತಾನು ತನ್ನ ಉದಾತ್ತಪ್ರಣಯದ ಕತೆಯನ್ನು ಹೇಳುತ್ತಿರುವಳು. ಅನೇಕ ಜನ ಆತುರರಾಗಿ ಆಸ್ಥೆಯಿಂದ ಕೇಳುತ್ತಿದ್ದಾರೆ. ಎಲ್ಲರೂ ಅವಳನ್ನು ಹೊಗಳುವವರೆ! ಆ ಕ್ರಾಂತಿಕಾರನಾದ ತನ್ನ ಪ್ರಿಯನ ಪ್ರೇಮದ ಸ್ವಾರ್ಥತ್ಯಾಗವನ್ನು ಎಲ್ಲರೂ ಮೆಚ್ಚುವವರೆ! ಮತ್ತೊಂದು ಕನಸು. ಅವನು ತಿರುಗಿ ಬಂದಿರುವ. ಅವನ ವಿಶಾಲವಕ್ಷದ ಮೇಲೆ ಅವನು ಸಂಪಾದಿಸಿದ ವಿಜಯದ ಕುರುಹುಗಳಾಗಿ ಕಡುಗೆಂಪಿನ ವಿವಿಧ ಪಾರಿತೋಷಕಗಳು ಒಪ್ಪುತ್ತಿವೆ........

ರಾತ್ರಿ ಸರಿಯಿತು. ಬೆಳಕು ಸತ್ಯಸೃಷ್ಟಿಯನ್ನು ಬಯಲಿಗಿಡುತ್ತ ಅವಳ ಕೋಣೆಯನ್ನು ತುಂಬಿತು. ಹೊರಗಿನ ಕಲಕಲದಿಂದ ಅವಳಿಗೆ ಎಚ್ಚರಾಯಿತು. ಆ ಎಚ್ಚರವು ಸ್ವಪ್ನವಿಹೀನ ಜಗತ್ತನ್ನು ಮತ್ತೆ ಅವಳ ಮುಂದೆ ತಂದಿತು. ರಾತ್ರಿ ತಂದುಕೊಂಡಿದ್ದ ಆತ್ಮಪ್ರತ್ಯಯ-ಸಮಾಧಾನ ಮಾಯವಾಯಿತು. ಕಂಡವರನ್ನು ಸಾಶಂಕವಾಗಿ ನೋಡುವ ಮನೋವೃತ್ತಿ ಮತ್ತೆ ಬಂದಿತು. ಮೊದಲಿನಂತೆ ಮತ್ತೆ ಕೋಣೆಯನ್ನೆ ಹಿಡಿದುಕೊಂಡು ಕುಳಿತು ಬಿಟ್ಟಳು.

ವೃತ್ತಪತ್ರಗಳನ್ನು ಓದಿ ಅವಳು ಮನಸ್ಸನ್ನು ಬೇರೆ ವಿಷಯಕ್ಕೆ ತಿರುಗಿಸಬಹುದಾಗಿತ್ತು. ಆದರೆ ಪ್ರತಿಯೊಂದು ಸುದ್ದಿಯ ದಪ್ಪಕ್ಷರದ ತಲೆಬರಹದ ಕೆಳಗೆ ಅರ್ಥಹೀನ ಮಾತುಗಳು, ದುರ್ಬಲ ಜನತೆಯ ಕತೆಗಳೂ ಹೆಚ್ಚಾಗಿರುವಂತೆ ಕಾಣುವವಲ್ಲದೆ ಪ್ರತಿಯೊಂದು ಚೌಕಾದ ಚೀನೀ ಅಕ್ಷರವು ತನ್ನನ್ನು ವಕ್ರವಾಗಿ ನೋಡುತ್ತ ತಿರಸ್ಕಾರ ಸೂಚಿಸುವಂತೆ ಅನಿಸುತ್ತಿತ್ತು. ಒಂದು ಹಳೆಯ ಕಾದಂಬರಿಯನ್ನೆತ್ತಿಕೊಂಡಳು. "ಒಬ್ಬ ವಿಕಾರವಶ ಮೂರ್ಖ ತರುಣಿ ಮತ್ತು ಪಾಷಾಣಹೃದಯದ ಪುರುಷ" ಎಂಬ ಮಾತುಗಳನ್ನು ಅಲ್ಲಿಯೂ ಕಾಣಬೇಕೆ! ಹೊಸ ಕಾದಂಬರಿಯನ್ನೊಂದು ತೆಗೆದುಕೊಂಡರೆ ಅದಕ್ಕೂ ಮತ್ತಷ್ಟು ಹುಚ್ಚುಚ್ಚಾರ.

ಪುಸ್ತಕವನ್ನು ಚಲ್ಲಿಕೊಟ್ಟು, ಯಾವ ಯೋಚನೆಯೂ ಬೇಡವೆಂದು ಮತ್ತೆ ಒರಗಿದಳು. ಶೂನ್ಯಮನಸ್ಸಿನಿಂದ ಆಕಾಶದಲ್ಲಿಯ ಮೋಡಗಳನ್ನೂ ಅವುಗಳ ವಿವಿಧ ಆಕಾರಗಳನ್ನೂ ನೋಡಹತ್ತಿದಳು. ಅವುಗಳಲ್ಲಿ ಒಂದು ತನ್ನ ದೊಡ್ಡಮ್ಮನ ಆಕಾರವನ್ನು ಹೋಲುವಂತಿತ್ತು. ಮತ್ತೊಂದು ಜಿಗಿಯುತ್ತಿರುವ ಕುದುರೆಯ ಹಾಗೆ ಕಾಣುತ್ತಿತ್ತು. ಮತ್ತೆ ರೈಲುಗಾಡಿಯ ಹಾಗೆ ಕಾಣುವದಲ್ಲ! ಕಿಡಿಕೆಗಳೂ ಉಂಟು. ಹೌದು ಅಂಕುಡೊಂಕಾಗಿ ಬರುತ್ತಿರುವ ಗಾಡಿ. ಕಿಡಿಕಿಯೊಂದರಲ್ಲಿ ಒಬ್ಬ ಗಂಡಸಿನ ಮುಖ. ಕಾಗದ ಮೇಲಿನ ನೀರ ಹನಿಯಂತೆ ಆ ಮುಖ ದೊಡ್ಡದಾಗುತ್ತ ಹುಆನ್-ಶಿಯಾವೊ-ಚೀಳ ಹತ್ತಿರಕ್ಕೆಯೆ ಬರಹತ್ತಿದೆ! ಅಹುದು ಅವನೆ! ಆದರೇನು ಮತ್ತೆ ಕ್ಷಣದಲ್ಲಿ ಎಲ್ಲ ಬಯಲು.

ಕಣ್ಣುಗಳು ಮೆಲ್ಲನೆ ಮುಚ್ಚಿದವು. ಮತ್ತೆ ವಿಚಾರಕ್ಕೆ ಆರಂಭ. ನಿಜವಾಗಿಯೂ ಅವನು ಗಾಡಿಯಲ್ಲಿರಬಹುದು. ಇಂದು ಎಷ್ಟು ಹೊತ್ತಾದರೂ ಇಲ್ಲಿಗೆ ಬಂದೇ ತೀರಬಹುದು. ತಾನು ಹೊರಗೆ ಹೋದರೆ ಅಕಸ್ಮಾತ್ ಅವನನ್ನು ಕಾಣಲೂಬಹುದು. ಅಥವಾ ಇದೀಗ ಅವನು ಮೊದಲು ಭೆಟ್ಟಿಯಾಗುತ್ತಿದ್ದ ಕೂಟು-ಸ್ಥಳದಲ್ಲಿ ಬಂದು ನಿಂತಿರಬಾರದೇಕೆ! ಅಥವಾ—ಅವಳು ಒಮ್ಮೆಲೆ ಹೊರಬಿದ್ದಳು. ಅವಳು ಹೋದುದನ್ನು ಯಾರೂ ನೋಡಲಿಲ್ಲ. ಲಗುಬಗೆಯಿಂದ ಸಮುದ್ರತೀರವನ್ನು ಸೇರಿ ಅಲ್ಲಿಯ ಉಪವನವನ್ನು ಪ್ರವೇಶಿಸಿದಳು. ಸುತ್ತಲೆಲ್ಲ ಹೂಗಿಡಗಳು. ಮಧ್ಯದಲ್ಲಿ ಒಂದು ಚಿಕ್ಕ ಹೊಂಡ. ಎದುರಿಗೆ ಒಂದು ಕಲ್ಲಿನ ಪಾವಟಿಗೆಯ ಸಾಲು. ಒಂದು ಪಾವಟಿಗೆಯ ಮೇಲೆ ಆತ ಕುಳಿತಿದ್ದಾನೆ. ಆಕೆ ತೋಳುಗಳನ್ನು ಚಾಚಿದಳು. ಅವನ ಭುಜಗಳನ್ನು ಹಿಡಿದುಕೊಂಡು ಉದ್ವೇಗದಿಂದ ಹೇಳಿದಳು:

"ಅಂತೂ ಒಮ್ಮೆ ತಿರುಗಿ ಬಂದೆ!"

"ಅಹುದು."

"ಹಾಗಾದರೆ ಇನ್ನು ಕೂಡಲೆ ನಾವು ಮದುವೆ ಮಾಡಿಕೊಂಡು ಬಿಡುವಾ. ನನ್ನ ಸ್ನೇಹಿತರಿಗೆಲ್ಲ ನಾನು ಹೇಳಿಬಿಡುವೆ. ನೀನು ಮೋಸಗಾರನಲ್ಲ, ಕಪಟವಿಟನಲ್ಲ ಎಂದು ಎಲ್ಲರಿಗೂ ತಿಳಿಯಲಿ—"

" ಮೋಸವೇ !....ಇಲ್ಲ; ಆದರೂ ಇನ್ನೂ ನಿನ್ನ ಪತಿಯಾಗಿಲ್ಲ."

" ಆದರೆ ನಾನು...."

" ನಾವು ಪ್ರೀತಿಸಿದೆವು; ನಿಜ. ಆದರೆ ನೀನು ಅದನ್ನೆಲ್ಲ ಮರೆಯಬೇಕು. ನಾನು ನಿನ್ನ ಪತಿಯಾಗುವದು ಸಾಧ್ಯವಿಲ್ಲ. ನಿನಗಿನ್ನೂ ವಯಸ್ಸಿದೆ, ರೂಪವಿದೆ, ಯಾವ ತರುಣನೂ ನಿನ್ನ ಕೈಹಿಡಿದು ಸುಖಿಯಾಗಬಹುದು. ಅದು ನನ್ನಿಂದ ನಿನಗೆ ಸಿಕ್ಕಬಹುದಾದ ಸುಖಕ್ಕಿಂತ ಸಾವಿರಪಾಲು ಹೆಚ್ಚೂ ಆಗಬಹದು. "

ಅವಳಿಗೆ ಮಾತು ಬರದು. ಸುಮ್ಮನೆ ಅವನ ತಲೆಯನ್ನು ತೋಳುಗಳಿಂದಪ್ಪಿ ಅಳುವದಕ್ಕಾರಂಭಿಸಿದಳು.

" ನಿನಗೆ ಶಾಂತವಾದ ಆನಂದಮಯ ಜೀವನ ಸಿಕ್ಕಬೇಕು. ನಾವು ಪ್ರೇಮಿಗಳಾದುದು ಸರಿ. ಆದರೆ ನಿನ್ನ ನಿಜವಾದ ಸೌಖ್ಯ ಮತ್ತೊಂದೆಡೆಯಿಂದ ಬರಬೇಕು. ನಾನು ಕೊಲ್ಲಲ್ಪಟ್ಟೆನೆಂದು ತಿಳಿ........"

" ಊಹುಂ. ಈಗಂತೂ ಇಲ್ಲವಷ್ಟೆ ? "

" ಹಾಗಿದ್ದರೆ ಇದೊ, ಈಗಲೆ ಮುಗಿಸುವೆ. "

ಪಕ್ಕನೆ ತಿರುಗಿ ಅವನು ಸರೋವರದಲ್ಲಿ ಹಾರಿಕೊಂಡ. ಚಕಿತಳಾಗಿ ತಿಯಾವೊ-ಚೀಯುಳೂ ಅವನ ಬೆನ್ನುಹಿಂದೆಯೆ ಜಿಗಿದಳು. ಕೊನೆಗೆ ಅವನನ್ನು ಗಟ್ಟಿಯಾಗಿ ತಬ್ಬಿ ಹಿಡಿದುಕೊಂಡಳು. ಒಮ್ಮೆಲೆ ಎಚ್ಚರ. ತಲೆಗಿಂಬನ್ನು ಗಟ್ಟಿಯಾಗಿ ತೋಳ್ಗಳಿಂದ ಅಪ್ಪಿಕೊಂಡಿದ್ದಾಳೆ. ಬೆವರಿನಿಂದ ರೇಶ್ಮೆಯ ನಿಲುವಂಗಿಯೆಲ್ಲ ತೊಯ್ದುಹೋಗಿತ್ತು. ತಂಗಾಳಿ ನಡುಕನ್ನು ತಂದಿತು. ಬೆಚ್ಚಿದವಳಾಗಿ ಯಾರಾದರೂ ಕೇಳಿದರೊ ಎಂದು ಸುತ್ತಲೆಲ್ಲ ನೋಡಿದಳು. ಯಾರೂ ಇರಲಿಲ್ಲ. ಆದರೂ " ನನಗೆಲ್ಲಾ ಗೊತ್ತು " ಎಂದು ಯಾರೋ ಅನ್ನುವಂತೆ ಕೇಳಿಸುತ್ತಿತ್ತು. ನಿರಾಶೆಯಿಂದ ಕುಸಿದಳು. ಇದು ತನ್ನ ನಾದಿನಿಯ ದನಿ ಇರಲಾರದು ಎಂದು ಎಣಿಸಿದಳು. ಆ ಚುರುಕು ನಾಲಿಗೆಯ ಚಿನ್ ಹುಡಿಗೆಯರೂ ಅಲ್ಲ ಎಂದು ತರ್ಕಿಸಿದಳು. ಮತ್ತೆ ಅದೇ ದನಿ. ಕೊನೆಗೆ ಗೊತ್ತಾಯಿತು. ದೇವರೆ ! ಇದು ಚೀರ ಹುಳದ ಚಿರ್ ಪಿರ್ ಸಪ್ಪಳವೆ ! "

ಮತ್ತೆ ಆ ಕನಸನ್ನು ನೆನೆಯುತ್ತ ಕಿಡಿಕಿಯ ಹತ್ತಿರ ಕುಳಿತಳು. ಅದೊಂದು ಅಪಶಕುನವೆಂದು ಅವಳಿಗೆ ಗಾಬರಿ. ಅವನು ಪತ್ರದಲ್ಲಿ ಬರೆದದ್ದನ್ನು ತಾನು ಕನಸಿನಲ್ಲಿ ಹೇಳಿದೆನಲ್ಲದೆ ಬೇರೆಯಲ್ಲನೆಂದು ಸಮಾಧಾನ ತಂದುಕೊಂಡಳು. ಅದರಲ್ಲಿ ಗೂಢವೇನೂ ಇರಲಿಲ್ಲ. ಇದಲ್ಲವೆ ಅವನ ವಾದವೂ ವಿವೇಕಯುತವಾಗಿಲ್ಲವೆಂದೇ ಅವಳು ಭಾವಿಸಿದಳು.

" ಅದು ಅಷ್ಟು ಸುಲಭವೆ? ನಾನಂತೂ ಮೊದಲಿನಂತಿರುವದಿಲ್ಲ. ನನ್ನಲ್ಲಿ ಅದೆಷ್ಟೋ ಬದಲು ತೋರುತ್ತಿದೆ. ಒಡೆದ ಹರಳಿನಂತಾಗಿದೆ ನನ್ನ ಸ್ಥಿತಿ. ಆದದ್ದೆಲ್ಲ ಸುಳ್ಳೆಂದು ಹೇಳುವದು ಸಾಧ್ಯವೆ? ಅದೆಲ್ಲ ಮರೆಯಬಹುದೆ? ನೋಡುವಾ........ನಾನು ಇನ್ನು ಮೊದಲಿನಂತೆಯೆ ಇದ್ದೇನೆ. ಮತ್ತು ಹೀಗೆಯೆ ಇರುವೆ. ಯಾವ ಕಲಂಕವೂ ನನಗುಂಟಾಗಿಲ್ಲ. ನನ್ನ ಪ್ರೇಮವನ್ನು ಪಡೆಯಬಲ್ಲಾತನಿಗೆ ಇನ್ನೂ ನಾನು ನನ್ನ ಕೌಮಾರ್ಯ ಶರೀರವನ್ನು ಒಪ್ಪಿಸಬಹುದು. ಎಲ್ಲ ಸುಖ ಶಾಂತಿ ಕೊಡಬಹುದು!

ಆದರೆ, ನಿಜವಾದ ವಿಚಾರ? ಛೇ, ಏಕಾಗಬಾರದು? ನಾನು ಮರೆಯುದಿದ್ದರೂ ಮತ್ತೆ ಯಾರೂ ತಿಳಿದಿರಲಾರರಷ್ಟೆ? ಅವನಂತೂ ಎಲ್ಲ ಮಾತನ್ನು ಕೊನೆಯವರೆಗೂ ಗುಟ್ಟಾಗಿಡಲು ಮಾತು ಕೊಟ್ಟಿದ್ದಾನೆ. ಹಾಗಿದ್ದರೆ ನಾನೇಕೆ ಅದನ್ನು ನನ್ನ ಹೃದಯದಲ್ಲಿ ಹಿಡಿದಿಡಬಾರದು? ಯಾರಿಗೂ, ಒಂದು ಪಿಳ್ಳೆಗೂ ಅದು ತಿಳಿಯುವದು ಬೇಡ."

ಅವಳ ಕಣ್ಣುಗಳಲ್ಲಿ ಮತ್ತೆ ಕಾಂತಿ ಮೂಡಿತು. ಮುನ್ನೋಟ ಆಶೆಯ ಮಂದಿರದ ಅಂತಸ್ತುಗಳನ್ನು ಕಟ್ಟಹತ್ತಿತು. ಈ ಕಟು ಅನುಭವ ಮರೆತುಬಿಡಬಹುದೆಂದು ತೋರಿತು. ಮತ್ತೆ ಜೀವನದ ಸುಖವನ್ನಪ್ಪಬಹುದೆಂದು ನಂಬಿಕೆಯುಂಟಾಯಿತು. ಆದರೂ ವಿಷಾದದ ಸೊಂಕು ಪೂರಾ ಅಳಿಸಲಿಲ್ಲ. ಮತ್ತೆ ಯಾರೂ ತಿಳಿದಿಲ್ಲವೆಂದು ನಂಬುವದು ಹೇಗೆ? ಎಂಬುದು ತಿರುತಿರುಗಿ ಅವಳ ಮನಸ್ಸನ್ನು ಕೆಣಕುವದು. " ಯಾರೂ ತಿಳಿದಿಲ್ಲವೆಂಬುದಕ್ಕೆ ಪ್ರಮಾಣವೇನು " ಎಂದುಕೊಳ್ಳುವಳು. ಅದಕ್ಕೆ ಉತ್ತರವೇ ತೋಚದು. ಎರಡನೆಯವರ ಗುಟ್ಟನ್ನು ಇಣಿಕಿ ನೋಡಲು ಆತುರರಾಗಿರುವ, ಹೊಟ್ಟೆಕಿಚ್ಚಿನ, ದುಷ್ಟಬುದ್ಧಿಯ ಜನ ಬೇಕಾದಷ್ಟಿದೆಯಲ್ಲ! ಆ ಜನ

ಒಂದೊಂದಾಗಿ ಅವಳ ಕಣ್ಮುಂದೆ ಹಾಯ್ದುಹೋಗಹತ್ತಿತು. ಮುಖ ತಗ್ಗಿಸಿ ತಲೆ ಹಿಡಿದುಕೊಂಡು ಮತ್ತೆ ವಿಚಾರಿಸಿದಳು. ಜಗತ್ತು ಕೆಟ್ಟದ್ದಲ್ಲ. ತಾನು ಬದುಕಿ ಬಾಳಲು ಅವಕಾಶವಿದೆ. ಅದನ್ನು ಯಾರೂ ತಡೆಯರು. ತನ್ನ ಸುಖ ಮಣ್ಣುಗೂಡಿಸುವಷ್ಟು ವಂಚಕರು ಯಾರೂ ಸಿಕ್ಕರು.

ಅಂತಹರಿದ್ದರೆ ಅವರೆಷ್ಟು ನೀಚರು! ಅವರನ್ನು ಹುರಿದುಬಿಡುವ ಶಕ್ತಿಯಾದರೂ ತನಗಿದ್ದರೆ....!

ಊಟದ ವೇಳೆಯಲ್ಲಿ ಅವಳ ನೆಗೆಣ್ಣಿ ಹುವಾನ್-ಶಿಯಾವೊ ತನ್ನೊಡನೆ ಸಿನೇಮಾಕ್ಕೆ ಬರಬೇಕೆಂದು ಹೇಳಿದಳು. 'ಮಾಚಿನ್-ಹುವಾ' ಎಂಬ ವಿಷಾದಾಂತ ಚಿತ್ರವು ಬಂದಿತ್ತು. ತಾನು ಹೋಗಬಹುದೆ! ಆಕೆ ಚಿತ್ರದ ಕತೆಯನ್ನು ಸಂಕ್ಷೇಪವಾಗಿ ಬಣ್ಣಿಸಿದ್ದಳು. ಅದರಲ್ಲಿಯ ಪ್ರತಿಯೊಂದು ಮಾತೂ ತನ್ನ ಎದೆಯನ್ನೆ ಇರಿಯುವಂತೆ ಅನಿಸುತ್ತಿತ್ತು. ಆಕೆ ತನ್ನನ್ನೆ ಅಣಕವಾಡುತ್ತಿರುವಳೊ ಎಂದು ಅವಳ ಮುಖವನ್ನು ನಿಟ್ಟಿಸಿ ನೋಡಿದಳು. ಆದರೆ ಅಲ್ಲಿ ಆ ತರದ ಭಾವ ತೋರಲಿಲ್ಲ. ಅದರಿಂದ ಶಿಯಾವೊಳಿಗೆ ಸಮಾಧಾನವಾಯಿತು. ಆದರೂ ಕೊನೆಗೆ ಆಕೆಯ ಪತಿಯ ಮಾತು, ಸೀಸದಿಂದ ಅವಳ ನಾಡಿಗಳನ್ನು ಜಜ್ಜಿದಂತಾಯಿತು. ಆತ ಹೇಳಿದ:

"ಇಂತಹ ಕತೆ ನಿಜವಾಗಿ ಹೇಳುವದಾದರೆ ನಾಟಕದ ವಸ್ತುವೆ ಅಲ್ಲ. 'ಮಾಚಿನ್-ಹುವಾ' ಅಂತಹ ದುರ್ಘಟನೆಗಳು ನಿತ್ಯವೂ ಜರಗುತ್ತವೆ. ಅದರಲ್ಲಿ ವಿಪರೀತವೇನೂ ಇಲ್ಲ. ಆದರೆ ಯಾರಿಗೂ ತಿಳಿಯುವದಿಲ್ಲವಾದ್ದರಿಂದ ಅದು ನಡೆಯದಂತೆಯೆ. ಅಂತರವಿಷ್ಟೆ. ನಿತ್ಯ ಜೀವನದಲ್ಲಿ ಆ ಯುವತಿ ಆತ್ಮಹತ್ಯೆ ಮಾಡಿಕೊಳ್ಳುವದಿಲ್ಲ ಅಷ್ಟೆ."

ಈ ಮಾತುಗಳನ್ನು ಕೇಳುತ್ತಿದ್ದಂತೆಯೆ ಹುವಾನ್-ಶಿಯಾವೊಳ ಕಣ್ಣುಗಳು ಕತ್ತಲೆಗೂಡಿದಂತಾದವು. ಕುರ್ಚಿಯಲ್ಲಿ ಕುಸಿಬಿದ್ದಳು. ಮೂರ್ಚ್ಛಾತ್ಮಕ ಅರಳೆಯನ್ನು ಮೂಗಿಗೆ ಹಿಡಿದಂತಾಗಿತ್ತು. ಸುದೈವದಿಂದ ಅವಳ ಅಣ್ಣ (ದೊಡ್ಡಪ್ಪನ ಮಗ) ಅವಳ ಈ ಸ್ಥಿತಿಯನ್ನು ಲಕ್ಷಿಸಲಿಲ್ಲ. ಅವನ ದೃಷ್ಟಿ ಬಿದ್ದಿದ್ದರೆ ಅವಳ ಪ್ರಾಣವೂ ಅಲ್ಲಿಯೆ ಹಾರಿಹೋಗುತ್ತಿತ್ತು. "ನೀನು ಹೋಗುವದಾದರೆ ನಾನೂ ಜೊತೆಗೆ ಬರುವೆ." ಎಂದು ಅವಳು ನಿರ್ವಾಹ

ವಿಲ್ಲದೆ ನೆಗೆಣ್ಣಿಗೆ ಹೇಳಿದಳು.

ಊಟಕ್ಕೆ ಕುಳಿತವರೆಲ್ಲಾ ಯಾರೂ ಮಾತಾಡಲಿಲ್ಲ. ಶಿಯಾವೊ ತನ್ನ ದುಮ್ಮಾನವನ್ನು ಬಿಟ್ಟು ನಾಲ್ಕು ಜನರಂತೆ ವರ್ತಿಸಹತ್ತಿರುವಳೆಂದು ಎಲ್ಲರಿಗೂ ಹಿಗ್ಗಾಗಿರುವಂತೆ ತೋರಿತು. ಅವಳ ನೆಗೆಣ್ಣಿ ಕೃತಜ್ಞತೆಯ ಮೇಲು ನಗೆಯನ್ನು ಸೂಚಿಸಿದಳು. ತನ್ನ ಮರೆಮಾಚಿನ ಪ್ರಯೋಗವು ಸಫಲವಾದದ್ದಕ್ಕೆ ಶಿಯಾವೊಳಿಗೂ ಸಮಾಧಾನವಾಗದಿರಲಿಲ್ಲ. ಮನೆಯಲ್ಲಿ ಯಾರೂ ತನ್ನ ವಿಷಯದಲ್ಲಿ ಸಂಶಯಗ್ರಸ್ತವಾಗಿಲ್ಲವೆಂದು ಅವಳಿಗೆ ವಿಶ್ವಾಸ ಬಲವಾಗಿತ್ತು.

ಸಿನೇಮಾದಲ್ಲಿ ಅದೆಷ್ಟೊ ಗುರುತಿನ ಜನ ಭೆಟ್ಟಿಯಾದರು. ಎಲ್ಲರ ಮುಖವನ್ನೂ ಆಕೆ ದಿಟ್ಟಿಸಿ ನೋಡಿದಳು. ಅಲ್ಲಿ ಮೋಸವೇನೂ ತೋರಲಿಲ್ಲ. ಯಾರೂ ಅವಳನ್ನು ನಿಷ್ಠುರವಾಗಿ ಕಾಣಲಿಲ್ಲ. ಯಾರ ಮಾತಿನಲ್ಲಿಯೂ ಕೊಂಕು ಇರಲಿಲ್ಲ.

" ನಿಜವಾಗಿಯೂ ಯಾರಿಗೂ ಗೊತ್ತಿಲ್ಲ " ಎಂದು ತನ್ನಷ್ಟಕ್ಕೆ ಅಂದುಕೊಂಡಳು. ಚಿತ್ರಪಟದಲ್ಲಿಯ ಪ್ರೇಮಿಗಳನ್ನು ಕಂಡು ಅವಳಿಗೆ ಉತ್ಸಾಹವಾಯಿತು. ಅವಳೂ ತನ್ನ ಪ್ರಿಯನ ಮಾತಿನಲ್ಲಿ ತುಂಬಾ ನಂಬಿಕೆಯನ್ನಿಟ್ಟಿದ್ದಳು. ಎರಡೇ ಸಲ ತಾನು ತನ್ನ ಪ್ರಿಯನನ್ನು ಕಂಡುದು ಯಾರಿಗೂ ತಿಳಿಯುವದು ಸಾಧ್ಯವಿಲ್ಲವೆಂದು ಮತ್ತೆ ಗಟ್ಟಿಮಾಡಿಕೊಂಡಳು.

ಆದರೂ ತನ್ನ ನಡತೆಯು " ಮಾಚಿನ್-ಹುವಾ "ಳ ನಡತೆಗಿಂತ ಭಿನ್ನವಾಗಿತ್ತು.

ಕಳೆದ ಒಂದೆರಡು ವಾರಗಳಲ್ಲಿ ಆವಳು ತೀರಾ ದುರ್ಬಲಳಾಗಿದ್ದಳು. ತನ್ನ ಗುಟ್ಟನ್ನು ತಾನೇ ಹೊರಪಡಿಸುತ್ತಿರುವಂತೆ ಅವಳಿಗೆ ಅನಿಸುವದು. ಆಶ್ಚರ್ಯ, ಸಂಶಯ, ಮುಂತಾದ ವಿಭಿನ್ನ ಭಾವಗಳು ಹೃದಯದಲ್ಲಿ ತಾಕಲಾಡುವವು. ತನ್ನ ವಿಪರೀತ ನೀತಿಗಾಗಿ ಇದೀಗ ಏನಾದರೂ ಕಾರಣ ಜನಕ್ಕೆ ಹೇಳಲೇಬೇಕು. ಬೇಸಗೆಯ ತಾಪದಿಂದ ಹೀಗಾಗಿದೆಯೆಂದೂ, ತನಗೆ ಪ್ರತಿ ಬೇಸಿಗೆಯಲ್ಲಿ ಬಿಸಿಲಿನ ಜಳ ತಾಕಿ ಸ್ವಲ್ಪ ಪ್ರಕೃತಿವ್ಯತ್ಯಾಸ ತೋರುವದೆಂದೂ ಹೇಳಬಹುದೆಂದು ಯೋಚಿಸುವಳು. ತಾನು ತಿಳಿದಷ್ಟು

ಜನ ಕಠೋರವಾಗಿಲ್ಲವೆಂದು ಒಮ್ಮೊಮ್ಮೆ ಅವಳಿಗೆ ಅನಿಸುವದು. ಆಗ ತಾನು ನೆಮ್ಮದಿಯಿಂದ ಬಾಳಲು ಇನ್ನೂ ಅವಕಾಶವಿದೆ ಎಂಬ ಆಶಾಕಿರಣವು ದೂರದ ದಿಗಂತದಲ್ಲಿ ತೋರುವದು.

ಆದರೆ ' ಬಿಸಿಲಿನ ಜಳ 'ದ ಬೇಗೆ ಅವಳಿಗೆ ಹಿಡಿದುದೇನೊ ನಿಜ. ಮೈಯಲ್ಲಿ ಆಲಸ್ಯ ಕ್ಷಣಕ್ಷಣಕ್ಕೂ ತೋರುವದು. ಹಗಲಿನಲ್ಲಿಯೂ ಮಲಗಿರುವಂತೆನಿಸುವದು. ಮನಸ್ಸಿಗೆ ಯಾವಾಗಲೂ ಒಂದು ತರದ ಬೇಸರ. ಹಸಿವೆ ಚನ್ನಾಗಿ ಆಗುವದಾದರೂ ಒಂದೆರಡು ತುತ್ತು ಎತ್ತಿಕೊಳ್ಳುವಾಗಲೆ ಅರುಚಿಯುಂಟಾಗುವದು. ಒಂದು ವಾರ ಹೀಗೆ ಕಳೆಯುವಾಗಲೆ ಮತ್ತೊಂದು ಹೊಸತರ ಅವಳಿಗೆ ಪಕ್ಕನೆ ಲಕ್ಷ್ಯಕ್ಕೆ ಬಂತು. ತಿಂಗಳ ಆ ಕಾಲಕ್ಕೆ ಉಂಟಾಗಬೇಕಾಗಿದ್ದ ಆ ' ಚಮತ್ಕಾರ ' ಒದಗಲೇ ಇಲ್ಲ. " ಹೀಗೂ ಆಗುವದುಂಟೆ ? ಅದು ನಿಜವಾಗಬಹುದೆ ? " ಅದೇ ನಿಜವಾಯಿತು. ಅವಳು ಹವಣಿಸಿ ಕಟ್ಟಿದ ಆಶಾಮಂದಿರವು ಕಳಚಿ ಬಿತ್ತು.

ಹಗಲು ರಾತ್ರಿ ಅವಳಿಗೆ ಪರಿವೆಯೆ ಇಲ್ಲ. ಬೇಟೆಯವನ ಮುಂದೆ ಓಡುವ ಮೃಗಗಳಂತೆ ದಿನಗಳು ಓಡಹತ್ತಿದವು. ದುರ್ಬಲಳಾಗಿ, ಅಸಹಾಯಳಾಗಿ, ಆವ ಸಹಾನುಭೂತಿಯೂ ಇಲ್ಲದೆ ತಾನು ತನ್ನ ಗೋರಿಯನ್ನು ಸಮೀಪಿಸುತ್ತಿರುವಂತೆ ಅವಳಿಗೆ ಅನಿಸಹತ್ತಿತು. ತನ್ನ ಸತ್ತ ತಾಯಿಯನ್ನು ಪ್ರತಿಕ್ಷಣಕ್ಕೂ ನೆನೆಯಹತ್ತಿದಳು. ಎಂತಹ ತಾಯಿಯಾದರೂ ಇರಲಿ, ಕಠೋರ, ನಿಷ್ಠುರ ಇದ್ದರೂ ಚಿಂತೆಯಿಲ್ಲ, ತಾಯಿ ಇದ್ದಿದ್ದರೆ ಸಾಕು ಎಂದುಕೊಳ್ಳುವಳು. ಆದರೆ ಅವಳ ತಾಯಿಯ ದನಿಯು ಕೂಡ ಅವಳ ಸ್ಮೃತಿಪಥದಲ್ಲಿ ಬಾರದಾಗಿತ್ತು. ಜಗತ್ತಿನಲ್ಲಿ ತನ್ನವರೆಂಬುವವರೇ ಇಲ್ಲವೆಂದು ಅವಳು ಬಗೆದಳು. ಅವಳ ದೊಡ್ಡಮ್ಮನೇನೊ ಒಳ್ಳೆಯವಳಾಗಿದ್ದಳು. ಆದರೇನು ಅವಳು ಎಷ್ಟಾದರೂ ಪಾಲಕಳೇ ಹೊರತು ತಾಯಿಯಲ್ಲ. ಅವಳ ಮಗನೊ ಆಪ್ತಬಂಧುವೆ ಹೊರತು ಮತ್ತೇನೂ ಅಲ್ಲ. ಅವನು ಮದುವೆಯಾಗುವದಕ್ಕಿಂತ ಮುಂಚೆ ಅದೆಷ್ಟೊ ಹತ್ತಿರದವನಾಗಿದ್ದ. ಆದರೆ ಹೆಂಡತಿ ಬಂದ ಮೇಲೆ ಒಮ್ಮೆಯೂ ತನ್ನೊಡನೆ ಹಿತಗೋಷ್ಠಿ ಆಡಿದುದಿಲ್ಲ.

ರಾತ್ರಿ ಶೂನ್ಯಮನಸ್ಕಳಾಗಿ ಕಿಡಕಿಯಿಂದ ಆಕಾಶದಲ್ಲಿಯ ನಕ್ಷತ್ರಪುಂಜ

ಗಳನ್ನು ನೋಡುತ್ತ ಕುಳಿತುಕೊಳ್ಳುವಳು. ಎದುರಿನ ದಿನ್ನೆಗಳಾಚೆಗೆ ಮನಸ್ಸು ಅಲೆಯುವದು. ಕಿಡಿಕಿಯ ಸಳಾಕಿಗಳ ಸಾಲಿನ ಮಧ್ಯದಲ್ಲಿಯ ಬೆಳಕಿನಲ್ಲಿ ದೂರದಲ್ಲಿ ಆತನ ಮುಖ; ಅದೊಂದು ದನಿ— " ಸುಳ್ಳು, ಸುಳ್ಳು, ಅಷ್ಟು ಅಲ್ಪಕಾಲದ ಕೂಟದಲ್ಲಿ ಹೀಗೆಂದೂ ಆಗಲಾರದು ! ನನ್ನನ್ನು ಕ್ಷಮಿಸು ಎಂದು ನಾನೇನೊ ಆಗ ಬೇಡಿದೆ. ಇನ್ನು ಮಾತ್ರ ಅದು ಸಾಧ್ಯವಿಲ್ಲ. ಇರಲಿ, ನಾನು ಬೇಡುವದಿಷ್ಟೆ ನಮ್ಮ ಪ್ರಣಯದ ಕುರುಹಾಗಿ ಅವನು ಬೆಳಗಲಿ " ಅವಳ ಆತ್ಮದಲ್ಲಿ ಇದೊಂದು ಮಾರ್ನುಡಿ. ಅದು ಆಕಾಶದಿಂದ, ತೇಲ್ಗಣ್ಣು ಹಾಕುವ ಚಿಕ್ಕೆಗಳಿಂದ ಬಂದ ಪಡಿನುಡಿಯಂತೆ ಭಾಸವಾಗುವದು.

ಅವಳು ಮತ್ತೆ ಧೈರ್ಯ ತಂದುಕೊಳ್ಳುವಳು. ಇದೇ ಉಪಾಯ, ತಾನಿನ್ನು ಯಾವುದನ್ನೂ ಗುಟ್ಟಾಗಿರಿಸಬೇಕಾಗಿಲ್ಲ. ತನ್ನ ಪ್ರೇಮದ ಶಕ್ತಿಯನ್ನು ಜಗತ್ತಿನ ಎದುರಿಗೆ ಇರಿಸಬಹುದು. ತನ್ನ ಮಗುವಿನೊಡನೆ ತಾನು ಜಗತ್ತನ್ನು ಎದುರಿಸಬೇಕು.

" ಹುಚ್ಚು ! ಕ್ರೂರ ಸಮಾಜ ನಿನ್ನನ್ನು ಆದರಿಸುವದೆಂದು ತಿಳಿಯುವಿಯಾ ? ಅದು ನಿನ್ನನ್ನು ಕ್ಷಮಿಸುವದೆಂದು ನಂಬುವಿಯಾ ? ನಿನ್ನ ಮರ್ಯಾದೆಗೆ ಶಿಕ್ಷಕನಾಗಿ ನಿಲ್ಲುವವನು ಯಾರಾದರೂ ಇದ್ದರೆ ಆ ಮಾತು ಬೇರೆ. ಸಮಾಜಕ್ಕೆ ಹೆಸರಿಗಾದರೂ ಚಿಂತೆಯಿಲ್ಲ ನಿನ್ನ ಮಗುವಿಗೆ ತಂದೆಯನ್ನು ತೋರಿಸಲೇಬೇಕು. ನಿಜವಾಗಿ ಜಾಣಳಾದರೆ ಅಂತಹ ಯಾವನನ್ನಾದರೂ ಹುಡುಕು. "

ವಿಚಾರದ ಆವೇಗದಿಂದ ಅವಳ ಮನಸ್ಸು ಹೊಯ್ದಾಟಕ್ಕೆ ಸಿಕ್ಕಿತು. ಯಾವದು ಲೇಸು ? ಈ ಹಾದಿಯೆ? ಆ ಮಾರ್ಗವೆ ? ಚಂದ್ರ ಚಿಕ್ಕಿಗಳ ನಡುವೆ ಅವಳ ಮನಸ್ಸು ಉಯ್ಯಾಲೆಯಾಡಹತ್ತಿತು. ಇದೀಗ ಅವಳಿಗೆ ದುಃಖವಿಲ್ಲ, ಆನಂದವಿಲ್ಲ, ಕಣ್ಣೀರಿಲ್ಲ, ಮೆಲ್ನಗೆಯಿಲ್ಲ. ಎಲ್ಲ ಮನೋವಿಕಾರಗಳೂ ಅವಳಿಂದ ದೂರಾಗಿದ್ದವು.

ದಿನದಿನಕ್ಕೂ ದೇಹ ಕೃಶವಾಗಹತ್ತಿತು. ತನ್ನ ನೋವನ್ನು ಅಡಗಿಸಿಟ್ಟುಕೊಳ್ಳುವದೇ ಅವಳಿಗೆ ಹೆಚ್ಚಿನ ತೊಂದರೆಯಾಗಹತ್ತಿತು. ಅವಳ ಈ ದೇಹಾಲಸ್ಯವನ್ನು ನೋಡಿ ನೋಡಿ ಬೇಸತ್ತ ಅವಳ ದೊಡ್ಡಮ್ಮ ಒಂದು ದಿನ

ಅವಳ ಕೋಣೆಗೆ ಬಂದು ಅರ್ಧಗಂಟೆಯ ವರೆಗೆ ಉಸಿರು ಬಿಡದೆ ಮಾತಾಡ ಹತ್ತಿದಳು:

"ಹುವಾನ್, ನೀನು ತೀರ ಸೊರಗಿರುವಿ. ನನಗೇನೊ ಗಾಬರಿ ಯಾಗಹತ್ತಿದೆ. ನಿನಗೆ ಆಗಿರುವದಾದರೂ ಏನು ? ನನಗೆ ಹೇಳಬಾರದೆ ? ನೀನು ಆಲೋಚಿಸುತ್ತಿರುವದಾದರೂ ಏನು ? ಏನಾದರೂ ರುಚಿಯಾದ ತಿನಸು ಬೇಕೆ ? ಅದೆಷ್ಟು ಬಡವಾಗಿರುವೆ ! ಏನು ಬೇಕಾದರೂ ಹೇಳು ನಾನು ಮಾಡಿ ತರುವೆ. ಮತ್ತ ಯಾರಾದರೂ ಮನಸ್ಸು ನೋಯಿಸಿದರೆ ? ನೆಗೆಣ್ಣಿ ಏನಾದರೂ ಅಂದಳೆ ? ಅಥವಾ ಕೆಲಸದವಳು ಏನಾದರೂ ಆಡಿ ಕೊಂಡಳೆ ? ಅವಳು ನಿನ್ನ ಉಪಚಾರ ವಿಚಾರಿಸುವದಿಲ್ಲವೆ ? ನನ್ನಲ್ಲಿ ನಿನಗೆ ವಿಶ್ವಾಸವಿಲ್ಲವೆ ? ನನ್ನ ಸಹೋದರಿಯ ವಂಶಕ್ಕೆ ಉಳಿದವಳು ನೀನೊಬ್ಬಳೆ. ನಿನಗೆ ಏನಾದರೂ ಒದಗಿದರೆ ನಾನು ಆಕೆಗೆ ಪರಲೋಕದಲ್ಲಿ ಹೇಗೆ ಮುಖ ತೋರಿಸಬೇಕು ? "

ಮುದುಕಿಯ ಕಣ್ಣು ಹನಿಗೂಡಿದವು. ಹುವಾನ್-ಶಿಯಾಳು ತನ್ನ ಕಣ್ಣೀ ರನ್ನು ಹತ್ತಿಕ್ಕಿಕೊಂಡು ನಗೆ ತಂದುಕೊಂಡು ಸುಮ್ಮನೆ ತಲೆ ಹಾಕಿದಳು. "ದೊಡ್ಡಮ್ಮಾ, ನಿನ್ನ ಪ್ರೀತಿ ನನಗೆ ಗೊತ್ತಿಲ್ಲವೆ ? ನೀನೆಂದೂ ನಿನ್ನ ಕರ್ತವ್ಯ ದಲ್ಲಿ ತಪ್ಪಿದವಳಲ್ಲ. ಆದರೆ ನನ್ನ ಅನುಚಿತ ನಡತೆ ನಿನಗೆ ಗೊತ್ತಾದರೂ ನೀನು ನನ್ನನ್ನು ಪ್ರೀತಿಸುವೆಯಾ ? " ಎಂದು ಹೇಳಿಬಿಡಲೆ ಎನಿಸುವದು. ಆದರೆ ಬೇಡವೆಂದು ಸುಮ್ಮನೆ ಕಣ್ಣುಬಿಟ್ಟು ದೊಡ್ಡಮ್ಮನ ಮುಖ ದಿಟ್ಟಿಸುತ್ತ "ನಿಜವಾಗಿ ನನಗೇನೂ ಆಗಿಲ್ಲ. ಬಿಸಿಲಿನ ತಾಪಕ್ಕೆ ಇದೆಲ್ಲ ಆಗಿರಬೇಕು. ಉಳಿದ ಯಾವ ಮನೋವಿಕಾರವೂ ಅಲ್ಲ. " ತನ್ನ ದೊಡ್ಡಮ್ಮ ತನ್ನನ್ನು ಪ್ರೀತಿಸುವದು ಅದೊಂದು ಕರ್ತವ್ಯಪಾಲನೆಗಾಗಿ ಎಂದು ಅವಳು ಬಲ್ಲಳು. ಅವಳ ಮಗನೂ ತನ್ನ ತಾಯಿಗಾಗಿ ತನ್ನನ್ನು ಆದರಿಸುವನು. ಅವನ ಹೆಂಡ ತಿಯೂ ಅವಳಿಗಾಗಿ ತನ್ನನ್ನು ಗೌರವಿಸುವಳು. ಪ್ರತಿಯೊಬ್ಬರೂ ಒಂದೊಂದು ಕಾರಣದಿಂದ ತನ್ನನ್ನು ಪ್ರೀತಿಸುವರು. ತನಗಾಗಿಯೆ ತನ್ನನ್ನು ಪ್ರೀತಿಸು ವವರು ಯಾರೂ ಇಲ್ಲವಲ್ಲ ! ತನ್ನ ಹೃದಯವನ್ನು ತಿಳಿದಾತ ಆತನೊಬ್ಬನೆ. ಅವನೂ ಇದೀಗ ಕೈ ಬಿಟ್ಟುಬಿಟ್ಟಿದ್ದಾನೆ. ದೈವ ತನಗೆ ದುರ್ಮರಣವನ್ನು

ಬರೆದಿರಬಹುದೆ? ಹಾಗಿದ್ದರೆ ಅವನ ಸಂಗಡಲೆ ಸಾಯಬಹುದಾಗಿದ್ದರೆ! ಮತ್ತೊಬ್ಬ ತನ್ನನ್ನು ಪ್ರೀತಿಸುವನೆಂದು ತಿಳಿದರೂ ತಾನು ಸಾಯುವದು ತಪ್ಪಿದ್ದಲ್ಲ. ಅವನಿಗೆ ಸತ್ಯವನ್ನು ಹೇಳಲೇಬೇಕು. ಆಗ ಅವನ ನಿಷ್ಠುರ ಪೆಟ್ಟುಗಳಿಂದಾದರೂ ಸಾಯಲೇಬೇಕು.

ಅವಳ ನೆಗೆಣ್ಣಿಯೂ ಬಂದು ಪ್ರಕೃತಿಯನ್ನು ವಿಚಾರಿಸಿದಳು. ಅವಳೂ ಸೊರಗಿರುವ ಮಾತನ್ನೆ ಎತ್ತಿ ಬೇಕು ಬೇಡಗಳನ್ನು ಕೇಳಿದಳು. ತಾನೇನಾದರೂ ತಪ್ಪಿ ನುಡಿದೆನೆ, ವಿಪರೀತವಾಗಿ ನಡೆದೆನೆ ಎಂದು ವಿಚಾರಿಸಿದಳು.

ಇದೆಲ್ಲ ಅವಳಿಗೆ ಮತ್ತಷ್ಟು ಭಯವನ್ನುಂಟುಮಾಡಿತು. ಹೃದಯ ವೇದನೆ ಬಲವಾಯಿತು. ತನ್ನ ನಡತೆಯು ಪ್ರತಿಯೊಬ್ಬರನ್ನೂ ಹೀಗೆ ಕೇಳುವಂತೆ ಮಾಡಿದೆಯೆಂದು ಅವಳಿಗೆ ತಿಳಿಯದಿರಲಿಲ್ಲ. ತನ್ನ ಅಸ್ಥಿರತೆಯು ಮನೆಯವರನ್ನೆಲ್ಲ ತನ್ನ ವಿಷಯವಾಗಿ ಸಂಶಯ ತೆಗೆದುಕೊಳ್ಳುವಂತೆ ಮಾಡಿದೆಯೆಂಬುವದರಲ್ಲಿ ಸಂಶಯವಿಲ್ಲ. ಸಾಶಂಕದೃಷ್ಟಿಯೇ ತನ್ನನ್ನು ಸುತ್ತುವರಿದಿದೆ. ತಾನಿನ್ನು ಕೋಣೆಯ ಏಕಾಂತದಲ್ಲಿರುವದು ಸಾಧ್ಯವಿಲ್ಲ. ಹೊರಗೆ ಯಾವಾಗಲೂ ಶಬ್ದವಾಗುತ್ತಿರುವಂತೆ ಭಾಸವಾಗುವದು.

"ಎಂತಹ ವಿಚಿತ್ರ ದಿನಗಳು! ಮೃತ್ಯುವಿನ ಕಾಲ ಸನ್ನಿಹಿತವೆ? ಆದರೆ ನೀನು ಹೀಗೆ ಸಾಯಲಾರೆ. ನಿನಗಿನ್ನೂ ವಯಸ್ಸಿದೆ. ಬದುಕು ಮುಂದೆ ಬರಲಿದೆ. ಕೇವಲ ಒಂದು ಬಟ್ಟಲು ಮದ್ಯ ಕುಡಿದ ತಪ್ಪಿಗಾಗಿ ಮರಣವೆ?"

ಆದರೂ ಅದನ್ನು ಬಿಟ್ಟರೆ ಇದೀಗ ಬೇರೆ ಆಶ್ರಯವೇ ಇಲ್ಲವೆ?

"ಅಥವಾ, ನಾನು ಧೈರ್ಯದಿಂದ ಸತ್ಯವನ್ನು ಹೇಳಿಬಿಟ್ಟರೆ! ಎಂತಹ ಅಣಕನ್ನೂ ಸಹಿಸಿದರೆ? ಏಕಾಗಬಾರದು?" ಎಂದು ಯೋಚಿಸುವಳು.

ಆದರೆ ಹಾಗೆ ಮಾಡುವ ಧೈರ್ಯ ತನ್ನಲ್ಲಿಲ್ಲವೆಂದು ಅವಳಿಗೆ ಮರುಕ್ಷಣದಲ್ಲಿಯೆ ಗೊತ್ತಾಯಿತು. ಆತ್ಮಬಲಿಗೆ ಒಂದು ಕ್ಷಣದ ಮನೋಧೈರ್ಯ ಸಾಕು. ಆದರೆ ಆತ್ಮಪ್ರತಿಕಾರಕ್ಕೆ ನಿರಂತರವಾದ ಮನೋಧೈರ್ಯ ಬೇಕು. ಅದು ಅವಳಲ್ಲಿರಲಿಲ್ಲ. ತನ್ನ ವಿಮೋಚನೆಗಾಗಿ ಮತ್ತೊಬ್ಬನನ್ನಾಶ್ರಯಿಸಿದರೆ, ಆ ಸಂಬಂಧವೂ ಬಹುಕಾಲ ಬಾಳಬಹುದೆಂಬ ವಿಶ್ವಾಸವಿಲ್ಲ. ದುಡುಕಿ ಮದುವೆಯಾಗುವದೂ ಕಡುಕಿಗೆ ಕಾರಣವಾಗಬಹುದಲ್ಲದೆ ಒಳ್ಳೆಯ

ದಾಗಲಿಕ್ಕಿಲ್ಲ. ಅದರಿಂದ ಪುರುಷನೊಡನೆ ವಿಪರೀತ ನಿತ್ಯ ಹೋರಾಡಬೇಕಾಗಲೂಬಹುದು.

ತನ್ನ ವಯಸ್ಸಿನ ಅದೆಷ್ಟೋ ತರುಣಿಯರು ತನಗೆ ಗೊತ್ತಿರುವಂತೆಯೆ ಅನೇಕ ಪ್ರಣಯವ್ಯಾಪಾರಗಳಲ್ಲಿ ಆಸಕ್ತರಾಗಿಲ್ಲವೆ ? ಅವರಿಗೆ ಇಂತಹ ಪರಿಸ್ಥಿತಿ ಬಂದಿಲ್ಲವೆ? ಅವರು ಮೊದಲೆ ಹುಷಾರಾಗಿ ಮದುವೆಯನ್ನು ಒಪ್ಪುವಂತಹವರನ್ನೆ ಆರಿಸಿಕೊಂಡರೆ ? ಅಥವಾ ಆ ಪುರುಷರೇ ಮೊದಲು ಮದುವೆಯನ್ನು ಬೇಡುತ್ತಲೇ ಬಂದರೆ ? ತಾನೆಷ್ಟು ಮೂರ್ಖಳಾದೆನಲ್ಲ ! "ಅತಿ ಉದಾರ, ಅತಿ ಪ್ರಾಮಾಣಿಕ, ಅತಿ ಮೂರ್ಖ.... ಜೀವಿಸಲು ನಿರುಪಯೋಗಿ!"

ರೂ-ಪಾಪೊ ಮಂದಿರ ( ಪಾಗೋಡಾ )ದ ಆಚೆಗೆ ಚಿಕ್ಕಿಯೊಂದು ಆಕಾಶವನ್ನು ಬೆಳಗಿತು. ಮತ್ತೊಂದು ರಾತ್ರಿ ಭೂಮಿಯನ್ನು ಆವರಿಸಿತು. ಹುವಾನ್-ಲಿಯಾವೂಳ ಮನಸ್ಸು ಅದೆಷ್ಟೊ ಪಕ್ಷುಬ್ಧವಾಯಿತು. ವಿದ್ಯುದ್ವೇಗದಿಂದ ಅವಳ ವಿಚಾರಗಳು ಚಲಿಸಹತ್ತಿದವು. ತನ್ನ ಇಪ್ಪತ್ತುಮೂರು ವರ್ಷದ ಜೀವನದಲ್ಲಿ ನಡೆದ ವಿಶೇಷ ಘಟನೆಗಳನ್ನೆಲ್ಲ ಅವಳು ನೆನೆಯಹತ್ತಿದಳು. ತನ್ನ ಹದಿನೇಳನೆಯ ವಯಸ್ಸಿನಲ್ಲಿ ಚೀನಾದ ಹೊಸ ಜೀವನದ ಸ್ವಾತಂತ್ರ್ಯದ ಕೂಗು ಹೇಗೆ ನಾಡಿನಲ್ಲಿ ವ್ಯಾಪಿಸಿತು, ಅದು ತನ್ನಲ್ಲಿ ಹೇಗೆ ಉನ್ಮಾದವನ್ನು ತಂದಿತು, ಭವಿಷ್ಯಜ್ಜೀವನದ ಕನಸು ಕಟ್ಟುವಂತ ಹೇಗೆ ಮಾಡಿತು, ಎಂದು ಎಲ್ಲ ನೆನಪಾಯಿತು.

ಜಗತ್ತು ತನ್ನನ್ನು ಸುತ್ತಿರುವಂತೆಯೂ, ಅದು ಛಿನ್ನವಿಚ್ಛಿನ್ನವಾಗುತ್ತಿರುವಂತೆಯೂ ಅನಿಸಹತ್ತಿತು: ಎಲ್ಲವೂ ಮೌನ.

ನಡುಗುತ್ತಿರುವ ಬೆರಳುಗಳಿಂದ ಉದ್ದವಾದ ರೇಶಿಮೆ ಪಟ್ಟಿಯೊಂದನ್ನು ತೆಗೆದುಕೊಂಡಳು. 'ಪ್ರತಿಜ್ಞೆ'ಯೊಂದು ಹೃದಯವನ್ನು ನಡುಗಿಸಿತು. ದೇಹವನ್ನು ಸೀಳುತ್ತಿರುವಂತಾಯಿತು. ಮೋಸ ! ಕಪಟ ! ಸುಳ್ಳು ! ಸ್ವಾತಂತ್ರ್ಯ, ಬಿಡುಗಡೆ, ಸ್ವೈರಜೀವನ, ಎಲ್ಲ ಪೊಳ್ಳು! ಹಿರಿಯರು ಏರ್ಪಡಿಸಬಹುದಾಗಿದ್ದ ವಿವಾಹಕ್ಕೆ ತಾನು ಒಪ್ಪಿಕೊಳ್ಳುತ್ತಿದ್ದರೆ ಅದೆಷ್ಟೋ ಒಳ್ಳೆಯದಾಗಬಹುದಾಗಿತ್ತು. ಆಗ ಇಂತಹ ವೇದನೆಯೂ, ದುರ್ದೆಶೆಯೂ ತನಗಾಗುತ್ತಿರಲಿಲ್ಲ ! ತನ್ನ ನೆಗೆಣ್ಣೆಯು ತನ್ನ ಬಂಧುವಿನೊಡನೆ ತೃಪ್ತಳಾಗಿ ಸುಖವಾಗಿರುವಂತ ತಾನೂ ಇರಬಹುದಾಗಿತ್ತು !

ಮಂಚದ ತುದಿಗೆ ನಿಂತುಕೊಂಡಳು. ಮೈ ನೋವಿನಿಂದ ನಡುಗಿತು. ಕಣ್ಣುಗಳು ರಕ್ತಮಯವಾದವು. ಮನಸ್ಸು ದೃಢವಾಗಿತ್ತು. ಒಮ್ಮೆ ಮುಗಿದರೆ ಸಾಕು, ಜಗತ್ತಿಗೆ ಸಾರಿ ಹೇಳಬಹುದು " ಸ್ವಾತಂತ್ರ್ಯ, ಸ್ವೇಚ್ಛಾಚಾರ, ನೂತನ-ಕ್ರಾಂತಿ , ಹೊಸ-ಬಾಳು, " ಮೊದಲಾದ ಮಾತೆಲ್ಲ ಅರ್ಥಹೀನ, ಅಸತ್ಯ, ಬೂಟಾಟಿಕೆ ಎಂದು ! ಹಿಂದು ಮುಂದಿನ ವಿಚಾರವನ್ನೆಲ್ಲ ಬಿಟ್ಟು ಅವಳು ಆವೇಶದಿಂದ ತಲೆಗಿಂಬಿಗೆ ಸಿಕ್ಕಿಸಿದ್ದ ಸರಗಂಟನ್ನು ಒಮ್ಮೆಲೆ ಜಗ್ಗಿದಳು. ಮತ್ತು ಮುಂದೆ ಜಾರಿಕೊಂಡು ತೂಗುಬಿದ್ದಳು.

ಮಂದವಾಗುತ್ತಿದ್ದ ಅವಳ ಸ್ಮೃತಿಯ ಹಿನ್ನೆಲೆಯಲ್ಲಿ " ಇನ್ನೂ ಅವಕಾಶವಿದೆ. ಸಮಾಜವನ್ನು ತಿದ್ದುವ ಜಗತ್ತಿನ ಹೋರಾಟದಲ್ಲಿ ನೀನು ಸೇರಿಕೊಂಡರೆ.... ಮುನ್ನುಗ್ಗಿದರೆ,.... ಸಮಾಜ ತೀವ್ರವಾದ ಪ್ರಗತಿಪಥದೊಡನೆ ಹೆಜ್ಜೆಹಾಕಿ........" ನೇಣು ಅವಳ ಗಂಟಲವನ್ನು ಬಿಗಿದಿತ್ತು. ವಿಚಾರ ಶೂನ್ಯದಲ್ಲಿ ಸೇರಿಕೊಂಡಿತ್ತು.

---

## ಪರಿಚಯ

## ಮಾ-ವೊ-ಟನ್

೧೯೨೬-೨೭ರ ಚಳಿಗಾಲದಲ್ಲಿ ಕೊಮಿಂಟಂಗ ರಾಷ್ಟ್ರೀಯ ಕ್ರಾಂತಿಯ ಉತ್ತರದ ದೌಡಿನಲ್ಲಿ ನಡೆದ ಘಟನೆಗಳ ಆಧಾರದ ಮೇಲೆ ಈ ಕತೆ ಬರೆಯಲಾಗಿದೆ. ಉತ್ತರದ ಯುದ್ಧನಾಯಕರ ( War-lords ) ವಿರುದ್ಧ ಕೊಮಿಂಟಂಗ ಮತ್ತು ಕಮ್ಯುನಿಸ್ಟ ಪಕ್ಷಗಳು ಕೆಲವು ಕಾಲ ಒಂದುಗೂಡಿದ್ದವು. ಕಮ್ಯುನಿಸ್ಟ ಪಕ್ಷದ ಕೆಲವರು ಕೊಮಿಂಟಂಗ (ಪ್ರಜಾಪಕ್ಷ)ದ ಸದಸ್ಯರೂ ಆಗಿದ್ದರು. ಆದರೆ ೧೯೨೭ ಎಪ್ರಿಲ್ ತಿಂಗಳ ನಂತರ ಕೊಮಿಂಟಂಗದ ಬಲಪಕ್ಷವು ಸೇನಾಪತಿ ಚಂಗ್-ಕೈ-ಶೇಕರ ಅಧಿನಾಯಕತ್ವದಲ್ಲಿ ಪ್ರತಿಬಂಡಾಯವನ್ನು ಹೂಡಿ ಕಮ್ಯುನಿಸ್ಟರನ್ನು ಹತ್ತಿಕ್ಕಹತ್ತಿತು. ಮತ್ತು ಹಾಂಕೊದಲ್ಲಿಯ ರಾಷ್ಟ್ರೀಯ ಸರಕಾರದ ಪ್ರತಿಯಾಗಿ ನಾನ್‌ಕಿಂಗದಲ್ಲಿ ಹೊಸ ಸರಕಾರವನ್ನು ಆರಂಭಿಸಿ ಕೊಮಿಂಟಂಗದ ಮತ್ತು ಕಮ್ಯುನಿಸ್ಟರ (ಕೆಂಪಂಗಿಯವರ) ವಿರುದ್ಧ ಯುದ್ಧ ಸಾರಿತು.

ಈ ವಿಷಮ ಪರಿಸ್ಥಿತಿಯ ಒಂದು ಚಿತ್ರವು ' ರಾಡಿ ' ಕತೆಯಲ್ಲಿದೆ. ರಾಷ್ಟ್ರೀಯ ಸೈನ್ಯಭಾಗವಾದ ' ಬಾಲಸೇನಾನಿ 'ಗಳ ಪಡೆಯು ಕಮ್ಯುನಿಸ್ಟರ ರಾಜತಂತ್ರಕ್ಕೆ ಸೇರಿತ್ತು. ಆದರೂ ಈ ಸೇನಾನಿಗಳು ಒಕ್ಕಲಿಗರಿಗೆ ಮಾತು ಕೊಟ್ಟ ಬದಲಾವಣೆಗಳಿಗಾಗಿ ಯಾವ ಹಳ್ಳಿಯಲ್ಲಿಯೂ ಬಹುಕಾಲ ನಿಲ್ಲುವದಿಲ್ಲ. ಯುದ್ಧನಾಯಕ ಜನರಲ್ ಫೆಂಗ್-ಯು-ಶಿಯಾಂಗನ ಸೇನೆಯೆ ಆ ಹಳ್ಳಿಯನ್ನು ಕೊನೆಯದಾಗಿ ಪ್ರವೇಶಿಸುವದು. ಅದರ ಸೇನಾಪತಿಯು ಹುವಾಂಗ್-ಲಾವೊ-ಚೀನಿಗೆ ಮರಣದಂಡನೆಯನ್ನು ವಿಧಿಸುವನು. ಜನರಲ್ ಫೆಂಗನು ಇಷ್ಟರಲ್ಲಿಯೆ ಚಂಗ್-ಕೈ-ಶೇಕ ಪ್ರಾರಂಭಿಸಿದ ಪ್ರತಿಕ್ರಾಂತಿಯನ್ನು ಸೇರಿರುವನು. ಅದರಿಂದ ಆ ಹಳ್ಳಿಯಲ್ಲಿ ಕೆಂಪಂಗಿಯವರ ವರ್ಚಸ್ಸಿಗೊಳಗಾದವರೆಂದು ಸಂಶಯ ಬಂದ ಎಲ್ಲರನ್ನೂ ಕೊಲ್ಲಲಾಗುವದು,

# ರಾಡಿ     

ದಿಕ್ಕುಗೆಟ್ಟು ಇಡೀ ರಾತ್ರಿ ಮಶಿನ್‌ಗನ್ನುಗಳು ತೋಳಗಳಂತೆ ಗರ್ಜಿಸುತ್ತಿದ್ದವು. ದೊಡ್ಡ ನಸುಕಿನಲ್ಲಿ ಮೂರು ಸಶಸ್ತ್ರ ಮೋಟಾರುಗಳು ಗ್ರಾಮದ ಭೂಪತಿಯ ದೇವಾಲಯದ ಮುಂದೆ ಬಂದು ನಿಂತವು. ಈ ದೇವಾಲಯವೇ ಯಾರದೂ ಸೈನ್ಯದ ಬೀಡಾಗಿತ್ತು. ಸಮವಸ್ತ್ರದ ಸೈನಿಕರನೇಕರು ಮೋಟಾರದಿಂದ ಹೊರನುಗ್ಗಿದರು. ಅವರು ದಣಿದವರಂತೆಯೂ, ಎದೆಗುಂದಿದವರಂತೆಯೂ ಕಾಣುತ್ತಿದ್ದರು. ಅವರು ಅವಸರದಿಂದ ಗುಡಿಯಲ್ಲಿ ಸೇರಿದರು. ಮರ ಕ್ಷಣದಲ್ಲಿ ಎರಡು ಭಾರವಾದ ದೊಡ್ಡ ಪೆಟ್ಟಿಗೆಗಳನ್ನು ಹೊತ್ತುಕೊಂಡು ಹೊರಗೆ ಬಂದರು. ಅವರನ್ನು ಮತ್ತೆ ಕೆಲವರು ಹಿಂಬಾಲಿಸಿದ್ದರು. ಪೆಟ್ಟಿಗೆಗಳನ್ನು ಮೋಟಾರಿನಲ್ಲಿ ಹೇರಿ ಸರಸರ ಒಳಸೇರಿದರು. ಯಂತ್ರಗಳ ಟರ್-ಟರ್ ಎಂಬ ದನಿಯು ವಾತಾವರಣದ ಶಾಂತತೆಯನ್ನು ಭೇದಿಸಿತು. ಕಾರುಗಳು ಮುಂದೆ ಸಾಗಿದವು. ಮತ್ತೆ ಕೆಲಹೊತ್ತಿನ ನಂತರ ಸೋತ ಸೈನ್ಯದ ವಿಭಾಗವೊಂದು ಏರುವ ಸಮುದ್ರದ ತೆರೆಗಳಂತೆ ಹಳ್ಳಿಯಲ್ಲಿ ನುಗ್ಗಿತು.

ಏಳು ಗಂಟೆಯ ವರೆಗೂ ಮದ್ದು ಗುಂಡಿನ ಸಪ್ಪಳವು ಬಿಟ್ಟು ಬಿಟ್ಟು ಸುತ್ತುವರಿದು ಕೇಳಿಬರುತ್ತಲೇ ಇತ್ತು. ಬೆಳಕಾಗಲು ಬೀದಿಯಲ್ಲಿ ಮೂರು ಹೆಣಗಳು ಬಿದ್ದಿದ್ದವು. ಮಹಾಲವೊಂದು ಉರಿಯುತ್ತಿತ್ತು. ಬಾಗಿಲಲ್ಲಿ ಬತ್ತಲೆ ಹೆಣ್ಣು ದೇಹವೊಂದು ಸತ್ತುಬಿದ್ದಿತ್ತು. ಅದರ ಮುಖ ಹಂದಿಯ ಪಿತ್ತಾಶಯದಂತೆ ಕಂದುಹಿಡಿದಿತ್ತು. ಕಾಲೊಂದು ಕತ್ತರಿಸಿಹೋಗಿತ್ತು.

ಅರ್ಧಗಂಟೆ ಕಳೆಯಿತು. ಸೋತು ಸರಿದವರಿಗಿಂತ ದಣಿದಂತಿದ್ದ ಮತ್ತು ಬಟ್ಟೆ ಹೊಲಸಾದ ಕೆಲವು ವಿಜಯಿ ಸೈನಿಕರು ಹಳ್ಳಿಯ ಮೂರು ಮುಖಗಳೊಳಗಿಂದ ಪಶ್ಚಿಮಗಾಳಿಯಂತೆ ಬೀದಿಗಳಲ್ಲಿ ನುಗ್ಗಿದರು. ಅಲ್ಲಲ್ಲಿ ಕಾವಲು-ಭಟರನ್ನು ನಿಲ್ಲಿಸುತ್ತ ನಡೆದರು. ಕೆಲವು ಕುದುರೆ-ಸವಾರರು

'ಭೂದೇವ' ಮಂದಿರಕ್ಕೆ ಬಂದು ಅಲ್ಲಿ ಗೋಡೆಗೆ ಹಚ್ಚಿದ್ದ ಸರಕಾರಿ ಪ್ರಕಟನೆಗಳನ್ನು ಕಿತ್ತು ಹರಿದು ಹಾಕಿ ಕೆಂಪು ಅಕ್ಷರದ ಕೆಲವು ಬಿಳಿಯ ಪತ್ರಿಕೆಗಳನ್ನು ಅಂಟಿಸಿದರು. ನಾಲ್ವರು ಸಶಸ್ತ್ರ ಸೈನಿಕರು ಮಂದಿರದ ಹೆಬ್ಬಾಗಿಲಲ್ಲಿ ಕಾವಲು ನಿಂತರು.

ಆಮೇಲೆ ಬೆರಗುಗೊಳಿಸುವ ಹೊಸ ಪ್ರಕಾರದ ಕಾರ್ಯವು ಆರಂಭವಾಯಿತು. ಶಸ್ತ್ರಗಳಿಲ್ಲದೆ ಸಮವಸ್ತ್ರ ಮಾತ್ರ ಧರಿಸಿದ ಕೆಲವರು ಮನೆಮಠ ಗುಡಿಸಲುಗಳಿಗೆಲ್ಲ ಹಸ್ತಪತ್ರಿಕೆಗಳನ್ನು ಹಂಚಿದರು; ಊರನ್ನೆಲ್ಲ 'ಕರೆವಾತು' (Slogan) ಪತ್ರಿಕೆಗಳಿಂದ ತುಂಬಿಬಿಟ್ಟರು. 'ಮನೆಮನೆಯ ಬಾಗಿಲನ್ನು ತಟ್ಟಿ ಒಳಗಿನವರನ್ನು ಹೊರಗೆಳೆದರು. ಮುಂದುಗಣ್ಣುಗಳಿಂದ ಕೂಡಿದ ನಿಸ್ತೇಜವಾದ ಮುಖವು, ಕಂದುಬಣ್ಣದ ಸಮವಸ್ತ್ರದಲ್ಲಿ ಎದ್ದು ಕಾಣುತ್ತಿರಲು ಯುವಕನೊಬ್ಬ ಗಿಲೀಟು ತಗಡಿನ ಧ್ವನಿವರ್ಧಕದಿಂದ ಬೀದಿ ಬೀದಿಗಳಲ್ಲಿ ಕೂಗುತ್ತ ನಡೆದನು.

ಕ್ರಮವಾಗಿ, ಬಿಸಿಲಿನಿಂದ ಕಪ್ಪುಹಿಡಿದ, ಗಿಡ್ಡ ಕೂದಲಿನ, ಹಳದಿ ಬಣ್ಣದ ತರುಣರನೇಕರು ಕಿಡಕಿಗಳ ಸಲಾಕಿಗಳೊಳಗಿಂದ ತಲೆ ಹಾಕಿ, ಕಣ್ಣು ಬಿಟ್ಟು, ಯಾರು ಬಾಗಿಲ ತಟ್ಟುವರೆಂದು ನೋಡಿದರು. 'ಹುಲಿದೊಗಲು '* ಧರಿಸಿದ್ದರೂ ಆಯುಧಗಳಿಲ್ಲದ ಅವರನ್ನು ಕಂಡು ಅವರಿಗೆ ಅವನು ಪೂರಾ ಕ್ರೂರನಲ್ಲವೆಂದು ಸ್ವಲ್ಪ ನಿರ್ಭಯವೆನಿಸಿರಬೇಕು. ಒಬ್ಬೊಬ್ಬರಾಗಿ ತಮ್ಮ ಗೂಡುಗಳಿಂದ ಜನ ಹೊರಗೆ ಬಂದರು. ಮತ್ತು ಧ್ವನಿವರ್ಧಕದೊಳಗಿಂದ ಆವೇಶಪೂರ್ಣವಾಗಿ ಮಾತನಾಡುತ್ತಿದ್ದ ಆ ಯುವಕನ ಭಾಷಣ ಕೇಳುತ್ತ ದೂರದಲ್ಲಿಯೇ ನಿಂತರು. ಅದೊಂದು 'ಆಟ' ನೋಡಲು ಬಂದಂತಿತ್ತು.

ಸೈನಿಕನಾದವ ಎಂದೂ ಹೇಳದಂತಹ ವಿಚಿತ್ರ ಮಾತುಗಳನ್ನು ಆತ ಹೇಳುತ್ತಿದ್ದ. ಅವನ ಭಾಷಣವೇನೊ ಅವರಿಗೆ ಅರ್ಥವಾಗಲಿಲ್ಲ. ತಿಳಿದದ್ದು ಅವನು ಕೊನೆಗೆ ಹೇಳಿದ "ನಮಗೆ ಅಂಜಬೇಡಿ" ಎಂಬ ಮಾತು ಮಾತ್ರ. ಹಸ್ತಪತ್ರಿಕೆಗಳನ್ನೂ ಬಣ್ಣದ ಕಾಗದಗಳ 'ಕರೆವಾತು' (Slogan) ಪತ್ರಿಕೆ

---

*ಸೈನಿಕನ ಸಮವಸ್ತ್ರ

ಗಳನ್ನೂ ಅವರಿಗೆ ಹಂಚಲಾಯಿತು. ಅವನ ಮಾತು ಮುಗಿದ ಮೇಲೆ ಅವರು ಅವುಗಳನ್ನು ಕೈಯಲ್ಲಿ ಹಿಡಿದುಕೊಂಡೇ ಮನೆ ಸೇರಿದರು. ಈ ರೀತಿ ಯೆಲ್ಲ ಅವರನ್ನು ದಂಗುಬಡೆಸಿತ್ತು.

ಹುವಾಂಗ್-ಲಾವೊ-ಚೀ ಮತ್ತು ಅವನ ಇಬ್ಬರು ಮಕ್ಕಳು ಮಣ್ಣಿನ ಒಲೆಯ ಹತ್ತಿರ ಕುಳಿತು ಗುಜುಗುಜು ಮಾತಾಡುತ್ತಿದ್ದರು. "ಎಲ್ಲ ತಿಳಿ-ಗೇಡಿತನ! ಚೀನಾದ ಪ್ರಜಾಸತ್ತೆ!" ಹುವಾಂಗ್ ಗುಣಗುಟ್ಟಿದ.

"ಚೀನಾ ಸಾರ್ವಭೌಮತ್ವಕ್ಕಿಂತ ಒಂದು ಉಗುರಿನಷ್ಟೂ ಅದೇನು ಒಳ್ಳೆಯದಿಲ್ಲ! ಪ್ರಜಾಸತ್ತೆ ಬಂದು ಹದಿನಾರು ವರ್ಷವಾಯಿತು. ಒಂದು ವರ್ಷವೇನು ಯುದ್ಧ ತಪ್ಪಲಿಲ್ಲ. ದಿನದಿನಕ್ಕೆ ಕೆಡುತ್ತಲೇ ನಡೆದಿದೆ. ಈ ವರ್ಷವಂತೂ ಕೇಡು ಶಿಖರಕ್ಕೆ ಮುಟ್ಟಿದೆ. ಬೇಸಿಗೆಯ ಮೊದಲಲ್ಲಿಯೆ ಸೇನಾಪತಿ ಮಾ-ಕ್ವೈ-ಫೂನ ದಂಡು ಬಂತು; ಆಮೇಲೆ ಫೆಂಗ್-ಟೇನ ಸೈನ್ಯ ಬಂತು; ಮತ್ತೆ ಈಗೋ...." ಒಮ್ಮೆಲೆ ತಡೆದ. ಗೋಣು ಕೊಡವಿ ಯಾರಾದರೂ ತನ್ನ ಅಪಲಾಪವನ್ನು ಕೇಳಿದರೊ ಎಂದು ಸುತ್ತಲೂ ನೋಡಿದ.

ಮಣ್ಣಿನ ಗೋಡೆಗೆ ಅಂಟಿಸಿದ್ದ ಎರಡು ಬಣ್ಣದ ಕಾಗದಗಳು ಹುವಾಂಗನ ಕಣ್ಣಿಗೆ ಬಿದ್ದವು. ಅವನ್ನು ಸೂಕ್ಷ್ಮವಾಗಿ ಅವಲೋಕಿಸಿ ಓದಲು ಯತ್ನಿಸಿದ. ನಾಲ್ವತ್ತು ವರ್ಷಗಳ ಹಿಂದೆ ಸ್ಥಳಿಕ ಸಾಹಿತ್ಯಪರೀಕ್ಷೆಯನ್ನು ಪಾಸಾಗಿ ಅವನು ಪಂಡಿತನೆನಿಸಿದ್ದ. ಮತ್ತು ಶಿಕ್ಷಕನಾಗಿಯೂ ಕೆಲಸ ಮಾಡಿದ್ದ. ಆದ್ದರಿಂದ ಅವನಿಗೆ ಅಕ್ಷರಗಳೆಲ್ಲ ಗೊತ್ತಿದ್ದವು. ಆದರೆ ಇಲ್ಲಿ ಬರೆದವು ಮಾತ್ರ ವಿಚಿತ್ರ ಜೋಡಣೆಯುಳ್ಳವಾಗಿದ್ದವು. ಅವನಿಗೆ ಒಂದೂ ಅರ್ಥ ವಾಗಲಿಲ್ಲ.

ಆತನ ಮಗ ಲಾವೊ-ನಾನ್‌ನೂ ತಂದೆಯ ಹಾಗೆಯೆ ಗೋಣೆತ್ತಿ ಅಕ್ಷರ ಗಳನ್ನು ನಿಟ್ಟಿಸಿ ನೋಡಿದ. ಅವನು ಎರಡು ಅಕ್ಷರಗಳನ್ನು ಮಾತ್ರ ಗುರುತಿಸಿದ. ಒಂದು 'ಒಕ್ಕಲಿಗ' ಎಂದೂ ಮತ್ತೊಂದು 'ಒಕ್ಕಟ್ಟು' ಎಂದೂ ಅರ್ಥವಾಗುತ್ತಿದ್ದವು. ಅಂದೇ ಬೆಳಗಿನಲ್ಲಿ ಸುಡಲ್ಪಟ್ಟ 'ವಖಾರ'ದ ಮೇಲೆ ಇದ್ದ 'ಒಕ್ಕಟ್ಟಿನಿಂದ ಅಭ್ಯುದಯ' ವೆಂಬ ಮಾತುಗಳಲ್ಲಿಯ ಮೊದಲನೆಯ

ಮಾತಿನಿಂದ ಈಗ ಎರಡನೆಯ ಮಾತು ಅವನಿಗೆ ಅರ್ಥವಾಯಿತೆನ್ನಬಹುದು.

ಹುವಾಂಗನ ಕಿರಿಯ ಮಗ ಲಾವೊ-ಚೀಗೂ ಈ ವಿಷಯದಲ್ಲಿ ಕುತೂಹಲ ವುಂಟಾಯಿತು. ಚಿಕ್ಕಂದಿನಿಂದಲೂ ಅಕ್ಷರ ಅಭ್ಯಾಸಕ್ಕೆ ಅವಕಾಶವಿಲ್ಲದೆ ದನ ಮೇಯಿಸುವದು, ಹುಲ್ಲು ಮಾರುವದು ಮುಂತಾದ್ದರಲ್ಲಿಯೆ ಬೆಳೆದ ಆತನಿಗೆ ಗೋಡೆಯ ಮೇಲೆ ಅಂಟಿಸಿದ ಒಂದು ಪತ್ರಿಕೆಯಲ್ಲಿ ಮೊಳಕಾಲ ವರೆಗೆ ಮಾತ್ರವಿದ್ದ ಲಂಗ ಹಾಕಿದ ಹುಡುಗೆಯ ಚಿತ್ರವನ್ನು ಕಂಡು ಬಹು ಸೋಜಿಗವಾಯಿತು. ಬಳಕುವ ಟೊಂಕ ಮತ್ತು ದುಂಡುಮುಖದ ಅವಳು ತೋಳುಗಳನ್ನು ಪಸರಿಸಿ ನಿಂತಿದ್ದಳು.

*“ಇವನವ್ವನ....! ಇದು ಆ ಸಾಮುವಾಯಿಕ ಹೆಂಡಂದಿರು ಬರುವದರ ಚಿನ್ಹ ಕಾಣುತ್ತದೆ”! ಎಂದು ಹುವಾಂಗ ಮುದುಕ ತನ್ನಷ್ಟಕ್ಕೆ ಒಟಗುಟ್ಟಿದ. ಹತ್ತಿರ ಹೋಗಿ ಚಿತ್ರವನ್ನು ಮತ್ತಷ್ಟು ದಿಟ್ಟಿಸಿ ನೋಡಲು ಆ ತೋಳು ಚಾಚಿದ ಹುಡುಗೆಯು ನಾಲ್ಕೈದು ಜನ ಗಂಡಸರ ಮಧ್ಯದಲ್ಲಿ ನಿಂತುದನ್ನು ನೋಡಿದ. ಅವಳ ಮುಖದಲ್ಲಿ ನಗೆಯಿತ್ತು. ಒಂದು ಕೈ ಬಲದ ಗಂಡಸಿನ ಕೈಯನ್ನೂ ಮತ್ತೊಂದು ಎಡದ ಗಂಡಸಿನ ಕೈಯನ್ನೂ ಹಿಡಿದಂತಿತ್ತು. ಈ ಚಿತ್ರ ಲಾವೊ-ಸಾನನ್ನು ಬೆರಗುಗೊಳಿಸಿತು. ಆದರೆ ಹುವಾಂಗನನ್ನು ಉದ್ವೇಗಗೊಳಿಸಲಿಲ್ಲ. ಕಳೆದ ಬೇಸಗೆಯಲ್ಲಿ ತನ್ನ ಹೆಂಡತಿ ತೀರಿದ್ದು ಅವನಿಗೆ ತನ್ನ ಸುದೈವವೆನಿಸಿತು. ಯಾಕಂದರೆ ಈಗ ಅವನಿಗೆ ಈ ಹೊಸ ಬೆಡಗಿನ ಹೆಣ್ಣುಗಳೊಡನೆ ರಮಿಸಲು ಯಾವ ಪ್ರತಿಬಂಧವೂ ಇರಲಿಲ್ಲ.

“ಮೆಲ್ಲಗೆ ಹೇಳು, ಇಲ್ಲವಾದರೆ ಅವರಿಗೆ ಕೇಳಿಸೀತು. ಹಾಂ!.... ಈ ಸಾಮುವಾಯಿಕ ಹೆಂಡಂದಿರ ವಿಚಾರ ಅಷ್ಟೇನು ಕೆಟ್ಟದಲ್ಲ. ನಮ್ಮದೇನು

---

*“ತಾ-ಮಾ-ತಿ” ಎಂದು ಮೂಲಶಬ್ದ. ‘ಅವನವ್ವನ!’ ಎಂದು ಅದರ ಮೂಲ ಅರ್ಥ. ಅನೇಕಾರ್ಥವುಳ್ಳ ಒಂದು ಶಪಿಸುವ ಮಾತು. ಸಾಮಾನ್ಯವಾಗಿ “ಅವನ ಅವ್ವನನ್ನು ಕೆಡಿಸು” ಎಂಬುದು ಮೇಲಣ ಅಭಿಪ್ರಾಯ. ಸಂದರ್ಭಾನುಸಾರದ ವಿವಿಧಾರ್ಥಗಳನ್ನು ಲು-ಶೂನನ ‘ಅವ್ವನ!’ ಎಂಬ ನಿಬಂಧದಲ್ಲಿ ಹೇಳಿದೆ.

ಹೋಗಬೇಕಾಗಿದೆ? ಈಗಂತೂ ನಮ್ಮ ಮನೆಯಲ್ಲಿ ಒಂದೂ ಹೆಂಗಸಿಲ್ಲವಲ್ಲ!" ಎಂದು ಲಾವೊ ತಂದೆಗೆ ಹೇಳಿದ.

ಮುದುಕ ಅವನನ್ನು ಗಾಬರಿಯಿಂದ ದಿಟ್ಟಿಸಿ ನೋಡಿದ. ಮತ್ತೆ ಲಾವೊ-ಚೀನ ಕಡೆಗೂ ನೋಡಿದ. ಕನ್ಫ್ಯೂಸಿಯಸ್ ಮಹರ್ಷಿಯ ಸದಾ-ಚಾರ ತತ್ವಗಳನ್ನು ತಡವರಿಸುತ್ತ ಹೇಳಿ ಮಗನನ್ನು ಸುಮ್ಮನಾಗಿಸಲು ಯತ್ನಿಸಿದ. ಮತ್ತು ವಿಷಯದ ವಿಮರ್ಶೆ ಅಲ್ಲಿಗೆ ನಿಂತಿತು. ಎಲ್ಲರೂ ವಿಚಾರಮಗ್ನರಾಗಿ ಉದಾಸೀನರಾಗಿ ಕುಳಿತರು.

ಥಂಗ್ ! ಥಂಗ್ ! ಅವರು ಹಾರಿಬಿದ್ದರು. ತಮ್ಮ ನೆಲಮನೆಗೂ ಅವರು ನುಗ್ಗಿದರೆ? ಅವರು ಏಳುವಷ್ಟರಲ್ಲಿ ಬಾಗಿಲಿಗೆ ಮತ್ತೊಂದು ಸುತ್ತಿಗೆಯ ಏಟು. ಲಾವೊ-ಚೀ ಎದ್ದು ಕೊಂಡಿ ತೆಗೆದ. ಬಂದವ ವಿದ್ಯಾರ್ಥಿ ಸೈನಿಕ. ಅವನ ಜೊತೆಗೆ ಅದೇ ಹಳ್ಳಿಯ ಹುಳುಕುಮೋರೆಯ 'ಲೀ'ಯೂ ಬಂದಿದ್ದ. ಅವರು ಒಳಕ್ಕೆ ಬಂದರು. ಸೈನಿಕ ಮುಗುಳ್ನಗೆಯಲ್ಲಿದ್ದ.

"ನಮ್ಮೊಳಗೆ ಓದು-ಬರೆಹ ಬಲ್ಲವನೆಂದರೆ ಈತನೆ, ಹುವಾಂಗ್-ಲಾವೊ ಚೀ" ಎಂದು 'ಲೀ' ಹುವಾಂಗ್ ಮುದುಕನ ಪರಿಚಯ ಮಾಡಿಕೊಟ್ಟ.

"ಬಹಳ ಒಳ್ಳೆಯದಾಯಿತು. ನೀನು ಈಗ ನಮ್ಮ ಜೊತೆಗೆ ಬರಬೇಕು."

ಹುವಾಂಗ್-ಲಾವೊ-ಚೀನ ತುಟಿಗಳು ನಡುಗುತ್ತಿದ್ದವು. ಅವನಿಗೆ ಮಾತೇ ಬರದಾಯಿತು.

ಬಂದ ಅಧಿಕಾರಿಗೆ ಹಳ್ಳಿಗರನ್ನು ಹಳ್ಳಿಯ ಆಡಳಿತಕ್ಕೆ ಸಂಘಟಿಸುವದು ಬೇಕಾಗಿದೆಯೆಂದೂ ಅದಕ್ಕಾಗಿ ಓದು-ಬರೆ ಬಲ್ಲ ಒಬ್ಬ ವ್ಯಕ್ತಿ ಬೇಕಾಗಿದೆಯೆಂದೂ ಹುಳುಕುಮುಖದ 'ಲೀ' ಹೇಳಿದ. ತನ್ನ ಬಗಲಲ್ಲಿಯ ಕಾಗದಗಳ ಗಂಟನ್ನು ತೋರಿಸಿ ಇವುಗಳನ್ನೆಲ್ಲ ವಿವರಿಸಿ ಜನರಿಗೆ ಹೇಳಬೇಕಾಗಿದೆಯೆಂದ.

"ನಾನು ವಯಸ್ಸಾದವ. ಓದಲಿಕ್ಕೆ ಸರಿಯಾಗಿ ಕಣ್ಣೂ ಕಾಣವು. ಈ ಕೆಲಸಕ್ಕೆ ನಾನು ಯೋಗ್ಯನಲ್ಲ." ಎಂದು ಹುವಾಂಗ್ ವಿನಯದಿಂದ ಹೇಳಿದ.

ಅವನಿಗೆ ಅದರಲ್ಲಿ ಸೇರುವದು ಬೇಕಾಗಿರಲಿಲ್ಲ; ಪ್ರತಿರೋಧಿಸುವ ನಿಶ್ಚಯ ವನ್ನು ಮಾಡಿದ್ದ. ಆದರೆ ಕೊನೆಗೆ ಅವರು ಹೇಳಿದಂತೆ ಮಾಡಲು ಒಪ್ಪಲೇ ಬೇಕಾಯಿತು. ಲಾವೊ-ಸಾನ್ ನೆಲದ ಮೇಲೆ ಕುಳಿತವ ಅಲ್ಲಿಯೆ ಉಳಿದ.

ಉದಾಸೀನನಾಗಿದ್ದ ಲಾವೊ-ಚೀ ಏನಾದರೂ ಚುರುಕ್ ನಡೆವರೆ ನೋಡಬೇಕೆಂದು ತಾನಾಗಿಯೆ ಅವರ ಬೆನ್ನು ಹತ್ತಿದ.

ಅಲ್ಪಾವಕಾಶದಲ್ಲಿಯೆ 'ಒಕ್ಕಲಿಗರ ಸಂಘ'ವು ಏರ್ಪಡಿಸಲ್ಪಟ್ಟಿತ್ತು. ಹುವಾಂಗ್-ಲಾವೊ-ಚೀನಿಗೆ 'ಹುವಾ-ಮಿಂಗ್ ಶಿ' ಎಂಬ ರಜಿಸ್ಟರದಲ್ಲಿ ಹೆಸರು ಗಳನ್ನು ಬರೆಯುವ ಕೆಲಸವು ಒಪ್ಪಿಸಲ್ಪಟ್ಟಿತ್ತು. ಅವನ ಹತ್ತಿರ ಸಮವಸ್ತ್ರ ಧರಿಸಿದ ಹದಿನೇಳು ವರ್ಷದ ತರುಣನೊಬ್ಬ ಕುಳಿತಿದ್ದ. ಅವನೇ ಮೇಲಧಿ ಕಾರಿಯೆಂದು ಹುಸಾನ್ ತಿಳಿದಿದ್ದ. ಅವನಿಂದಲೆ ಈ ತೀಕ್ಷ್ಣ ವಿಚಾರ ಹುಟ್ಟಿ ದಂತಿತ್ತು. ಅವನು ತರುಣರನ್ನು ಎಲ್ಲ ಕಡೆಗೂ ಕಳಿಸುತ್ತಿದ್ದ. ಅವರು ಓಡಿ ಹೋದ ಜಮೀನ್ದಾರರನ್ನು ಹಿಡಿದುಕೊಂಡು ಬರಬೇಕಾಗಿತ್ತು. ಮತ್ತು ಹಳ್ಳಿಗಳಲ್ಲಿ ಅಲ್ಲಲ್ಲಿ ಅಡಗಿಕೊಂಡು ಕುಳಿತ ಹಳ್ಳಿಗರನ್ನು ಹೊರಗೆಳೆದು ಈ ಹೊಸ ಸಂಘದ ಸದಸ್ಯರನ್ನು ಮಾಡಬೇಕಾಗಿತ್ತು.

ಲಾವೊ-ಚೀಗೆ ಇದು ಒಳ್ಳೆ ಯೋಜನೆನಿಸಿತಾದರೂ ಸಾಮುದಾಯಿಕ ಹೆಂಡಂದಿರ ವಿಚಾರವಿನ್ನೂ ಏಕೆ ಇಲ್ಲವೆಂದು ಯೋಚಿಸುತ್ತಲೇ ಇದ್ದ. ಅದು ಜನರನ್ನು ಮೋಸಗೊಳಿಸಲು ಬಳಸಿದ ಶಬ್ದ ವಿಧಾನ ಮಾತ್ರವೇನೊ ಎಂದೂ ಚಿಂತಿಸಿದ.

"ಎಲಾ ಇವರ ಅವ್ವನ....!" ಎಂದ ಮನಸ್ಸಿನಲ್ಲಿ.

ಮಶಿನ್‌ಗನ್ನುಗಳ ಗುಡುಗು ಗರ್ಜನೆಗಳು ದೂರಾಗಿದ್ದವು. ಮತ್ತು ಅಗಸೆಗಳಲ್ಲಿ ನಿಲ್ಲಿಸಿದ ಸೈನಿಕರ ತಂಡಗಳನ್ನೂ ಹಿಂತೆಗೆಯಲಾಗಿತ್ತು. ಭೂದೇವ ಮಂದಿರದ ಹೆಬ್ಬಾಗಿಲಲ್ಲಿ ಮಾತ್ರ ನಾಲ್ವರು ಯೋಧರು ನಿಂತಿದ್ದರು; ಒಳಗೆ ಮತ್ತೆ ಹತ್ತು ಜನ. ಅಂತೂ ಸುವ್ಯವಸ್ಥೆ ನೆಲೆಸಿತ್ತು. ಹೆಂಗಸರೂ ಹುಡುಗೆಯರೂ ಮತ್ತೆ ಬೀದಿಗಳಲ್ಲಿ ಸುಳಿಯುಹತ್ತಿದ್ದರು.

"ಸಂಘಕ್ಕೆ ಸೇರಿರಿ" ಎಂದು ಗುಂಪುಗೂಡಿದ ಜನ ಕೂಗಿದರು.

ಒಂದು ದಿನ ಐದಾರು ಬಾಲ-ಭಟರು ಬಂದರು. ಅವರೂ ಉಳಿದವರಂತೆ ಕಂದುಬಣ್ಣದ ಸಮವಸ್ತ್ರ ಧರಿಸಿದ್ದರು. ಆದರೆ ಇನ್ನೂ ಪೂರ್ಣ ಹರೆಯವಿಲ್ಲದ ಅವರು ತರುಣರಂತೆ ಏರು ದನಿಯಿಂದ ಎಲ್ಲ ಹೇಳುತ್ತಿದ್ದರು. ನೇರವಾಗಿ ಗುಡಿಸಲುಗಳಿಗೆ ಹೋಗಿ ಹೆಂಗಸರನ್ನೂ ಹುಡುಗೆಯರನ್ನೂ ಹೊರಕ್ಕೆ ತಂದರು. ವಿಧವಿಧವಾಗಿ ಉಪದೇಶ ಮಾಡಿದರು. ಊರ ತುಂಬೆಲ್ಲ ಅವರ ಬಗ್ಗೆ ವಿವಂಚನೆ ನಡೆಯುವಷ್ಟರಲ್ಲಿಯೆ — ಅವರೂ ಹೆಂಗಸರೇ ಆಗಿರುವರೆಂದೂ ಹೆಂಗಸರದೇ ಒಂದು ಸಂಘಟನೆಯನ್ನು ಉಂಟುಮಾಡಲು ಬಂದಿರುವರೆಂದೂ ಗೊತ್ತಾಯಿತು.

ಹುವಾಂಗ್-ಲಾವೊ-ಚೀ ಮನೆಗೆ ಬಂದ; ಮಕ್ಕಳನ್ನು ಬಯ್ಯಹತ್ತಿದ.

‘ ಆ ಆಮೆ ಮೊಗದ ‘ಲೀ’ ಇದೆಲ್ಲಕ್ಕೂ ಕಾರಣ; ಮತ್ತು ನೀವಿಬ್ಬರೂ ಕೂಡ ನನ್ನನ್ನು ಈ ಪೇಚಾಟದಲ್ಲಿ ತೊಡಗಿಸಲು ಕಾರಣರಾದಂತೆ ತೋರುತ್ತದೆ. ಗಂಡಸರನ್ನು ಸಂಘಕ್ಕೆ ನೇರಿಸುವದೇನೊ ಸರಿ! ಆದರೆ ಇದೀಗ ಅವರು ಹೆಂಗಸರಿಗೂ ಕೈ ಹಚ್ಚಿದ್ದಾರೆ! ಅವರಿಗೂ ಸಂಘವಂತೆ! ಸಾಮುವಾಯಿಕ ಹೆಂಡಂದಿರನ್ನು ಏರ್ಪಡಿಸಲು ಇದು ಮೊದಲನೆಯ ಹೆಜ್ಜೆಂಶೊ? ಇಂದಿಲ್ಲ ನಾಳೆ ಇದು ಸಾಮ್ಯವಾದಕ್ಕಿಳಿಯಲೇಬೇಕು. ಹಾಗಾದರೆ ಮುಗಿಲು ಕಳಚಿ ಬಿದ್ದೀತು! ಈ ರಾಡಿಯಲ್ಲಿ ನನ್ನಂತಹ ಪ್ರಾಮಾಣಿಕ ಸರಳ ಜೀವಿಯೂ ಹೀಗೆ ಎಳೆಯಲ್ಪಟ್ಟು ಸಿಕ್ಕಿಬೀಳಬೇಕೆ? ಸ್ವರ್ಗದಲ್ಲಿ ಕ್ಷಮೆ ದೊರಕೀತು, ಆದರೆ ಈ ಹಳ್ಳಿಗರು ಕ್ಷಮಿಸುವರೆ.... ? ಛೀ ಎಂದಿಗೂ ಆಗದು.

ಲಾವೊ-ಸಾನ್ ಏನೊ ಹೇಳಬೇಕೆಂದು ಬಾಯ್ದೆರೆದ. ಆದರೆ ಮಾತು ಒಂದೂ ಹೊರಡದು. ಲಾವೊ-ಚೀ ಗೋಡೆಯ ಮೇಲೆ ಚಿತ್ರವನ್ನು, ಬಿಳಿ ದೋಳ ಕನ್ಯೆಯನ್ನು ಬಾಗಿ ನೋಡಿದ. ಸಾಮ್ಯವಾದ ಹೇಗೆ ಸಂಘಟಿತವಾಗಿ ಬಂದೀತು ಎಂದು ಅವನಿಗೆ ಆಶ್ಚರ್ಯವಾಯಿತು. ಅಂದು ರಾತ್ರಿ ಅವನಿಗೆ ವಿವಿಧ ರೀತಿಗಳ ವಿಚಾರದ ಕನಸುಗಳೇ!

ಹಳ್ಳಿಯ ತುಂಬೆಲ್ಲ ಪ್ರಕ್ಷುಬ್ಧ ವಾತಾವರಣವೇ ಉಂಟಾಯಿತು. ತರುಣರು ಅತ್ತಿತ್ತ ಓಡಾಡುತ್ತಲೇ ಇದ್ದರು. ಸುದ್ದಿ ಹುಟ್ಟಿಸುವದು, ಹೊಸ ಸುದ್ದಿ ತರುವದು ನಡದೇ ಇತ್ತು. ಲಾವೊ-ಚೀ ಇಡೀ ದಿನ ಆ ಹೆಂಗಸು

ಸೈನಿಕರ ಬೆನ್ನು ಹಿಂದೆಯೆ ಇದ್ದ. ಮತ್ತು ಏನಾದರೂ ಅದ್ಭುತ ನಡೆಯ ಬಹುದೆಂದು ಆತುರತೆಯಿಂದ ನಿರೀಕ್ಷಿಸುತ್ತಿದ್ದ.

ಹಳ್ಳಿಯಲ್ಲಿಯ ಏಳೆಂಟು ಲಫಂಗರು ಹುಳುಕು-ಮೊಗದ 'ಲೀ'ಯ ಮನೆಯಲ್ಲಿ ಸೇರಿದ್ದರು. ತೆಂಕಣ ದಳಕ್ಕೆ ಸಹಾಯ ಮಾಡಿದ್ದಕ್ಕಾಗಿ ಅವ ನನ್ನು ಮನಬಂದಂತೆ ಬಯ್ಯಹತ್ತಿದರು. "ಏಡಿ! ಇವರು ಸಾಮ್ಯವಾದಿಗಳಲ್ಲ ವೆಂದು ಖಾತ್ರಿಯಾಗಿ ಹೇಳಿದೆ. ಆದರೆ ಈಗೇನು ನಡೆಯುತ್ತಿದೆ ನೋಡು! ಹೆಂಗಸರನ್ನು ಸಂಘಟಿಸುವದಂತೆ! ಇದು ಮೊದಲ ಹೆಜ್ಜೆ. ಅದರಿಂದೇನಾಗು ವದು ಗೊತ್ತೆ? ನಿನಗೂ ಒಬ್ಬ ಹೆಂಡತಿಯುಂಟು. ಆಯಿತು, ಅವಳನ್ನು ಮೊದಲು ಸಾಮುವಾಯಿಕ ಮಾಡು." ನಿಜವಾಗಿಯೂ ಲೀ-ಮಾತ್ಸನಿಗೆ ಹೆಂಡತಿ ಇದ್ದಳು; ಅವಳಿಗೆ ಹುಳುಕು ಕಲೆಗಳೇನೂ ಇರಲಿಲ್ಲ. ಆದರೆ ಅವಳು ಹಂದಿಯ ಗೂಡಿನಲ್ಲಿ ಅಂಜಿ ನಡಗುತ್ತ ಬಿದ್ದುಕೊಂಡಿದ್ದಳು.

ಇಳಿಹೊತ್ತಿನ ಸುಮಾರಕ್ಕೆ ಹುವಾಂಗ್-ಲಾವೊ-ಚೀಯು "ಮೇಲಧಿ ಕಾರಿಗೆ" ಹೆಂಗಸರನ್ನು ಸಾಮುವಾಯಿಕ ಮಾಡುವರೆಂಬ ಅಂಜಿಕೆ ಹಳ್ಳಿಗರಲ್ಲಿ ಉಂಟಾದುದು ತಿಳಿಯಿತು. ಅವನು ಎಲ್ಲ ಜನರ ಸಭೆ ಕರೆದ. ಅರ್ಧ ತಾಸಿನ ವರೆಗೆ ತನ್ನ ಚಿಕ್ಕ ಗೋಣು ಉದ್ದಕ್ಕೆ ಚಾಚಿ ಪುಪ್ಪುಸ ದಣಿಯುವ ವರೆಗೆ ಏರುದನಿಯಿಂದ ಭಾಷಣ ಮಾಡಿದ. 'ಸಾಮುವಾಯಿಕ ಹೆಂಡಂದಿರ'ನ್ನು ಮಾಡುವ ವಿಚಾರವು ಜಮೀನ್ದಾರರು ಹುಟ್ಟಿಸಿದ ಸುಳ್ಳು ಎಂದೂ ತಮ್ಮ ವಿಷಯವಾದ ಅಪಪ್ರಚಾರವೆಂದೂ ಹೇಳಿದ. ಮತ್ತು ಅವರ ತಪ್ಪು ಕಲ್ಪನೆ ಹೋಗಲಾಡಿಸಲು ಯತ್ನಿಸಿದ. ಒಬ್ಬ ಸೈನಿಕೆಯೂ ಭಾಷಣ ಮಾಡಿದಳು.

ಜನರು ಕೇಳಿದರು; ಪ್ರತಿ ಏನೂ ಹೇಳಲಿಲ್ಲ. ಅವರಿಗೆ ಅವನ ಮಾತು ಗಳಲ್ಲಿ ಪೂರ್ಣ ವಿಶ್ವಾಸ ಹುಟ್ಟಲಿಲ್ಲವೆನ್ನುವದು ಮಾತ್ರ ಸ್ಪಷ್ಟವಾಗಿತ್ತು. ಯಾಕಂದರೆ ಮನೆ ಮುಟ್ಟಿದೊಡನೆ ಅವರು ಬಾಗಿಲು ಹಾಕಿ ಅಗಳಿ ಹಾಕಿದ ರಲ್ಲದೆ ಹೆಂಗಸರೂ ಮತ್ತೆ ಅಡಗಿಕೊಂಡೇ ಕುಳಿತರು........

ಒಂದು ದಿನ ಹತ್ತೆಂಟು ಗಟ್ಟಿಗರಾದ ಹಳ್ಳಿಗರು ಸಮೀಪದ ಕಾಡಿನಲ್ಲಿ ಒಟ್ಟುಗೂಡಿದರು. ಬಿಸಿಲು ಪ್ರಖರವಾಗಿತ್ತು. ಗಾಳಿ ಉಸುಕು ಮತು ಮಣ್ಣು ತೂರುತ್ತಿತ್ತು. ನಾಯಿಗಳ ಕೆದರಿದ ಮೈಗೂದಲಂತೆ ಅಲ್ಲಲ್ಲೆ

ಗುಂಪೆಗಳು ಬಿದ್ದಿದ್ದವು. ‘ಜೀವಂತ ಪಿಶಾಚಿ’ ಎಂದು ಕರೆಯಲ್ಪಡುತ್ತಿದ್ದ ಸೊಟ್ಟಮುಖದವನೊಬ್ಬ ದೊಡ್ಡ ಗಿಡವೊಂದರ ಗಂಟು-ಬೇರಿನ ಮೇಲೆ ಕುಳಿತು ಮೇಲೆ ನೋಡುತ್ತ ಸಿಟ್ಟಿನಿಂದ ಗುಡುಗಿದ:

“ಇವರ ಅಭಿವಚನಗಳೆಲ್ಲ ನಮ್ಮನ್ನು ಮೋಸಗೊಳಿಸಲಿಕ್ಕೆಂದೇ ನಾನು ತಿಳಿಯುತ್ತೇನೆ. ಒಂದು ತುಣುಕು ಭೂಮಿಯನ್ನು ಕೂಡ ಯಾರೂ ನನಗೆ ಕೊಟ್ಟಿದ್ದನ್ನು ನಾನು ಕಾಣೆ. ಎಂದ ಮೇಲೆ ನಮ್ಮ ಹೊಲಗಳು ಸಿಗುವವೆಂದು ಹೇಗೆ ನಂಬುವದು? ಅದು ಆಗುವದಾದರೂ ಎಂದು? ಆವೆಯನ್ನು ನಾಯಿಯಾಗಿ ಮಾಡಬಹುದೆ? ಇವರೂ ಉಳಿದವರಂತೆಯೆ. ಅಂತರವಿಷ್ಟೆ—ಸಂಘಗಳೊ, ಸಮಿತಿಗಳೊ.... ಅವರ ಮನೆ ಹಾಳಾಗ! ಅವರ ಅಪ್ಪನನ.... ಅದೇ ಉರಿಬಿಸಿಲಲ್ಲಿ ನಾವಿಲ್ಲಿ ದುಡಿಯುತ್ತ ಜೀವದು ಸುರಿಸುತ್ತ ನಿಂತಿದ್ದೇವೆ. ಹೌದು! ಇದೇ ಅವರಿಂದ ನಮಗೆ ದೊರೆತ ಲಾಭ!”

“ಅವರು ನಾಯಿ-ಆವೆ ಜಾತಿಯ ಜನರೂ ಅಲ್ಲ.” ಎಂದು ಒಬ್ಬನೆಂದ. “ಗುಪಿಯಲ್ಲಿ ಅವರ ಆಟ ನಡೆದೇ ಇದೆ. ಲಾವೊ-ಚೀ ಅವರನ್ನು ಕಣ್ಣಾರೆ ನೋಡಿ ಬಂದಿರುವದಾಗಿ ಹೇಳುತ್ತಾನೆ. ಅವರು ಇಷ್ಟೊಂದು ಸುಳ್ಳಾಡುತ್ತಿರುವಾಗ ಅವರನ್ನು ನಂಬುವದಾದರೂ ಹೇಗೊ?”

ಮತ್ತೊಬ್ಬ ಎಳೆಹರೆಯದವ ಚಿಣ್ಣಿಕುಡಿ ಮಿಟಕುತ್ತ ಗಂಭೀರವಾಗಿ ಹೇಳಿದ:

“ಅವರು ಇನ್ನಾದರೂ ಸಂತೋಷ-ಕೂಟಗಳನ್ನು ಏರ್ಪಡಿಸಬಹುದು. ನಾವೂ ಅವರ ವಿನೋದಗಳಲ್ಲಿ ಭಾಗವಹಿಸಬಹುದು.”

“ಅವರಲ್ಲಿ ಸಾಮುದಾಯಿಕ ಹೆಂಡಂದಿರಿಲ್ಲದಿದ್ದಲ್ಲಿ ಆ ಐದಾರು ಸೈನಿಕೆಯರು ಅವರೊಡನೆ ಮಾಡುತ್ತಿರುವದಾದರೂ ಏನು? ಈ ಸೈನಿಕರಿಗಷ್ಟೆ ಸಾಮುದಾಯಿಕ ಮಾಡಲು ಪರವಾನಿಗೆ ಇದೆಯೆ! ನಾವೂ ಮಾಡ ಹೋದರೆ! ಯಾರಾದರೂ ಒಲ್ಲೆಂದರೆ ಮಾನವ ಪ್ರಾಣಿಯಲ್ಲವಷ್ಟೆ? ಇವರಪ್ಪನನ....” ಎಂದನೊಬ್ಬ.

“ಇರಲಿ ಬಿಡೊ! ಆ ತಳ್ಳನ್ನ ಮಂದಗಾಮಿನಿ.... ಅಡ್ಡಿಯಿಲ್ಲ ಅಲ್ಲವೆ?”

ಎಲ್ಲರೂ ಹೊಳ್ಳೆಂದು ನಕ್ಕರು. ಹಸಿದವ ಹೊಟ್ಟೆಕಿಚ್ಚಿನಿಂದ ಗಪಗಪ ತಿನ್ನಲೆಳಸುವಂತಾಗಿತ್ತು ಅವರ ಸ್ಥಿತಿ.

"ಏನಾದರೂ ಪ್ರಾರಂಭ ಮಾಡಿಯೆಬಿಡೋಣ! ಹೆಣ್ಣಿಲ್ಲದೆ ಇಷ್ಟೊಂದು ದಿನಗಳೆದದ್ದು ಸಾಕು! ಇದೀಗ ಹೊತ್ತು ಸಾಧಿಸುವಂತಿದೆ. ನಡೆಯಿರಿ! ಹಿಂದುಳಿದವ ಆಮೆಯಿಂದ ನಾಯಿಯಾದಂತೆ."

ಜೀವಂತ-ಪಿಶಾಚಿ ಜಿಗಿದೆದ್ದ; ಆನಂದದಿಂದ ಕುಣಿದ. ಈ ಮಾತು ಗಳೆಲ್ಲ ಅವನ ಮನಸ್ಸನ್ನು ಹಿಡಿದಿದ್ದವು. ಅವನೂ ಭಾಷಣ ಮಾಡ ಬೇಕೆನ್ನುವಷ್ಟರಲ್ಲಿ ದುರ್ದೈವದಿಂದ ಬಿರುಗಾಳಿ ಎದ್ದು ಅಡ್ಡಿಯಾಗಿತ್ತು. ಅದು ತರೆತರೆಯಾಗಿ ಉಸುಕನ್ನು ಹಾರಿಸಿ ಅವರ ಸುತ್ತು ಆವರಣವನ್ನುಂಟು ಮಾಡಿತು........

ಲಾವೊ-ಚೀಯಿಂದ ಈ ಕುಹಕಿಗಳ ವಿಚಾರಗಳು ಸ್ತ್ರೀ ಸೈನಿಕರ ಕಿವಿ ಮುಟ್ಟದಿರಲಿಲ್ಲ. ಅವರು ಅವಸರದಿಂದ ಆ ಹಳ್ಳಿಯನ್ನೆ ಬಿಟ್ಟು ನಡೆದರು. ಹುವಾಂಗ್-ಲಾವೊ-ಚೀನಿಗೆ 'ಮೇಲಧಿಕಾರಿಯ' ಸುಳಿವೆ ಹತ್ತಲಿಲ್ಲ. ಅಂತೂ ಎಲ್ಲರಿಗೂ ಅದೇನೊ ಸಮಾಧಾನವಾದಂತಾಗಿತ್ತು. ದಕ್ಷಿಣದವರು ಸೋಲ ಹತ್ತಿದ್ದರೆಂಬುದು ಸ್ಪಷ್ಟವಾಗಿತ್ತು.

ಹೀಗೆ ಪರಿಸ್ಥಿತಿ ಬದಲಿಸುತ್ತಿರಲು 'ಜೀವಂತ-ಪಿಶಾಚಿ' ಮತ್ತು ಅವನ ಗುಂಪಿನ ಪುಂಡರು ಹೆಚ್ಚು ಉತ್ಸಾಹಿತರಾಗಿದ್ದರು. ಆದರೆ ಪ್ರಕಟ ವಾಗಿ ಅವರು ಯಾವ ಅತಿಕ್ರಮಣವನ್ನೂ ನಡಿಸಲಿಲ್ಲ. ಹುಳುಕುಮೊಗದ 'ಲೀ'ಯನ್ನು ಮೊದಲು ಯಾರು ಬಡಿದರೆಂಬುದೇ ಯಾರಿಗೂ ತಿಳಿದಿರಲಿಲ್ಲ. ಅನೇಕರು ಅಲ್ಲಿಯ ಪುಂಡರೇ ಅವನ ಸ್ವೇಚ್ಛಾಚಾರಕ್ಕಾಗಿ ಅವನನ್ನು ದಂಡಿಸಿರಬೇಕೆಂದು ತಿಳಿದರು. ಕೆಡಿಸದಿರುವ ಅವನ ಹೆಂಡತಿಯಿಂದಾಗಿ ಎಲ್ಲ ತೊಂದರೆ ಇರಬೇಕು ಎಂದು ಅನೇಕರು ತಿಳಿದಿದ್ದರು. ಅದೇ ವೇಳೆಗೆ 'ಚಾಂಗ್ಸ'ರ ನೆಲಮನೆಯಲ್ಲಿ ಅಡಗಿಸಿಟ್ಟ ಅನೇಕ ಗೋದಿಯ ಗೋಣಿ-ಗಳನ್ನೂ ಅಪಹರಿಸಲಾಗಿತ್ತು. ಈ ಬಂಡುಗಾರರು ಊರಲ್ಲಿಯವರೇ ಇರ-ಬೇಕೆಂದು ಪ್ರತಿಯೊಬ್ಬನಿಗೂ ಸಂಶಯ ಬರುತ್ತಿತ್ತು. ಆದರೆ ಚಾಂಗ್ ಮುದುಕ ಮಾತ್ರ ಯಾವ ಮಾತನ್ನೂ ಆಡಲಿಲ್ಲ.

ಹುವಾಂಗ್-ಲಾವೊ-ಚೀನಿಗೂ ಹೊಸಹೊಸ ಪೀಡೆಗಳುಂಟಾಗಹತ್ತಿದವು. ಅವನು ಪೊರಪೊರಡಲು ಓಣಿಗಳಲ್ಲಿಯ ನೆರೆಹೊರೆಯುವರು ಅವನೊಡನೆ ಮಾತಾಡುವದನ್ನು ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದರು. ಮತ್ತು ದೂರದಿಂದ ಮೋರೆ ಸೊಟ್ಟಮಾಡಿ ಅಣಕಿಸುವಂತೆ ತೋರುತ್ತಿದ್ದರು. ಇದೆಲ್ಲವೂ ಹುವಾನ ನಿಗೆ ತಿಳಿಯದಿರಲಿಲ್ಲ.

ಭೂದೇವ ಮಂದಿರದ ಕಾವಲಿಗಿದ್ದ ನಾಲ್ಕು ಸೈನಿಕರೂ ಒಂದು ದಿನ ಕಣ್ಮರೆಯಾದರು. ಅದು ಬಹು ವಿವಂಚನೆಗೂ ಕಾರಣವಾಯಿತು. ಹಳ್ಳಿಯ ತುಂಬೆಲ್ಲ ನಾನಾತರಹದ ಸುದ್ದಿ ಹರಡಿದವು. ಅದಕ್ಕೆ ಶಿಖರವಿಟ್ಟಂತೆ ಅಲ್ಲಲ್ಲಿ ಲೂಟಿಗಳೂ ಹೊಡೆದಾಟಗಳೂ ನಡೆದವು—ಏತಕ್ಕಾಗಿ ಎಂಬುದೇ ಯಾರಿಗೂ ತಿಳಿದಿರಲಿಲ್ಲ. ಗಾಯಗೊಂಡವರಲ್ಲಿ 'ಜೀವಂತ-ಪಿಶಾಚಿ'ಯೂ ಒಬ್ಬನಾಗಿದ್ದ; ಮತ್ತು ಅವನು ಫರಾರಿಯಾದ. ಅದೇ ತಾನೆ ಸಂಘಟಿಸಿಕೊಂಡ ಹಳ್ಳಿಗರ ಗುಂಪು ಪುಂಡರನ್ನು ಆಕ್ರಮಿಸಿ ಅನೇಕರನ್ನು ಗಾಯಗೊಳಿಸಿತು. ರಾತ್ರಿ ಉರಿ ಎದ್ದಿತು. ಅದು ಎಲ್ಲಿ ಎಂಬುದನ್ನು ಶೋಧಿಸಲು ಹೊರಬಿದ್ದವನೊಬ್ಬ ಅದು ಭೂದೇವ ಮಂದಿರದಿಂದ ಎಂಬುದನ್ನು ಕಂಡು ಸಮಾಧಾನಗೊಂಡಂತೆ ಮೆಲ್ಲನೆ ತನ್ನ ಗುಡಿಸಲನ್ನು ಸೇರಿಕೊಂಡ.

ಮರುದಿನ ಮುಂಜಾನೆ ಉತ್ತರದವರ ಸೈನ್ಯಭಾಗವೊಂದು ಹಳ್ಳಿಯ ಒಂದು ಅಂಚಿನಲ್ಲಿ ಬಂದು ತಲುಪಿತು. ದಲಪತಿ ಹಳ್ಳಿಯ ಜಮೀನ್ದಾರರ ಮುಖ್ಯನಾದ ಹಳ್ಳಿಯ ಪಟೇಲನನ್ನು ಭೆಟ್ಟಿಗೆ ತರಲು ಆಳನ್ನು ಕಳಿಸಿದ; ಆದರೆ ದೊಡ್ಡವರೊಬ್ಬರೂ ಕಣ್ಣಿಗೆ ಬೀಳಲಿಲ್ಲ. ಕರಪತ್ರ ಹಂಚುವ ದಂಡು ಬರುವದಕ್ಕೆ ಮೊದಲೇ ಊರಲ್ಲಿಯ ಅನೇಕ ಗೃಹಸ್ಥರೊಡನೆ ಅವರು ಕಾಲು ಕಿತ್ತಿದ್ದರು. ಹುವಾಂಗ್ ಮುದುಕ ಕೂಡ ಬೇನೆಯಿಂದ ಹಾಸಿಗೆ ಹಿಡಿದಿದ್ದ. ಅದರಿಂದ ಜವಾಬಿಗೆ ಅವನಿಗೂ ಹೋಗುವಂತಿದ್ದಿಲ್ಲ. ಕೊನೆಗೆ ಎಲ್ಲ ಕಳೆದು ಕೊಂಡಿದ್ದ ಚಾಂಗ್ ಮುದುಕನನ್ನು ಠಾಣೆಗೆ ಕರೆದುಕೊಂಡು ಹೋಗ-ಲಾಯಿತು.

ಪ್ರತಿಯೊಬ್ಬನೂ ಮುಗುಡದಿಂದ ತನ್ನ ಸರತಿಯನ್ನು ಕಾಯುತ್ತ ನಿಂತಿದ್ದ. ಅದೇ ಬಂದ ಅನೇಕ ಸೈನಿಕರು ಬೈಲಿನಲ್ಲಿ ಬೀಡು ಬಿಡಲು

ಆರಂಭಿಸಿದರು. ಅವರು ಎತ್ತರವಾದ ಆಳುಗಳಾಗಿದ್ದರು. ಮತ್ತು ಉತ್ತರದ ಭಾಷೆಗಳನ್ನಾಡುತ್ತಿದ್ದರು. ಜೊತೆಗೆ ಕರಪತ್ರಗಳನ್ನೇನೊ ತಂದಿದ್ದರು; ಆದರೆ ಹಂಚಲಿಲ್ಲ.

ಅಷ್ಟರಲ್ಲಿ ಸೈನಿಕರ ತುಕಡಿಯೊಂದು ಹುವಾಂಗ್-ಲಾವೊ-ಚೀನ ಹಾಸಿಗೆಯ ಹತ್ತಿರ ಬಂದಿತು. ಮತ್ತು ಅವನಿಗೆ ಏಳಲು ಹೇಳಲಾಯಿತು. ಮೈಯಲ್ಲಿ ಸಟ್ಟಗಿರದಿದ್ದರೂ ಅವನು ಅವರ ಮಾತು ಕೇಳಲೇಬೇಕಾಯಿತು. ಮತ್ತು ಅವನ ಮಗ ಲಾವೊ-ನಾನನೂ ಕೂಡ ಎಳೆದು ತರಲ್ಪಟ್ಟನು. ಹುವಾಂಗ್-ಲಾವೊ-ಚೀ ಅಂಜಿ ನಡುಗಿದ. "ಎಲಾ ಇವನೌವ್ವನ.... ಇದೆಂಥ ಗೊಂದಲ?" ಅಷ್ಟರಲ್ಲಿ ಪರಿಚಿತ ಧ್ವಜವು ನೆಲವಲ್ಲಿ ನೆಡಲ್ಪಟ್ಟುವನ್ನು ಕಂಡು ಅವನಿಗೆ ಸ್ವಲ್ಪ ಸಮಾಧಾನವಾದಂತನಿಸಿತು.

"ಯಾರು ನೀನು?" ಎಂದು ಅಧಿಕಾರಿಯೊಬ್ಬ ಕೇಳಿದ. ಅವನು ವಿಭಾಗಿಸಿದ ದಾಡಿ* ಬಿಟ್ಟಿದ್ದ. ಅದನ್ನು ಕಂಡು ಮುದುಕನಿಗೆ ಮತ್ತೂ ಧೈರ್ಯ ಬಂದಿತು.

ಹುವಾಂಗ್-ಲಾವೊ-ಚೀ ನಿಜವನ್ನು ನುಡಿದ.

"ಇವನು ನಿನ್ನ ಮಗನೇ?" ಎಂದು ಲಾವೊ-ಸಾನನಿಗೆ ಬೊಟ್ಟು ಮಾಡಿ ಆತ ಕೇಳಿದ. ಹುವಾಂಗ್-ಲಾವೊ-ಚೀ ಅಹುದೆಂದು ಗೋಣು ಹಾಕಿದ.

"ಇವನಿಗಿಂತ ಚಿಕ್ಕವನಿಲ್ಲವೆ?"

"ಹೌದು, ಆದರೆ ಲಾವೊ-ಚೀ ನಿನ್ನೆ ರಾತ್ರಿ ಮನೆಗೇ ಬರಲಿಲ್ಲ" ಎಂದು ಮುದುಕನೆಂದ.

ಅಧಿಕಾರಿ ಏನೊ ತಿಳಿದಂತೆ ನಕ್ಕ. ತನ್ನ ಸಹಾಯಕ ಅಧಿಕಾರಿಗಳಿಗೆ ತಲೆ ತೂಗಿ ಸನ್ನೆಮಾಡಿದ. ಮತ್ತು ಹತ್ತಿರದಲ್ಲಿದ್ದ ಪಿಸ್ತೂಲಿನೆಡೆಗೆ ಕಣ್ಣುಬಿಟ್ಟ. ಹುವಾಂಗ್-ಲಾವೊ-ಚೀ ಮತ್ತೂ ಅವನ ಮಗ ಲಾವೊ-ಸಾನ್

---

*ಎಂದರೆ ಹಾನೆ ಇಬ್ಭಾಗವಾಗಿ ಬೆಳೆಸಿದ ಮೀಸೆ. 'ಗಡ್ಡಹೀನ ತರುಣರಾದ' ಕ್ರಾಂತಿಕಾರ ಸೈನಿಕರು ಹಾಗೆ ಬೆಳೆಸುತ್ತಿರಲಿಲ್ಲ.

ಇಬ್ಬರೂ ಇಬ್ಬರು ಸೈನಿಕರ ಮಧ್ಯದಲ್ಲಿ ಬಿಡಾರದ ಹೊರಗೆ ಒಯ್ಯಲ್ಪಟ್ಟರು. ಅವರನ್ನು ಸರಿಯಾಗಿ ಯಶಸ್ವಿಯಾಗಿ ಗುಂಡಿಕ್ಕಿ ಕೊಲ್ಲಲಾಯಿತು.

ಅಂದು ಇಳಿಹೊತ್ತಿನಲ್ಲಿ ಹಳ್ಳಿಗರ ಕಣಜಗಳನ್ನು ಲೂಟಿ ಮಾಡಲು ಸೈನಿಕರನ್ನು ಊರಲ್ಲಿ ಕಳಿಸಲಾಯಿತು. ಹುಳುಕು ಮೊಗದ 'ಲೀ' ಮನೆಯಲ್ಲಿ ಒಂದು ಹಂದಿಯೂ, ಇತರರ ಮನೆಗಳಲ್ಲಿ ಅನೇಕತರದ ಸಾಮಾನುಗಳೂ ಅವರಿಗೆ ದೊರೆತವು. ಅವೆಲ್ಲವನ್ನೂ ಅವರು ಹೊತ್ತುಕೊಂಡು ಹೋದರು. ಹಳ್ಳಿಗರಿಗೆ ಈ ವ್ಯವಹಾರವೆಲ್ಲ ತಿಳಿದಿತ್ತು. ಈ ಸೈನಿಕರು ಇತರ ಸೈನಿಕರಂತೆಯೆ ಆಚರಿಸಿದ್ದರಲ್ಲದೆ ಬೇರೇನೂ ಇಲ್ಲ. ಮತ್ತೆ ಎಲ್ಲ ಮೊದಲಿನಂತೆ ಸಾಗಿತು.

ಊರಿನಾಚೆಯ ಅಡವಿಯಲ್ಲಿ ಲಾವೊ-ಚೀ ಬಟ್ಟೆಯೆಲ್ಲ ರಕ್ತ ಮೆತ್ತಿ ಬಿದ್ದುಕೊಂಡಿದ್ದ. ಅವನ ತಲೆ ಭಾರವಾಗಿತ್ತು. ಮೈ ಬಿಲ್ಲು ಮಣಿದಂತ ಮೇಲೆ ಕೆಳಗೆ ಮಣಿಯುತ್ತಿರುವಂತೆ ಅವನಿಗೆ ಅನಿಸುತ್ತಿತ್ತು. ಒಮ್ಮೊಮ್ಮೆ ಅವನ ಕಣ್ಮುಂದೆ ಆ ಸುಂದರ ಹುಡಿಗೆ ತೋಳು ಚಾಚಿ ಕುಣಿಯುತ್ತಿರುವಂತ ಭಾಸವಾಗುತ್ತಿತ್ತು—ಅದೇ ಹುಡಿಗೆ-ಯಾವಳನ್ನು ಆ 'ಕೆಂಪು' ಜನದಲ್ಲಿ ಹುಡುಕುತ್ತಿರುವಾಗ ಅವನಿಗೆ ಏನೋ ಆಘಾತ ಸಂಭವಿಸಿದಂತಾಗಿತ್ತೊ ಅವಳೇ.

ಕಣ್ಣು ಕುಕ್ಕಿದಂತಾಗಿರಲು ಅವನ ಕಣ್ಮುಂದೆ ಆ ಹುಡಿಗೆ ನಿಂತಂತಾಗುತ್ತಿತ್ತು. ಆದರೆ ಮತ್ತೆ ತಲೆ ಭಾರವಾಗಿ ಬಿದ್ದುಬಿಟ್ಟ.

"ಎಲ್ಲ ಮೋಸ, ಇವನವ್ವನ...." ಎನ್ನುತ್ತಿದ್ದ.

---

## ಪರಿಚಯ

# ಟಿಂಗ್-ಲಿಂಗ್

(೧೯೦೫ — )

ಚೀನಾದ ಲೇಖಿಕೆಯರಲ್ಲಿ ಟಿಂಗ್-ಲಿಂಗ್‌ಳಷ್ಟು ಪ್ರಸಿದ್ಧಿಪಡೆದವರು ಯಾರೂ ಇಲ್ಲ. ಚೀನೀ ಯುವಕರಲ್ಲಿ ವಿಶೇಷವಾಗಿ ಅವಳು ಮೆಚ್ಚುಗೆಯನ್ನು ಪಡೆದಿದ್ದಾಳೆ. ಜಪಾನಿನಲ್ಲಿಯೂ ಅವಳ ಸಾಹಿತ್ಯ ಪ್ರಚಾರ ತುಂಬಾ ಇದೆ. ಅವಳ ಕತೆಗಳಲ್ಲಿ ಕೆಲವು ರಶಿಯನ್, ಜಪಾನೀ ಮತ್ತು ಫ್ರೆಂಚ ಭಾಷೆಗಳಿಗೂ ಅನುವಾದಿಸಲ್ಪಟ್ಟಿವೆ.

ಹೂನಾನ ಪ್ರಾಂತದ ಚೆಂಗ್ಟೇದ ನಿವಾಸಿಯಾದ ಅವಳು ಒಂದು ದರಿದ್ರ ಕುಟುಂಬದಲ್ಲಿ ಜನ್ಮತಾಳಿದ್ದಾಳೆ. ಶಿಕ್ಷಣಕ್ಕಾಗಿ ಕಷ್ಟಬಟ್ಟದ್ದೂ ಉಂಟು. ಮಾಧ್ಯಮಿಕ ಶಾಲೆಯಲ್ಲಿರುವಾಗಲೇ ಅವಳು ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ಸೇರಿಕೊಂಡು ಕ್ರಾಂತಿಯುತ ತರುಣರ ಸಂಬಂಧವಾದ ಕತೆಗಳನ್ನು ಬರೆದಳು. ಅವಳ ಪತಿಯಾದ ಹೂ-ಯೇ-ಪಿಂಗ್‌ನೂ ಪ್ರಸಿದ್ಧ ಲೇಖಕನಾಗಿ ಕ್ರಾಂತಿಕಾರರ ಮುಂದಾಳುವಾಗಿದ್ದನು. ಟಿಂಗ್-ಲಿಂಗ್, ಹೂ-ಯೇ-ಪಿಂಗ್ ಮತ್ತು ಶೇನ್-ತ್ಸುಂಗ್-ವೇ ಈ ಮೂವರೂ ಕಲಕಾಲ ಶಾಂಘಾಯಿಯಲ್ಲಿ ಕೂಡಿಯೆ ಇದ್ದರು. ಇವರ ಅದ್ವಿತೀಯವಾದ ಮೈತ್ರಿಯು ಅನೇಕ ಟೀಕೆಗಳಿಗೆ ಆಸ್ಪದವಾಯಿತಲ್ಲದೆ ಚಾರಿತ್ರಿಕ ಮಹತ್ವವುಳ್ಳದ್ದೂ ಆಯಿತು. ಕಮ್ಯುನಿಸ್ಟರ ವಿರುದ್ಧವಾಗಿ "ನಿರ್ಮೂಲನ" ಕ್ರಿಯೆಯನ್ನು ಕೈಕೊಂಡ 'ಕೊಮಿಂಗಟಂಗ' ಪಕ್ಷದವರ ದಾಳಿಯೊಂದರಲ್ಲಿ 'ಹೂ-ಯೇ-ಪಿಂಗ್'ನ ಕೊಲೆಯಾದ ನಂತರವೇ ಈ ತ್ರಿಕೂಟ ಸ್ನೇಹವೂ ಕೊನೆಗಂಡಿತು. ಮುಂದೆ ಕೆಲಕಾಲ ಶೇನ್-ತ್ಸುಂಗ್-ವೇನು ಅವಳೊಡನೆ ಇದ್ದು ಅವಳನ್ನು ತೀವ್ರಗಾಮಿ ಪಕ್ಷದಿಂದ ತಿರುಗಿಸಲು ಪ್ರಯತ್ನಿಸಿ ವಿಫಲನಾದನು. ೧೯೩೩ರಲ್ಲಿ

ಸರಕಾರದ " ನೀಲಿ ನಡುವಂಗಿ "ಯುವರಿಂದ ಅಪಹರಿಸಲ್ಪಟ್ಟಳು. ಅವಳನ್ನು ಗಲ್ಲಿಗೇರಿಸಿದರೆಂದೂ ಸುದ್ದಿ ಹರಡಿತ್ತು. ಇದೀಗ (೧೯೩೬) ಅವಳು ನಾನ್ ಕಿಂಗದಲ್ಲಿ ಸೆರೆಯಲ್ಲಿದ್ದಾಳೆ. ಅವಳ ಏಳು ಪುಸ್ತಕಗಳು 'ಕೊಮಿಂಗ್-ಟಂಗ' ಪಕ್ಷದವರಿಂದ ಬಹಿಷ್ಕರಿಸಲ್ಪಟ್ಟಿವೆ. ಟಿಂಗ್-ಲಿಂಗ್‌ಳ ಪುಸ್ತಕಗಳಲ್ಲಿ 'ವೈಹೂ' ' ಒಬ್ಬ ಮನುಷ್ಯನ ಜನ್ಮದಿನ ', ' ಆತ್ಮಹತ್ಯೆಯೊಂದರ ದಿನಚರಿ ' ಎಂಬವುಗಳು ಅತ್ಯಂತ ಪ್ರಸಿದ್ಧಿಯನ್ನು ಪಡೆದಿವೆ. ' ಸೋಫಿಯ ದಿನಚರಿ ' ಎಂಬ ಹೊತ್ತಿಗೆಯಂತೂ ಎಲ್ಲೆಡೆಗೂ ಪ್ರಸಿದ್ಧವಾಗಿದೆ. ನವಯುವಕ ಯುವತಿಯರ ಮನೋವೃತ್ತಿಯ ಸರಿಯಾದ ಚಿತ್ರಣ, ನೂತನರೀತಿ, ಚೈತನ್ಯಯುತ ವಿವೇಚನೆ ಇವುಗಳೇ ಅವಳ ಹೊತ್ತಿಗೆಗಳ ವೈಶಿಷ್ಟ್ಯ.

ಶೇನ-ತ್ಸುಂಗ್-ವೇನನು ಬರೆದ ಟಿಂಗ್-ಲಿಂಗ್‌ಳ ಜೀವನಚರಿತ್ರೆಯಲ್ಲಿ ಹೂ-ಟಿಂಗ-ಶೇನ್ ತ್ರಿಕೂಟದ ಮನೋವೇಧಕ ವಿವರಣೆಯನ್ನು ಕೊಡಲಾಗಿದೆ.



# ಮಹಾಪೂರ

ನೆರೆಹಳ್ಳಿಯಿಂದ ಬಂದಿದ್ದ ಆಪ್ತೇಷ್ಟರೂ ಮನೆಮಂದಿಯೊಡನೆ ಲಕ್ಷ್ಯ ಗೊಟ್ಟು ಕೇಳುತ್ತ ಕುಳಿತಿದ್ದರು. ಕೋಣೆಯಲ್ಲಿ ಕತ್ತಲೆ ಮೆಲ್ಲನೆ ಆವರಿಸು ತ್ತಿತ್ತು. ಚಪ್ಪರದ ಕೆಳಗಣ ತೆರೆದಿಟ್ಟ ಬಾಗಿಲೊಳಗಿಂದ ಚಂದಿರನ ಮಂದ ನೀಲ ಪ್ರಕಾಶ ಒಳಗೆ ಬಿದ್ದಿತ್ತು. ಐದು ವರ್ಷದ ಮಗು ಲಾವೊ-ಯಾವೊ ನುಣ್ಣಗೆ ಬೋಳಿಸಿದ ತನ್ನ ತಲೆಯನ್ನು ತಾಯ ತೊಡೆಯ ಮೇಲಿಟ್ಟು ಎಳೆಯ ಕಿವಿಗಳನ್ನು ನಿಮಿರಿಸಿ ಎಲ್ಲರೊಡನೆ ತಾನೂ ಕೇಳುತ್ತಿದ್ದಂತೆ ಕಾಣುತ್ತಿದ್ದ. ತಾನು ಕೇಳುತ್ತಿರುವದೇನು, ಏಕೆ ಎಂಬುದೇನೂ ಆತನಿಗೆ ತಿಳಿಯದಿದ್ದರೂ ಎಲ್ಲರೊಡನೆ ಕೇಳುತ್ತಿರಬೇಕೆಂದು ತಿಳಿದಂತಿದ್ದ.

ಸಮೀಪದಲ್ಲಿ ನಾಯಿಯೊಂದು ಬೊಗಳುತ್ತಿತ್ತು. ಗಾಳಿ ಸುಯ್ ಎಂದು ಸುಳಿಯುತ್ತಿತ್ತು. ಗಿಡಗಳೊಳಗಿಂದ ಸೂಸಿ ಬರುವಾಗ ಸಿಳ್ ಎಂದು ಸಪ್ಪಳವಾಗುತ್ತಿತ್ತು........

"ಕೇಳಿ! ಅದೇನೊ ಕೇಳಿಸುವದಿಲ್ಲವೆ? ಹುಶ್"

ನಿಜವಾಗಿ ಯಾರೊ ಅಳುವ ಮಂದ ದನಿ ಕೇಳಿಬರುತ್ತಿತ್ತು.

"ಅಲ್ಲಿ ಯಾರೊ ಕೂಗುತ್ತಿದ್ದಂತಿದೆ."

"ಹುಚ್ಚು! ನನಗೇನೂ ಕೇಳಿಸಲಿಲ್ಲ."

"ತಡೆ, ನಿಜಕ್ಕೂ ದನಿ ಕೇಳಿಬರುತ್ತಿದೆ!"

ಒಂದು ಕ್ಷಣ ಯಾರೂ ಏನೂ ಹೇಳಲಿಲ್ಲ. ಆಮೇಲೆ ಸ್ವಲ್ಪ ಚಡಪಡ ಸುರುವಾಯಿತು. ಅರೆಕಿವುಡಿಯಾದ ಬೋಳುದಲೆಯ ಅಜ್ಜಿಯೊಬ್ಬಳು ಹಲ್ಲಿಲ್ಲದ ಬಾಯಿಂದ ಏನೊ ವಟಗುಡಹತ್ತಿದಳು.

" ಸ್ವರ್ಗಸ್ಥ ಪಿತಾಮಹನೆ, ಮಾಡುವದೇನು ? ದೈವಜ್ಞ ಇದು ನನಗೆ ಸಂಕಟಮಯ ವರ್ಷವಿದೆಯೆಂದು ಹೇಳಿದ........ಆ ನೆರೆ (ಮಹಾಪೂರ) ಇಲ್ಲಿ ಬರಲಿಕ್ಕಿಲ್ಲವಷ್ಟೆ ? ನನ್ನನ್ನು ಏನೊ ಒಂದು ಶಕ್ತಿ ಯಾವಾಗಲೂ ಸಂಕಟದಿಂದ ಪಾರುಮಾಡುತ್ತ ಬಂದಿದೆ. ನಾನು ಅನುಭವಿಸಿದ ಸಂಕಟಗಳು ಅದೆಷ್ಟೊ ! ಆದರೂ ಮುಂದೇನಾಗುವದು ಯಾರೂ ನಿಶ್ಚಿತವಾಗಿ ಹೇಳಲಾರರು. ಆದರೇನು ? ನಾನು ಸಾವಿಗೆ ಅಂಜುವದಿಲ್ಲವೆಂಬುದು ಮಾತ್ರ ನಿಜ. ತಿಳಿಯಿತೆ ? ಈ ಜರ್ಜರ ದೇಹಕ್ಕೆ ಸಾವು ಸಕಾಲವೆ. ಆದರೆ ಮಕ್ಕಳು ಮೊಮ್ಮಕ್ಕಳನ್ನು ಬಿಟ್ಟು ಹೋಗುವದೆಂದರೇ ಕಠಿಣ. "

" ಮಕ್ಕಳೇನು ಮೊಮ್ಮಕ್ಕಳೇನು ? ದೈವಕ್ಕೆ ಅದು ಇದು ಎಂಬುದಿಲ್ಲ! ಎಲ್ಲರೂ ಒಂದೇ. ಅಂತೆಯೆ ಅದು ಅಷ್ಟು ಕೆಟ್ಟವೆನ್ನುವದು "

" ಏನು ಪಿತೃಹೀನ ಪುತ್ರನೆ ! ಸುಮ್ಮನಿರುವಿ ! ಅವಳು ನೀನು ಹೇಳಿದ್ದನ್ನು ಕೇಳಿದಳೆಂದು ತಿಳಿದರೆ ! "

" ಅವಳು ಮಲಗುವದು ಲೇಸು. 'ಹೈ' ಅಕ್ಕ, ಅಜ್ಜಿಯನ್ನು ಮಲಗಿಸು. ಅವಳು ಇಷ್ಟು ದೂರ ನಡೆದ ಮೇಲೆ ಬಹಳ ದಣಿದಿರಬೇಕು."

" ಮಲಗಬೇಕು ! ಅಜ್ಜೀ ಮಲಗುವ ಹೊತ್ತಾಗಿದೆ ! " ಅಕ್ಕ ಅವಳ ಕಿವಿಯಲ್ಲಿ ಕೂಗಿದಳು.

" ಛೀ ಹುಚ್ಚೀ, ನಾನು ಮಲಗುವದಿಲ್ಲ. ಅವರಿಗಾಗಿ ಕಾಯುತ್ತಿದ್ದೇನೆ. ಅವರು ಎಷ್ಟು ಹೊತ್ತಿಗೆ ತಿರುಗಿ ಬರುವರು ? "

" ಯಾರಿಗೆ ಗೊತ್ತು ? ಅವರು ಎಲ್ಲಿರುವರೆಂಬುದೂ ನಮಗೆ ಗೊತ್ತಿಲ್ಲ. ಈ ಕ್ಷಣ ಯಾವ ದನಿಯೂ ಕೂಡ ಕೇಳಿಸದು. ಈ ರಾತ್ರಿ ಏನಾದರೂ ಒದಗಬಹುದೆಂದು ನಿನಗೆ ಅನಿಸುವದೆ ? "

" ನಾನು ಹೇಗೆ ಹೇಳಲಿ ? ಘನವಂತನಾದ ಬುದ್ಧದೇವನಿಗೂ ಅದನ್ನು ಹೇಳಲು ಬಾರದು. "

" ಬುದ್ಧನೆ ? ಅವನು ಹಾಳಾಗಲಿ ! ನಮ್ಮ ಮೇಲೇನು ವಿರೋಧವೊ ಅವನಿಗೆ ? ನೆರೆ, ನೆರೆ, ನೆರೆ, ಮತ್ತೆ ಪ್ರತಿವರ್ಷವೂ ಅದಕ್ಕೆ ಬುದ್ಧನ ಹೆಸರು ಬೇರೆ ಹೇಳುವದು. ಅವನಿಗೆ ಪಿಶಾಚಿ ಹಿಡಿಯಲಿ ! ನಾವು ಇದೀಗ ಬುದ್ಧನನ್ನು ಸ್ಥಾನಗೆಡಿಸಲಿಕ್ಕೆಂದು ಒಟ್ಟುಗೂಡಬೇಕಾಗಿದೆ. ಅಣೆಕಟ್ಟನ್ನು ದುರಸಿ, ಮಾಡುವದಾದರೂ ಏಕೆ ? ರಾತ್ರಿ ನಿದ್ದೆಗೆಟ್ಟು ಕಾಯುವದೇಕೆ ? ಬರಲಿ ! ರಕ್ತದ ಪ್ರವಾಹವೇ ಏರಿ ಬರಲಿ ! ಈ ಬುದ್ಧನನ್ನು ಮುಳುಗಿಸಲಿ ! ಈ ನಮ್ಮ ವೈರಿ ಹಾಳಾಗಿ ಹೋಗಲಿ ಎಂದೇ ನಾನು ಹೇಳುವದು ! "

" ತಾ-ಫು, ಶಾಂತನಾಗು. ನಿನ್ನನ್ನು ನೋಡಲು ಕೂಡ ಬಾರದ ಮೂರ್ತಿಗಾಗಿ ಇಷ್ಟೇಕೆ ಸಿಟ್ಟಿಗೇಳುವೆ ? "

" ಅಹುದು, ಅವನು ಹೇಳುವದೇನೊ ನಿಜ. ನೆರೆ, ನೆರೆ, ನೆರೆ, ಪ್ರತಿವರ್ಷವೂ ನೆರೆ ! "

" ಇದು ಉಳಿದವುಗಳಿಗಿಂತಲೂ ಭೀಕರವಾಗಬಹುದು. ಸ್ವಲ್ಪ ತಡೆ ! "

ಮುಂದೆ ಯಾರೂ ಏನೂ ಕೇಳಲಿ ಇಲ್ಲ. ಸಾಮಾನ್ಯವಾಗಿ ಮಾತುಗಾರರಲ್ಲದ ಗಟ್ಟಿಗರಾದ ಆ ಸ್ತ್ರೀಯರು ಗಾಬರಿ ಮತ್ತು ಅಧೈರ್ಯದಿಂದಾಗಿ ಮನಬಂದಂತೆ ಮಾತು ನಡೆಸಿದರು. ಅಣೆಕಟ್ಟಿನ ಮೇಲೆ ಕೆಲಸ ಮಾಡಲು ಹೋಗಬಾರದೆಂದು ತಡೆಯಲ್ಪಟ್ಟ ಹುಡುಗರೂ ಅದರಲ್ಲಿ ಸೇರಿದರು. ಈ ಎಲ್ಲ ಕಿಲಕಿಲಾಟದಲ್ಲಿ ಅಜ್ಜಿ ತನ್ನಷ್ಟಕ್ಕೆ ಮಾತಾಡಿಕೊಳ್ಳದೆ ಇರಲಿಲ್ಲ. ಅವಳ ಮಾತು ಈ ರೀತಿ ನಡೆದಿತ್ತು:

" ಅದೆಷ್ಟು ವರ್ಷಗಳ ಹಿಂದೆಯೊ ನೆನಪಿಲ್ಲ — ಚಿಕ್ಕ ಉಂಗೇರನಷ್ಟು ಇದ್ದೆನಾಗ. ಮಣ್ಣು ಮತ್ತು ಗಿಡದ ತೊಗಟೆ ತಿಂದು ಬದುಕಬೇಕಿತ್ತು. ನಿಜಕ್ಕೂ ! ಮನೆಯಲ್ಲಿ ನಾನು ಒಬ್ಬರಿಂದೊಬ್ಬರನ್ನು ಕಾಣಲು ಎದತಾಕುತ್ತಿದ್ದೆ — ದಿನದಿನಕ್ಕೂ ನಮ್ಮ ದೊಡ್ಡ ಸಂಖ್ಯೆ ಕಡಿಮೆಯಾಗುತ್ತಲೆ ಇತ್ತು. ಬರ, ರೋಗ ಮತ್ತು ಎಲ್ಲ ತರದ ಆಪತ್ತುಗಳು — ಎಲ್ಲಿ ನೋಡಿದಲ್ಲಿ ಹೆಣಗಳು ! ಕಾಗೆ ನಾಯಿಗಳಿಗೆ ಒಳ್ಳೆ ಆಹಾರ ! ಅದೆಷ್ಟು ಜನ ಸತ್ತರು ! ನನಗೆ ನೆನಪಾಗದು: ಮೊದಲು ಸತ್ತದ್ದೆ ಚಿಕ್ಕತಮ್ಮ — ತಾಯಿ ಒಣ ಮೊಲೆ

ಹೀರುತ್ತಲಿ ಪ್ರಾಣ ಬಿಟ್ಟ. ಆಮೇಲಿ ಅಕ್ಕ, ದೊಡ್ಡವ್ವ ಮತ್ತೆ ಮೀ ದೊಡ್ಡಪ್ಪ ಆಗ ನಾನು ಏಳು ವರ್ಷದವಳು ಮಾತ್ರ. ಅದು ಹೇಗೊ ಇಲ್ಲಿಯ ವರೆಗೆ ಬದುಕಿ ಬಂದಿದ್ದೇನೆ ಎಂದು ನಂಬುವಿರಾ? ಭಿಕ್ಷುಕಿಯಾಗಿದ್ದೂ ಉಪವಾಸ ಸಾಯಲಿಲ್ಲ! ತೊತ್ತು ಆಗಿಯೂ ಬಡಿತ ಸಹಿಸಿ ಬದುಕಿದೆ! ಇದೀಗ ಅರವತ್ತು ಅಥವಾ ಅರವತ್ತೈದು ವಯಸ್ಸಾಗಿದೆ. ಆದರೂ ಅದೆಲ್ಲ ಅಚ್ಚಳಿಯದೆ ನೆನಪಿದೆ. ಆಗ ಲುಂಗೇರನಷ್ಟಿದ್ದೆ....ಮತ್ತು ಗುಬ್ಬಿಯ ಪುಚ್ಚ ದಷ್ಟು ಜಡೆ ಇತ್ತು....ಆಗಲೆ ಮೊದಲ ನೆರೆ ನಾನು ಕಂಡದ್ದು. ಅಂದಿನಿಂದ....

ಬೋಳುವಲೆಯ ಅಜ್ಜಿ ತನ್ನನ್ನು ಹೋಲಿಸಿಕೊಂಡದ್ದು ಲುಂಗೇರನಿಗೆ ಮನಸ್ಸಿಗೆ ಬರಲಿಲ್ಲ. ಆವನ ಗೊಗ್ಗರ ಗುಂಯ್ಗುಡುವಿಕೆಯು ಹಾಗೆ ನಡೆ-ದಿರಲು ಹೆದರಿದ ಅವನು ಮೆಲ್ಲನೆ ಕೋಣೆಯ ಆಚೆ ಬದಿಗೆ ಅಣ್ಣನ ಹತ್ತಿರ ಸರಿದನು. ಲಾವೊ-ಯಾವೊ ಮಾತ್ರ ಅರೆಗಣ್ಣಿನಿಂದ ಕಿವಿ ನಿಮಿರಿಸಿ ಕೇಳು-ತ್ತಲೇ ಇದ್ದ. ಅಜ್ಜಿಯ ಬಡಬಡಿಕೆ ನಡೆದಿರಲು ಅವನು ಆ ಮಂದ ಪ್ರಕಾಶ ದಲ್ಲಿ ಅಲ್ಲಿಯ ಮುಖಗಳನ್ನೆಲ್ಲ ಕಣ್ಣುಬಿಟ್ಟು ನೋಡುತ್ತಿದ್ದ. ಮತ್ತೆ ಅಜ್ಜಿ ಯನ್ನು ನಿರೀಕ್ಷಿಸುವ. ಹಲ್ಲಿಲ್ಲದ ಅವಳ ಒಳಸೇರಿದ ಗಲ್ಲಗಳು ಮಾತಿನೊಡನೆ ಊದಿಕೊಳ್ಳುವದು ಮತ್ತೆ ಇಳಿಯುವದು ನಡೆದೇ ಇತ್ತು. ಅದೊಳ್ಳೆ ಮೋಜು ಅನಿಸಿ ಲಾವೊ-ಯಾವೊ ನಗಬೇಕೆಂದು ಯತ್ನಮಾಡುವ. ಆದರೆ ಸುತ್ತಲಿನ ಗಂಭೀರ ವಾತಾವರಣದಿಂದ ತಡೆಹಿಡಿಯುವ. ನಗಬೇಡ ಎಂದು ಯಾರೂ ಆದೇಶಿಸದಿದ್ದರೂ ವಾತಾವರಣವೇ ಆ ರೀತಿಯ ಎಚ್ಚರಿಕೆ ಕೊಡುವಂತಿತ್ತು. ಅಂತೂ ಅವನಿಗೆ ನಗಲು ಅವಕಾಶವಿರಲಿಲ್ಲ.

ಬಿಂಗ್-ಬಾಂಗ್! ಗುಂಡು ಹೊಡೆದಂತೆ ಒಮ್ಮೆಲೆ ಸಪ್ಪಳ. ಆದರೆ ಯಾರೊ ಏನನ್ನೊ ತಟ್ಟಿದ ದನಿ— ಚಹದ ಕಪ್ಪು ಕೆಳಗೆ ಬಿದ್ದಿರಲೂಬಹುದು. ಎಲ್ಲರ ಮಾತೂ ಒಮ್ಮೆಲೆ ನಿಂತುಬಿಟ್ಟವು. ಎದೆ ನಡುಗಿತು. ಕೋಣೆಯಲ್ಲಿ ಅನಿಷ್ಟಸೂಚಕ ಶಾಂತಿ ಹರಡಿತು. ಮತ್ತೆ 'ಸುಯ್' ಸಪ್ಪಳ. ಜೊತೆಗೆ ಅಜ್ಜಿಯು ತನ್ನಷ್ಟಕ್ಕೆ ಈ ರೀತಿ ವಟಗುಟ್ಟುವದು ಕೇಳಿಸುತ್ತಿತ್ತು:

"ಯಾರ ತಪ್ಪು ಎಂದು ಹೇಳುವದು? ನನ್ನ ಗಂಡನೂ ಒಳ್ಳೆಯ ಮನುಷ್ಯ—ಮಗನೂ ಆತನ ಹಾಗೆಯೆ. ಇಬ್ಬರಲ್ಲಿಯೂ ವೈಗಳ್ಳತನ

ವೆಂಬುದು ಒಂದು ದಿನವೂ ಕಂಡುದಿಲ್ಲ! ಆದರೂ ಇಬ್ಬರೂ ಸತ್ತು ಹೋದರು. ಇದೆಯೆ ನ್ಯಾಯವೆಂಬುದು ? ಸ್ವರ್ಗವೆಂಬಲ್ಲಿ ದೇವರಿದ್ದಾನೆಯೆ? ನನ್ನ ಮಾತೇನು ? ನನ್ನ ದಿನಗಳೊ—ಅದೇಕೆ ಗಂಟೆಗಳೂ ಇನ್ನು ಬಹಳ ಉಳಿದಿಲ್ಲ. ನೀವೆಲ್ಲ ಚಿಕ್ಕವರು ! ನಿಮಗೂ ಇದೇ ಗತಿಯಾಗದೆ ? ಇನ್ನೂ ನಿಮಗೆ ಆಶೆಯೆಂಬುದು ಬಿಟ್ಟಿಲ್ಲ. ಆಗಿನ ನನ್ನಂತೆ ಈ ಜಗತ್ತೆಲ್ಲ ಒಮ್ಮೆಲೆ ತಿರುವು-ಮುರುವು —ಮೇಲಿನದು ಕೆಳಗೆ ಕೆಳಗಿನದು ಮೇಲೆ ಆಗುವದೆಂದೇ ತಿಳಿದಿರುವಿರಿ. ಎಂಥ ಹುಚ್ಚು ಕನಸುಗಳು ! ಪ್ರಾಮಾಣಿಕತೆ ಎಂಬುದೇ ಹುಚ್ಚು, ನಾನು ಹೇಳುವದನ್ನು ಕೇಳಿ....ನಾನು ಸತ್ತಮೇಲೆ ಆಗುವದೇನು? ಜಗತ್ತು ಹಾಗೆ ನಡೆಯುವದು–ಮತ್ತಷ್ಟು ದಿನದಿನಕ್ಕೂ ದುಃಖಮಯವಾಗಿ.”

“ ಹಾಳಾಯಿತು ! ದುಃಖಮಯ, ದುಃಖಮಯ—ಆದರೆ ಪೂರಾ ದುಃಖವೇ ತುಂಬಿಬಿಟ್ಟರೆ ಕ್ರಾಂತಿ ಬರಲೇಬೇಕು ! ಯಾಕಂದರೆ—”

ಹೊರಗೆ ನಾಯಿ ಬಗುಳಿತು. ಅದರ ಕರ್ಕಶ ಧ್ವನಿ ಗುಡಿಸಿಲಿನ ಮಣ್ಣುಗೋಡೆಗಳನ್ನು ಅಲ್ಲಾಡಿಸಿ ಗಾಳಿಯಲ್ಲಿ ಲೀನವಾಯಿತು. ಮಂಜಿನ ಆ ರಾತ್ರಿಯಲ್ಲಿ ಕೆರೆಯ ದಂಡೆಯಲ್ಲಿ ದಾಲಚಿನ್ನಿಯ ಗಿಡದ ಹತ್ತಿರ ಆಕೃತಿಯೊಂದು ಕಾಣಸಿಕೊಂಡಿತು. ಅದೊಂದು ಮನುಷ್ಯಾಕೃತಿಯೆಂದು ಬಾಗಿಲ ಹತ್ತಿರ ಬಂದಿರಲು ಈಗ ಸ್ಪಷ್ಟವಾಗಹತ್ತಿತು. ಆತ ನಾಯಿಗೆ ಗುರುತಿನ ದನಿ ಮಾಡಿ ಮರುಕ್ಷಣದಲ್ಲಿ ಒಳಗೆ ಬಂದುಬಿಟ್ಟ.

“ ಓಹೊ ಸಾನ-ಯೇನೆ ? ಸುದ್ದಿಯೇನು ? ಒಡ್ಡುಗಳು ಹೇಗಿವೆ ? ಏರ-ಕೇ ಹೇಗಿದ್ದಾನೆ ? ”

“ ಮನೆಯಲ್ಲಿ ಒಂದು ದೀಪ ಕೂಡಾ ಇಲ್ಲವೆ ? ಬೆಳಕಿಗೂ ಗತಿಯಿಲ್ಲವೆ ? ” ಎಂದು ಆತ ಕೇಳಿದ.

“ ಏನಾಯಿತು ? ಮುಗಿಲೇ ಕಳಚಿ ಬೀಳುವದೆಂದು ತಿಳಿದಿರುವಿಯಾ ಅS ? ”

“ ಒಂದು ಹನಿ ಎಣ್ಣೆ ಉಳಿದಿಲ್ಲ ! ಎರಡು ಮೇಣಬತ್ತಿ ಮಾತ್ರ ಉಳಿದಿವೆ. ಮತ್ತು ಅವೂ ದೇವರಿಗೆ ಬೇಕು.”

"ಇರಲಿ, ಸಮಾಚಾರವೇನು ? ಕಿವಿಮಾತಿನ ಗಸಿಯೂ ಹೊಗ ಕೇಳಿಸದಂತಾಗಿದೆ. ನೆರೆ ಇಳಿದಿದೆಯಷ್ಟೆ ?"

"ಇಳಿಯುವದೆ ? ಈ ನೆರೆ ಇಳಿಯುವದೆ ! ನಾವೇ ಅಳಿದು ಹೋಗಬೇಕು. ನಿಮಗೆ ಜಾಗಟೆಯ ದನಿ ಕೇಳಿಸಲಿಲ್ಲವೆ ? ಟಾಂಗ ಹಳ್ಳಿಯಲ್ಲಿ ಎಲ್ಲ ವಿಪರೀತ. ಒಡ್ಡುಗಳು ದುರ್ಬಲವಾಗಿವೆ ಮತ್ತು ಈಗ ದುರಸ್ತಿಯೂ ಸಾಧ್ಯವಿಲ್ಲ. ಅತಿಸಾರ ಆದ ಮೇಲೆ ಶೌಚಕೂಪ ಕಟ್ಟಿದಂತೆ ! ಸ್ವಲ್ಪ ಹೊತ್ತಿನಲ್ಲಿ ಟಾಂಗ ಹಳ್ಳಿ ಕೆರೆಯಾಗುವದು --ನೋಡಿ ಬೇಕಾದರೆ !"

"ಮತ್ತೆ ಇಲ್ಲಿಯ ಗತಿಯೇನು ?"

"ಹೌದು, ಮುಂದೇನು ? ಹೊರಡುವ ಮುಂದೆ ನಮ್ಮ ಹಂದಿಗಳನ್ನೂ ಮರೆತುಬಿಟ್ಟೆವು. ನಾಳೆ ಅವುಗಳನ್ನು ನೋಡಲು ಹೋಗಬಹುದೆ ?"

"ಹೇಳುವದು ಕಷ್ಟ. ನೆರೆ ಟಾಂಗ ಹಳ್ಳಿಯನ್ನು ಆಕ್ರಮಿಸಿದರೆ ನಾವು ಇಲ್ಲಿ ಸುರಕ್ಷಿತವಾಗಿರಬೇಕು. ಆದರೆ ಅವರಿಗಿದ್ದಷ್ಟು ನೆಲವೂ ನಮಗೆ ಇಲ್ಲಿ ಇಲ್ಲ. ಇಲ್ಲಿ ನೆರೆ ಬಾಯ್ದೆರೆ ನಾವೂ ಟಾಂಗ ಹಳ್ಳಿಗೆ ಹೋಗಬೇಕು. ನಮ್ಮನ್ನು ಅವರು—ಈ ರೀತಿ ವ್ಯತ್ಯಮುಖದಲ್ಲಿ—ತಡೆಯಲಾರರು. ಆದರೆ ನಡೆಯಿರಿ, ತಾ-ವು, ಏರ-ಫೂ ! ನಮಗೆ ಇನ್ನೂ ಹೆಚ್ಚು ಜನ ಬೇಕು. ನಡೆಯಿರಿ ಮತ್ತು ಕಾವಲು ಇಡಿರಿ. ಒಡ್ಡಿನಲ್ಲಿ ಸ್ವಲ್ಪ ಬಿರುಕು ಬಿತ್ತೊ ನಾವು ನತ್ತೆವು." ಅವನು ಬಾಗಿಲ ಪತ್ತಿರಕ್ಕೆ ಸರಿದನು. ಮತ್ತು ಹರವು ಎದೆ, ಗಂಟುಗಟ್ಟಿದ ಸ್ನಾಯು, ಎತ್ತರದ ನಿಲುವು ಇವುಗಳೊಡನೆ ಮಂಜು ವಿಡಿದ ಮುಗಿಲ ಕೆಳಗೆ ಒಂದು ಕ್ಷಣ ಮೌನವಾಗಿ ನಿಂತು "ಗಾಬರಿಯಾಗಬೇಡಿ. ಯಾಕೆ ತಲೆ ಕೆದಿಸಿಕೊಳ್ಳುವಿರಿ ? ಹೂಂ ಇರಲಿ, ನಾವೀಗ ಹೊರಡುವಾ, ಐ-ತಾ-ಮಾವೊ ನೀನೂ ನಡೆ, ಏರ-ಮಾವೊನೂ ಬರಲಿ. ಚಿಕ್ಕವರಿದ್ದಷ್ಟು ಕಣ್ಣು ತೀಕ್ಷ್ಣ. ಪ್ಯೈಯಲ್ಲಿ ನೆಟ್ಟಗಿರದಿದ್ದರೆ ಲಾವೊ-ಯಾವೊ ಬರುವದು ಬೇಡ." ಎಂದನು.

ಎಲ್ಲರಿಗೂ ಹೊರಡಲು ಆತುರ. ಅವರಿಗೆ ಹೆಂಗಸರ ತಲೆಹರಟೆ ಸಾಕಾಗಿತ್ತು. ಮತ್ತು ನೆರೆಯೇರುವದನ್ನು ನೋಡುತ್ತ ನಿಂತಿರಲು ಆತುರವೂ ಉಂಟಾಗಿತ್ತು. ಅತ್ತಿತ್ತ ಕೈಯಾಡಿಸಿ ತಮ್ಮ ಗಿಡ್ಡಂಗಿಗಳನ್ನು

ಹುಡುಕಿಕೊಂಡರು. ಬೇಸಿಗೆಯಾದರೂ ರಾತ್ರಿ ತಂಪಾಗಿದ್ದುದರಿಂದ ಬರಿ ದೋಣಿಗಳಿಂದ ಹೊರಬೀಳುವಂತಿಗಲಿಲ್ಲ.

"ಅದು ಹೇಗೆ ಆದಿಯೊ ? ನೋಡಿದ ಹೊರತು ನನಗಂತೂ ಸಮಾಧಾನವಿಲ್ಲ."

"ನೋಡದ ಹೊರತು ನಿನಗೆ ಸಮಾಧಾನವಿಲ್ಲವೆ ! ಇರುವದೇನು, ಪಾರವಿಲ್ಲದ ನೀರು ಒಮ್ಮೆ ಇತ್ತ ಒಮ್ಮೆ ಅತ್ತ ಗರ್ಜಿಸುವದು. ರಾತ್ರಿ ಒಬ್ಬನೆ ಕೇಳಿ ಹೆದರಿ ಸಾಯದೆ ನೀನು ಉಳಿಯುವದಾದರೆ ನಾನು ಆಪೆ ಯಾದೇನು !"

ಸ್ವರ್ಗದ ಮತ್ತು ಭೂಮಿಯ ದೇವತೆಗಳಿಗೂ ಸೊಪ್ಪುಹಾಕದ ಕಲ್ಲೆದೆಯ ಸಾನ್-ಯೇನೂ ಹೆದರಿಕೆಯ ಮಾತು ಹೇಳುವದು ಕೇಳಿ ಅಳ್ಳೆದೆ ಹೆಂಗಸರು ಮತ್ತಷ್ಟು ಗಾಬರಿಯಾದರು.

"ಹೊತ್ತು ಎಷ್ಟಾಯಿತು ? ನಾನೂ ನಿಮ್ಮೊಡನೆ ಬರುವೆ. ಈ ರಾತ್ರಿ ನಾನು ಹಿಂದೆ ಇಲ್ಲಿ ಉಳಿಯಲಾರೆ. ಮನೆ ಭೂತಗಳಿಂದ ತುಂಬಿದೆ ! ನನಗೇಕೆ ಗೊಡ್ಡು ಹೆದರಿಕೆ ? ನಾನೂ ಹೊರಡಲೇಬೇಕು."

"ಹುಚ್ಚೀ, ನೀನು ಬಂದೇನು ಮಾಡುವಿ ? ಮನೆಯಲ್ಲಿದ್ದು ಲುಂಗೇರ ಮತ್ತು ಚೂ-ಚೂರನ್ನು ನೋಡಿಕೊ. ಇಲ್ಲಿ ಭೂತ ತುಂಬಿದಂತೆ ಎನಿಸಿದರೆ ಹೊರಗೆ ಅದಕ್ಕೂ ಹೆಚ್ಚು ಉಂಟು."

"ಸಾನ್-ಮು ಹೆಚ್ಚಿಗೇನೂ ಮಾತಾಡಲಿಲ್ಲ. ಮೆಲ್ಲನೆ ತನ್ನ ಜಾಗದಲ್ಲಿ ಹೋಗಿ ಕುಳಿತಳು. ಚಿಕ್ಕಚೂ-ಚೂ ಅವಳ ಹತ್ತಿರ ಸರಿದನು.

ತಾ-ಫೂ ಮತ್ತು ಉಳಿದವರೆಲ್ಲ ಹೊರಗೆ ಓಡಿದರು. ತಣ್ಣನ ಗಾಳಿ ಅವರನ್ನು ಸ್ವಾಗತಿಸಿತು. ಮೇಲೆ ಎತ್ತರದಲ್ಲಿ ತೆರೆಯ ಮರೆಯಲ್ಲಿದ್ದ ಚಂದ್ರನನ್ನೂ ಅಸಂಖ್ಯ ತಾರೆಗಳಿಂದ ಭಿನ್ನಭಿನ್ನವಾದಂತೆ ಕಾಣುವ ಮುಗಿಲನ್ನೂ ನೋಡಿದರು. ಒಂದು ಕ್ಷಣದಲ್ಲಿ ಎರಡೂ ನಾಯಿಗಳೊಡನೆ ಅವರು ಕಣ್ಮರೆಯಾದರು. ದಾಲ್ಚಿನ್ನಿಯ ಮರದಾಚೆಗೆ ರಾತ್ರಿಯ ಕತ್ತಲೆಯ ಆವರಣದ ಹೊರತು ಇನ್ನೇನೂ ಕಾಣಿಸದು. ಒಳಗಿದ್ದವರಿಗೆ ತಮ್ಮನ್ನು ಒಗೆದು ಹೋದಂತೆಯೂ ಹೊರಗಿನ ಪ್ರಪಂಚದಿಂದ ಅಗಲಿಸಿಬಿಟ್ಟಂತೆಯೂ ಅನಿಸಿತು.

ತಾ-ಫ್ಲೂ ಕುಳಿತಿದ್ದ ಬಾಕಿನ ಬಿಚ್ಚನ್ನ ಭಾಗವನ್ನು ಲುಂಗೇರನು ಕೈಯಿಂದ ತಿಕ್ಕಿದನು. ತಂದೆಯು ನೆನಪಾಗಿ ಅವನಿಗೆ ಅಳುವಂತಾಯಿತು. ಮತ್ತೆ ಅಣ್ಣನ ಹಿಂದೆ ತಾನೂ ಓಡಿಹೋಗಬೇಕೇನೊ ಎನಿಸಿತು. ಎರಡೂ ಮಾಡಲೂ ಅವನಿಗೆ ಮನಸ್ಸಾಗಲಿಲ್ಲ. ಒಡ್ಡುಗಳತ್ತ ಹೋಗಿ ಅವರು ಕಣ್ಮರೆಯಾದುದನ್ನು ಅವನು ನೋಡಿದ್ದ. ಒಡ್ಡಿನ ವಿಚಾರ ಅವನಿಗೆ ಮೋಜಿನದಾಗಿತ್ತು. ಹಗಲು ಅಲ್ಲಿಗೆ ಹೋಗಿದ್ದ. ರಾಡಿಯಾದ ತಿಳಿ ಹಳದಿ ಬಣ್ಣದ ನೀರು ಸುಳಿಸುಳಿಯಾಗಿ ತಿರುಗುವದನ್ನೂ, ಅದರಲ್ಲಿ ಕುರ್ಚಿಗಳು, ಪೆಟ್ಟಿಗೆ, ಮೇಜು, ಮಂಚ, ಸುಂದರ ಅರಗಿನ ಸಾಮಾನುಗಳು, ಒದ್ದಾಡುವ ಕೋಳಿ-ಮರಿಗಳು, ನಾಯಿಗಳು ಮತ್ತು ಒಮ್ಮೊಮ್ಮೆ ಮರದ ತುಂಡುಗಳನ್ನು ಹಿಡಿದುಕೊಂಡ ಕೆಲವು ಜನರು ನುತ್ತೆ ತೆರೆಯ ಹೊಯ್ದಾಟದಲ್ಲಿ ಏಳುತ್ತ ಮುಳುಗುತ್ತ ಕೈಕಾಲು ಕೂಡ ಚಲಿಸದ ಕೆಲವರು ತೇಲಿ ಹೋಗುತ್ತಿರುವದನ್ನೂ ಕಂಡಿದ್ದ! ಇದೆಲ್ಲ ಅವನಿಗೆ ಒಳ್ಳೆ ಆಕರ್ಷಕವೆನಿಸಿತ್ತು. ಈಗೂ ನದಿಯನ್ನು ನೋಡಬೇಕೆಂದೇ ಅವನ ಧ್ಯಾನ. ರಾತ್ರಿಯ ಊಟವನ್ನು ಮರೆತಿದ್ದ. ಆದರೆ ರಾತ್ರಿಯಲ್ಲಿ ಅಷ್ಟೊಂದು ಮನ ಸೆಳೆಯುವಂತೆ ಅದು ತೋರಲಿಲ್ಲ. ಪ್ರವಾಹದ ಜೋರಾದ ಸಪ್ಪಳ ಮಾತ್ರ ಕೇಳುತ್ತಿತ್ತು. ಅಸಹಾಯವಾಗಿ ತೇಲಿ ಹೋಗುತ್ತಿರುವ ವಸ್ತುಗಳ ಬಗ್ಗೆ ಆತನಿಗೆ ಗಾಬರಿಯೂ ಆಶ್ಚರ್ಯವೂ ಕೂಡಿಯೆ ಅನಿಸುತ್ತಿದ್ದವು. ಅಷ್ಟರಲ್ಲಿ ಅಜ್ಜಿಯ ಮಾತಿಗೆ ಮತ್ತೆ ಆರಂಭವಾಯಿತು:

" ನನಗೆಲ್ಲ ಗೊತ್ತಿದೆ, ನಾನು ಬಲ್ಲೆ, ನಾನು ಹೇಳುವದು ಅದೆ. ಈ ಶ್ರೀಮಂತರಿಗೆ ನೆರೆಯ ಹೆದರಿಕೆ ಇಲ್ಲ. ಆದರ ಹೆದರಿಕೆ ನಮಗೆ ಬಡವರಿಗೆ ಮಾತ್ರ. ಏಕಂದರೆ ಅದು ಹಾಳುಮಾಡುವದು ನಮ್ಮ ಹಂದಿ ನಾಯಿಗಳನ್ನು. ನಾನು ಚಾಂಗ ಮನೆಯಲ್ಲಿ ತೊತ್ತಾಗಿದ್ದಾಗ ಬಂದ ನೆರೆಯ ನೆನಪು ನನಗೆ ಇನ್ನೂ ಇದೆ. ಅದೆಷ್ಟು ಭಿಕ್ಷುಕರು! ಎಣಿಕೆ ಮೀರಿದ್ದ–ನಿಜವಾಗಿ ಭಿಕ್ಷುಕರಲ್ಲ ಮತ್ತೆ–ಆದರೆ ನೆರೆಯಿಂದ ಎಲ್ಲ ಕಳಕೊಂಡು ಭಿಕ್ಷುಕರಾದವರು. ಚಾಂಗರಿಗೇನಾಯಿತು? ಚಿಕ್ಕ ಯಜಮಾನರೆಲ್ಲರೂ ತಾರಾ ಮಂದಿರದ ಮೇಲ್ಮಾಳಿಗೆ ಹತ್ತಿ ಹೋಗಿ ವಿಲಾಸದಿಂದ ಕುಡಿದು ನೆರೆ ನೋಡಿ

ವಿನೋದಿಸುತ್ತಿದ್ದರು. ಹಿರಿಯ ಯಜಮಾನ ಚಾಂಗಸಂತೂ ಎಲ್ಲ ಧಾನ್ಯ ಕೂಡಿಟ್ಟು ರಕ್ಷಿಸಿ ಐದಾರು ಪಟ್ಟು ಬೆಲೆಯೇರಿಸಿ ಮಾರಿದ. ಸುಳ್ಳೆನ್ನಬೇಡ. ಈ ಶ್ರೀಮಂತರ ಹೃದಯವೆಂಬುದು ರಕ್ತ ಮಾಂಸಗಳಿಂದಾಗಿರುವದೇ ಇಲ್ಲ. ಬುದ್ಧನಿಗೂ ಅವರಲ್ಲಿಯೆ ಪ್ರೀತಿಯೆಂದು ತೋರುತ್ತದೆ. ಇದೀ ಜೀವ ಮಾನದಲ್ಲಿ ನಾನು ಕೃಪೆ ಯಾಚಿಸುತ್ತಿದ್ದೇನೆ. ಆದರೆ ಅದು ದೊರೆಯು ವದು ಶ್ರೀಮಂತರಿಗೆಯೆ. ಆತನನ್ನು ಮನೆಯಲ್ಲಿ ಸರಿಯಾಗಿ ಇಡಲು ಅವರಿಗೆ ಸಾಕಷ್ಟು ಹಣವಿರುವದೂ ಒಂದು ಕಾರಣವಿರಬೇಕು........ ಅದುವೆಈ ಪಕ್ಷಪಾತಕ್ಕೂ ಕಾರಣವಾಗಿರಬೇಕು........"

ಇಲಿಯೊಂದು ಕೋಣೆಯಲ್ಲಿ ಅತ್ತಿತ್ತ ಓಡಾಡಿತು. ಅದು ತಾಕಿದ ವಸ್ತುಗಳಿಂದ ಸ್ವಲ್ಪ ಸಪ್ಪಳವೂ ಉಂಟಾಯಿತು.

"ಇನ್ನೂ ನರೆ ಬರುವದರಲ್ಲಿದೆ. ಅಷ್ಟರಲ್ಲಿ ಇವು ಓಡಾಡಹತ್ತಿವೆ. ಅಬ್ಬಾ! ಈ ಪ್ರಾಣಿಗಳ ಪ್ರವೃತ್ತಿಯ ಚುರುಕುತನವೆ!........ ಅಂತೂ ಲಕ್ಷಣ ಸರಿಯಾಗಿಲ್ಲ. ನಾನು ಹೇಳುವದನ್ನು ನಂಬಿ, ಅಥವಾ ಬಿಡಿ. ಆಗುವದಂತೂ ತಪ್ಪಲಾರದು. ಒಮ್ಮೆ ಹೀಗೆ........"

ಮನೆಯಲ್ಲಿಯ ಕತೆಗಾರಳಾದ ತಾ-ನಿಯಾಂಗಳು ಒಂದು ಕತೆ ಆರಂಭಿಸಿದಳು. ಅದು ಅವಳು ಎಲ್ಲಿಯೊ ಕೇಳಿ ನೆನಪಿಟ್ಟ ಕತೆ. ಅದನ್ನೆ ತನಗೆ ತಿಳಿದಂತೆ ಬೆಳೆಸುತ್ತಿದ್ದಳು. ಚಿಕ್ಕ ಹುಡುಗೆಯರು ಮಾತ್ರ ಲಕ್ಷ್ಯ ಗೊಟ್ಟು ಕೇಳುತ್ತಿದ್ದರು. ಇತರ ಹೆಂಗಸರಿಗೆ ಅತ್ತ ಮನಸ್ಸೇ ಇರಲಿಲ್ಲ. ಇತರ ವೇಳೆಯಾಗಿದ್ದರೆ ಅವರು ಅದೆಷ್ಟೊ ಆಸ್ಥೆಯಿಂದ ಕೇಳುತ್ತಿದ್ದರು. ಅವಳು ಬೇಗ ಕತೆ ನಿಲ್ಲಿಸಿದಳು. ಮತ್ತೆ ಕೋಣೆಯಲ್ಲಿ ಗಭೀರಶಾಂತಿ. ಗಾಳಿಯ ತೆರೆಯೊಂದು ಜೋರಾಗಿ ಒಳಗೆ ಬೀಸಿತು. ಕೋಣೆಯಲ್ಲೆಲ್ಲ ಹೊಸ ನೀರು, ಒದ್ದೆಮಣ್ಣಿನ ವಾಸನೆ ತುಂಬಿತು. ಕಲಕಲದ ಮಂದ ದನಿಯೂ ಕೇಳಬಂತು. ಹೊರಗೆ ಹಣಿಕಿ ಹಾಕಲು ಕೊಳ್ಳಿಗಳು ದೂರದಲ್ಲಿ ಸಾಲಾಗಿ ನೆರೆಯೊಡನೆ ಗುದ್ದಾಡುತ್ತಿರುವವರ ಹೆಗಲಿನೆತ್ತರದಲ್ಲಿ ಕಾಣಿಸಿಕೊಂಡವು. ಅದರಿಂದ ಅವರಿಗೆ ತುಸು ಧೈರ್ಯವೂ ಅನಿಸಿತು. ಅವರ ನಚ್ಚಿನ ಗಟ್ಟಿಗ ರಾದ ಜನರೇ ಅವರಾಗಿದ್ದರು. ಅವರು ಏರುತ್ತಿರುವ ನದಿಯ ನೀರಿನ

ಆರ್ಭಟವನ್ನು ಎದುರಿಸಲು ಹೆಣಗುತ್ತಿದ್ದರು. ಆ ಕೊಳ್ಳಿಗಳಿಂದ ಆರಿಯ ಕಿರಣಗಳು ತೂರಿ ಬಂದು ಈ ಹೆಂಗಳೆಯರ ಕಣ್ಣುಗಳಲ್ಲಿ ಮಿಂಚಿ ಮರೆಯಾಗುವಂತೆ ತೋರಿತು. ಕೊಳ್ಳಿಗಳ ಬೆಳಕು ಒಡ್ಡಿನ ಒಂದು ಭಾಗದಲ್ಲಿ ಒಟ್ಟಾಗಿ ತೋರಿ ಮರೆಯಾಯಿತು. ದನಿ ಮಾತ್ರ ಕಲ ಹೊತ್ತು ಕೇಳಬರುತ್ತಿತ್ತು. ಮುಂದೆ ಅದೂ ನಿಂತಿತು. ಮೊಗ ಬಾಡಿದ ಹೆಂಗಳೆಯರ ಮುಖದ ಮೇಲೆ ಕಾಂತಿಹೀನ ಚಂದ್ರನ ಮಂದ ಪ್ರಕಾಶ ಬಿದ್ದಿತ್ತು. ಕೆಲಹೊತ್ತು ಗಾಳಿಯ ಸಪ್ಪಳದ ಹೊರತು ಇನ್ನೇನೂ ಕೇಳಿಸುತ್ತಿರಲಿಲ್ಲ. ನಿಗೂಢ ಜೀವನವನ್ನು ತನ್ನೊಳಗೆ ಇಟ್ಟುಕೊಂಡಿರುವ ಕತ್ತಲೆಯಲ್ಲಿ ಏನೂ ಕಾಣಿಸುತ್ತಿರಲಿಲ್ಲ. ಅಷ್ಟರಲ್ಲಿ ದಾಲಚಿನ್ನಿಮರದ ಹತ್ತಿರ ನಾಯಿಗಳ ಬೊಗಳಿಕೆ ಕೇಳಿಬಂತು. ಒಂದು ಆಕೃತಿ ಕಾಣಿಸಿಕೊಂಡಿತು. ಆಮೇಲೆ ಮತ್ತೊಂದು ಆಮೇಲೆ ಮೂರನೆಯದು, ನಾಲ್ಕನೆಯದು ಹೀಗೆ. ಹತ್ತಿರ ಬಂದಾಗ ಅವರು ಇಬ್ಬರು ಹೆಂಗಸರೂ ಇಬ್ಬರು ಚಿಕ್ಕಮಕ್ಕಳೂ ಇರುವರೆಂದು ಕಂಡು ಬಂದಿತು.

"ನಮ್ಮ ಮೇಲೆ ಕರುಣೆದೋರಿ! ನಾವು ಹೊಸ ಮಾವೂ-ಟನ್‌ದಿಂದ ಬಂದ ನಿರಾಶ್ರಿತರು."

"ಹೊಸ ಮಾವೂ-ಟನ್? ಅದು ಮೊನ್ನೆ ತಾನೆ ನೀರಲ್ಲಿ ಮುಳುಗಲಿಲ್ಲವೆ?"

"ಹೌದು, ಮುಳುಗಿಹೋಯಿತು. ಇಲ್ಲಿಂದ ಸುಮಾರು ಐವತ್ತು-ಅರವತ್ತು 'ಲೀ' (ಮೈಲು) ದೂರವಿದೆ."

"ಇಲ್ಲಿಂದ ಕೆಳಗಡೆಯಷ್ಟೆ?"

"ಒಳಗೆ ಬನ್ನಿ! ಇತ್ತ ಹತ್ತಿರ ಬನ್ನಿ! ಆದದ್ದಾದರೂ ಏನು ಹೇಳಿ?"

ಹೊಸ ಮಾವೂ-ಟನ್‌ದ ಆ ಇಬ್ಬರೂ ಹೆಂಗಸರು ಕೋಣೆಯಲ್ಲಿ ಪ್ರವೇಶಿಸಿದರು. ಮತ್ತು ಅವರ ದಣಿದು ಹೋದ ಚಿಕ್ಕಮಕ್ಕಳು ಹೊಸ್ತಿಲಲ್ಲಿಯೆ ಬಿದ್ದುಕೊಂಡರು.

"ಮೊನ್ನೆ ರಾತ್ರಿ....ಗಾಢ ಕತ್ತಲೆ....ಬಿರುಮಳೆ....ನೆರೆ ಬಂತು. ನಮ್ಮ ಇಡಿಮನೆ ಕರಗಿಹೋಯಿತು. ಒಂದು ಪದಾರ್ಥವನ್ನೂ ಉಳಿಸಿಕೊಳ್ಳಲು ಅವ

ಕಾರಣವಾಗಲಿಲ್ಲ. ನಮ್ಮ ಚಿಕ್ಕ ಮಣ್ಣಗೋಡೆಯ ಮನೆ ಮಹಾಪೂರದ ಎದುರಿಗೆ ಅದು ಎಷ್ಟು ನಿಂತೀತು? ನಮ್ಮ ನೆರೆಯವರದು ನಮಗಿಂತಲೂ ಕಷ್ಟ. ಪಾಪ ಮನೆಮಾರು ಹೋದುದಲ್ಲದೆ ಅವರೂ ತೇಲಿಹೋದರು. ಸಾಮಾನು ಉಳಿಸಿಕೊಳ್ಳಬೇಕೆಂದು ಒಂದೆರಡು ನಿಮಿಷ ವಿಳಂಬ ಮಾಡಿದ್ದೇ ನಾಕಾಯಿತು........ನಿನ್ನೆ ಮುಂಜಾನೆ ಅರೆಬಟ್ಟಲು ಗಂಜಿ ಕುಡಿದ ಮೇಲೆ ಈ ವರೆಗೆ ಹೊಟ್ಟೆಗೇನೂ ಇಲ್ಲ...."

"ಅಯ್ಯೋ ಪಾಪ! ನಮ್ಮಲ್ಲಿ ಏನಿದೆ ನೋಡುವೆ, ತುಸು ಅನ್ನವಾದರೂ ಸಿಕ್ಕೀತು."

"ನಿಮ್ಮ ಗಂಡಸರು ಎಲ್ಲಿ? ನೀವು ಎಲ್ಲಿಗೆ ಹೊರಟಿದ್ದೀರಿ? ಹೊಸ ಪಾಪ್ಯೂ-ಟನ್ ಇನ್ನೂ ನೀರಲ್ಲಿಯೆ ನಿಂತಿದೆಯೆ?"

"ನಮ್ಮ ಗಂಡಸರು ಹಿಂದೆ ಉಳಿದರು."

"ಅದರಿಂದ ಪ್ರಯೋಜನವೇನು? ಇರಲು ಸ್ಥಳವಿಲ್ಲ. ತಿನ್ನಲು ಅನ್ನವಿಲ್ಲ, ಉಡಲು ಬಟ್ಟೆಯಿಲ್ಲ, ಮಾಡಲು ಕೆಲಸವಿಲ್ಲ...."

"ಅದೆಲ್ಲ ಸರಿ. ಇದರೆ ಅವರಿಗೆ ಬಿಟ್ಟು ಬರಲು ಮನಸ್ಸಾಗದು. ಅಲ್ಲಿ ಏನೂ ಇಲ್ಲ ನಿಜ. ನೆರೆ ಬೆಳೆಯನ್ನೆಲ್ಲ ಹಾಳುಮಾಡಿದೆ. ಆದರೆ ಕೆಳಗೆ ನೆಲ ಇನ್ನೂ ಗಟ್ಟಿಯಿದೆ. ಅದಕ್ಕಾಗಿ ಅವರಿಗೆ ಬಿಡಲು ಇಚ್ಛೆ ಇಲ್ಲ."

"ನೀವು ಎಲ್ಲಿಗೆ ಹೊರಟಿದ್ದೀರಿ?"

"ನಾವು ಇವಳ ಊರಾದ ವು-ಯಾ-ಶಾನಕ್ಕ ಹೊರಟಿದ್ದೇವೆ. ನಾವಿಬ್ಬರೂ ಅತ್ತಿಗೆ ನಾದಿನಿಯರು. ಆದರೆ ವು-ಯಾ-ಶಾನದಲ್ಲಿಯೂ ಇದಕ್ಕಿಂತ ಹೆಚ್ಚು ಕೇಡಾಗಿದೆ ಎಂದು ಇಂದು ಮುಂಜಾನೆ ಕೇಳಿದೆವು."

"ದಾರಿಗಳೆಲ್ಲ ಕಟ್ಟಾಗಿ ಹೋಗಿವೆ. ನಾವೆಲ್ಲಿ ಹೋಗುವೆವೋ ದೇವರಿಗೇ ಗೊತ್ತು. ನಾವಿನ್ನೂ ವು-ಯಾ-ಶಾನಕ್ಕೇ ಹೋಗುವೆವೆಂದು ತಿಳಿದು ಕೊಂಡಿದ್ದಾರೆ." ಎಳೆಯವಳಾದ ಆ ಹೆಣ್ಣುಮಗಳಿಗೆ ಇನ್ನೂ ಯಾವ ಅನುಭವವೂ ಬಂದಿರಲಿಲ್ಲ. ಪರಿಸ್ಥಿತಿಯು ಹದಗೆಟ್ಟಿದ್ದರಿಂದ ಅವಳು ಗಾಬರಿಯಾದಳು. ಆಗ ದನಿ ತೆಗೆದು ಅಳಹತ್ತಿದಳು.

"ನಾವು........ತಿರುಗಬೇಕೆಂದು ಕಾಣುತ್ತದ."

"ಏನು ಹೊಸ ವಾ-ಪೊ-ಟನಕ್ಕೇ?"

"ಮತ್ತೇನು ಮಾಡಬೇಕು? ಇಲ್ಲಿ ಎಲ್ಲವೂ ಸರಕ್ಷಿತವಿರುವ ತನಕ...."

"ಅಷ್ಟೇನೂ ಸುರಕ್ಷಿತವಿಲ್ಲ. ನಮ್ಮ ಜನರೆಲ್ಲ ಈ ಹೊತ್ತಿಗೆ ಒಡ್ಡು ಗಳ ಮೇಲೆ ಇದ್ದಾರೆ. ನಾಳೆ ಈ ಜಗತ್ತಿನ ಸ್ಥಿತಿ ಏನಾಗುವದೋ ದೇವರೇ ಬಲ್ಲ!"

"ಅಯ್ಯೋ ದೇವರೆ! ನಮ್ಮ ಜನರು ನಾವಿನ್ನೂ ವು-ಯಾ-ಶಾನ ದಲ್ಲಿಯೇ ಇದ್ದೇವೆಂದು ತಿಳಿದುಕೊಂಡಿರುವಾಗ, ನಾವು ಇಲ್ಲಿಂದ ಓಡಿ ಹೋದರೆ?"

ಅವಳು ನರಳಿದಳು; ಬಿಕ್ಕುತ್ತ ಮತ್ತು ಬಿರುಸಾಗಿ ಅಳುತ್ತ ಅಲ್ಲಿಂದ ಹೊರಟಳು. ಕಿವಿ ಕೇಳದ ಆ ಮುದುಕಿ ಅಜ್ಜಿ ಮಾತ್ರ, ಕಣ್ಣೆತ್ತಿ ನೋಡಿ ಸಂಶಯದಿಂದ ಕೇಳಿದಳು: "ಇಷ್ಟೆಲ್ಲ ಗೊಂದಲ ಯಾತಕ್ಕೆ? ನಿಜ ವಾಗಿಯೂ ಪರಿಸ್ಥಿತಿ ಅಷ್ಟು ಕೆಟ್ಟಿದೆಯೆ?" ಯಾರೂ ಅವಳಿಗೆ ಉತ್ತರ ಕೊಡಲಿಲ್ಲ; ವಾಸ್ತವವಾಗಿ ಅವಳನ್ನು ಯಾರೂ ನೋಡಲೇ ಇಲ್ಲ. ಪ್ರತಿ ಯೊಂದು ಹೃದಯವೂ ಆತುರದಿಂದ ಕಟ್ಟಲ್ಪಟ್ಟಿತ್ತು. ಎಲ್ಲ ಕಣ್ಣುಗಳೂ ರಾತ್ರಿಯ ಕಡೆಗೇ ತಿರುಗಿದ್ದವು. ಆಗ ಅದೇ ಹೊತ್ತಿಗೆ ದೊಡ್ಡ ಗಂಟೆಗಳ ಸಪ್ಪಳ ಕೇಳತೊಡಗಿತು.

ಗಂಟೆಗಳ ನಾದ, ಒಡ್ಡುಗಳ ದಿಕ್ಕಿನಿಂದ ಹೊಲಗಳ ಮೇಲೆ ಹಾಯ್ದು ಬಂದಿತು. ಆ ಅಸ್ಪಷ್ಟವಾದ ನಾದ ಜನರನ್ನೆಲ್ಲ ಮನೆಗಳಿಂದ ಹೊರಡಿಸಿತು. ಪಶು ಪಕ್ಷಿಗಳು ಮತ್ತು ಗೂಡಿನಲ್ಲಿ ಕುಳಿತಿದ್ದ ಹಕ್ಕಿಗಳು ಕೂಡ ಆ ಸ್ವರಕ್ಕೆ ಹೊರಟವು. ಇಡೀ ಹಳ್ಳಿಗೆ ಜೀವನ ತುಂಬಿ ತುಳುಕಿದಂತಾಯಿತು. ಇಡೀ ವಿಶ್ವವೇ ಆ ನಾದದ ಸ್ಪರ್ಶಕ್ಕೆ ಒಡೆದು ಹೋಗಲು ಸಿದ್ಧವಾಗಿರುವಂತ ಕಂಡಿತು. ಒಬ್ಬ ಹೆಣ್ಣುಮಗಳು ತನ್ನ ಮನೆಯಿಂದ ಹೊರನುಗ್ಗಿದಳು. ಕೂಡಲೆ ಎಲ್ಲರೂ ತೋಟದ ಕಡೆಗೇ ನುಗ್ಗಿದರು. ಅಜ್ಜಿಯೊಬ್ಬಳೇ ಹಿಂದು ಳಿದವಳು. ಆತುರರಾದ ಜನರು ಗುಂಪುಗುಂಪಾಗಿ ಹಾಸುಹೊಯ್ಯು ತ್ತಿದ್ದರು. ಕೂಸುಗಳು ಅಳುತ್ತಿದ್ದವು; ನಾಯಿಗಳು ಬೊಗಳುತ್ತಿದ್ದವು. ಇವೆಲ್ಲವುಗಳ ಮೇಲೆ ಅವಿರತವಾಗಿ ಗಂಟೆಯ ಸಪ್ಪಳ ನಡೆದೇ ಇತ್ತು. ಜನ

ರೆಲ್ಲ ಕತ್ತಲೆಯಲ್ಲಿ ಕೂಗಿದರು. "ಒಡ್ಡುಗಳ ಕಡೆಗೇ ಹೋಗಬೇಕು. ಅವು ಗಳನ್ನು ರಕ್ಷಿಸಲೇಬೇಕು. ಒಂದು ಗಂಡು ಹುಳವೂ ಮನೆಯಲ್ಲಿರಕೂಡದು. ಯಾರೂ ಓಡಿ ಹೋಗುವ ಹಾಗಿಲ್ಲ. ಪ್ರತಿಯೊಬ್ಬರೂ ಬರಬೇಕು. ಒಡ್ಡುಗಳು!"

"ಪಂಜು, ಗುದ್ದಲಿಗಳನ್ನು ತರಬೇಕು"

ನಾಯಿಗಳು ಹುಚ್ಚುಹಿಡಿದಂತೆ ಒದರಿದವು. ಕೋಳಿ ಕೂಗಿದವು. ಏರುತ್ತಿ ರುವ ನೀರಿನ ಸಪ್ಪಳ, ಒಡ್ಡಿನ ಮೇಲೆ ಆತುರರಾದ ಜನರ ಕಲಕಲರವವು, ಇವೆಲ್ಲ ಗದ್ದಲದಲ್ಲ ಬೀಸುತ್ತಿರುವ ಗಾಳಿಯಲ್ಲಿ ವಿವಿಧವಾಗಿ ಹಬ್ಬತೊಡಗಿದವು. ನದಿಯ ತೀರದ ಮೇಲೆ ಪಂಜುಗಳು ನಾಲುಗಟ್ಟಿದವು; ನೂರಾರು ಜನ ಅಲ್ಲಿ ಹುಚ್ಚು ಹಿಡಿದವರಂತೆ ಕೆಲಸ ಮಾಡುತ್ತಿದ್ದರು.

"ಓ ಸ್ವರ್ಗದ ತಂದೆಯೇ, ನಮ್ಮನ್ನು ಕಾಪಾಡು! ಓ ಗೌತಮಾ, ನಮ್ಮ ಮೇಲೆ ಕರುಣೆಯಿಂದ ನೋಡು!

"ಮೇಘರಾಜ, ದಯಮಾಡಿ ಆ ಪೂರವನ್ನು ನಿಲ್ಲಿಸು!" ಯಾರೋ ಒಬ್ಬರು ಹೀಗೇ ಬೇಡಿಕೊಳ್ಳುತ್ತ ಮೊಣಕಾಲೂರಿದರು.

ಹಳ್ಳಿಯ ಜನರು ಇರುವೆಗಳಂತೆ ಗುಂಪುಗೂಡಿದರು. ಮತ್ತು ಹೆಚ್ಚು ಹೆಚ್ಚು ಜನ ಕೂಡಿದಂತೆ ಅವರ ಭಯವೂ ಹೆಚ್ಚಿತು. ಕೂಸುಗಳು ಅತ್ತವು. ನಾಯಿಗಳು ಗಂಟಲು ಬಿರಿಯುವಂತ ಒದರಿದವು. ಹೆಣ್ಣುಮಕ್ಕಳು, ಗೊಂದಲ ಗೆಟ್ಟು ಚೀರಿದರು. ಗಂಟೆಗಳ ಸಪ್ಪಳ ಹೆಚ್ಚುತ್ತ ಹೋದಂತೆ ಪಂಜುಗಳು ಹೆಚ್ಚು ಹೆಚ್ಚು ಪ್ರಕಾಶವನ್ನು ಬೀರಿದವು.

"ಜೊತೆಗಾರರೇ ಒಡ್ಡುಗಳ ಕಡೆಗೇ ಬನ್ನಿರಿ!"

"ಒಡ್ಡುಗಳನ್ನು ಉಳಿಸಿರಿ! ಜನರನ್ನು ಉಳಿಸಿರಿ! ನಮ್ಮ ಮನೆಗಳನ್ನು ಉಳಿಸಿರಿ!"

"ಗೆಳೆಯರೇ ತ್ವರೆ ಮಾಡಿರಿ! ವೇಳೆಯಿಲ್ಲ........"

"ಪಂಜುಗಳನ್ನು ಮೇಲೆತ್ತಿರಿ! ಇನ್ನೂ ಮೇಲೆತ್ತಿ ಹಿಡಿಯಿರಿ!"

ಉರಿಯುತ್ತಿರುವ ಪಂಜುಗಳನ್ನು ಹಿಡಿದುಕೊಂಡು, ಒಂದು ಗುಂಪು, ಸಡಿಲಾಗುತ್ತಿರುವ ಮಣ್ಣಿನ ಒಡ್ಡುಗಳ ಕಡೆಗೆ ಧಾವಿಸಿತು. ಇನ್ನೊಂದು ಗುಂಪು ಕೂಡಲೆ ಹಿಂಬಾಲಿಸಿತು. ಹುರುಪಿನ ಕೂಗುಗಳು ಇನ್ನಷ್ಟು ಕೇಳಿ ದವು. ಪಂಜುಗಳು ಇನ್ನಷ್ಟು ಕೆಂಪಾಗಿ ಕತ್ತಲೆಯಲ್ಲಿ ಹೊಳೆದವು.

ಗಾಳಿ ಈಗ ಮೃದುವಾಗಿ, ಜನರ ಈ ಹುಚ್ಚು ಗದ್ದಲದಲ್ಲಿ ಮೆಲ್ಲಗೆ ಬೀಸತೊಡಗಿತು. ಸ್ವಲ್ಪ ಮೇಲೆ ಚಂದ್ರ ಮೂಡಿದನು. ಹೊಲದ ಬೆಳೆ, ಮತ್ತು ಗಿಡಗಳೆಲ್ಲ ಬೆಳಕಿನಲ್ಲಿ ಮಿಂದವು. ಸುತ್ತಲೂ ಇದ್ದ ಹಸಿರಿನ ಸಾಮ್ರಾಜ್ಯ ಬೆಳ್ಳಿಯಾಗಿ ಹೊಳೆಯಿತು.

" ಸ್ಯಾನ್-ಮು ಬೇಡ ! ಎಲ್ಲಿಗೆ ಹೋಗುತ್ತೀ ? "

" ಇರಲಿ, ನನಗೆ ಹೆಚ್ಚು ಹೊತ್ತು ತಡೆಯುವದಾಗುವದಿಲ್ಲ. ನಾನೂ ಅಲ್ಲಿದ್ದ ಕೆಲಸಗಾರರನ್ನು ಕೂಡಿಕೊಳ್ಳುತ್ತೇನೆ. "

" ನಾನೂ ಬರುತ್ತೇನೆ. "

ಅವರು ದಿನ್ನೆಗಳನ್ನಿಳಿದು ನಡೆದರು. ಅವರ ನೀಳವಾದ ಕೂದಲು ಹಾರಾಡುತ್ತಿದ್ದವು. ಕೂಡಲೆ ಮತ್ತೊಂದು ಗುಂಪು ಕತ್ತಲೆಯಲ್ಲಿ ಉರುಳಿ ಬಂದಿತು. ಮತ್ತೊಮ್ಮೆ ತಾಯಂದಿರ ಹೆದರಿದ ಸ್ವರವೂ, ಹುಡುಗರ ಚೀರು ವಿಕೆಯೂ ತುಂಬಿಕೊಂಡಿತು. ಪಂಜಿನ ಬೆಳಕಿನಿಂದ ಬೆಳಗಿದ್ದ ಹಳ್ಳಿಯ ಅಗ ಸೆಯ ಗೋಡೆಗಳ ಮೇಲೆ, ಹೆಣ್ಣುಮಕ್ಕಳ ಮತ್ತು ಜನರ ನೆರಳುಗಳು ವಿಚಿತ್ರ ವಾಗಿ ಕುಣಿಯತೊಡಗಿದವು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಆ ನೆರಳು ಮರೆಯಾದವು. ಹೆಣ್ಣುಮಕ್ಕಳು ಒಬ್ಬೊಬ್ಬರಾಗಿ ಗುದ್ದಲಿಗಳನ್ನು ಹಿಡಿದು ಕೊಂಡು, ಒಡ್ಡಿನಲ್ಲಿಯ ಜನರನ್ನು ಕೂಡಿದರು. ನೀರು ಇನ್ನೂ ಏರುತ್ತಲೇ ಇತ್ತು.

ಮೇಲೆ ಆಕಾಶ ಗಂಭೀರವಾಗಿ ನೋಡುತ್ತಲಿತ್ತು. ಹೊಸದಾಗಿ ಮೂಡಿದ ಚಂದ್ರನ ಸುಂದರವಾದ ಬೆಳಕು, ಹುಲ್ಲು ಮಾಳಿಗೆಗಳ ಮೇಲೆ ಬಿದ್ದಿತ್ತು. ನಕ್ಷತ್ರಗಳು ಹೊಳೆದವು. ಆಕಾಶಗಂಗೆಗೇ ನೆರೆ ಬಂದಂತಾ ಗಿತ್ತು. ಬಿರುಗಾಳಿ ಮೃದುವಾಗಿ ಸುಳಿಯತೊಡಗಿತು. ಅದು, ಹೊಸದಾಗಿ ಚಿಗುರುತ್ತಿದ್ದ ಹೊಲದ ಬೆಳೆಯ ಸಾಲುಗಳಲ್ಲಿ ಸುಖವಾಗಿ ಪಿಸುಗುಟ್ಟುತ್ತ ಬೀಸತೊಡಗಿತು.

" ಈ ವರ್ಷ ನಿನಗೆ ಅಪಾಯಕರ ಎಂದು ಕೊರವಂಜಿ ಕಣಿ ಹೇಳಿ ದ್ದಳು. " ಮುದುಕಿ ತನ್ನಷ್ಟಕ್ಕೆ ತಾನೇ ಅಂದುಕೊಂಡಳು.

---

# ಸುದ್ದಿ 

" ಅವ್ವಾ ನೀ ಅಡಿಗೆ ಮನೆಗೆ ಹೋಗು " ಹಾ-ಫೂ ನಿಚ್ಚಣಿಕೆಯ ಸಹಾಯದಿಂದ ಅಟ್ಟದ ಮೇಲಿನ ಸಣ್ಣ ಬಾಗಿಲಿನೊಳಗೆ ಹೋಗುತ್ತ ಹೇಳಿದ. ಅವನ ಹಿಂದೇ ತನ್ನ ಮುಗಿಲು ಬಣ್ಣದ ಮೇಲಂಗಿಯನ್ನು ಬಗಲೊಳಗೆ ಮಡಿಚಿ ಹಿಡಿದುಕೊಂಡು ಆ ತರುಣನೂ ಹೋದನು.

ಸುಮಾರು ಎರಡು ಫೂಟು ಅಗಲವಾದ ರಟ್ಟೊಂದರಿಂದ ಮುಚ್ಚಿದ ಒಂದು ಸಣ್ಣ ಕಿಡಿಕೆಯ ಹತ್ತಿರ ಆಕೆ ಕುಳಿತುಕೊಂಡಿದ್ದಳು. ಆ ರಟ್ಟನ್ನು ಸರಿಸಿದರೇ ಸ್ವಲ್ಪ ಬೆಳಕು ಹೊರಗಿನಿಂದ ಬರಬೇಕು; ಆ ಬೆಳಕಿನಲ್ಲೇ ತನ್ನ ಮೊಮ್ಮಗನ ಚಣ್ಣವನ್ನೊ ಮತ್ತೇನನ್ನೊ ಹೊಲಿಯಲು ಆಕೆಗೆ ಅನುಕೂಲವಾಗಬೇಕು, ಹೀಗಿತ್ತು.

ಅವರೆಲ್ಲ ಒಳಗೆ ಬಂದ ನಂತರ ಹಾ-ಫೂ, ತನ್ನ ತಾಯಿಯ ಕಡೆಗೂ ನೋಡದೆ ನೀಲಿಯ ಬಣ್ಣದ ಮೇಲಂಗಿಯನ್ನು ತೆಗೆದು ತನ್ನ ಹಾಸಿಗೆಯ ಮೇಲೆ ಕುಳಿತುಕೊಂಡು, ತನ್ನ ಗೆಳೆಯನಿಗೂ ಅಲ್ಲಿಯೆ ಕುಳಿತುಕೊಳ್ಳಲು ಹೇಳಿದ.

ಇನ್ನು, ಮತ್ತೆ ಅದೇ ಕಾಯಕ ನಡೆಯತಕ್ಕದ್ದೆಂದು ಆ ಮುದುಕಿಗೆ ತಿಳಿಯಿತು. ಆ ಕಾಯಕ ಸುರುವಾದಾಗಿನಿಂದ, ತನ್ನ ಮಗ, ತಿಳಿಯದಂತಹ ಯಾವುದೋ ಒಂದು ಜಗತ್ತಿನಲ್ಲಿ ಸೇರಿಕೊಂಡಿದ್ದಾನೆ, ಆ ಜಗತ್ತಿನಲ್ಲಿ ತನಗೆ ಪ್ರವೇಶವಿಲ್ಲ ಎಂದು ಆಕೆಗೆ ಅನಿಸಿತ್ತು. ಹೊಸ್ತಿಲ ಮೇಲೆ ನಿಂತು, ಹಾ-ಫೂ ಒಮ್ಮೊಮ್ಮೆ ತನ್ನ ತಾಯಿಯ ಕಡೆಗೆ ಜುಗುಪ್ಸೆಯಿಂದ ನೋಡಿದ್ದ. ಅವನ ಈ ನಿರ್ಲಕ್ಷ್ಯತೆಗಾಗಿ ಅವಳಿಗೆ ಸಿಟ್ಟೊ ಬಂದಿತ್ತು. ಏನೇ ಆದರೂ ಈಗ ತನ್ನ ಅರಿವೆ ಅಂಚಡಿಗಳನ್ನೆಲ್ಲ ತೆಗೆದುಕೊಂಡು, ಅತಿಥಿಗಳ ಕಡೆಗೆ ವಿಚಿತ್ರವಾಗಿ ನೋಡುತ್ತ ಹೊರಗೆ ಹೋದಳು.

ಆದರೆ ಅವಳು ಕೆಳಗೆ ಇಳಿದು ಅಡಿಗೆಯ ಮನೆಗೆ ಹೋಗಲೇ ಇಲ್ಲ. ಆ ಕೋಣೆಯ ಮಗ್ಗುಲಿಗೇ, ಒಬ್ಬರೇ ಮಲಗುವಷ್ಟು ದೊಡ್ಡದಿದ್ದ ಒಂದು ಕೋಣೆಯೊಳಗೆ ಬಂದಳು. ಹೊರಗೆ ಬಿಸಿಲು ಬಿದ್ದಿದ್ದರೂ ಆ ಕೋಣೆಯಲ್ಲಿ ಗಾಢಾಂಧಕಾರ. ಇನ್ನೊಂದು ಕೋಣೆಗೂ, ಈ ಕೋಣೆಗೂ ನಡುವೆ ಎಂದರೆ ಒಂದು ಹಲಗೆಯ ಗೋಡೆ ಮಾತ್ರ ಇತ್ತು. ತನ್ನ ಮಗ ಮಾತನಾಡಿದ್ದನ್ನೆಲ್ಲ ಅಲ್ಲಿ ಕುಳಿತು ಅವಳು ಕೇಳಬಹುದಾಗಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಹಾ-ಫೂನ ಸಹೋದ್ಯೋಗಿಗಳೆಲ್ಲ ಅಲ್ಲಿ ಬಂದು ಕೂಡಿದರು. ಅವಳ ಕಣ್ಣಮುಂದೆಯೇ ಅವರೆಲ್ಲ ಆ ನಿಚ್ಚಣಿಕೆ ಹತ್ತಿ ಕೋಣೆಯಲ್ಲಿ ಸೇರಿದ್ದರು.

ಅಷ್ಟರಲ್ಲಿ ಅವರು ಮಾತಿಗೆ ಆರಂಭಿಸಿದರು. ಒಂದು ಶಬ್ದವನ್ನೂ ಕಳಕೊಳ್ಳದಂತೆ ಎಲ್ಲವನ್ನೂ ಕೇಳಲು ಉಸಿರನ್ನು ಬಿಗಿಯಾಗಿ ಹಿಡಿದು ಕುಳಿತಳು ಆಕೆ.

ಸಂಜೆಯ ಹೊತ್ತಾಗಿತ್ತು. ಆ ಓಣಿ ಸಣ್ಣದಿದ್ದರೂ ಎಷ್ಟೋ ಜನ ಅಲ್ಲಿ ವಾಸಿಸುತ್ತಿದ್ದರು. ಕೆಲವರು ತಮ್ಮ ಪೈಯನ್ನಾಗಲಿ, ಇತರರ ಪೈಯನ್ನಾಗಲಿ, 'ಪಾಲಿಸ' ಮಾಡುವ ಕೆಲಸದಲ್ಲಿ ತತ್ಪರರಾಗಿದ್ದರು. ಕೆಲವರು ಅಂಗಳದಲ್ಲಿ ಸಣ್ಣ ಕಾಲುಮಣೆಗಳ ಮೇಲೆ ಕುಳಿತು ಮುರಿದ ಬೀಸಣಿಕೆಯಿಂದ ನೊಳ್ಳೆಗಳನ್ನು ಓಡಿಸುತ್ತಿದ್ದರು; ಹರಟೆಹೊಡೆಯುತ್ತ, ನಡುನಡುವೆ ನಗುತ್ತ ಕಾಲಕಳೆಯುತ್ತಿದ್ದರು. ಕೆಲವರು, ಕೂಲಿಕಾರರಿಗೆ ಮಾತ್ರ ಗೊತ್ತಿದ್ದ ಜಾನಪದ ಗೀತಗಳನ್ನು ಹಾಡುತ್ತಿದ್ದರು. ಒಮ್ಮೊಮ್ಮೆ ಈ ಗದ್ದಲ ಆ ಮುದುಕಿಯ ತನ್ಮಯತೆಗೆ ಭಂಗ ತರುತ್ತಿತ್ತು. ಆದರೂ ಅವಳು ಗೋಡೆಗೆ ಕಿವಿಯಾನಿಸಿ ಒಳ್ಳೆ ಲಕ್ಷ್ಯಪೂರ್ವಕವಾಗಿ, ಅವರು ಮಾತಾಡಿದ್ದನ್ನೆಲ್ಲ ಕೇಳುತ್ತಿದ್ದಳು.

ಕತ್ತಲೆಯಾಯಿತು. ಅಲ್ಲಿಯ ಮನೆಗಳಲ್ಲಿ ಆಗಲೆ ಅಡಿಗೆಗಾರಂಭಿಸಿದ್ದರು. ಪ್ರತಿಯೊಂದು ಗುಡಿಸಲಿನಿಂದಲೂ, ಹೊಗೆ ಸುರುಳಿ ಸುರುಳಿಯಾಗಿ ಹೊರಟು, ಓಣಿಯನ್ನೆಲ್ಲ ತುಂಬಿ ಮೆಲ್ಲಗೆ ಹಾರಿಹೋಗುತ್ತಿತ್ತು. ಆ ಮುದುಕಿ ನಿಂತಿದ್ದ ಗವಿಯಲ್ಲಿ ಮಾತ್ರ ಅದು ಚಲಿಸಲೇ ಇಲ್ಲ. ಗಾಳಿಯೆಲ್ಲ ಹೊಗೆಯಿಂದ ತುಂಬಿಕೊಂಡಿತು. ಅವಳಿಗೆ ಕೆಮ್ಮು ತಡೆಯುವದು ಅಸಾಧ್ಯವಾಯಿತು.

" ಖೊಯ್ ಖೊಯ್ ಖೊಯ್ ಖೊಯ್ "

" ನಿನ್ನ ತಾಯಿಗೆ ಜಡ್ಡಾಗೇದೇನು ? ಎಂಥಾ ಕೆಟ್ಟ ಕೆಮ್ಮು !" ಅವಳಿಗೆ ಹೊಗ ತುಂಬಿದ ಕೊಣೆಯಲ್ಲಿ ಉಸಿರುಗಟ್ಟಿದಾಗ ಒಬ್ಬ ಕೇಳಿದ.

ಆಗ ಹಾ-ಸ್ತೂಗೆ ಅವಳಲ್ಲಿರುವದು ಗೊತ್ತಾಗಿ ಗಟ್ಟಿಯಾಗಿ ಕೂಗಿದ: "ಅವ್ವಾ ಆ ಕ್ವಾಣ್ಯಾಗಿಂದ ಹೊರಗ ಹೋಗು. ಭಾಳ ಸೆಕೀ ಅದ. ಇಲ್ಲೇನದ ನಿನ್ನ ಕೆಲಸ ? "

ಅವಳು ಒಂದು ತುಣುಕು ಅರಿವೆಯನ್ನು ಬಾಯಲ್ಲಿ ತುರುಕಿ ಕೊಂಡಳು. ಅಲ್ಲಿಂದೇಳಲು ಮನಸ್ಸಾಗಲಿಲ್ಲ. ತಾನಲ್ಲಿರುವದು ಅವರಿಗೆ ಬೇಕಾಗಿಲ್ಲವೆಂದು ಅವಳಿಗೆ ಗೊತ್ತಿತ್ತು. ಆದರೆ ತನ್ನ ಕಣ್ಣು ಮೂಗಿನ ನೋವನ್ನು ಲಕ್ಷ್ಯಕ್ಕೆ ತಾರದೆ ಹಾಗೆಯೇ ನಿಂತಳು. ಕೆಳಗೆ ಊಟ ಮಾಡುತ್ತಿದ್ದ ಸೊಸೆ, ಮೊಮ್ಮಗ ಊಟಕ್ಕೆ ಕರೆದಾಗ ಅವಳು ಉತ್ತರವನ್ನು ಸಹ ಕೊಡಲಿಲ್ಲ. ಸೊಳ್ಳೆಗಳ ದಂಡಿಗೆ ದಂಡೇ ಅವಳನ್ನು ಮುತ್ತಿಗೆ ಹಾಕಿತು. ಕೈಯಿಂದ ಅವುಗಳನ್ನು ಬೀಸುತ್ತಿದ್ದಳು. ಅವಳ ರಕ್ತಹೀನವಾದ ಕೈಗಳ ಮೇಲೆ ಗಾದರಿಗಳೆದ್ದವು.

ಕಡೆಗೆ ಅತಿಥಿಗಳು ಎದ್ದು ಹೊರಟು ಹೊದರು. ಹಾ-ಸ್ತೂ ಅಡಿಗೆ ಮನೆಗೆ ಬಂದು ತಂಗಳನ್ನಕ್ಕಾಗಿ ಹುಡುಕತೊಡಗಿದ. ಆಗ ಅವಳು ತಾನಿದ್ದ ಗವಿಯಿಂದ ಹೊರಗೆ ಬಂದು ಎಲ್ಲರನ್ನು ಕೂಡಿದಳು. " ಏನು, ನಿಮುಗ ಸೆಖಿ ಬ್ಯಾಸಾಗ ನೆಟ್ಟಗಿಲ್ಲೇನು ? " ಸೊಸೆ ಕೇಳಿದಳು. ನಾಯಿಕುನ್ನಿಯಂತಿದ್ದ ತನ್ನ ಸಣ್ಣ ಮಗುವನ್ನು ಎದೆಗವಚಿಕೊಂಡು ಬಾಗಿಲಿಗೆ ಅವಳು ಕುಳಿತಿದ್ದಳು. ಹಾ-ಸ್ತೂ ಅವಳ ಮಗ್ಗುಲಿಗೆ ಬಟ್ಟಲಲ್ಲಿ ಏನನ್ನೊ ತುಂಬುತ್ತ ಕುಳಿತಿದ್ದ.

" ನನಗೇನಾಗೇದ. ಆರಾಮ್ ಇದ್ದೇನಿ " ನಿರಿಗೆಗಟ್ಟಿದ ಅವಳ ಮುಖದಲ್ಲಿ ತುಂಬಿದ್ದ ತೃಪ್ತಿ ಸಂತೋಷಗಳು, ಅವಳ ಹೃದಯದಿಂದ ಚಿಮ್ಮಿದ ಮಾತುಗಳಲ್ಲಿ ತುಳುಕಿದವು. ಮಗನಾಗಲಿ ಸೊಸೆಯಾಗಲಿ ಅದನ್ನು ನೋಡಲೇ ಇಲ್ಲ.

೨

ಮಗ ಸೊಸೆ ಇಬ್ಬರೂ ಗಿರಣಿಗೆ ಕೆಲಸಕ್ಕೆ ಹೊರಟು ಹೋಗಿದ್ದರು.

ಚಿಕ್ಕ ಮಗು ಓಣಿಯ ಹುಡುಗರೊಂದಿಗೆ ಆಡುತ್ತಿದ್ದ.

ಗುರುತು ಹಿಡಿಯಲಾರದಷ್ಟು ಹರಿದು ಹೋಗಿದ್ದ ಒಂದು ಅರಿವೆಯ ಮೇಲೆ ಮುದುಕಿ ಮುದ್ದೆಯಾಗಿ ಕುಳಿತಿದ್ದಳು. ಆ ಚಿಂದಿಯಾಗಿದ್ದ ಅರಿವೆ, ಮೇಲಿರುತ್ತಿದ್ದ ಯಿ-ಟಾ-ಫ್ಯೂನಿಗೆ ಸೇರಿದ್ದಾಗಿತ್ತು. ಗಿರಣಿಯಲ್ಲಿ ಕೆಲಸ ಮಾಡುತ್ತಿದ್ದ 'ಯಿ'ನ ಹೆಂಡತಿ ತನ್ನ ಬಿಡುವಿನ ವೇಳೆಯನ್ನು ಅಡಿಗೆ ಕೆಲಸಗಳಲ್ಲಿ ಕಳೆಯುತ್ತಿದ್ದಳು. ಅವಳಿಗೆ ರಿಪೇರಿ ಮಾಡಲು ವೇಳೆಯಾದರೂ ಎಲ್ಲಿತ್ತು ?

ಮುದುಕಿ ಹೊಲಿಯುತ್ತ ನೋವಿನಿಂದ ಮಿಸುಕಾಡಹತ್ತಿದಳು. ಅವಳ ಮನಸ್ಸಿನಲ್ಲಿ ಏನೋ ಗೊಂದಲ ನಡೆದಿತ್ತು. ಯಾರ ಜೊತೆಯಲ್ಲಾದರೂ ಹರಟೆ ಹೊಡೆಯಬೇಕಾಗಿತ್ತು. ನಿಷ್ಕ್ರಿಯಳಾಗಿ ಕೂಡುವದು ಮನಸ್ಸಿಗೆ ಬರಲಿಲ್ಲ. ಆದರೆ ಮಾತನಾಡುವದಾದರೂ ಯಾರ ಜೊತೆಗೆ ? ಏನೆಂದು ಹೇಳಬೇಕು ? ಮಗನೂ ಅವಳಿಗೆ ಅಷ್ಟೊಂದು ಮಹತ್ವವನ್ನು ಕೊಟ್ಟಿರಲಿಲ್ಲ. ಇಷ್ಟೇ ಅಲ್ಲ. ಅವಳಿಗೆ ತಾನೂ ಏನು ಮಾತನಾಡಬೇಕೆಂಬುದೇ ಗೊತ್ತಿರಲಿಲ್ಲ. ಬಹಳ ಹೊತ್ತಿನವರೆಗೆ ಒಬ್ಬಳೇ ಕುಳಿತಳು. ಮನಸ್ಸಿಗೆ ಕೆಡುಕೆನಿಸಿತು. ಆದರೂ ಮಗನು ನಡೆಸಿದ ಕಾರ್ಯಕವನ್ನು ಕುರಿತು ವಿಚಾರಮಾಡತೊಡಗಿದಳು. ಅಷ್ಟರಲ್ಲಿ ಮನಸ್ಸಿಗೆ ಏನೆನ್ನಿಸಿತೋ ಏನೋ ಹತ್ತಿರವೇ ವಾಸಿಸುತ್ತಿದ್ದ ಮಿಸೆಸ್ ವಾಂಗಳನ್ನು ಕರೆಯುತ್ತ ಹೋದಳು.

ಮಿಸೆಸ್ ವಾಂಗಳು ಒಂದು ಕಟ್ಟಿಗೆಯ ಕೋಣೆಯಲ್ಲಿ ಅರಿವೆಗಳನ್ನು ಒಗೆಯುತ್ತಿದ್ದಳು. ಮುದುಕಿ ಅವಳ ಹತ್ತಿರ ಹೋಗಿ ನಿಂತಳು. ಸ್ವಲ್ಪ ಹೊತ್ತು ಏನೂ ಮಾತನಾಡಲೇ ಇಲ್ಲ. ಆಮೇಲೆ ಮನಸ್ಸಿಗೆ ಏನು ಬಂತೋ, ಒಮ್ಮೆಲೆ ಹೇಳಿದಳು : " ಅಂದು ಎಲ್ಲರಿಗೂ ಊಟ ಹಾಕಿದರಲ್ಲಾ ಆ ಸ್ಥಳ ನೆನಪಿದೆಯೇ ? ನಾವೆಲ್ಲರೂ ಅಂದು ಊಟಕ್ಕೆ ಹೋಗಿದ್ದು ?"

" ಅದು ಮರೆತೀತೇ ? ಎಲ್ಲರೂ ಅಡಿಗೆ ಮಾಡುವದು, ಎಲ್ಲರೂ ಉಣ್ಣುವದು. ಕಡೆತನಕ ಹಾಗೆಯೇ ಇದ್ದರೆ ಎಷ್ಟು ಒಳ್ಳೇದು !"

ವಾಂಗಳು ತನ್ನ ಕೆಲಸವನ್ನು ಬಿಟ್ಟು ತೊಯ್ದ ಕೈಗಳನ್ನು ಕಾಲಿಗೊರೆಸಿಕೊಂಡಳು. ಮುಂದಿನ ಮನೆಯಲ್ಲಿದ್ದ ಮಿಸೆಸ್ ಲೀ ಅಷ್ಟರಲ್ಲಿ ಬಂದು

ಮಾತಿನಲ್ಲಿ ಕೂಡಿದಳು.

" ಮೊದಲು ನಾವು ನಂಬಲೇ ಇಲ್ಲ. ಹಾ-ಸ್ಯಾನ ಅದರ ವಿಷಯ ಹೇಳಿದಾಗ ಅವನನ್ನು ಸುಳ್ಳುಗಾರನೆಂದರು. ಅದು ಸತ್ಯವೆಂದು ತಿಳಿದಾಗಲೂ ಅದನ್ನು ನಂಬುವದು ಅಸಾಧ್ಯವಾಯಿತು. ಅವರು ಕರೆಯುವ ತನಕ ನಾವೂ ಹೋಗಲೇ ಇಲ್ಲ. ಬಹಳ ದಿವಸ ನಡೆಯಲಿಲ್ಲವೆಂದು ಮಾತ್ರ ಕೆಡುಕೆನಿಸುತ್ತದೆ. ಆದರೆ ಆ ತಾಯಿಗ್ಗಂಡ ಪೋಲಿಸರೂ ಮತ್ತು ಜಪಾನದ ಗೂಢಚಾರರೂ ಇಷ್ಟೆಲ್ಲ ಅನರ್ಥಕ್ಕೆ ಕಾರಣರಾದರು. "

" ಊಟ ಮಾಡುವದೂ ಕಾನೂನಿಗೆ ವಿರುದ್ಧವೇ ? ಆ ಜೀವಂತ ಹೆಣಗಳು...."

" ಅಷ್ಟೆಲ್ಲ ಖರ್ಚು ಯಾರು ನೋಡಿಕೊಂಡರು ಗೊತ್ತೇ?" ಹಾ-ಫೂನ ತಾಯಿ ಕೇಳಿದಳು.

" ಆ ಶ್ರೀಮಂತ ಮನುಷ್ಯ ಲಿ-ಯು; ಅವನೇ ಕೊಟ್ಟಿರಬೇಕು. ಆ ಮೇಲೆ ಅವನನ್ನು ಪೋಲೀಸರು ಊರು ಬಿಟ್ಟು ಓಡಿಸಿದರು. "

" ಲಿ-ಯು ಕೊಟ್ಟನೇ ? ಅಷ್ಟು ದುಡ್ಡು ಅವನೆಲ್ಲಿಂದ ತಂದ ? ಶ್ರೀಮಂತರು ಹೀಗೆ ಮಾಡುತ್ತಾರೆಯೇ ? ಇರಲಿಕ್ಕಿಲ್ಲ. ಇಲ್ಲದಿದ್ದರೆ ಅವನು ನಮ್ಮನ್ನೆಲ್ಲ ದುಡಿಸಿಕೊಳ್ಳುತ್ತಿದ್ದ. ನಿಜವಾಗಿ ಈ ದುಡ್ಡು ಬಂದಿದ್ದೆಂದರೆ........" ಅವಳು ಸ್ವಲ್ಪ ಮೆಲ್ಲಗೆ ಲಕ್ಷ್ಯಪೂರ್ವಕವಾಗಿ ಮಾತನಾಡತೊಡಗಿದಳು.

" ಹಾಂ! " ವಾಂಗ ಮತ್ತು ಲೀ ಇಬ್ಬರೂ ಉದ್ಗರಿಸಿದರು.

"ಒಬ್ಬ ಮನುಷ್ಯ ಕೊಟ್ಟೀ ಇಲ್ಲ" ಹಾ-ಫೂನ ತಾಯಿ ತಿಳಿಸಿ ಹೇಳತೊಡಗಿದಳು.

" ಎಷ್ಟೋ ಜನರು ಕೊಟ್ಟರು. ಸಾವಿರಾರು ಜನರು ಬಹಳ ಹಣ ಕೂಡಿಸಿ ಯುದ್ಧ ನಡೆದಾಗ ಶಾಂಘಾಯಿಗೆ ಕಳಿಸಿಕೊಟ್ಟರು. ಅದರಲ್ಲಿ ಸ್ವಲ್ಪ ನಮ್ಮ ಪಾಲಿಗೆ ಬಂತು. ಆಗ ನಾವು ಜಪಾನೀಯರ ಗಿರಣಿಯ ವಿರುದ್ಧ ಸಂಪು ಹೂಡಿದ್ದಿಲ್ಲವೇ ? ಜಪಾನೀ ಹುಂಬರು ಆಗ ಶಾಂಘಾಯಿಗೆ ಮುತ್ತಿಗೆ ಹಾಕಿದ್ದರು. ಆಗ ನಮಗೆ ಹೊಟ್ಟೆಗಿಲ್ಲದ್ದರಿಂದ ನಮಗೆಲ್ಲ ಊಟಕ್ಕೆ ಕೊಟ್ಟರು. "

" ಹೀಗೆಯೇ ಇರಬೇಕು. ಬಡವರೇ ಬಡುವರಿಗೆ ನೆರವಾಗುತ್ತಾರೆ. ಈ ಲಿ-ಯು ಅಷ್ಟು ಮೂರ್ಖನಲ್ಲವೆಂಬುದು ನನಗೆ ಗೊತ್ತಾಗಬೇಕಿತ್ತು. ಅದೆಲ್ಲ

ನಿಮಗೆ ಹೇಗೆ ತಿಳಿಯಿತು ?"

ಹಾ-ಫೂನ ತಾಯಿ ತಾನು ತಿರಸ್ಕೃತಳೆಂಬುದನ್ನು ಮರೆತುಬಿಟ್ಟಳು. ಹೆಮ್ಮೆಯಿಂದ ಕೂಡಿದವಳಾಗಿ ಅಧಿಕಾರವಾಣಿಯಿಂದ ಮಾತನಾಡತೊಡಗಿದಳು.

"ಮೊದಲು ನಾನೂ ಈ ವಿಷಯವಾಗಿ ಕೂಪಮಂಡೂಕಳಾಗಿಯೇ ಇದ್ದೆ. ಆಮೇಲೆ ಇದೆಲ್ಲ ನಾನು ಕೇಳಿದ್ದು. ಅವರಿಗೆ ಜಯ ಸಿಕ್ಕಿದೆಯೆಂದು ಕೇಳಿದ್ದೇನೆ. ಇಷ್ಟೇ ಅಲ್ಲ, ನಮ್ಮವರು ಅವರಿಗೆ ಏನೋ ಕಾಣಿಕೆ ಕೊಡಬೇಕೆಂದಿದ್ದಾರೆ."

"ಹಾಂ ಹೀಗೇನು! ಅವರು ನಮಗೆ ಸಹಾಯ ಮಾಡಿದರು. ಅದರ ಉಪಕಾರ ತೀರಿಸಲೇಬೇಕು." ಮಿಸೆಸ್ ಲೀ ತನ್ನ ಜೀವನದಲ್ಲಿಯೇ ಒಳ್ಳೆಯ ನಿರ್ಣಯವನ್ನು ಕೊಡುವವಳಂತೆ ಮಾತನಾಡಿದಳು.

"ಆದರೆ ನಮ್ಮವರು ಶಾಂಘಾಯಿಗೆ ಎಂದು ಹೋಗುತ್ತಾರೆಂಬುದು ತಿಳಿಯಬೇಕು ?" ಮಿಸೆಸ್ ವಾಂಗ ಧೃಡಪಡಿಸಿಕೊಳ್ಳಲು ಕೇಳಿದಳು.

"ಅವರು ಬಂದೇ ಬರುತ್ತಾರೆ. ಒಂದಿಲ್ಲ ಒಂದು ದಿನ ಬಂದೇ ಬರುತ್ತಾರೆ. ನಾವು ಅವಸರದಲ್ಲಿದ್ದೇವೆಂದು ತಿಳಿದರೆ, ನಾವು ಏನನ್ನಾದರೂ ಕದೆಗ ಒಂದು ತಂತಿಯನ್ನಾದರೂ ಕಳಿಸಿದರೆ ಅವರೂ ಕೂಡಲೆ ಬರುತ್ತಾರೆ. ನಾವು ಇಲ್ಲಿ ದುಃಖದಲ್ಲಿದ್ದೇವೆಂದು ತಿಳಿದರೆ, ಅವರು ಮೊದಲು ಇಲ್ಲಿಗೇ ಬರುತ್ತಾರೆ." ತನಗೆ ಎಲ್ಲ ಗೊತ್ತಿದೆಯೆಂಬಂತೆ ಆ ಮುದುಕಿ ವಾಂಗಳಿಗೆ ಎಲ್ಲ ತಿಳಿಯಪಡಿಸಿದಳು. ಆದರೆ ಇದೆಲ್ಲ ಅವಳಿಗೆ ಗೊತ್ತಿಲ್ಲದ್ದು. ಸುಮ್ಮನೆ ಹೀಗೆ ಇರಬಹುದೆಂದು ತರ್ಕಿಸಿದ್ದಳು ಮಾತ್ರ. ಸ್ವಲ್ಪಾದರೂ ಅದರಲ್ಲಿ ತಥ್ಯವಿದೆಯೆಂದು ಅವಳಿಗನಿಸಿತು.

ಮಿಸೆಸ್ ಲೀ ಹೇಳಿದಳು : "ನಾವು ಏನನ್ನಾದರೂ ಕಳಿಸಲು ಪ್ರಯತ್ನ ಮಾಡಬೇಕು. ಅದು ಒಳ್ಳೆಯದಿಲ್ಲದಿದ್ದರೂ ಚಿಂತೆ ಇಲ್ಲ. ನಮ್ಮ ಉದ್ದೇಶ ಒಳ್ಳೆಯದಿದ್ದರೆ ಅವರೇನೂ ನಗಲಿಕ್ಕಿಲ್ಲ. ಇದು ಸರಿಯಲ್ಲವೇ ?"

ಹಾ-ಫೂನ ತಾಯಿಗೆ ಆನಂದವಾಯಿತು. ಮಿಸೆಸ್ ವಾಂಗಳೂ ಅದನ್ನೇ ಒಪ್ಪಿದಳು. ಏನನ್ನು ಕೊಂಡುಕೊಳ್ಳುವದು ? ಮೂವರೂ

ಕೂಡಿ ಒಂದು ಮುಷ್ಟಿಯಷ್ಟು ರೊಕ್ಕವನ್ನು ಹೊರದಿಸಿದರು. ಅದರಿಂದ ಏನು ಬರಬಹುದು ? ಬಹಳ ಹೊತ್ತು ವಿಚಾರ ಮಾಡಿದರು. ಕಡೆಗೆ ಮಿಸೆಸ್ ಲೀ, ಬೇರೆ ಹೆಣ್ಣುಮಕ್ಕಳನ್ನು ಕೂಡಿಸಿಕೊಂಡರೆ ಹಗುರಾಗಬಹು ದೆಂದು ಸೂಚಿಸಿದಳು. ಅಂತೂ ನಿಶ್ಚಯಿಸಿ ಮಕ್ಕಳಂತೆ ನಗುನಗುತ್ತ, ಬೇರೆ ಹೆಣ್ಣುಮಕ್ಕಳನ್ನು ಕೂಡಿಸಿಕೊಳ್ಳಲು ಹೊರಟರು. ಅವರ ನಿರಿಗೆಗಟ್ಟಿದ ಮುಖದಲ್ಲಿ ನಗೆ ಸುಳಿಯುತ್ತಿತ್ತು.

( ೩ )

ಅವರೆಲ್ಲರಿಗೂ ಒಂದು ಹೊಸ ಕೆಲಸ ದೊರೆತಂತಾಗಿತ್ತು. ಮೂವರು ಮುದುಕಿಯರೂ ಬಟ್ಟೆ ಕೊಳ್ಳಲು ನಡೆದರು. ಇಬ್ಬರನ್ನು ದಾರ ಕೊಳ್ಳಲು ನಿಯಮಿಸಲಾಯಿತು. ಅವರು ತಮ್ಮ ಸೊಸೆಂದಿರ ಕಡೆಯಿಂದ ದುಡ್ಡನ್ನು ದೊರಕಿಸಬೇಕೆಂದು ಮಾಡಿದರು. ಅದೂ ಸಾಲದಿದ್ದರೆ ಬೇರೆ ವಂತಿಗೆ ಕೂಡಿಸುವ ಯೋಜನೆಯೂ ಇತ್ತು. ಅವರು ತಮ್ಮ ದುಡ್ಡನ್ನು ಭದ್ರವಾಗಿ ಸುತ್ತಿ ಇಟ್ಟರು.

ಬಟ್ಟೆ ಕೊಳ್ಳಲು ಹೋದವರು, ಯಾವ ಅರಿವೆ ಬೇಕೆಂಬುದು ತಿಳಿ ಯದೆ ಅಂಗಡಿಯಿಂದ ಅಂಗಡಿಗೆ ಅಲೆದರು. ಕಡೆಗೆ ತಮಗೆ ಸರಿಯಾದದ್ದು ಸಿಕ್ಕ ಮೇಲೆ ಅನುಮಾನಿಸುತ್ತ ದುಡ್ಡೆಣಿಸತೊಡಗಿದರು. ಅದೇನು ಅಂತಹ ಸುಲಭವಾದ ಕೆಲಸವಲ್ಲ, ಮೇಲಾಗಿ ತಮ್ಮ ಜವಾಬ್ದಾರಿಯ ಅರಿವೂ ಅವರಿ ಗಾಗಿತ್ತು. ತಾವು ಆರಿಸಿದ ವಸ್ತು ತೃಪ್ತಿಕರವಾಗದಿದ್ದರೆ! ಎಂತಹ ಅಪಮಾನ!

" ಇದು ನಡೆಯುತ್ತದೆ; ತೀರ ಚಿಕಿತ್ಸಕರಾಗುವದು ಒಳ್ಳೆಯದಲ್ಲ. ಒಂದು ವಾರಿಗೆ ಹತ್ತು ಆಣೆ ಬೀಳಬಹುದು. "

ಅಂಗಡಿಕಾರನಿಗೆ ಅದು ಯಾವುದಕ್ಕೆ ಎನ್ನುವದು ಬೇಕಾಗಿತ್ತು. ಅವರು ಏನನ್ನೂ ಹೇಳಲಿಲ್ಲ. ಒಳಗೊಳಗೇ ನಕ್ಕರು ಮಾತ್ರ.

" ಆಗಲಿ ಅದನ್ನೆ ತೆಗೆದುಕೊಳ್ಳೋಣ. ಎರಡು ವಾರು ಸಾಕಲ್ಲ ? "

" ಆಗಲಿ ಸ್ವಲ್ಪ ಮೇಲೆ ಕೇಳಿದರಾಯಿತು. "

" ಏನು ಸೊಕ್ಕು ! ಒಂದು ವಾರು ಕೆಂಪು ಅರಿವೆಗೆ ಹತ್ತಾಣೆ ! "

ತಾವು ಕೊಂಡ ವಸ್ತುವನ್ನು ಹೊತ್ತು ನಡೆದರು. ಅವರಿಗೆ ಸಮ್ರಾಟನ ರತ್ನದ ಪೆಟ್ಟಿಗೆಯನ್ನು ತಮ್ಮ ವಶಕ್ಕೆ ಕೊಟ್ಟಂತೆನಿಸಿತ್ತು.

ಹತ್ತು ಹನ್ನೆರಡು ಮುದುಕರು ಅದರ ಸುತ್ತು ಕೂತು ಚರ್ಚಿಸತೊಡಗಿದರು. ಅರಿವೆಯ ಒಂದು ಮೂಲೆಯಲ್ಲಿ ಒಂದು ಹೂ ಇರಬೇಕೆಂದು ಕೆಲವರು ಸೂಚಿಸಿದರು. ಬೇರೆ ಹೆಣ್ಣುಮಕ್ಕಳು ಅದನ್ನು ಉಪಯೋಗಿಸಿದ್ದನ್ನು ನೋಡಿದ್ದರು. ಕಾಣಿಕೆಯೆಂದ ಮೇಲೆ ಎಲ್ಲ ಸರಿಯಾಗಿರಬೇಕಲ್ಲ. ಮತ್ತಷ್ಟು ರೊಕ್ಕ ಹೊರಡಿಸಿ ಒಬ್ಬಳನ್ನು ಒಂದು ತುಣುಕು ಕಪ್ಪು ಅರಿವೆಯನ್ನು ತರಲು ಕಳಿಸಿದರು.

ಕಡೆಗೆ ಎಲ್ಲವೂ ಮುಗಿಯಿತು. ಹೂವು ಅಷ್ಟೊಂದು ಯೋಗ್ಯ ಸ್ಥಾನದಲ್ಲಿ ಬರಲಿಲ್ಲ. ಹೆಣಿಕೆಯಂತೂ ತೀರ ಕೆಟ್ಟುಹೋಗಿತ್ತು. ಆದರೇನು ? ಪ್ರತಿಯೊಬ್ಬರ ಹೃದಯವೂ ಆನಂದದಿಂದ ತುಂಬಿತು. ತಮ್ಮ ಕಾಣಿಕೆಯ ಕಡೆಗೆ ಬಹಳ ಹೊತ್ತು ನೋಡಿ ಮುಚ್ಚಿ ಇಟ್ಟರು. ಆಮೇಲೆ ತಮ್ಮ ಆಸೆಗಳನ್ನು ಕುರಿತು ಮಾತನಾಡಿದರು. "ಏನು ವಿಚಾರ ? ಶಾಂಘಾಯಿ ಬೇರೆ ಒಂದು ಜಗತ್ತೇ ಅದು. ದಿನಕ್ಕೆ ಏಳು ತಾಸು ದುಡಿತ; ಏರಿದ ಸಂಬಳ; ಆದಿತ್ಯವಾರ ಕೆಲಸವಿಲ್ಲ. ನಾಟಕಕ್ಕೆ ಹೋದರೆ ನಿಜವಾಗಿಯೂ ಪುಕ್ಕಟೆ ಟಿಕೆಟ್ಟುಗಳಂತೆ........"

ಹಾ-ಫೂನ ತಾಯಿಯನ್ನು ಕಾಣಿಕೆ ಕೊಡಲು ಪ್ರತಿನಿಧಿಯನ್ನಾಗಿ ಮಾಡಿದರು. ಅವಳಾದರೂ ಅದನ್ನು ಸುರಕ್ಷಿತವಾಗಿ ಮುಟ್ಟಿಸಲು ಆಣೆ ಇಟ್ಟುಕೊಂಡಳು. ಆದರೆ ಕೆಲವರು ತಮ್ಮೊಳಗೆ ಯೋಚಿಸಿದರು: "ಆದರೂ ಅವರು ನಮ್ಮಂಥ ಮುದುಕರ ಕಾಣಿಕೆಯನ್ನು ಸ್ವೀಕರಿಸುವರೇ ?"

೪

ಮತ್ತೆ ಅದೇ ಗೆಳೆಯನನ್ನು ಕರೆದುಕೊಂಡು ಹಾ-ಫೂ ಮನೆಗೆ ಬಂದ. ನಿಚ್ಚಣಿಕೆಯ ಮೇಲೆ ಅವರ ಹೆಜ್ಜೆಗಳನ್ನು ಕೇಳಿದಾಗ ಅವಳ ಹೃದಯ ಗಾಬರಿಯಿಂದ ನುಚ್ಚಾಗತೊಡಗಿತು. ಸೂಜಿಯನ್ನು ಹಿಡಿದಿದ್ದ ಅವಳ ಕೈ ನಡುಗತೊಡಗಿತು. ಅವಳಿಗೆ ಮೇಲೆತ್ತಿ ನೋಡುವದಕ್ಕೂ ಧೈರ್ಯ ಸಾಲಲಿಲ್ಲ. ಸುಮ್ಮನೆ ಕುಳಿತಳು.

" ಅಪ್ಪಾ, ಅಡಿಗೆಮನೆಗೆ ಹೋಗು."

ಅವಳು ಏನನ್ನೋ ಪ್ರೀತಿಯಿಂದ ಹೇಳಹೋದಳು. ಆದರೆ ಏನೂ ಬಾಯಿಂದ ಬರಲೇ ಇಲ್ಲ. ತನ್ನ ಅರಿವೆಗಳನ್ನು ಕೂಡಿಸತೊಡಗಿದಳು. ಅವಳ ಕೈ ಆ ಜಿಲಿಯುಳ್ಳ ಗಂಟಿನೆಡೆಗೆ ಹೋಯಿತು. ಮಗನ ಗೆಳೆಯನ ಕಡೆಗೆ ನೋಡಲು ತಲೆ ಎತ್ತಿದಳು. ಅವನ ಕಣ್ಣುಗಳಲ್ಲಿ ಕರುಣೆ ತುಂಬಿತ್ತು. ಅವಳಿಗೆ ಧೈರ್ಯ ಬಂದಿತು. ನಿಚ್ಚಣಿಕೆಯ ಕಡೆಗೆ ಹೋಗುವ ಮುಂದೆ, ಅವರ ಎದುರು ಅನುಮಾನಿಸುತ್ತ ನಿಂತಳು. " ಅಲ್ಲ ಅವ್ವಾ, ಏನದು ?" ಅವಳ ವಿಚಿತ್ರ ನಡತೆಯನ್ನು ನೋಡಿ ಹಾ-ಫೂ ಕೇಳಿದ.

ಅವಳು ತಿರುಗಿ ಆ ಗೆಳೆಯನ ಕಡೆ ಹೋದಳು. ತನ್ನ ಎದೆಯಿಂದ ಕಾಣಿಕೆಯನ್ನು ತೆಗೆದು, ಒಮ್ಮೆ ಗಟ್ಟಿಮನಸ್ಸು ಮಾಡಿ ಅವನಿಗೆ ಕೊಟ್ಟು ಹೇಳಿದಳು:

" ಇದು ಅವರಿಗೆ. ನಮ್ಮ ಪರಿಯಿಂದ ಅವರಿಗೆ ಇದನ್ನು ಮುಟ್ಟಿಸ ಬೇಕು."

" ಅವರು ? ಯಾರವರು ?"

" ನಿನಗೆ ಗೊತ್ತಿದೆ. ಅವರು, ಅವರ ವಿಷಯ ಆಗಾಗ ಮಾತನಾಡು ತ್ತೀರಲ್ಲ. ಮುದಕರಿಗೂ ಗೊತ್ತು........"

" ಓ !"

" ನಾವು ಹದಿನಾಲ್ಕು ಜನ ಕೂಡಿ ಅವರಿಗೆ ಕಳಿಸಬೇಕೆಂದು ಮಾಡಿ ದೆವು. ಅದು ಇಲ್ಲಿದೆ."

ಅವನು ಗಂಟನ್ನು ಬಿಚ್ಚಿದ. ಸಂತೋಷದ ನಗೆ ಮುಖದ ಮೇಲೆ ಸುಳಿಯಿತು. ಹಾ-ಫೂ ಉತ್ಸಾಹದಿಂದ ಕೇಳಿದ:

" ನೀವು ಮುದುಕರು ಮಾಡಿದ್ದೇ ಇದು ?"

ಅವಳು ಆನಂದದಿಂದ, ಹೆಮ್ಮೆಯಿಂದ ನಡುಗಹತ್ತಿದಳು. ತಲೆಯಾಡಿ ಸುವಾಗ ಗೆಲುವಿನ ನಗೆಯನ್ನು ತಡೆಯುವದು ಅಸಾಧ್ಯವಾಯಿತು.

" ಅವರು ಬೇಗ ಬರಬಹುದೆಂದು ಆಸೆ ಇದೆ."

" ಅವ್ವಾ ಇದೆಲ್ಲ ನಿಮಗೆ ಹೇಗೆ ಗೊತ್ತು ?"

" ನೀವು ಆಡುತ್ತಿದ್ದುದನ್ನು ಕೇಳುತ್ತಿದ್ದೆ; ನನಗೆಲ್ಲ ಗೊತ್ತು" ನೂರಕ್ಕೆ ನೂರರಷ್ಟು ತೃಪ್ತಿಯಾಗಿ ನಕ್ಕಳು.

" ಹಾ, ಹಾ, ಹಾ, ಹಾ !" ಅವರೂ ಸಂತೋಷದಿಂದ ನಕ್ಕರು. ಅವರನ್ನು ಹಾಗೆ ನೋಡುತ್ತ ಅವಳಿಗೆ ಮತ್ತೆ ಅಸಮಾಧಾನವಾಯಿತು. ಕಡೆಗೆ ಧೈರ್ಯ ತಂದುಕೊಂಡು ಕೇಳಿದಳು :

" ಇದು ನಿಜವೇ ? ಮುದುಕರನ್ನು ನಿಮ್ಮ ಸಮಾಜದಲ್ಲಿ ತೆಗೆದು ಕೊಳ್ಳುವಿರಾ ?"

" ನಿನ್ನಂಥವಳನ್ನು ಮಾತ್ರ ಇಲ್ಲ." ಹಾ-ಫೂ ನಕ್ಕ. ಕಡೆಗೆ ಕೆಲಸ ಕ್ಕಾಗಿ ಮಾನವಜಾತಿಯನ್ನೇ ತೆಗೆದುಕೊಳ್ಳಬಹುದೆಂದು ಹೇಳಿದ.

" ನನಗೆ ಅದೇ ಬೇಕಾಗಿದ್ದದ್ದು. ಅವರಿಗೆ ಏನು ಬೇಕೆಂಬುದು ನಮಗೆ ಹೇಳಿರಿ. ನಾವು ಅದನ್ನು ನೆರವೇರಿಸುತ್ತೇವೆ. ನಾವು ಇಪ್ಪತ್ತು ಮೂವತ್ತು ಮಂದಿ ಸೇರಿದಾಗ ಬರುತ್ತೇವೆ."

" ಒಳ್ಳೆಯದು, ಒಳ್ಳೆಯದು."

ಅಷ್ಟೊತ್ತಿಗೆ ಉಳಿದವರೆಲ್ಲ ಕೋಣೆಯೊಳಗೆ ಬಂದರು. ಅವರಿಗೆ ಕತೆ ಕೇಳುವ ಹಂಬಲ. ಮುದುಕಿಯ ತಾಮ್ರವರ್ಣದ ಮುಖ ನಾಚಿಕೆಯಿಂದ ಕೆಂಪೇರಿತು. ಎಲ್ಲವನ್ನು ಕಟ್ಟಿಕೊಂಡು ನಿಚ್ಚಣಿಕೆಯ ಕಡೆ ನಡೆದಳು.

" ಉತ್ಕೃಷ್ಟ ! ಉತ್ಕೃಷ್ಟ !" ತರುಣರು ಹೀಗೆ ಒದರಿದ್ದು ಅವಳಿಗೆ ಕೇಳಿಸಿತು. " ನಿಜವಾಗಿಯೂ ನಮ್ಮ ಮುದುಕಿಯರು ಸಂಘಟಿತರಾಗುತ್ತಿ ದ್ದಾರೆ !"

ಹೊಳೆಯುವ ಕಣ್ಣುಗಳಿಂದ ಅವರನ್ನು ನೋಡಿದಳು. ಧ್ವಜವನ್ನು ಕೊನೆಯ ಸಲ ನೋಡಿದಳು. ಕಪ್ಪು ಹೂವಿನ ಸುತ್ತಲೂ ಕೆಂಪು ಅರಿವೆ ಪ್ರಜ್ವಲಿಸುತ್ತಿತ್ತು.

ಆಮೇಲೆ ಅವಳಿಗೆ ನಿಚ್ಚಣಿಕೆ ಇನ್ನಿಳಿದದ್ದು ಗೊತ್ತಾಗಲೇ ಇಲ್ಲ.

---

ಪರಿಚಯ

## ಪಾ-ಚಿನ್

(೧೮೯೬ —)

ಪಾ-ಚಿನ್ (ಭಾ-ಗಿನ್) ೧೯೧೭ರ ಸಾಹಿತ್ಯಕ್ರಾಂತಿಯ ನಂತರ ಚೀನಿ ಸಾಹಿತ್ಯಕ್ಕೆ ಒಂದು ರೂಪ ಮತ್ತು ಜೀವಕಳೆ ಕೊಟ್ಟ ಲು-ಶೂನ್, ಮಾ-ಟುನ್, ಟಿಂಗ್-ಲಿಂಗ್, ಶೇನ್-ತ್ಸುಂಗ್-ವೆನ್, ಯು-ಟಾಫು ಇವರ ಪಂಕ್ತಿಗೇ ಸೇರಿದವನೊಬ್ಬ. ಈತನ ಕತೆ ಕಾದಂಬರಿಗಳು ಚೀನಿ ತರುಣರೆಲ್ಲರಿಗೂ ಪ್ರಿಯವಾಗಿವೆ; ಚೀನಾದಲ್ಲಿಯಕಿಂತ ಜಪಾನದಲ್ಲಿ ಈತನ ಬರವಣಿಗೆ ಹೆಚ್ಚು ಜನಪ್ರಿಯವಾಗಿರುವುದರಿಂದ ಈತನ ಎಲ್ಲ ಗ್ರಂಥಗಳೂ ಜಪಾನಿ ಭಾಷೆಗೆ ಭಾಷಾಂತರಿಸ್ಪಟ್ಟಿವೆ. ಅನೇಕ ಈತನ ಗ್ರಂಥಗಳು ರಶಿಯನ್, ಜರ್ಮನ್, ಫ್ರೆಂಚ್ ಭಾಷೆಯಲ್ಲಿಯೂ ಭಾಷಾಂತರಗೊಂಡಿವೆ.

ಇಂಗ್ಲೀಷಿಗೆ ಭಾಷಾಂತರವಾದ ಈ ಕತೆ ಈತನ ಬರೆವಣಿಗೆಯಲ್ಲಿಯೇ ಮೊದಲನೆಯದು. ಕಳೆದ ಇಪ್ಪತ್ತು ವರ್ಷಗಳಲ್ಲಿ ಹುಟ್ಟಿದ ಸಣ್ಣ ಕತೆಗಳಲ್ಲಿ ಈ 'ನಾಯಿ' ಅತ್ಯುತ್ತಮವಾದ ಕತೆ ಎಂದು ಚೀನಿಯರಿಂದ ಪರಿಗಣಿಸಲ್ಪಟ್ಟಿದೆ. ದುರ್ದೈವದಿಂದ ಈ ಭಾಷಾಂತರದಲ್ಲಿ ಅದಕ್ಕಿರುವ ಮೂಲದ ಒಗರು, ಶಕ್ತಿ, ರೂಪಚಮತ್ಕೃತಿ, ತಂತ್ರದ ಬಿಗುವು, ಎಷ್ಟೋ ಕಡಿಮೆಯಾಗಿ ಮೂಲ ಅರ್ಥದ ನೆರಳಾಗಿ ಬಂದಿರಬಹುದೇ ಹೊರತು, ಅದರ ಜೀವ ಜೀವಾಳದಲ್ಲಿರುವ ಭಾವಸಂಪತ್ತು, ಕಟು-ಮಧುರ-ವ್ಯಂಗ್ಯ, ಹಾಸ್ಯ ಬಂದಿರಲಾರದು.

ಈತನ ಸುಪ್ರಸಿದ್ಧ ಗ್ರಂಥಗಳೆಂದರೆ 'ತೀರಿದವರು' 'ಬಿರುಗಾಳಿ' 'ಉದುರಿದ ಸೂರ್ಯ'

ಸಮಕಾಲೀನ ಎಷ್ಟೋ ಬರಹಗಾರರಂತೆ, ಈತನ ರಾಜಕೀಯ ವಿಚಾರಗಳು ಈತನ ತಲೆಯ ಮೇಲೂ ಕೊಮಿಂಗ್‌ಟನ್‌ದ ಅಪವಾದ ಹೊರಿಸಿ ಈತನನ್ನು ದೇಶಭ್ರಷ್ಟ ಮಾಡಿದವು. ಈಗ ಜಪಾನದಲ್ಲಿದ್ದಾನೆ. ಈತನ ಕೆಲ ಬರೆವಣಿಗೆಗಳಿಗೆ ಬಹಿಷ್ಕಾರ ಹಾಕಲಾಗಿದೆ.

# ನಾಯಿ

ನನ್ನ ಹೆಸರೇ ನನಗೆ ಗೊತ್ತಿಲ್ಲ (ತೊಟ್ಟಿಲು ಕಂಡಿದ್ದರೆ ಹೆಸರು). ನನ್ನ ವಯಸ್ಸು ಗೊತ್ತಿಲ್ಲ. ಈ ಜಗತ್ತಿನಲ್ಲಿ ನನ್ನ ಪ್ರವೇಶವೇ ಆಕಸ್ಮಾತ್ತಾಗಿ ಆದಂತೆ ತೋರುತ್ತದೆ. ಹಾದಿಹೋಕರು ಯಾರಾದರೂ ಸುಮ್ಮಸುಮ್ಮನೆ ಒಂದೆಡೆ ಬಿದ್ದ ಕಲ್ಲನ್ನೆತ್ತಿ ಇನ್ನೊಂಡೆಗೆ ಎಸೆದುಬಿಡುವಂತೆ ಎಲ್ಲಿಂದಲೋ ಎತ್ತಿ ಇಲ್ಲಿ ನನ್ನನ್ನು ಯಾಕೋ ಏನೋ ಯಾರೋ ಒಗೆದಿರಬೇಕು. ನನ್ನ ತಂದೆ ಯಾರು, ನನ್ನ ತಾಯಿ ಯಾರು ಎಂಬುದು ನನಗೆ ಗೊತ್ತಿಲ್ಲ. ಒಗೆದು ಹಿಂದೆ ಬಿಟ್ಟ, ಮರತ ಕೂಸು ನಾನಾಗಿರಬೇಕು. ಕಂದಿ ಮೈಬಣ್ಣ, ಕೂದಲು ಕಣ್ಣು ಕಪ್ಪು ಕಪ್ಪು. ಮೂಗು ಹರವು. ಕುಳ್ಳ ಜಾತಿ. ಇಂಥವರು ಲಕ್ಷಗಟ್ಟಲೆ ಜನರಿದ್ದಾರೆ. ಅಂಥವರಲ್ಲಿ ದೈವ ನನ್ನನ್ನು ಕೆಲಕಾಲ ಜೀವಿಸಕೊಟ್ಟಿದೆ.

ನನಗೂ ಬಾಲ್ಯವೆಂಬುದೊಂದಿರಬೇಕು, ಎಲ್ಲರಿಗೂ ಇರುವಂತೆ. ಆದರೆ ನನ್ನದು ಕೆಲಮಾತಿನಲ್ಲಿ ವಿಲಕ್ಷಣವಾಗಿತ್ತು. ಯಾರೂ ನನ್ನನ್ನು ಮುದ್ದಾಡಲಿಲ್ಲ, ಅಪ್ಪಲಿಲ್ಲ, ಸಮಾಧಾನ ಹೇಳಲಿಲ್ಲ. ನಾನು ಅನುಭವಿಸಿದ ತೀರ ಪ್ರಾರಂಭದ ಭಾವನೆಗಳೆಂದರೆ—ನನಗೆ ನೆನಪಿದ್ದ ಮಟ್ಟಿಗೆ—ಹಸಿವು, ಚಳಿ, ಮತ್ತು ಹೇಸಿಗೆ. ಆದರೂ ಒಮ್ಮೆ ನೆನಪಿದೆ. (ಯಾವಾಗ,. ಏನು, ನನಗೆ ಸರಿಯಾಗಿ ಗೊತ್ತಿಲ್ಲ; ಎಂದೋ ಒಂದು ದಿನ, ಇಷ್ಟು ನಿಜ) ಬಡಕ, ಎತ್ತರವಾದ, ಮುಖಕ್ಕೆ ನಿರಿಗೆ ಬಿದ್ದ ಮುದುಕನೊಬ್ಬನು ನನ್ನಿದಿರು ನಿಂತು ತಲೆಯಲ್ಲಾಡಿಸಿ ಬಿರುಸಾಗಿ ಹೇಳಿದ: " ಈ ನಿನ್ನ ವಯಸ್ಸಿಗೆ ನೀನು ಸಾಲೆಯಲ್ಲಿ ಅಭ್ಯಾಸ ಮಾಡುತ್ತಿರಬೇಕಾಗಿತ್ತು. ಶಿಕ್ಷಣ – ಮುಖ್ಯವಾಗಿ ಅದು ಬೇಕು ಮನುಷ್ಯನಿಗೆ—'' ಅವನು ಸಣ್ಣ ದನಿಯಲ್ಲಿ ಹೇಳಿದರೂ ಅದರಲ್ಲಿ ಕೋಮಲತೆ ತುಂಬಿತ್ತು. ಅವನ ಮುಖ ಗಂಭೀರವಾಗಿತ್ತು. ಅವನ ಉಪದೇಶ ನನ್ನ ಮನಸ್ಸಿನ ಮೇಲೆ ಒತ್ತಿ ಮೂಡಿತು. ನಾನು ನನ್ನ ಚಿಂತೆ, ವರಟು

ಚಳಿ ಎಲ್ಲ ಮರೆತು ಬಹಳೇ ಆಸಕ್ತಿಯಿಂದ ಶಿಕ್ಷಣ ದೊರಕಿಸಲು ಹೊರಟೆ.

ಅಲ್ಲಲ್ಲಿ ಎಲ್ಲ ಕಡೆಗೂ ಕಟ್ಟಡಗಳಿದ್ದವು. ಕೆಲವು ಅರಮನೆಯಂತೆ ದಿವ್ಯವಾಗಿದ್ದವು. ಉಳಿದವು ಅಷ್ಟು ದೊಡ್ಡವಾಗಿರಲಿಲ್ಲ. ಈ ಎರಡನೆಯ ಜಾತಿಯ ಕಟ್ಟಡಗಳಲ್ಲಿ ಶಾಲೆ ಎಂಬುದು ಇರುತ್ತದೆ ಎಂದು ಜನರು ಹೇಳಿದರು. ಅಲ್ಲಿಯೇ ಶಿಕ್ಷಣ ಸಿಕ್ಕುವದು. ನಾನು ಆ ಮುದುಕನು ಹೇಳಿದ ಮಾತುಗಳನ್ನು ಯಾವಾಗಲೂ ಧ್ಯಾನಿಸುತ್ತ, ಕೊನೆಗೊಮ್ಮೆ ಯಾರೂ ಕರೆಯುವ ಬಿಡುವ ಉಪಚಾರಕ್ಕಾಗಿ ತಡೆದು ನಿಲ್ಲದೆ ಶಾಲೆಯೆಂದೆನಿಸಿಕೊಳ್ಳುವ ಕಟ್ಟಡಗಳಲ್ಲೊಂದರಲ್ಲಿ ಧೈರ್ಯಮಾಡಿ ಹೊಕ್ಕೆ.

“ ಹೊರಡಿಲ್ಲಿಂದ! ಇದು ನಿಮ್ಮಂಥವರ ಸ್ಥಳವಲ್ಲ ”........ಎಲ್ಲಿ ಹೋದರೂ ಇದೇ ಮಾತು. ಮುಂದೆ ಮುಂದೆ ನಾನು ಸಿಕ್ಕಸಿಕ್ಕ ಕಟ್ಟಡಗಳನ್ನೂ ಹೊಕ್ಕೆ, ಅರಮನೆಗಳಿಂದ ಗುಡಿಸಲದ ವರೆಗೆ. ಆದರೆ ಎಲ್ಲಿ ಹೋದರೇನು ? ನನ್ನನ್ನು ನೋಡಿದೊಡನೆ ಎಲ್ಲರ ಮೋರೆ ಬಿರುಸಾಗುತ್ತಿದ್ದವು. “ ಹೊರಡಿಲ್ಲಿಂದ ! ” ಎಂಬ ಮಾತೇ ಎತ್ತ ಕಡೆಯಿಂದಲೂ ಬರುತ್ತಿದ್ದಿತು. ಆ ಮಾತಿನ ಪೆಟ್ಟು ನನಗೆ ಚಬಕ ಸೆಳೆದಂತೆ ತುಂಬ ನೋವನ್ನೂ ಭಯವನ್ನೂ ಉಂಟುಮಾಡಿತು. ನಾನು ತಲೆ ತಗ್ಗಿಸಿದೆ. ಸಂಕೋಚಪಟ್ಟೆ. “ ಇದು ಹೀಗೇಕೆ ? ” ಎಂದು ಚಿಂತಿಸಿದೆ. ಸುತ್ತು ಶಾಲೆಯೊಳಗಿನ ಚಿಕ್ಕ ಮಕ್ಕಳ ನಗೆಯಾಟ ಕೆಲೆದಾಟಗಳ ದನಿಯು ಪ್ರತಿಧ್ವನಿಸಿ ಬರುತ್ತಿತ್ತು. ಆದರೇನು.... ?

“ ನಾನು ಮನುಷ್ಯನಾದರೂ ಹೌದೋ ಅಲ್ಲವೋ ?” ಎಂದು ನನ್ನದೇ ನನಗೆ ಆಶ್ಚರ್ಯವಾಯಿತು. ವಿಚಾರ ಮಾಡಿಮಾಡಿದಂತೆ ಸಂಶಯಗಳೇ ಹೆಚ್ಚಾದುವು. ಉತ್ತರ ಕೊಡಲು ಆಗಲೊಲ್ಲದು, ಎಂದು ಪ್ರಶ್ನೆ ಕೇಳುವ ದನ್ನೇ ನಿಲ್ಲಿಸಿ ನೋಡಿದೆ. ಆದರೆ ನಾನು ಸುಮ್ಮನೆ ಕುಳಿತರೆ ಮಂಗ ನನ್ನ ಮನಸ್ಸು ಸುಮ್ಮನೆ ಕೂಡಬೇಕಲ್ಲ ! ಯಾರೋ ಒಳಗಿಂದ ಕೆಣಕೆಣಕಿ ಅಣಕಿಸಿದಂತೆ “ ಏನು ನೀನು ಮನುಷ್ಯನೇ ? ಅಯ್ಯೋ ನೀನೇ ! ” ಎಂದು ಕೇಳುವಂತೆಯೇ ಇತ್ತು.

ಅಸಹಾಯನಾಗಿ, ಕುಗ್ಗಿದವನಾಗಿ, ಒಬ್ಬೊಂಟಿಗನಾಗಿ, ನಾನು

ಇದ್ದದ್ದೇ ಲೋಕದ ಲೆಕ್ಕಕ್ಕೆ ಬಾರದೆ, ಕಟ್ಟಕಡೆಗೆ ನಾನೊಂದು ಹಾಳು ಗುಡಿಯನ್ನು ಹೊಕ್ಕು, ಅಲ್ಲಿರುವ ದೇವರಾದರೂ ಉತ್ತರ ಕೊಡಬಲ್ಲನೇ ? ಎಂಬುದನ್ನು ನೋಡಲು ನಿಶ್ಚಯಿಸಿದ. "ದೇವರು ಕರುಣಾಕರ! ದೇವರು ಸರ್ವಜ್ಞ! ಈ ನನ್ನ ಪ್ರಶ್ನೆಗೆ ಅವನೇ ಉತ್ತರ ಕೊಡುತ್ತಾನೆ." ಎಂದು ನಾನೆಂದುಕೊಂಡೆ.

ಒಮ್ಮೆ ಇದೇ ದೇವರೆದುರು ತೂಗಾಡುತ್ತಿದ್ದ ತೆರೆಯು ಈಗ ಹರಿದು ಬಯಲಾಗಿತ್ತು. ಮೂರ್ತಿಯು ಒಂಟಿಯಾಗಿ, ಬರಿದಾಗಿ, ಕೊಳೆಯಾಗಿ ನಿರ್ಮಾಲ್ಯದ ಕಸದಲ್ಲಿ ಹೂತುಕೊಂಡಿತ್ತು. ಅದರ ಕೈ ಮುರಿದು ಮೊಂಡಾಗಿದ್ದವು. ಈ ದೇವರೆದುರು ನಾನು ಮಣಿದು ಬಾಗಿದೆ. ಪ್ರಾರ್ಥನೆ ಮಾಡಿದೆ. 'ಸರ್ವಶಕ್ತಿಮಂತನಾದ ದೇವರೇ, ನಾನು ಮನುಷ್ಯಪ್ರಾಣಿ ಅಹುದೋ ಅಲ್ಲವೋ ? ಎಂಬ ಕೂಟ ಪ್ರಶ್ನೆಗೆ ಉತ್ತರವೊಂದು ಹುಡುಕು ವಷ್ಟು ಬುದ್ಧಿಯನ್ನು ನನಗೆ ದಯಪಾಲಿಸು!' ಎಂದು ನಾನು ಪ್ರಾರ್ಥಿಸಿದೆ.

ನಿಶ್ಯಬ್ದ. ದೇವರ ಮಣ್ಣು ಮುಕ್ಕಿದ ತುಟಿ ಕದಲಲಿಲ್ಲ. ಕಣ್ಣಲ್ಲಿ ಉತ್ತರ ಸೂಚಿಸುವ ಮಿಂಚು ಹೊಳೆಯಲಿಲ್ಲ.

ಆಯಿತು, ನನ್ನಷ್ಟಕ್ಕೆ ನಾನೇ ಸಂವಾದ ನಡೆಸಿದೆ. "ಅಹುದು, ನಿಜವಾಗಿ ನನ್ನಂಥ ಪ್ರಾಣಿಯು ನನ್ನಿಂದ ತೀರ ಭಿನ್ನರಾದ ಬೇರೆ ಜನರ ಬಾಂಧವ್ಯವನ್ನು ಅಪೇಕ್ಷಿಸುವದಾದರೂ ಹೇಗೆ ? ನನ್ನನ್ನು ನೋಡಿ ಯಾರಿಗೂ ಪ್ರೀತಿಯಿಲ್ಲ, ಸಂತೋಷವಿಲ್ಲ, ಸುಖದುಃಖವಿಲ್ಲ. ಇವೇ ಮನುಷ್ಯನ ಸೊತ್ತು. ಅವು ನನಗಿಲ್ಲ. ನಾನೋ ಜನರು ಉಂಡು ಬಿಟ್ಟದ್ದನ್ನು ಉಣಬೇಕು; ಉಟ್ಟು ಬಿಟ್ಟದ್ದನ್ನ ತೊಡಬೇಕು. ನಾನು ಮನುಷ್ಯ ಎಂದರೆ ಮನುಷ್ಯ-ಕೋಟಿಗೆ ಅಪಮಾನ! ನಿಜವಾಗಿಯೂ ನಾನು ಆ ಮನುಷ್ಯಜಾತಿಗೆ ಸೇರಿದವನೇ ಅಲ್ಲ........!"

ಆದರೆ ನನಗೆನಿಸಿತು 'ಏನಾದರೂ ಪ್ರಯೋಜನಕ್ಕಾಗಿಯೇ ನಾನಿಲ್ಲಿ ಬಂದಿರಬೇಕು. ನನ್ನ ದೇಹದಿಂದಲಾದರೂ ಏನಾದರೂ ಪ್ರಯೋಜನ ವಿರಬೇಕು. ಯಾವ ಪದಾರ್ಥವನ್ನೂ ಕೊಳ್ಳಬಹುದು, ಮಾರಬಹುದು. ನಾನೇಕೆ ನನ್ನನ್ನು ಹಾಗೆ ಮಾರಿಕೊಳ್ಳಬಾರದು ?' ನನ್ನ ಕೊರಳಲ್ಲಿ ಒಂದು ಬೆಲೆ ತೋರಿಸುವ ಹುಲ್ಲುಸರಿಗೆ ಹಾಕಿಕೊಂಡು ಸಂತೆಯ ಚೌಪಥದಲ್ಲಿ

ನನ್ನನ್ನು ಮಾರಿಕೊಳ್ಳಲು ನಾನು ಹೋಗಿ ನಿಂತೆ. ಮೊದಲು ಒಂದು ಕಡೆ ನಿಂತ, ಆಮೇಲೆ ಇನ್ನೊಂದು ಕಡೆಗೆ ನಿಂತೆ. ಆ ಮೈ ತೋರಿಸಿದೆ; ಈ ಮೈ ತೋರಿಸಿದೆ. ಆಪಾದಮಸ್ತಕವಾಗಿ ಎಲ್ಲ ಮೈಯನ್ನೇ ನೀಡಿದೆ, 'ಯಾರಾದರೂ ಈ ಮೈಯನ್ನು ಕೊಂಡರೆ ಸಾಕು' ಎಂದು. 'ಯಾರಾದರೂ ಕೊಂಡು-ಕೊಂಡು, ತನ್ನ ಮನೆಯಲ್ಲಿಯ ತಂಗೂಳನ್ನು ಹಾಕಿದರೂ, ಒಳ್ಳೆ ನಾಯಿ ತನ್ನ ಯಜಮಾನನಲ್ಲಿ ವಿಶ್ವಾಸವಾಗಿರುವಂತ ನಾನೂ ಇರುವೆ' ಎಂದು ದೃಢನಿಶ್ಚಯ ಮಾಡಿಕೊಂಡೆ.

ನಾನು ಸಂತೆಯ ಸಂದಿ ಮೂಲೆ ಮೂಕಗಳಲ್ಲೆಲ್ಲಕಡೆಗೆ ನಿಂತೆ. ಯಾರೂ ಕೇಳಲೊಲ್ಲರು ಕೂಡ! ನನ್ನನ್ನು ನೋಡಿದವರೆಲ್ಲ ನನ್ನನ್ನು ಅಪ-ಹಾಸ್ಯ ಮಾಡುವಂತಿತ್ತು, ಅವರ ದೃಷ್ಟಿ. ಕೆಲವು ಸಣ್ಣ ಹುಡುಗರು ನನ್ನ-ನ್ನೇನೋ ನೋಡಿದರು. ಆದರೆ ಅದು ಕೂರಳೊಳಗಿನ ಬೆಲೆ-ಪಟ್ಟಿಯನ್ನು ನೋಡಿ ನಗೆಯಾಡಲು ಮಾತ್ರ. ನನಗೆ ಹಸಿವೆಯ ಆಯಾಸ ಬಹಳವಾಗಿ, ಅಂತೂ ಇಂತೂ ಹೆಜ್ಜೆ ಹಾಕುತ್ತ ಹಾಳು ಗುಡಿಯನ್ನು ಸೇರಿದೆ. ಹೋಗು-ವಾಗ ಹಾದಿಯಲ್ಲಿ ಕರಕಾದ ಒಂದು ರೊಟ್ಟಿಯ ತುಣುಕು ಮಣ್ಣುಮಣ್ಣಾಗಿ ಬಿದ್ದಿತ್ತು. ಆ ಕಲ್ಲುಕಟಿಯಾದ ಹುಡಿ ತುಂಬಿದ ತುಣಕನ್ನು ಎತ್ತಿದ್ದೊಂದೇ ತಡ, ತಿಂದೇಬಿಟ್ಟೆ. ಆಗ ನನಗೊಂದು ವಿಚಾರ ಹೊಳೆಯಿತು. 'ಇಂಥ ತುಣುಕುಗಳನ್ನು ನಾನು ತಿನ್ನಬಲ್ಲೆನಾದರೆ ನನ್ನ ಹೊಟ್ಟೆ ನಾಯಿಯ ಹೊಟ್ಟೆ ಇರಬೇಕು.' ಎಂದು.

ದೇವರ ಹಾಳು ದೇಗುಲವು ಸ್ತಬ್ಧವಾಗಿತ್ತು. ನನ್ನ ಬಿಟ್ಟು ಅಲ್ಲಿ ಯಾರೂ ಇರಲಿಲ್ಲ. 'ಜಗತ್ತಿನಲ್ಲಿ ಏತಕ್ಕೂ ಬಾರದ ಕೆಗ್ಗಳ ಪದಾರ್ಥವಾಗಿ ಬಿಟ್ಟೆನಲ್ಲಾ!' ಎಂದು ಮೈ ಭಾರವೆನಿಸಿ ನಾನು ಬೇಸರದಿಂದ ಕೆಳಗೆ ಕುಳಿತೆ. ನಾನು ಏನೇ ಇದ್ದರೂ ನನ್ನ ಬೆಲೆ ಮನುಷ್ಯನಿಗೆ ಇಲ್ಲ, ಎಂದು ಬಹಳೇ ಅತ್ತೆ. ಕಣ್ಣೀರು ಕೂಡ ಸುಳ್ಳೇ ಬರುವದಿಲ್ಲ. ಅದು ಅಪರೂಪದ ಬದುಕು. ಆದರೆ ನನ್ನಂಥ ಅಭಂಡ ಪ್ರಾಣಿಗೆ ಆ ಕಣ್ಣೀರು ಸಮಾಧಾನ ಕೊಡದೆ ಹೋಯಿತು. ಆದರೇನು, ನಾನು ಅತ್ತೇ ಅತ್ತೆ. ಬೇರೆ ಕೆಲಸ-ವೇನಿತ್ತು? ನನ್ನ ಹತ್ತಿರ ಕೊಡಲಿಕ್ಕೂ ಕೊಳ್ಳಲಿಕ್ಕೂ ಕಣ್ಣೀರಲ್ಲದೆ ಏನಿತ್ತು?

ನಾನು ಗುಡಿಯಲ್ಲಿ ಅತ್ತೆ, ಹೋದಲ್ಲಿ ಬಂದಲ್ಲಿ ಅತ್ತೆ, ಪೈವುಳ್ಳವರ ಬಾಗಿಲಲ್ಲಿ ನಿಂತು ಅತ್ತೆ.

ಹೊಟ್ಟೆಯಲ್ಲಿ ಏನೂ ಇಲ್ಲ. ಚಳಿಯಿಂದ ಅರೆಸತ್ತಿದ್ದೆ. ನನ್ನ ಕಣ್ಣೀರೆ ನಾನು ಕುಡಿಯುತ್ತ ಒಂದು ದೊಡ್ಡ ಮನೆಯ ದಿಡ್ಡಿ-ಬಾಗಿಲಲ್ಲಿ ಅವಿತು ನಿಂತೆ. ಹೊಟ್ಟೆಯೊಳಗಿನ ಸಂಕಟವನ್ನು ಮರೆಯಲು ದೊಡ್ಡ ದನಿಯಿಂದಲೂ ಅತ್ತೆ. ಪರದೇಶಿ ಉಡುಪು ತೊಟ್ಟ ಯುವಕನೊಬ್ಬನು ನನ್ನ ಬದಿಗೆ ಹಾಯ್ದು ಆ ಮನೆಯಲ್ಲಿ ಸೇರಿದನು. ಆದರೆ ಅವನು ನನ್ನನ್ನು ಕಂಡಂತೆ ತೋರಲಿಲ್ಲ. ಆಮೇಲೆ ಮಧ್ಯವಯಸ್ಸಿನ ಒಬ್ಬ ಮನುಷ್ಯ ಬಂದ. ಅವನೂ ನನ್ನನ್ನು ಕಂಡಂತೆ ತೋರಲಿಲ್ಲ. ಬೀದಿಯ ಮೇಲೇನೊ ಜನರು ಇತ್ತಿಂದತ್ತ ಅತ್ತಿಂದಿತ್ತ ಹಾಯ್ದಾಡುತ್ತಿದ್ದರು. ಆದರೆ ನನ್ನನ್ನು ನೋಡಿದ ಪಾಪಿ ಒಬ್ಬನೂ ಇಲ್ಲ. ನಾನು ನಿಜವಾಗಿ ಇರುವೆನೋ ?

ಕೊನೆಗೆ ಒಬ್ಬ ಎತ್ತರದ ಆಳು ಬಂದ. ಅವನೇನೋ ನನ್ನನ್ನು ನೋಡಿದ, ಸಂಶಯವೇ ಇಲ್ಲ. ಯಾಕಂದರೆ, ಅವನು ನನ್ನ ಹತ್ತಿರ ಬಂದವನೆ ಕೂಗಾಡಿ ಚೀರಾಡಿ ಬೈಯ್ದು ‘ ಹೊರಡಿಲ್ಲಿಂದ ! ಅಳುವುದಕ್ಕೆ ಇದು ನಿನಗೆ ಸ್ಥಳವಲ್ಲ. ’ ಎಂದಂದು ಒಂದು ನಾಯಿಯನ್ನು ಒದೆಯುವಂತ ನನ್ನನ್ನು ಒದೆಯತೊಡಗಿದನು.

ಕೊನೆಗೊಮ್ಮೆ ನನ್ನ ಕಣ್ಣೀರು ತೀರಿದುವು. ಹಾಗೂ ಹೀಗೂ ನನ್ನ ಇಂದ್ರಿಯಗಳ ಮೊಟ್ಟೆ ಕಟ್ಟಿಕೊಂಡು ಮರಳಿ ಬಂದೆ. ಭಿನ್ನನಾದ ದೇವರೆದುರು ಮತ್ತೆ ಮಣಿದೆ, ಬಾಗಿದೆ. ಯಾಕಂದರೆ ಅವೇ ನನ್ನ ಮಿತ್ರ. ಅಲ್ಲಿಯಲ್ಲದೆ ನನ್ನ ಕಷ್ಟ ಎಲ್ಲಿ ಹೇಳಿಕೊಳ್ಳಲಿ ? ನಾನು ಪ್ರಾರ್ಥಿಸಿದೆ. “ ಸರ್ವಶಕ್ತಿಮಂತನಾದ ದೇವರೇ! ನಾನು ಮನುಷ್ಯನಲ್ಲ ಎಂಬುದು ಕಂಡೇ ಕಾಣುತ್ತದೆ. ಆದರೆ ದೈವ ನನ್ನನ್ನಿಲ್ಲಿರಿಸಿದೆ. ಅಂತೂ ನಾನು ಬದುಕಬೇಕು. ನಾನು ದಿಕ್ಕಿಲ್ಲದ ಪರದೇಶಿ; ನನ್ನ ತಂದೆ ತಾಯಿ ಯಾರು ಗೊತ್ತಿಲ್ಲ; ನನಗೆ ಒರಯು ರಾರಾವರೂ ಬೇಕಾಗಿದ್ದಾರೆ. ದೀನ ದಯಾಳುವೆ! ನನ್ನನ್ನು ನಿನ್ನ ಮಗುವಾಗಿ ಮಾಡಿಕೋ. ನನಗೂ ಮನುಷ್ಯಜಾತಿಗೂ ಯಾವ ಸಂಬಂಧವೂ ಇಲ್ಲ. ಮನುಷ್ಯನ ಪ್ರೀತಿ ಎಂಬುದು ಹೇಗೆ ದೊರಕೀತು !! ”

ದೇವರು ಬಾಯಿ ತೆರೆಯಲಿಲ್ಲ. ಧರ್ಮಕ್ಕೆ ಬೇಡ ಎಂದೂ ಎನ್ನಲಿಲ್ಲ. ನನಗಷ್ಟೇ ಸಾಕು. ಈ ಮೊಂಡ ಕೈಯ ದೀನ ದಯಾಳುವಾದ ದೇವನು ನನ್ನ ತಂದೆಯಾದನು.

(೨)

ಹೊಟ್ಟೆಯ ಸಲುವಾಗಿ ಬಿಕ್ಕೆ ಬೇಡಲು ನನಗೆ ಹೊರಗೆ ಹೋಗ ಬೇಕಾಗುತ್ತಿತ್ತು. ಅಲ್ಲಿ ಇಲ್ಲಿ ಬಿದ್ದದ್ದನ್ನು ಆರಿಸಿ ಅಂತೂ ಇಂತೂ ಹೊಟ್ಟೆ ತುಂಬಿಸಿಕೊಂಡ ಕೂಡಲೇ ನಾನು ಬಹಳೇ ಆತುರದಿಂದಲೂ ಹೊಸ ಹಿಗ್ಗಿನಿಂದಲೂ ನನ್ನ ಹಾಳು ಗುಡಿಗೆ ಮರಳಿ ಬರುತ್ತಿದ್ದೆ. ಯಾಕೆ ? ನನ್ನ ವರು ಎನ್ನುವವರು ಒಬ್ಬರು ಇಲ್ಲಿದ್ದರೆಂದು; ಹೀಗೆ ನನಗೆ ಹೇಗೋ ಎನಿಸಿತು. ಹಾಳು ಗುಡಿಯ ದೇವರು ಪರದೇಶಿಯಾದ ನನ್ನ ತಂದೆಯಾಗಿದ್ದ. ಅವನು ಬಾಯಿ ತೆರೆಯುತ್ತಿರಲಿಲ್ಲ ನಿಜ, ಸಮಾಧಾನದ ಒಂದು ನುಡಿ ಹೇಳುತ್ತಿರಲಿಲ್ಲ ನಿಜ, ಆದರೆ ಸ್ಥಳ ಬಿಟ್ಟು ಕದಲದೆ ಯಾವಾಗಲೂ ಒಂದೆಡೆಗೆ ಒಬ್ಬನಾದರೂ ಇರುತ್ತಿದ್ದನಲ್ಲ; ಅಷ್ಟೇ ಸಾಕು........

ಕಾಲ ತನ್ನ ರೆಕ್ಕೆ ಪಟಪಟನೆ ಬಡಿದಿತು. ನಾನು ಬಳಬಳನೆ ಬೆಳೆದು ದೊಡ್ಡವನಾದೆ.

‘ ನಾನು ಮನುಷ್ಯನಲ್ಲ ’ ಎಂಬ ಮನವರಿಕೆ ನನಗಾಗಿತ್ತು. ಅಂತೆಯೆ ನನ್ನ ಈ ವಿಚಿತ್ರ ಜೀವನ ಎಂದು ನನಗೆ ನಾನೆಷ್ಟೋ ಸಲ ಸಮಾಧಾನ ಹೇಳಿ ಕೊಂಡಿದ್ದೇನೆ. ಆದರೆ ಆಗೀಗ ಮನುಷ್ಯರಂತಹ ಬಾವನೆಗಳು ನನ್ನೆದೆಯಲ್ಲಿ ಸುಳಿದಾಡುತ್ತಿದ್ದುವು. ‘ ಬಿಸಿ ಅನ್ನ, ಹೊಸ ಬಟ್ಟೆ, ಚೊಕ್ಕ ಮನೆಯಲ್ಲಿ ಒಂದು ಚಿಕ್ಕದಾದ ಬೆಚ್ಚನ್ನ ಹಾಸಿಗೆ, ಇವು ನನಗೇಕೆ ಇರಬಾರದು ?’ ಎಂದು ನನಗನಿಸುತ್ತಿತ್ತು. ‘ ಹುಚ್ಚ ! ಇವು ಮನುಷ್ಯರ ಆಶೆಗಳು. ಈ ಭೋಗದ ಭಾಗ್ಯ ನಿನಗೆ ಕನಸಿನಲ್ಲಾದರೂ ದೊರೆಯುವದೆಂತು ? ’ ಎಂದು ನಾನೇ ನನಗೆ ಹೇಳಿಕೊಳ್ಳುತ್ತಿದ್ದೆ. ಇಷ್ಟಿದ್ದಾಗ್ಯೂ ಅಂಗಡಿಗಳಲ್ಲಿ ಅಂದಚಂದ- ದಿಂದಿಟ್ಟ ಒಡವೆಗಳನ್ನು ನೋಡಿ ನನಗೆ ಆಶೆಯಾಗುತ್ತಿತ್ತು. ಮತ್ತೆ ಅವಲ್ಲದೆ ಹೌದು, ಹೆಂಗಸರ ಕಡೆಗೂ ಕಣ್ಣು ತಾವೇ ಹೊರಳುತ್ತಿದ್ದುವು. ಅವರ ಮಿಂಚಿ ಮಾಯವಾಗುವ ನಗೆ, ಅವರ ಮೃದುವಾದ ನುಣುಪಾದ ಗೌರವಾದ

ಗಳು, ಮುಟ್ಟಿದರೆ ಎಷ್ಟೊ ಹಾಯೆನಿಸುವಂತ ಬೆಚ್ಚಗಿರಬಹುದಲ್ಲ, ಎಂದು ನನ್ನಲ್ಲಿ ಊಹೆ ತಲೆದೋರುತ್ತಿತ್ತು. ಯಾರು ನಂಬಿಯಾರು, ನನ್ನಂಥ ಈ ಕ್ಷುಪದಾರ್ಥಕ್ಕೆ ಆಸನ್ನು ಮುಟ್ಟಬೇಕು, ಮುದ್ದಿಡಬೇಕು, ಎನಿಸುತ್ತಿತ್ತು ಎಂದು....? ಇಂಥ ಹುಚ್ಚುಚ್ಚು ಆಸೆಗಳನ್ನು ಒತ್ತಿಕ್ಕಿಬಿಡುತ್ತಿದ್ದೆ. ಅಂಥವರ ಹತ್ತಿರ ಹಾದಾಗ ನಾನೊಂದು ಅನಾದಿ ವಸ್ತು ಎಂದು ನೆನೆಸಿಕೊಳ್ಳುತ್ತಿದ್ದೆ.

ಆದರೆ ಒಂದು ದಿನ ನಾನು ಕಂಡೆ—ಮಿದುವಾದ ಸುಂದರವಾದ ಮನೋಹರವಾದ ಪಾದಗಳೆರಡರ ಬದಿಯಲ್ಲಿ ಒಂದು ಸಣ್ಣ, ಚಿಕ್ಕ ಬಿಳಿ ನಾಯಿ ಹೋಗುತ್ತಿತ್ತು. ಅದನ್ನು ಕಂಡು ನನಗೊಂದು ವಿಚಾರ ಬಂದಿತು. 'ಹಾಂ, ತಿಳಿಯಿತು; ಮನುಷ್ಯರಿಗಷ್ಟೇ ಸುಖಭೋಗವೇನೂ ಇಲ್ಲ. ನಮ್ಮಂಥ ನಾಯಿಗಳಿಗೂ, ಕೆಲ ಬಾಧ್ಯತೆಗಳಿವೆ. ಮೈಯಲ್ಲಿ ಏನೋ ಆವೇಶ ಬಂತು; 'ಆ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕು' ಎಂದು ನುಗ್ಗಿದೆ. ಆದರೆ ಅಷ್ಟರಲ್ಲಿ ಯಾರೋ ನನ್ನನ್ನು ಹಿಡಿದು ಎತ್ತಿ ಕುತ್ತಿ ನೆಲಕ್ಕುರುಳಿಸಿಬಿಟ್ಟರು. ನಾನು ಬೆಚ್ಚಿದೆ. ಆ ಮನುಷ್ಯನೆಂದ: "ಏನೋ, ಏನಿದು ಹುಚ್ಚು?". ಮೇಲೆ ನಾಲ್ಕು ಸಲ ಒದ್ದ.

ಆಮೇಲೆ ನಾನು ನನ್ನ ಹಾಳು ಗುಡಿಗೆ ಮರಳಿ ಬಂದು ಈ ರೀತಿಯಾಗಿ ನಿಶ್ಚಯಿಸಿದೆ: "ಸರಿ, ನಾನು ನಾಯಿಗಿಂತ ಕೀಳು. ದೇವಾ! ತಂದೆ! ನನ್ನನ್ನು ನಿಜವಾದ ನಾಯಿಯನ್ನಾಗಿ ಮಾಡು. ಒಂದು ಚಿಕ್ಕ ಬಿಳಿ ನಾಯಿಯಾಗಿಯಾದರೂ ಮನುಷ್ಯನ ಪ್ರೀತಿ ವಿಶ್ವಾಸ ದೊರಕಬಹುದಲ್ಲ' ಎಂದು ನನ್ನ ದೇವರನ್ನು ಪ್ರಾರ್ಥಿಸಿದೆ.

( ೩ )

ಕಂದಿ ಮೈಬಣ್ಣ, ಕರಿ ಕೂದಲು, ಹರವು ಮೂಗು, ಮಧ್ಯಮ ಎತ್ತರ—ಎಲ್ಲ ಲಕ್ಷಣಗಳು ಎಷ್ಟೋ ಮನುಷ್ಯರಂತೆ ನನಗೂ ಇದ್ದುವು. ಆದರೆ ಬಿಳಿ ಮೈಬಣ್ಣ, ಹಳದೀ ಕೂದಲು, ಎತ್ತರ ಮೂಗು, ಒಳ್ಳೇ ನಿಲುವು ಇರುವ ಮನುಷ್ಯಜಾತಿಯೊಂದು ಈ ಲೋಕದಲ್ಲಿದೆ ಎಂದು ನಾನು ಕಂಡುಕೊಂಡೆ.

ಈ ಜನರು ಕಾದಿ ಬೀದಿಗಳಲ್ಲಿ ಹಾಡುತ್ತ ಒದರುತ್ತ ನಗುತ್ತ ' ಈ ಲೋಕವೆಲ್ಲ ತಮಗಾಗಿಯೆ ಇದೆ' ಎಂದು ಎದೆ ತಟ್ಟಿಸಿ ಅಡ್ಡಾಡುತ್ತಿದ್ದರು. ಉಳಿದವರು ಹೆದರಿ ಹೆದರಿ ದೂರ ದೂರ ಸರಿದು, ಇವರ ಹತ್ತಿರ ಹಾಯಲಾರದೆ ಇರುತ್ತಿದ್ದರು. ಅಂತೂ ಮನುಷ್ಯರಲ್ಲಿ ಎರಡು ಜಾತಿಗಳಿವೆಯೆಂದು ನಾನು ಹೊಸದಾಗಿ ಶೋಧಿಸಿ ತೆಗೆದೆ. ನಾನು ಇದೀಗ ಹೇಳಿದವರಿಗಿಂತಲೂ ಹೆಚ್ಚಿನವರ ಜಾತಿಯೊಂದಿದೆ. ಇವರು ಬಿಳಿ ಟೊಪ್ಪಿಗೆ, ನೀಲಿ ಅಂಚುಳ್ಳ ಬಿಳಿ ಶರ್ಟು, ಬಿಳಿ ಚೊಣ್ಣ ತೊಟ್ಟುಕೊಂಡು, ಯಾವಾಗಲೂ ನಗುತ್ತ ಆಡುತ್ತ, ಆಗೀಗ ಬಡಿದಾಡುತ್ತ, ಕಂದಿ-ಬಣ್ಣದ ಜನರ ತಲೆಗೆ ಬಾಟ್ಲಿಗಳನ್ನು ಬೀಸಿ ಒಗೆಯುತ್ತ, ' ರಿಕ್ಷಾ 'ಗಳಲ್ಲಿ ಹೆಂಗಳೆಯರೊಡನೆ ಕೂತು, ಅವರನ್ನು ಮುದ್ದಾಡುವುದನ್ನು ನಾನು ನೋಡಿದ್ದೇನೆ. ಈ ಹೆಂಗಸರು ತಮ್ಮ ಮಿದುವಾದ ಕಾಲುಗಳನ್ನು ಜೋತುಬಿಟ್ಟು ಅವರ ತೊಡೆಯೇರಿ ಕುಳಿತಿರುತ್ತಿದ್ದರು.

ಜನರೆಲ್ಲರೂ ಇವರಿಗೆ ಬಹಳ ಆದರ ಮಾಡುತ್ತಿದ್ದರು. ಇವರು ಬಂದೊಡನೆ ಎಲ್ಲರೂ ಬದಿಗೆ ಸರಿದು ದಾರಿ ಕೊಡುತ್ತಿದ್ದರು. ಮನುಷ್ಯ-ರಲ್ಲಿವರು ರಾಜರಿದ್ದಂತೆ. ನಾನು ಇವರ ಎಡಬಲಕ್ಕೆ ಹಾಯುತ್ತಿರಲಿಲ್ಲ. ನಾನೆಂದರೆ ಅವರಿಗೆ ಅಸಹ್ಯ. ಆದರೆ ಹೀಗೆ ಒಂದು ದಿನ ಸಂಜೆ, ಒಂದು ಕಡೆಗೆ ಗೋಡೆಗೆ ಆತು, ನೆತ್ತರು ಚಿಮ್ಮಿದ, ಕೆಸರು ಮೆತ್ತಿದ, ಕಾಲುಗಳನ್ನು ಉಜ್ಜುತ್ತ ನಾನು ಕುಳಿತಿದ್ದೆ. ಹಸಿವೆ ಎಂದಿನಂತೆ ಇದ್ದೇ ಇತ್ತು. ತುಂಬ ಬಳಲಿದ್ದೆ. ಅಷ್ಟರಲ್ಲಿ ಕೆಲ ಜನ ನನ್ನೆದಿರು ಬಂದರು. ನಾನು ಭಯಚಕಿತನಾಗಿ ಮೇಲೆ ನೋಡಿದೆ. ಮಾನವನ ರಾಜಜಾತಿಗೆ ಸೇರಿದ ಈ ಜನ ನಿಂತಿತ್ತು. ಕೆಲಸ ಕೈಮೀರಿ ಹೋಗಿತ್ತು. ಓಡಿಹೋಗಲು ಸಾಧ್ಯವಿಲ್ಲದೆ ದೈವದಲ್ಲಿದ್ದದ್ದಾಗಲಿಯೆಂದು ನಾನು ಜಡನಾಗಿ ಹಾಗೆಯೇ ಕುಳಿತುಬಿಟ್ಟೆ. " ಹೊರ-ಡಿಲ್ಲಿಂದ !" ಎಂದೆಲ್ಲರೂ ಕೂಗಿಯೆ ಕೂಗಿದರು; ಒದ್ದರು; 'ನಾಯಿ' ಎಂದು ಬಯ್ದರು.

" ನಾಯಿ ! ಅಹಾ, ನಾಯಿಗೂ ಕೀಳೇನೂ ಅಲ್ಲ ! " ನಾನು ಸಂಜೆಗೆ ಗುಡಿಗೆ ಹೋದಾಗ ದೇವರ ಉಪಕಾರ ಸ್ಮರಿಸಿದೆ —" ಮಹಾಜನರು

ನನ್ನನ್ನು ನಾಯಿಗಿಂತ ಕೀಳಾಗಿ ಕಾಣಲಿಲ್ಲವಲ್ಲಾ ಎಂದು ನನ್ನಲ್ಲಿ ನವೀನ ಆಶೆ ಅಂಕುರಿಸಿತು. ನಾಯಿಗಿಂತ ನಾನು ಕಡೆಯಲ್ಲ, ಎಂದ ಮೇಲೆ ನಾಯಿಯ ಅಧಿಕಾರಗಳೆಲ್ಲ ನನಗಿರಲೇಬೇಕು, ಎಂದು ನೆನೆದೊಡನೆ ಸುಂದ-ರಾಕೃತಿಯ ಯಜಮಾನಿಯು ಹತ್ತಿರ ಸುಳಿದಾಡುವ ಬಿಳಿ ನಾಯಿಯ ಚಿತ್ರ ಕಣ್ಣೆದಿರು ಬಂದಿತು.

ಇನ್ನೊಮ್ಮೆ ಮನೋಹರವಾದ ಪಾದಗಳೆರಡೂ ವಿಲಾಸವಾಗಿ ಹಾದಿ ಗುಂಟ ಹೋಗುವುದನ್ನು ನಾನು ಕಂಡೊಂಡನೆ ಹೇಗೂ ಬಿಳಿ ಜನರ ಲೆಕ್ಕ-ದಂತೆಯೆ ನಾನು ನಾಯಿಯಾಗಿರುವದರಿಂದ, ನಾಯಿಯ ಅಧಿಕಾರ ನಡಿಸಲು ಅಡ್ಡಿಯಿಲ್ಲವೆಂದು ಯೋಚಿಸಿದೆ. ನಾನು ಜಿಗಿದವನೆ ಆ ಕಾಲುಗಳಿಗೆ ಹೋಗಿ ತೆಕ್ಕೆಬಿದ್ದೆ. ನನಗೆ ಉಳಿದಾವ ಅರಿವೂ ಇರಲಿಲ್ಲ. ಆಯಿತು, ಎಲ್ಲೆಲ್ಲಿಯೂ ಕೂಗಾಟ, ಚೀರಾಟ ಸಾಗಿದ್ದುದು ನನ್ನ ಕಿವಿ ತುಂಬಿತು. ಏಟಿನ ಮೇಲೆ ಏಟು ನನಗೆ ಬಿದ್ದುವು. ಸಾವಿರ ಕೈಗಳು ನನ್ನನ್ನು ಸಾವಿರ ಕಡೆಗೆಳೆದವು. ನನಗೆ ಮುಂದೇನೂ ಕೇಳಿಸಲೂ ಇಲ್ಲ; ತಿಳಿಯಲೂ ಇಲ್ಲ. ಆ ಪಾದಗಳ ಧ್ಯಾನದಲ್ಲಿ ಮಗ್ನನಾಗಿ ಅವುಗಳನ್ನು ಅಪ್ಪಿಕೊಂಡು ಇದ್ದುಬಿಟ್ಟೆ.

ನನಗೆ ಎಚ್ಚರಾದಾಗ ಒಂದು ಕತ್ತಲೆಯ ಹಾಳು ಕೋಣೆಯಲ್ಲಿ ನಾನಿದ್ದುದು ಕಂಡುಬಂತು. ಅಲ್ಲಿ ಮನುಷ್ಯರ ಸುಳಿವಿರಲಿಲ್ಲ. ಮೈತುಂಬ ನೋವೇ ನೋವಾಗಿತ್ತು; ಉಸಿರಾಡಿಸಿದರೆ ಕೂಡ ನೋವಾಗುತ್ತಿತ್ತು.

ದೇವರು ನನ್ನ ತಂದೆ, ದೀನ ದಯಾಳು, ತನ್ನ ಗುಡಿಯ ತಿಪ್ಪೆಯಲ್ಲಿ ಇನ್ನೂ ಕುಳಿತಿದ್ದಾನೆ. ಆ ಮೊಂಡ ಕೈಯ ಮಹಾರಾಯನನ್ನು ನಾನಿ-ನ್ನೆಂದಿಗೂ ಸ್ಮರಿಸಲಾರೆ........

——— ———

## ಪರಿಚಯ

### ಶೇನ್-ಶುಂಗ್-ವೇನ್

( ೧೯೦೨ -— )

ಮೂವತ್ತು ವರ್ಷ ವಯಸ್ಸಾಗುವದರಲ್ಲಿಯೆ ನಾಲ್ವತ್ತಕ್ಕಿಂತ ಹೆಚ್ಚು ಹೊತ್ತಿಗೆಗಳನ್ನು ಬರೆದು ಚೀನಾದ ' ಡ್ಯೂಮಾಸ್ ' ಎನಿಸಿಕೊಂಡಾತ ಶೇನ್-ಶುಂಗ್-ವೇನ್. ಶಿಬಿರ-ಜೀವನ, ಸೈನಿಕ-ಜೀವನ ಮತ್ತು ಸರಹದ್ದಿನ ಪ್ರಾಂತದಲ್ಲಿಯ ಮೂಲನಿವಾಸಿಗಳ ಜೀವನದ ಬಗ್ಗೆ ಬರೆದ ಅವನ ಕತೆಗಳು ಹೆಚ್ಚು ಪ್ರಸಿದ್ಧವೂ ಜನಪ್ರಿಯವೂ ಆಗಿವೆ. ಶೇನನಿಗೆ ಹುಡುಗನಿದ್ದಾಗಿನಿಂದಲೇ ಬರೆಯುವ ಅಭ್ಯಾಸವಿತ್ತು. ಹನ್ನೆರಡನೆಯ ವಯಸ್ಸಿನಿಂದಲೆ ಸೈನಿಕ-ಜೀವನದ ಅನುಭವವೂ ಆರಂಭವಾಗಿತ್ತು. ಸೈನಿಕ ವೃತ್ತಿಯಲ್ಲಿದ್ದಾಗಲೇ ಆತನ ಸಾಹಿತ್ಯನಿರ್ಮಾಣಕಾರ್ಯ ನಡೆದೇ ಇತ್ತು. ಹದಿನೈದು ವರ್ಷ ವಯಸ್ಸಿನಲ್ಲಿಯೆ ತನ್ನ ' ಹೂನಾನ್ ' ಪ್ರಾಂತದಲ್ಲಿಯೆ ಸೈನ್ಯದಲ್ಲಿ ಸೇರಿ ಒಂದು ಪಡೆಯ ಕಾರಕೂನನೂ ಆಗಿ ಕೆಲಸ ಮಾಡಿದನು. ಪಶ್ಚಿಮ ಸರಹದ್ದಿನಲ್ಲಿ ' ಮಿಯಾವೊ ' ಮತ್ತು ' ಲೋಲೊ ' ಎಂಬ ಕಾಡು ನಿವಾಸಿಗಳ ಮಧ್ಯದಲ್ಲಿ ಮೂರು ವರ್ಷಗಳ ವರೆಗೆ ಕೆಲಸ ಮಾಡಿದ ಅವನ ಅನುಭವವೆ ಆ ಜನರ ಜೀವನದ ಕತೆಗಳಿಗೆ ಮುಂದೆ ವಸ್ತುವನ್ನೊದಗಿಸಿತೆನ್ನಬಹುದು.

ಹತ್ತೊಂಬತ್ತು ವರುಷದವನಿರುವಾಗ ಅವನು ಸೈನ್ಯದ ಕೆಲಸಕ್ಕೆ ರಾಜೀನಾಮೆ ಇತ್ತು ಪೇಕಿಂಗದಲ್ಲಿ ' ಸುದ್ದಿಗಾರ 'ನಾಗಿ ಕೆಲಸಕ್ಕೆ ನಿಂತನು. ೧೯೨೪ರಲ್ಲಿ ' ನೂತನ ವಿಮರ್ಶಕ 'ವೆಂಬ ಪತ್ರಿಕೆಯ ಕೆಲಸಗಾರರಲ್ಲೊಬ್ಬನಾಗಿರಲು ಅವನಿಗೆ ' ಯು-ತಾ-ಫು ', ಪ್ರಸಿದ್ಧ ಕವಿಯಾದ ' ಶಿ-ಚೀ-ಲೋ', ಪಂಡಿತನಾದ ' ಹೂ-ಶೀ ' ಮೊದಲಾದ ಲೇಖಕರ ಪರಿಚಯವಾಗಿ ಅವರ ಸ್ನೇಹದಿಂದ ಅವನ ಕೃತಿಗಳು ಬೆಳಕಿಗೆ ಬರುವಂತಾದವು. ಮುಂದೆ ಶಾಂಘಾ

ಯಿಗೆ ಹೋಗಿ ವಿಪುಲವಾಗಿ ಸಾಹಿತ್ಯನಿರ್ಮಾಣ ಮಾಡತೊಡಗಿದನು. ಅಲ್ಲಿ ಅವನಿಗೆ 'ಹೂ-ಏ-ಫಿಂಗ್' ಮತ್ತು ಅವನ ಹೆಂಡತಿ 'ಟಿಂಗ್-ಲಿಗ್' ಇವರ ಪರಿಚಯವಾಯಿತು. ಮೂವರದೂ ಒಂದು ಸಂಘವಾಗಿ ಸಾಹಿತ್ಯಿಕ ಹರಟೆ, ಕಟುವಿಮರ್ಶೆ, ಮೊದಲಾದ ಪ್ರಚೋದಕ ಸಾಹಿತ್ಯನಿರ್ಮಾಣಕ್ಕೆ ಆಸ್ಪದ ವಾಯಿತು. 'ಅಲೈಸ್-ಚೀನದಲ್ಲಿ' ಎಂಬದು ಶೇನನ ಪ್ರಸಿದ್ಧ ಗ್ರಂಥ. ಚೀನಾ ಸಾಹಿತ್ಯಕ್ಕೇ ಹೊಸದಾದ ವ್ಯಂಗ್ಯಶೈಲಿ ಅದರ ವೈಶಿಷ್ಟ್ಯ. 'ಪತಿ' ಎಂಬ ಸಣ್ಣ ಕತೆ ಅವನಿಗೆ ಅತ್ಯಂತ ಪ್ರಿಯವಾದುದು. ಇತ್ತೀಚೆಗೆ ಶೇನ್ ಚೀನಾದ ಪ್ರಾಗತಿಕ ಪತ್ರವಾದ 'ತಾ-ಕುಂಗ್-ಪಾವೊ'ದ ಸಾಹಿತ್ಯವಿಭಾಗದ ಸಂಪಾದಕನಾಗಿದ್ದನು. ಇದೀಗ ಸ್ವತಂತ್ರವಾಗಿ ಸಾಹಿತ್ಯವನ್ನು ನಿರ್ಮಿಸು ತ್ತಿದ್ದಾನೆ.

---

## ಪೈ-ಝುಉ    

' ಚೆಂಗ್-ಚೌ 'ದಲ್ಲಿ ಲಂಗರು ನೀರಿಗಿಳಿಯಿತು. ಇಳಿದಾಣದ ಹತ್ತಿರ ದೊಡ್ಡ ದೋಣಿಯೊಂದು ನೆಲೆನಿಂತಿತು.

ಹದಿನೈದು ಫೂಟು ಉದ್ದವಾದ ದಡಕ್ಕೆ ಮುಟ್ಟುವ ಫಳಿಯನ್ನು ಕಲ್ಲಿನ ಘಾಟಿನ ವರೆಗೂ ಜೋಡಿಸಲಾಯಿತು. ಪ್ರಯಾಣಿಕರು ಅದರಿಂದ ಇಳಿದು ಬರಹತ್ತಿದರು. ತಮ್ಮ ಗಂಟು-ಗದಡಿಗಳನ್ನು ಹೆಗಲ ಮೇಲೆ ಹೊತ್ತುಕೊಂಡು ಒಬ್ಬರ ಹಿಂದೊಬ್ಬರು ಸಾಲಾಗಿ ಗಡಿಯಾರದ ' ಪೆಂಡ್ಯೂಲಮ್ ' ದಂತೆ ತೂಗುತ್ತ ಎಲ್ಲರೂ ಸುರಕ್ಷಿತವಾಗಿ ದಂಡೆಗೆ ಬಂದುದಾಯಿತು.

ನದಿಯುಗುಂಟ ಅನೇಕ ದೋಣಿಗಳು ಬಂದು ನಿಂತಿದ್ದವು; ಅವುಗಳ ಅಸಂಖ್ಯವಾದ ಪಟಸ್ತಂಭಗಳು ಮೆಲ್ಲನೆ ಹೊಯ್ದಾಡುತ್ತ ಗಿಡಗಳ ತುದಿಗಳಂತೆ ಕಾಣುತ್ತಿದ್ದವು. ಅವುಗಳಿಗೆ ಕಟ್ಟಿದ್ದ ಹಗ್ಗಗಳ ಜುಡುಪುಗಳೂ ಪಟಗಳೂ ವಿಚಿತ್ರವಾದ ಎಲೆಯ ಜಾಡಿನಂತೆ ಒಪ್ಪುತ್ತಿದ್ದವು. ಪ್ರತಿಯೊಂದು ದೋಣಿಯ ಮೇಲೂ ನಿಲಿ ಸಮವಸ್ತ್ರದ ನಾವಿಕರು ಕೆಲಸದಲ್ಲಿ ತೊಡಗಿದ್ದರು, ಇಲ್ಲವೆ ಹೊಗೆ-ಸೊಪ್ಪು ಸೇದುತ್ತಿದ್ದರು. ಅವರ ದೊಡ್ಡ ಒರಟಾದ ಕೂದಲಿಂದ ಕೂಡಿದ ಕೈಕಾಲುಗಳು ಆಕಾಶದ ಹಿನ್ನೆಲೆಯಲ್ಲಿ ಚಿಕ್ಕಮಕ್ಕಳ ಕಲ್ಪನೆಯ ಪೆಡಂಭೂತಗಳ ಕೈಕಾಲುಗಳಂತೆ ಗಾಳಿಯಲ್ಲಿ ತೂಗುತ್ತಿರುವಂತೆ ತೋರುತ್ತಿದ್ದವು. ಅದರಲ್ಲಿಯೂ ಕೆಲವರು ಪಟಸ್ತಂಭಗಳ ಹಗ್ಗಗಳನ್ನು ಸಡಲಿಸಲು ಸರ್ರನೆ ಮೇಲೇರಿ ಹೋದಾಗ ನಮ್ಮ ಯೌವ್ವನದ ಕಟ್ಟುಕತೆಗಳಲ್ಲಿಯ ನಾಯಕ ' ಹಾರುವ ಕೂದಲ-ಪಾದದವ 'ನನ್ನೇ ನೆನಪಿಗೆ ತರುವಂತಿದ್ದರು. ಹಗ್ಗದ ಗಂಟು ಕಠಿಣ ಮತ್ತು ಎತ್ತರವಿದ್ದಷ್ಟೂ ಅವರಿಗೆ ಉತ್ಸಾಹ ಹೆಚ್ಚು. ಇಂತಹ ಸಾಹಸಗಳನ್ನು ಕೈಕೊಳ್ಳುವದರಲ್ಲಿಯೆ ಅವರಿಗೆ ಆನಂದ.

ಹಸ್ತಪಾದಗಳಿಗೆ ಕೊಂಡಿಗಳಿವೆಯೊ ಎಂದು ನೋಡುವವರಿಗೆ ಅಚ್ಚರಿಯಾಗುವಷ್ಟು ವೇಗದಿಂದ ಸಹಜವಾಗಿ ಅವರು ನುಣುಪಾದ ಜಾರುವ ಆ ಪಟಸ್ತಂಭವನ್ನು ಸರಸರನೆ ಅವರು ಬರಿಗೈ ಬರಿಗಾಲ್ಗಳಿಂದ ಏರಿ ಹೋಗುತ್ತಿದ್ದರು. ಹೇಗೆ ಅದನ್ನು ಮಾಡುತ್ತಿದ್ದರೊ! ಇದೂ ಅಲ್ಲದೆ ಮೇಲೆ ಕಣ್ಣು ತಿರುಗುವ ಎತ್ತರವನ್ನು ಮುಟ್ಟಿ, ಪಾದಗಳಿಂದ ಪಟದ ಮೂಲದ ಗಂಟುಗಳನ್ನು ಹಿಡಿದು, ತೂಗುತ್ತ ಕೈಗಳಿಂದ ಹಗ್ಗಗಳ ಗಂಟುಗಳನ್ನು ಬಿಡಿಸುವಾಗಲೆ ಹಾಡುವದು ಮತ್ತು ನಗುವದು! ಎಂತಹ ಧೈರ್ಯ!

ಹತ್ತಿರದ ದೋಣಿಗಳ ಸ್ತಂಭಗಳ ಮೇಲಿನ ಜನರೂ ಪ್ರತ್ಯುತ್ತರವಾಗಿ ದನಿಗೂಡಿಸುವರು. ಅಥವಾ ಎಲ್ಲರೂ ಒಟ್ಟಾಗಿ ಮೇಳಗೀತವನ್ನು ಹೇಳುವರು. ಅದು ಹಲಗೆಗಳ ಮೇಲೆ ಎತ್ತರದಲ್ಲಿ ತಮ್ಮ ಕೈಚಳಕವನ್ನು ತೋರಿಸಲು ಅವರನ್ನು ಮತ್ತಷ್ಟು ಆತುರವುಳ್ಳವರಾಗಿ ಆಗುವಂತೆ ಮಾಡುವಂತಿತ್ತು. ಕೆಳಗೆ ನಿಂತಿರುವ ಇತರ ನಾವಿಕರು ತಾವೂ ಅಷ್ಟೆ ಚಪಲರೂ ಕುಶಲರೂ ಆಗಿರುವದನ್ನು ತೋರಿಸಲು ಅವಕಾಶವುಂಟಾದೀತೆ ಎಂದು ಆತುರದಿಂದ ಮೇಲಿನವರನ್ನು ಹೊಟ್ಟೆಕಿಚ್ಚಿನಿಂದ ನೋಡುತ್ತಿದ್ದರು; ಮತ್ತು 'ಮೇಲೇರದಿರಿ' ಎಂದು ಹೇಳುವ 'ಲಾವೋಡಾ'ನ ಅಪ್ಪಣೆಯನ್ನು ಅಲಕ್ಷಿಸುವಂತಿದ್ದರು. ಇತ್ತ ಕಡೆಯ ದೋಣಿಗಳ ಮೇಲೆ ಲಾಗ ಹಾಕುವ ಅವರು ಎದುರಿನ ದೋಣಿಗಳ ಮೇಲೆ ನಿಂತ ಹೆಂಗಳೆಯರೊಡನೆ ನಗೆಯಾಡಿದಾಗ ಇವರು ಆಶೆಯಿಂದ ಕಣ್ಣುಬಿಟ್ಟು ನೋಡುತ್ತಿದ್ದರು; ಮತ್ತು ಸಿಡಿಮಿಡಿಗೊಂಡು ಮೇಲಿನವರಿಗೆ ಕೂಗುತ್ತಿದ್ದರು:

"ಬೀಳೊ ಮಗನೆ, ಜಿಬ್ಬಿ ಆಗಿ ಸಾಯು ಅಂಽ"

"ಬಾನಾಡಿಯ ದನಿಯ ಚಿಕ್ಕ ಮೊಮ್ಮಗನೆ, ಕೆಳಗೆ ಬಿದ್ದು ತಲೆ ಹೋಳಾದಾಗ ನಿನ್ನ ಹಾಡು ಕೇಳೋಣ."

"ಸೂಳೆಮಗನೆ!"

ಮೇಲೆ ನಾವಿಕ ಹಾಡಲು ಮತ್ತಷ್ಟು ಹುರುಪುಗೊಳ್ಳುತ್ತಿದ್ದ.

"ಓ, ಹೋ, ಮಕ್ಕಳೆ, ನಾನು ನಿಮ್ಮಪ್ಪ ಮತ್ತೆ!" ಎಂದು ಅವನು ಕೂಗುವನು.

ಹೀಗೆ ಒಬ್ಬರಿಗೊಬ್ಬರು ಬಯ್ದಾಡುವದು ಕೆಲಸ ಮುಗಿಯುವ ವರೆಗೆ ನಡೆದೇ ಇತ್ತು. ಅದರಿಂದ ಪ್ರತಿಯೊಬ್ಬನಿಗೂ ತುಂಬಾ ವಿನೋದ ವಾಗಿತ್ತು........

ಮಳೆಗಾಲಿಯ ರಾತ್ರಿಗಳಲ್ಲಿ ದೋಣಿಗಳ ಮೇಲೆ ಹಳದಿಯ ಮೇಣ ಗಮಟದ ಬಟ್ಟೆಯ ಹೊದಿಕೆಯನ್ನು ತುಂಬಾ ಹಾಕುತ್ತಿದ್ದರು. ಇಂದು ಅಂತಹ ರಾತ್ರಿಯಿತ್ತು. ಹೀಗೆ ಮೇಲು-ಹೊದಿಕೆ ಹಾಕಿರಲು ಅದರ ಕೆಳಗೆ ನಾವಿಕರು ಗುಂಪುಗೂಡುವರು. ಇಸ್ಪೀಟು ಆಡುವರು; ಜೋರಾಗಿ ಹರಟೆ ಹೊಡೆಯುವರು; ಅಥವಾ 'ಸುವರ್ಣ-ಪುಲಿನ' ನದಿಯ ಮೇಲೆ ರಪರಪ ಬೀಳುವ ಮಳೆಯನ್ನು ಮತ್ತು ಸುಂಯ್ ಎಂದು ಸುದೀರ್ಘವಾಗಿ ಬೀಸುವ ಗಾಳಿಯನ್ನೂ ಆಲಿಸುತ್ತ ಸುಮ್ಮನೆ ಕೂಡ್ರುವರು. ದೋಣಿಗಳನ್ನೆಲ್ಲ ಸಮ ನಾಗಿ ಒಂದಕ್ಕೊಂದು ಸಾಲಾಗಿ ಜಗಿದು ಕಟ್ಟಲಾಯಿತು. ಗಾಳಿಯಿಂದೆದ್ದ ತೆರೆ ಯಿಂದ ಒಮ್ಮೊಮ್ಮೆ ಹೊಯ್ದಾಡಲು ಒಂದನ್ನೊಂದು ಡಿಕ್ಕಿ ಹೊಡೆಯು ವಂತಿದ್ದವು. ಹೀಗೆ ಹೊಯ್ದಾಡಿದರೂ ನಾವಿಕರಿಗೆ ಅದರ ಕಡೆಗೆ ಲಕ್ಷ್ಯವೇ ಇರಲಿಲ್ಲ. ಅದರಿಂದ ಯಾವ ತೊಂದರೆಯೂ ಆಗುವಂತೆ ತೋರಲಿಲ್ಲ.

ಅಷ್ಟು ತಮ್ಮ ವಿನೋದದಲ್ಲಿ ತನ್ಮಯರಾಗಿದ್ದರು. ಅವರಿಗೆ ಯಾವುದ ರಿಂದಲೂ ಚಿತ್ತಚಾಂಚಲ್ಯವುಂಟಾಗುತ್ತಿರಲಿಲ್ಲ. ಭಾವವಶರಾಗುವ ಹೃದಯ ಮಾರ್ದವವುಳ್ಳವರನ್ನು ಉತ್ತೇಜಿತರಾಗಿ ಮಾಡುವ ಕಾಂತಿಹೀನ ಚಂದ್ರ ನಾಗಲಿ, ಬಿಸಿಲ ಬೇಗೆಯಿಂದ ಬೆಂದ ಆಗಸವಾಗಲಿ, ಮುಂಜಾವಿನ ಮಂಜಿನ ಮುಸುಕಾಗಲಿ ಯಾವುದೂ ಅವರನ್ನು ವಿವ್ಹಲಗೊಳಿಸದು. ಅವರಲ್ಲಿ ಅತ್ಯಂತ ಆಸಕ್ತಿಯನ್ನುಂಟುಮಾಡುವ ಅಥವಾ ವಿಚಾರನಿರ್ಧಾರವನ್ನು ತರುವ ವಿಷಯಗಳೆಂದರೆ ಮೊದಲನೆಯದಾಗಿ ಅಂದು ತಮಗೆ ಮಾಂಸವು ಊಟಕ್ಕೆ ಸಿಗುವದೊ ಅಥವಾ ಉಪ್ಪಾದ ಕ್ಯಾಬೀಜವೊ ಎಂಬುದು; ಎರ ಡನೆಯದಾಗಿ ಲಂಗರು ಹಾಕಿದ್ದ ಪ್ರವಾಹ ಮಧ್ಯದಲ್ಲಿಯೊ ದಂಡೆಗೆ ಹತ್ತಿಯೊ ಎಂಬುದು. ಮಾಂಸದಲ್ಲಿ ಅಭಿರುಚಿ ಹೆಚ್ಚು; ಮತ್ತು ನದಿಯ ದಂಡೆಯಿಂದ ದೂರ ಇರಲೂ ಅವರಿಗೆ ಮನಸ್ಸು ಒಪ್ಪದು.

ಮಳೆ ಹತ್ತಿದ ಇಂತಹ ರಾತ್ರಿಯಲ್ಲಿ ನಾವಿಕನೊಬ್ಬ ದಂಡೆಗೆ ಮುಟ್ಟಲು ಹಾಕಿದ ಫಳಿಯ ಮೇಲೆ ಹಾಯ್ದು ಕೆಸರಿನಲ್ಲಿ ಕಾಲು ಕಿತ್ತುತ್ತ ಬೀದಿಗುಂಟ ಹೇಗೆ ಸಾಗಿದ್ದನೆಂಬುದನ್ನು ಇದೀಗ ಹೇಳುವದು ಸೂಕ್ತವಾಗುವದು. ಅವನ ಎದೆ ಜೋರಾಗಿ ಬಡಿದುಕೊಳ್ಳುತ್ತಿತ್ತು. ಈತನೇ ' ಪೈ-ಝು '. ಅವನಿಗೆ ಪಟಸ್ತಂಭಗಳನ್ನು ಹತ್ತಿ ದಣಿವೆಂಬುದೇ ಇಲ್ಲ. ಇಡೀ ದಿವಸ ಹಾಡುತ್ತಿದ್ದರೂ ಸಂಜೆಗೆ ಬೇಸರವೆಂಬುದಿಲ್ಲ. ತಡವರಿಸುತ್ತ ಸಾಗಿದ ಅವನ ನಡುಕಟ್ಟು ಇಡೀ ದಿನ ಕಂಬ ಹತ್ತಿ ಕೆಳಗಿಳಿದುದರಿಂದ ಗಳಿಸಿದ ನಾಣ್ಯಗಳಿಂದ ತುಂಬಿತ್ತು. ಧಾರಾವಾಹಿಯಾಗಿ ತಲೆಯ ಮೇಲೆ ಬಿದ್ದ ಮಳೆ ಅವನ ಬರಿಗಾಲುಗಳ ಗುಂಟ ಸುತ್ತಿಳಿದು ಪಾದವನ್ನು ಸೇರಿ ಕೆಳಗೆ ಉರುಳುತ್ತಿತ್ತು.

ಪೈ-ಝುವು ಕೊನೆಗೊಮ್ಮೆ ಆ ಮನೆಯ ಬಾಗಿಲ ಬಳಿಗೆ ಬಂದನು. ಸಾಧಾರಣ ಎಲ್ಲ ನಾವಿಕರಿಗೂ ಸಮಾನವಾದ ರೀತಿಯಲ್ಲಿ ಅದನ್ನು ನೂಕಿದನು; ಮತ್ತು ಜೋರಾಗಿ ಸಿಳ್ಳು ಹಾಕಿದನು. ಬಾಗಿಲು ತೆರೆಯಿತು. ಅವನು ತನ್ನ ಕೆಸರಾದ ಕಾಲನ್ನೊಂದು ಹೊಸ್ತಿಲದೊಳಗೆ ಇಟ್ಟನು. ಇನ್ನೊಂದು ಕಾಲು ಇನ್ನೂ ಹೊರಗಿರುವಾಗಲೆ ತೆಳ್ಳನೆಯ ನೀಳವಾದ ತೋಳ್ಗಳೆರಡು ಅವನ ಕಟಿಪ್ರದೇಶವನ್ನು ಸುತ್ತಿಕೊಂಡವು. ಬೆಚ್ಚನೆಯ ಉಸುರಿನಿಂದ ಹೆಣ್ಮೊಗವೊಂದು ಅವನ ಮೊಗವನ್ನೆಲ್ಲ ಆವರಿಸಿ ತಿಕ್ಕಿ ಮುದ್ದಿಟ್ಟಿತು. ಅವಳ ಆ ಸುಗಂಧದ ವಾಸನೆ, ಅಪ್ಪಿದ ಅಪ್ಪುಗೆಯ ಆ ಕೊಂಕು, ಆ ಮೈಯ ನಣ್ಪು ಎಲ್ಲ ಅವನಿಗೆ ಪರಿಚಿತವಾದವುಗಳೆ. ಅವನು ಮುಖವನ್ನು ಸರಿಸಿ ಅವಳ ತುಟಿಗೆ ತುಟಿ ಕೂಡಿಸಿದ. ಹೀಗೆ ಬಾಯಿಗೆ ಬಾಯಿ ಹಚ್ಚಿ ಅವರು ಅದೆಷ್ಟೊ ಹೊತ್ತು ನಿಂತಿದ್ದರು. ಕೊನೆಗೆ ಆತ ಅವಳ ಬಂಧವನ್ನು ಸಡಿಲಿಸಿದ.

" ಥೂ ಖೋಡಿ, ನದಿಯ ಕೆಳಗಿನ ಆ ಚಾಂಗ್ತೆ ಹೆಣ್ಣುಗಳು ನಿನ್ನನ್ನು ತಿಂದುಬಿಟ್ಟವೊ ಎಂದು ಗಾಬರಿಯಾಗಿದ್ದೆ........"

" ನಿನ್ನ ಉದ್ದ ನಾಲಿಗೆಯೋ! ಅದನ್ನು ಕಡಿದು ಬಾಯಿಂದ ಹೊರ ತೆಗೆಯುವೆ ! "

" ನಿನ್ನದನ್ನು ನಾನು ಕಡಿದು ತೆಗೆಯುವೆ........"

ಪೈ-ಝುುವಿಗೆ ನಗೆ ಒಂದಿತು. ಅವಳನ್ನೆತ್ತಿಕೊಂಡು ಕೋಣೆಯ ಮಧ್ಯ ಭಾಗಕ್ಕೆ ನಡೆದ. ಅಲ್ಲಿ ದೀಪದ ಕೆಳಗೆ ಅವಳನ್ನಿಳಿಸಿದ. ಮತ್ತು ಅವಳನ್ನು ಎತ್ತರವಾದ ತನ್ನ ನಿಲುವಿಕೆಯಿಂದ ನೋಡುತ್ತ ನಿಂತ.

"ನಿಜ ಹೇಳಬೇಕೆಂದರೆ ನನಗೆ ಹುಟ್ಟು ಕಡೆದು ದೋಣಿ ನಡೆಸುವದು ಬೇಸರ ಬಂದಿದೆ."

"...............?"

"ಹೌದು, ನನಗೆ ಕೈಬಂಡಿ ನೂಕುವದು ಬೇಕಾಗಿದೆ" ಎಂದು ಅವನು ಹಲ್ಲು ಕಿರಿದ.

"ನೀತಿಹೀನ ಪಶು" ಎನ್ನುತ್ತ ಅವಳು ಅವನ ಕಿಸೆಗಳನ್ನೆಲ್ಲ ಹುಡುಕಿದಳು.

ಪ್ರತಿಸಲವೂ ಏನನ್ನಾದರೂ ಹೊರಗೆ ತೆಗೆದು ಹಾಸಿಗೆಯ ಮೇಲೆ ಹಾಕಿದಳು. ಸುಂಕ ತಪ್ಪಿಸಿ ತಂದ ಸಾಮಾನುಗಳನ್ನು ಅವಳು ಎಣಿಸಿದಳು.

ಸ್ನೋ-ಕ್ರೀಮುದಷ್ಟು ಬೆಳ್ಳಗೆ........ಫ್ಯಾನ್ಸಿ ಕಾಗದ............ಹೊಸ ಕೈವಸ್ತ್ರ........ಒಂದು ಟಿನ್ನು........ಇದರಲ್ಲಿ ಏನು ಇದೆ ?"

"ತರ್ಕಿಸು !"

"ನನಗೆ ತರ್ಕ-ಗಿರ್ಕ ಗೊತ್ತಿಲ್ಲ. ನೀನು ಮಾತು ಕೊಟ್ಟ ಪುಡಿಯೆ ಇದು ?"

"ಮೇಲಿನ ಛಾಪು ನೋಡು; ಡಬ್ಬಿ ತೆಗೆ ಮತ್ತು ಅದೇನಿರುವದೊ ನೀನೇ ನೋಡಿಕೊ."

ಅವಳು ದೀಪದ ಹತ್ತಿರ ಸರಿದಳು, ಡಬ್ಬಿಯನ್ನು ತೆರೆದಳು. ಮೂಸಿ ನೋಡಿದಳು. ಮನಸ್ಸಿಗೆ ಬರಲಿಲ್ಲವೆಂಬಂತೆ ಅಣಕವಾಡುವ ಹುಸಿ-ನಗೆ ಮುಖದ ಮೇಲೆ ಸುಳಿಯಿತು. ಅದನ್ನು ಕಂಡು ಪೈ-ಝುುವಿಗೆ ತುಂಬಾ ಆನಂದವೆನಿಸಿತು. ಮರುಮಾತಿಲ್ಲದೆ ಅವನು ಡಬ್ಬಿಯನ್ನು ಕಸಿದುಕೊಂಡ. ಅವಳ ಟೊಂಕದ ಸುತ್ತು ಕೈಹಾಕಿ ಅವಳನ್ನು ಹಾಸಿಗೆಗೆ ಎತ್ತಿಕೊಂಡು ನಡೆದ.

ನೀವು ಅವರನ್ನು ಕೋಣೆಯಲ್ಲಿ ನೋಡಲಾರಿರಿ. ಆದರೆ ಆ ಕೆಂಪು

ದೀಪದ ಮುಂದ ಪ್ರಕಾರದ ಸುತ್ತಿನಲ್ಲಿ ಕೆಸರು ಹತ್ತಿದ ಪಾದಗಳ ಹೆಜ್ಜೆಗಳು ಮಾತ್ರ ಕಾಣುತ್ತಿದ್ದವು.

ಹೊರಗೆ ಜೋರಾಗಿ ಮಳೆಯಾಗುತ್ತಿತ್ತು. ಆದರೆ ಅವರ ನಗೆಯ ಕಿಲಕಿಲ, ಬಿರುಗಾಳಿಯ ಆ ಸಪ್ಪಳವನ್ನೂ ಅಡಗಿಸುವಂತಿತ್ತು. ಕೋಣೆಯ ಬಾಗಿಲಗಳು ಅತಿಶಯ ತೆಳ್ಳಗಿದ್ದುದರಿಂದ ಆಚೆಗೆ ಅಫೀಮಿನ ಗುಡುಗುಡಿ ಸೇದುವ ಸಪ್ಪಳವೂ ಈಚೆಗೆ ಸ್ಪಷ್ಟವಾಗಿ ಕೇಳಬಹುದಾಗಿತ್ತು. ಪೈ-ಝುು ವಿಗೂ ಅವನ ಆ ಸ್ತ್ರೀಗೂ ಇದಾವದರ ಪರಿವೆಯೆ ಇರಲಿಲ್ಲ.

" ನೀನು ಬಹು ಗಟ್ಟಿಗ....ಎತ್ತಿಗಿಂತಲೂ ಗಟ್ಟಿಮುಟ್ಟ. "

" ಹೂಂ............ನದಿಯ ಕೆಳಗಿನ ಭಾಗಕ್ಕೆ ಹೋದಾಗ ಒಂದೂ ಹೆಣ್ಣಿಗೆ ಎಂದೂ ಹೋದುದಿಲ್ಲವೆಂದರೆ ನಂಬುವಿಯಾ ? "

" ಒಮ್ಮೆಯೂ ಇಲ್ಲವೆ ? ದಿವ್ಯ ದೇವಮಂದಿರದಲ್ಲಿಯ ಯಾಗದಷ್ಟು ನೀನು ಶುದ್ಧನಾಗಿರುವಿಯಾ ? "

" ನಿಜಕ್ಕೂ, ಬೇಕಾದರೆ ಆಣೆ ಮಾಡುತ್ತೇನೆ. "

" ನಂಬುವವರಾರು........? "

ಆದರೆ ಪೈ-ಝುುವಿಗೆ ತನ್ನಲ್ಲಿ ಶಬ್ದಗಳಿಂದ ಹೇಳದಂತಹ ಶಕ್ತಿ ಸಾಮರ್ಥ್ಯಗಳ ಸಂಚಾರವಾದಂತೆನಿಸಿತು. ಜೋರಾಗಿ ಮತ್ತು ವೇಗವಾಗಿ ಉಸಿರಾಡತೊಡಗಿತು. ಸ್ನಾಯುಗಳೆಲ್ಲ ಉಬ್ಬಿಕೊಂಡಂತಾದವು. ಕೊನೆಗೊಮ್ಮೆ ಮೈ ಸಡಿಲಾದಂತಾಯಿತು. ಶಕ್ತಿಯುಡುಗಿತು. ತೊಯ್ದ ನಾರಿನ ಸೂಡಿನಂತೆ ಚೇತನಾಹೀನನಂತಾಗಿ ಹಾಸಿಗೆಯ ಮೇಲೆ ಬಿದ್ದುಕೊಂಡ.

ಕೆಲಹೊತ್ತಿನ ನಂತರ ಆಕೆ ಹುಕ್ಕಾ ಸಾಹಿತ್ಯವನ್ನು ತಂದು ಹಾಸುಗೆಯ ಮೇಲೆ ಇಟ್ಟಳು. ಇಬ್ಬರ ನಡುವೆ ಅದೊಂದು ದೊಡ್ಡ ಗೋಡೆಯಂತಾಯಿತು. ಅದರ ಒಂದೊಂದು ಬದಿಗೆ ಒಬ್ಬರಂತೆ ಅವರು ಸುಮ್ಮನೆ ಸೇದುತ್ತ ಬಿದ್ದುಕೊಂಡರು. ಅಷ್ಟರಲ್ಲಿ ಅವಳು ಗೀತ-ನಾಟಕದ ಹಾಡುಗಳ ತುಣುಕುಗಳನ್ನು ಹಾಡತೊಡಗಿದಳು. ಪೈ-ಝುು ಮಧ್ಯದಲ್ಲಿ ಒಮ್ಮೊಮ್ಮೆ ಚಹ ಗುಟುಕರಿಸುತ್ತ, ಹುಕ್ಕ ಸೇದುತ್ತಲೇ ಇದ್ದ. ಇದೀಗ ತಾನು ರಾಜನಾಗಿರುವಂತೆ ಅವನಿಗೆ ಅನಿಸುತ್ತಿತ್ತು.

"ಆದರೆ, ಎಲೆ, ಇಲ್ಲಿ ಕೇಳು, ನದಿಯ ಕೆಳಗಿನ ಈ ಹೆಣ್ಣುಗಳು—ನಿಜವಾಗಿಯೂ ಸುಂದರಿಯರು!"

"ಹಾಗಾದರೆ ನನ್ನ ಕಡೆಗೇಕೆ ಬಂದೆ?"

"ಸರಿ, ನಾನು ಅವರನ್ನು ಪ್ರೀತಿಸಿದರೂ ಅವರು ನನ್ನನ್ನು ಪ್ರೀತಿಸುವದಿಲ್ಲ."

"ಹಾಂಗೆಂದೇ ನೀನು ಇಲ್ಲಿಗೆ ಬರುವಿ ಎಂದಂತಾಯಿತು, ಅಲ್ಲವೆ?"

"ಹೆಣ್ಣು ನರಿಯೆ! ನಾನು ಇಲ್ಲಿ ಇಲ್ಲದಾಗ ಅದೆಷ್ಟು ಮಂದಿ........ ಏನು? ನೀನು ಅಲ್ಲಗಳೆಯುವದೆ!"

ಆಕೆ ಮುಖ ಸೊಟ್ಟ ಮಾಡಿದಳು. ಮತ್ತೊಂದು ಹುಕ್ಕ ಅವನಿಗೆ ಕೊಟ್ಟಳು. ಕೆಲ ನಿಮಿಷ ಮೌನವಾಗಿ ಅವನು ಹುಕ್ಕ ಎಳೆಯುತ್ತಿದ್ದ.

"ಈಗ ಹೇಳು, ನಿನ್ನೆ........ಇಲ್ಲಿ ಯಾರಾದರೂ........?"

"ಎಷ್ಟು ನೀಚನಾದೆ? ನಿನ್ನ ಸಲುವಾಗಿ ಅದೆಷ್ಟು ದಿನಗಳಿಂದ ಕಾಯುತ್ತಿದ್ದೇನೆ! ದಿನಗಳನ್ನು ಒಂದೊಂದಾಗಿ ಎಣಿಸುತ್ತಿದ್ದೆನಲ್ಲದೆ ತಿರುಗುವ ಹೆಣವಾದ ನೀನು ಇಂದೇ ಇಲ್ಲಿಗೆ ಬರುವಿಯೆಂದು ಗುಣಿಸಿಯೂ ಇದ್ದೆ."

"ಹೂಂs....ಅದಿರಲಿ, ನಾನು 'ನೀಲ ಪ್ರವಾಹದ' ತಿರುಗಣಿಯಲ್ಲಿ ಮುಣುಗಿದೆನೆಂದು ತಿಳಿ, ನೀನು ಆಗ ಸುಖಿಯಾಗುವಿಯಲ್ಲವೆ?"

"ಆಗದೇನು?" ಅವಳೆಂದಳು. ಅವಳಿಗೆ ಮುಖಭಂಗವಾದಂತಿತ್ತು.

ಅವಳಿಗೆ ಸಿಟ್ಟು ಬಂದಷ್ಟೂ ಪೈ-ಝುವಿಗೆ ವಿನೋದವೆನಿಸುತ್ತಿತ್ತು. ಒಂದು ವಿಚಿತ್ರ ಆನಂದ ಮತ್ತು ಆತ್ಮಸಾಮರ್ಥ್ಯದ ಅನುಭವ ಅವನಿಗೆ ಆಗಿಸುತ್ತಿದ್ದವು. ಹುಕ್ಕವನ್ನು ಒಮ್ಮೆಲೆ ಕೆಳಗೆ ಸರಿಸಿ ಅವಳೆಡೆಗೆ ಸರಿದು ಅವಳನ್ನು ತಬ್ಬಿಕೊಂಡ. ಅವಳ ಬಟ್ಟೆಕುಚಗಳನ್ನೂ ದುಂಡುದೊಡೆಗಳನ್ನೂ ಮೆಲ್ಲನೆ ಒತ್ತಿದ. ಅವುಗಳನ್ನು ಕಚ್ಚಿದ. ಮುಗುಳ್ನಗೆಯಿಂದ ಅವನನ್ನು ನೋಡುತ್ತ ಅವಳು ಬಿದ್ದುಕೊಂಡಿದ್ದಳು. ಆತನ ಬೆನ್ನನ್ನು ನೋಡಿದರೆ ನಿಮಗೆ ಅದನ್ನು ಸುತ್ತಿ ಹಿಡಿದುಕೊಂಡ ಕೆಂಪು ರೇಶಿಮೆ ಸುತ್ತಿದ

ಮೃದುವಾದ ಎರಡು ಪಾದಗಳು ಮಾತ್ರ ಕಾಣಬಹುದಾಗಿತ್ತು........

ಮಳೆಯಿಂದ ವಕ್ರವಾದ ನೆಲದ ಮೇಲೆ ಕಾಲೆಳೆಯುತ್ತ ಪೈ-ಝು ನದಿಯ ಕಡೆಗೆ ನಡೆದಿದ್ದ. ಕೈಯಲ್ಲಿ ಗಡುತರವಾದ ಹಗ್ಗವನ್ನು ಹೊತ್ತಿಸಿ ಹಿಡಿದಿದ್ದ. ಅದುವೆ ಅವನಿಗೆ ದಾರಿದೀಪವಾಗಿತ್ತು. ಮಳೆ ಜೋರಾಗಿತ್ತು. ಮಾರ್ಗದಲ್ಲಿ ಕೆಸರು, ನೀರಿನ ಮಡುವುಗಳೇ ಉಂಟಾಗಿದ್ದವು. ಆದರೆ ಅದರಿಂದ ಅವನಿಗೆ ತೊಂದರೆ ಎನಿಸಲಿಲ್ಲ. ಅವನ ಮನಸ್ಸನ್ನೆಲ್ಲ ಆ ಸ್ತ್ರೀ ಮತ್ತು ಅವಳಿಂದ ದೊರೆತ ಸುಖ ಆವರಿಸಿದ್ದವು. ಮತ್ತೊಂದು ವಿಚಾರವೇ ಸುಳಿಯದು. ಅವಳ ಆ ದುಂಡಾದ ಮೈಕಟ್ಟು, ಆ ಶರೀರದ ಬಿಸಿಸ್ಪರ್ಶ, ಅಚ್ಚರಿಗೊಳಿಸುವ ಅಂಗಾಂಗಳ ವಕ್ರತೆಯ ಸೊಬಗು, ಇವುಗಳನ್ನೆಲ್ಲ ಅವಳಿಂದ ಸಾವಿರ ಮೈಲುಗಳಾಚೆಗೆ ಹೋದರೂ ಸುಸ್ಪಷ್ಟವಾಗಿ ತಾನು ಬಣ್ಣಿಸಬಲ್ಲೆನೆಂದು ಅವನಿಗೆ ಅನಿಸುತ್ತಿತ್ತು.

ನದಿಯ ಮೇಲಿನ ಒಂದು ತಿಂಗಳದ ಶ್ರಮಜೀವನ ಉರಿಯುತ್ತಿರುವ ಬಿಸಿಲಲ್ಲಿ, ಹೊಡೆಯುತ್ತಿರುವ ಬಿರುಗಾಳಿ ಮಳೆಗಳಲ್ಲಿ ಮೈಮುರಿದು ದುಡಿದ ಬಳಲಿಕೆಗೆ ಅವಳ ಸಂಗಸುಖವು ಒಳ್ಳೆ ಪ್ರತಿಫಲವಾಗಿತ್ತು. ಇಷ್ಟೆಯಲ್ಲದೆ ಇಸ್ಪೀಟಿನಲ್ಲಿಯ ಅವನ ದುರ್ದೈವದ ಕಟು ಅನುಭವಕ್ಕೂ ಅದು ತೃಪ್ತಿಯ ಸಮಾಧಾನವನ್ನು ತಂದಿತ್ತೆನ್ನಬಹುದು. ಇದೀಗ ಅವಳಿಗಾಗಿ ಅವನು ಪಟ್ಟ ಶ್ರಮ ಸಾರ್ಥಕವೆನಿಸಿತ್ತಲ್ಲದೆ ಮುಂದಿನ ಒಂದು ತಿಂಗಳದ ಶ್ರಮಜೀವನಕ್ಕೆ....ದೋಣಿಯ ಪಟಸ್ತಂಭವೇರುವದು ಮೊದಲಾದದ್ದಕ್ಕೂ ಹೊಸ ಶಕ್ತಿಯನ್ನೂ ಹಾಡಲು ಉತ್ಸಾಹವನ್ನೂ ಅವಳು ಕೊಟ್ಟಿದ್ದಳು. ಮತ್ತೆ ತಿಂಗಳ ಕಳೆದರೆ ಅವಳ ಜೊತೆಗೆ ಪವಡಿಸುವ ಆಶೆಯೂ ಇತ್ತು.

ಪೈ-ಝುವು ದೋಣಿಯ ಬರಿದಾದ ವಿಸ್ತಾರವಾದ ಬಣ್ಣ ಬಳಿದ ಹಲಗೆಯ ಭಾಗವನ್ನು ದಿಟ್ಟಿಸುತ್ತ ನಿಂತ. ಒಂದು ಕ್ಷಣ ತಿರುಗಿ ಹೋಗಲೆ ಎನಿಸಿತವನಿಗೆ. ಹೊಸ ಸರಕು ಮತ್ತು ಪ್ರವಾಸಿಗರು ಈಗಾಗಲೆ ಒಳಗೆ ಸೇರಿದ್ದರು. ಫಳಿಗಳ ನಡುವೆ ಆಶ್ರಯವನ್ನೂ ಕೆಲವರು ಹುಡುಕುತ್ತಿದ್ದರು. ಚೈತನ್ಯಮಯವಾದ ತನ್ನ ದೋಣಿಯ ಆಶ್ರಯದಲ್ಲಿ ಹೊಸಹೊಸತಾಗಿ ಬಂದು ಸೇರುವ ಅಪರಿಚಿತ ಜನವನ್ನು ನೋಡಿ ನಾವಿಕರಿಗೆ ಸ್ವಾಭಾವಿಕ

ವಾಗಿರುವ ತಿರಸ್ಕಾರದ ಮನೋಭಾವನೆ ಅವನಲ್ಲಿಯೂ ಉಂಟಾಗದಿರುತ್ತಿರಲಿಲ್ಲ.

ಅದೇಕೊ ಒಮ್ಮೆಲೆ ಅವನಿಗೆ ತನ್ನ ಸ್ತ್ರೀಯು-ಬತ್ತಲೆ ಮಲಗಿ–ಈ ಕಪ್ಪಾದ ನಾವಿನಂತೆ ದಾರಿ ಕಾಯುತ್ತಿರುವ ವಿಚಾರ ತಲೆಯಲ್ಲಿ ಸುಳಿಯಿತು. ಜಗತ್ತಿನಲ್ಲಿಯೆ ಏನೊ ತಪ್ಪು ಇದೆ ಎಂದು ಅವನ ತಲೆಯಲ್ಲಿ ಮಂದವಾಗಿ ಬೆಳಕೊಂದು ತೋರಿತು. ಆಗಲೇ ಅವನಿಗೆ ತನ್ನ ಆಯುಷ್ಯದಲ್ಲಿ ಮೊದಲನೆಯ ಸಲ ತನ್ನ ಕೈಕಾಲುಗಳು ಬಹಳ ಸೋತಿರುವಂತೆ ಅನಿಸಿತು. ತನ್ನ ಕೊಠಡಿಯನ್ನು ಸೇರಿ ಮಲಗಿಕೊಂಡುಬಿಟ್ಟ.

---

## ಪರಿಚಯ

## ಸನ್-ಶಿ-ಚ್ಯೆನ್

(೧೯೦೬ —)

ಚೀನ ದೇಶದ ಗ್ರಾಮಜೀವನವನ್ನು ಕುರಿತು, ಸುಂದರವಾಗಿ ಬರೆಯುವ 'ಸನ್-ಶಿ-ಚ್ಯೆನ್' ಇವನು ಆ ದೇಶದ ತರುಣ ಬರಹಗಾರರಲ್ಲೊಬ್ಬನು. ಇವನು 'ಶಾ-ಓ-ಸಿಂಗ್' ಪ್ರಾಂತದ ಚೇಕಿಂಗ್ ನಗರದಲ್ಲಿ ಹುಟ್ಟಿದನು. ಆ ನಗರ, ಲೂ-ಶೂನ್‌ನ ಹುಟ್ಟೂರೂ ಹೌದು; ಮತ್ತು ಮದ್ಯಗಳಿಗೂ ಹೆಸರಾದದ್ದು. ತಮ್ಮ ಜನರ ಬಗ್ಗೆ ಹಳೆ ಮುದುಕರು ತಿರುಗಿ ತಿರುಗಿ ಹೇಳುತ್ತಿದ್ದ ಹಳೆಯ ಕತೆಗಳನ್ನು ಚಿಕ್ಕಂದಿನಲ್ಲಿ ಕೇಳಿ ಕೇಳಿ ಇವನಿಗೆ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಿತು. ಹುಡುಗನಾಗಿದ್ದಾಗಲೇ ಬರೆಯಲು ಪ್ರಾರಂಭಿಸಿದ. ಬಾಲ್ಯ ಮುಗಿಯುವಷ್ಟರೊಳಗಾಗಿ ಎಷ್ಟೋ ಪುಸ್ತಕಗಳನ್ನು ಪ್ರಕಟಿಸಿದ. ಯಾವವೇ ಕಲಹದ ನೆನಪುಗಳು ಇನ್ನೂ ಅವನಲ್ಲಿ ಬಾಡದೆ ಇರುವಾಗ, ಅವನ ತವರೂರಲ್ಲಿ ಆ ಕಲಹ ಹಗಲೆಲ್ಲ ತಾಂಡವವಾಡುತ್ತಿದ್ದಾಗ, ಅವನ ಕತೆಗಳ ವಿಷಯವೂ ಕಲಹವಾಗಿರುವದು ಸ್ವಾಭಾವಿಕ. ಅವನ ಮೂರು ಕೃತಿಗಳಾದ, 'ರಣರಂಗ', 'ಯುದ್ಧ' 'ಯುದ್ಧ ಮುಗಿದ ಮೇಲೆ', ಇವೇ ಅವನಿಗೆ ಕೀರ್ತಿಯನ್ನು ತಂದಿವೆ.

ಇದಲ್ಲದೆ ಅವನ ಆರು ಕಾದಂಬರಿಗಳೂ ಪ್ರಕಟವಾಗಿವೆ: 'ಚೊಕ್ಕ ಚಿನ್ನ', 'ಡೇರನ್ನಿಗೆ' 'ಪುಷ್ಪಕಂಕಣ', 'ಮಿಸ್ ಫೆಂಗ್-ಸಿನ್', ಹೆಣ್ಣು ಹೃದಯ', ಮತ್ತು 'ಕತ್ತಲೆಯ ಹೆಣ್ಣು'. ಮೂವತ್ತು ಮಿಕ್ಕುವದರೊಳಗಾಗಿ ಈ ಅದ್ಭುತ ಕಲಾವಿದ, ಅಪ್ಟನ್ ಸಿಂಕ್ಲೇರ, ಗಾರ್ಕಿ ಇವರ ಮೇಲೆ ವಿಮರ್ಶೆಯನ್ನೂ, 'ಶೆಲ್ಲಿಯ ಜೀವನ ಚರಿತ್ರೆ 'ಇಂಗ್ಲಿಶ್ ಸಾಹಿತ್ಯ ವಿಮರ್ಶೆ' ಮತ್ತು 'ಪೌರ್ವಾತ್ಯ ಕತೆಗಳು' ಎಂಬ ಪುಸ್ತಕಗಳನ್ನೂ ಬರೆದಿದ್ದ. ಪಾಶ್ಚಿಮಾತ್ಯ ಸಾಹಿತ್ಯದ ಕ್ರಮಿಕ ಪುಸ್ತಕವನ್ನೂ ಬರೆದಿದ್ದಾನೆ. ಯುದ್ಧವನ್ನು ವಿರೋಧಿಸುವ ಒಂದು ಪುಸ್ತಕದ ಸಂಪಾದಕನಾಗಿದ್ದಾನೆ.

ಸನ್‌ನ ಕೃತಿಗಳ ತುಂಬ, ಹದನಾದ ವಿಡಂಬನ, ಕಹಿಯಾದ ಚುಚ್ಚು ಮಾತು, ಮತ್ತು ನಿರಾಶಾವಾದ ತುಂಬಿವೆ. ಆದರೆ ಒಮ್ಮೊಮ್ಮೆ ಚೀನಿ ಸಾಹಿತ್ಯಕ್ಕೇ ಅಪೂರ್ವವಾದ ತೀವ್ರವಾದ ಭಾವಾವೇಗ ಕಾಣುತ್ತಿದೆ. ಅವನಿಗೆ ತೀರ ಪರಿಚಿತವಾದ ಗ್ರಾಮಜೀವನದ ಕತೆಗಳು ಬಹಳ ಹೊಗಳಿಕೆಯನ್ನು ಪಡೆದಿವೆ. ಅವನ ಇತ್ತೀಚಿನ ಕೃತಿಗಳಲ್ಲಿ ಸಾಮಾಜಿಕ ಜೀವನದ ಅರಿವು ಹೆಚ್ಚಾಗುತ್ತಿದೆ; ತುಂಬ ಬೆಳವಣಿಗೆಯನ್ನು ಹೊಂದಿದ ನಾಟಕೀಯ ವಾಸ್ತವತೆ ಇದೆ ಅವನ ಲೇಖನಗಳಲ್ಲಿ; ಹೃದಯವನ್ನು ಅಲುಗಿಸುವ, ಹೊಡೆದೆಬ್ಬಿಸುವ, ಚೇತನೆಯನ್ನೂಡಿಸುವ ಗುಣ ತುಂಬಿದೆ. ಈ ಗುಣ ಚೀನಿ ಸಾಹಿತ್ಯದಲ್ಲಿಯೇ ಅಪರೂಪ ಎನ್ನಬಹುದು.

೧೯೩೫ರ ಜಾನೆವಾರಿಯಲ್ಲಿ ಪೇಪಿಂಗದಲ್ಲಿ ಇವನನ್ನು ಕೊಮಿಂಟಾಂಗ್‌ದ ಅಧಿಕಾರಿಗಳು ಸೆರೆಹಿಡಿದರು. ಇವನನ್ನು ಸೆರೆಹಿಡಿಯುವಾಗ 'ಚೀನಿ, ಮತ್ತು ಪಾಶ್ಚಿಮಾತ್ಯ ಸಾಹಿತ್ಯ'ವನ್ನು ಕುರಿತು ಇವನು ಭಾಷಣ ಮಾಡುತ್ತಿದ್ದ. 'ಟಿಂಟ್ಸಿನ್' ಮತ್ತು 'ಪೇಪಿಂಗ್'ದಲ್ಲಿ ಸೆರೆಯಾದ ಎಷ್ಟೊ ಲೇಖಕರು, ಕಲಾವಿದರು, ವಿದ್ಯಾರ್ಥಿಗಳು ಮತ್ತು ಅಧ್ಯಾಪಕರಲ್ಲಿ ಇವನೊಬ್ಬ. ನವ್ಹೆಂಬರ ಡಿಶಂಬರ, ಜನೆವರಿಯಲ್ಲಿ ನಡೆದ ಈ ಘಟನೆ, ಕೊಮಿಂಟ್‌ಂಗ್‌ದ Blue jackets ದವರು ನಡೆಸಿದ 'ಏಕಪ್ರಭುತ್ವ ವಿಚಾರದ ನಾಶ'ದ ಚಳವಳಿಯಲ್ಲಿ ಒಂದು.

---

## ಹಾ-ಓ     

### (೧)

ಒಂದು ಸಣ್ಣ ಕತ್ತಲೆ ಕೋಣೆಯಲ್ಲಿ, ನಸುಕಿನಿಂದ ಹಿಡಿದು ಇಡೀ ದಿವಸ, ' ಹಾ-ಓ ' ಹಾಸಿಗೆಯ ಮೇಲೆಯೇ ಇದ್ದಳು. ತಲೆಯನ್ನು ಬಾಗಿಸಿದ್ದಳು; ಉಸಿರಾಡಲೂ ಆಗದವರಂತೆ, ದೇಹ ಅಚಲವಾಗಿತ್ತು........

ಕೆಂಪು ಪರ್ವತದ ತಟದಲ್ಲಿ ಒಂದು ದಟ್ಟವಾದ ಪಾಯಿನ್ ಗಿಡಗಳ ಅರಣ್ಯವಿತ್ತು. ಅಲ್ಲಿ ಒಂದು ಸಣ್ಣ ನದಿ ವಿಸ್ತಾರವಾದ ಹೊಲಗಳಲ್ಲಿ ಹಾದು ಹೋಗಿತ್ತು. ಅದರ ಬದಿಯಲ್ಲಿ ಏಳು ಪಾಳಾದ ಹಳೆಯ ಮನೆಗಳ ಸಾಲು ಹಬ್ಬಿಕೊಂಡಿತ್ತು. ಜನರು ಅದಕ್ಕೆ ' ಟಾ-ಓ ' ಹಳ್ಳಿ ಎಂದು ಕರೆಯುತ್ತಿದ್ದರು. ಆ ಊರಿನಲ್ಲಿ ಯಾರೂ ' ಟಾ-ಓ ' ಎಂಬ ಹೆಸರಿನವರಿರಲಿಲ್ಲ. ಆ ಏಳು ಮನೆಗಳ ಪೈಕಿ ನಾಲ್ಕರಲ್ಲಿ ಚೆನ್ ಮನೆತನದವರು ವಾಸಿಸುತ್ತಿದ್ದರು. ಪಶ್ಚಿಮಕ್ಕಿದ್ದ ಕೊನೆಯ ಮನೆ, ಪಿತೃಗಳ ದೇವಾಲಯವಾಗಿತ್ತು. ಈ ಸಾಲಿನ ನಟ್ಟನಡುವೆ ಇದ್ದ ಹೊಸದಾದ ಮಾಟದ ಮನೆಯಲ್ಲಿ ಶ್ರೀಮಂತ 'ಚೆನ್' ಇರುತ್ತಿದ್ದನು.

ತೀರ ಗುಡಿಸಲಿನಂತಿದ್ದ ಏಳನೆಯ ಮನೆಯಲ್ಲಿ ಹೆಚ್ಚೆಂದರೆ ಐದು ಸಣ್ಣ ಕೋಣೆಗಳಿದ್ದವು. ಇಲ್ಲಿ ' ವ್ಯಾಂಗ್ ' ಮನೆತನದವರಿರುತ್ತಿದ್ದರು. ಇಲ್ಲಿಯೇ ' ಹಾ-ಓ ' ಅಡಗಿಕೊಂಡಿದ್ದು. ಇದರಲ್ಲಿ ಅರ್ಧ ಮನೆ ಶ್ರೀಮಂತ ಚೆನ್ನನಿಗೆ ಅಡವಾಗಿತ್ತು. ಎರಡು ವರ್ಷಗಳ ಹಿಂದೆ ಮುದುಕ ವ್ಯಾಂಗ್ ತೀರಿಕೊಂಡಾಗ, ಉತ್ತರಕ್ರಿಯೆಯ ಖರ್ಚಿಗಾಗಿ ಅವನು ನಾಲ್ವತ್ತು ಸಾವಿರ ರೋಖ ಸಾಲ ಕೊಟ್ಟಿದ್ದ. ಅದರ ಪರಿಣಾಮವಾಗಿ ವ್ಯಾಂಗನ ಹೆಂಡತಿ, ಚೆನ್ನನಿಗೆ ಸೇರದ ಕೆಳಭಾಗದಲ್ಲಿ, ಒಂದು ತನ್ನ ಮಗ, ಒಬ್ಬ ಚಿಕ್ಕ ತಮ್ಮ,

ಮತ್ತು ಮಗಳು ‘ ಹಾ-ಓ ’ ಇವರೊಂದಿಗೆ ಇರುತ್ತಿದ್ದಳು. ಅಡಿಗೆ ಮನೆಯ ಹತ್ತಿರದ ಕೋಣೆಯಲ್ಲಿ ಅಥವಾ ಅಡಿಗೆಮನೆಯ ಒಂದು ಮೂಲೆಯಲ್ಲಿ ಯಾಕಂದರೆ ಮಲಗುವ ಮನೆಯನ್ನು ಕೆಲವು ಹಲಗೆಗಳಿಂದ ಬೇರೆ ಮಾಡಿದ್ದರು—‘ ಹಾ-ಓ ’ ಹೆದರಿಕೆಯಿಂದ ನಡುಗುತ್ತ ಕುಳಿತಿದ್ದಳು. ಕೆಲವು ಬೀಸುವ ಕಲ್ಲುಗಳನ್ನೂ, ಬಿದಿರಿನ ಬುಟ್ಟಿಗಳನ್ನೂ ಅಡಿಗೆಮನೆಯ ಗೋಡೆಗೆ ಆನಿಸಿ ಇಟ್ಟಿದ್ದರು. ಅಡಿಗೆಮನೆಯಲ್ಲಿ ಏನೋ ಗದ್ದಲ ನಡೆದಿತ್ತು. ನಾಲ್ಕು ಟೇಬಲ್ಲುಗಳು ಮತ್ತು ಅವಕ್ಕೆ ಸರಿಯಾಗಿ ಎದುರಿಗಿರುವ ಬೆಂಚುಗಳ ಮೇಲೆ ಕುಳಿತ ಜನರಿಂದ ಎದ್ದ ಗದ್ದಲದ ಸಪ್ಪಳ ಬಹಳವಾಗಿತ್ತು. ಒಟ್ಟಿನಲ್ಲಿ ಎಲ್ಲರೂ ಕೂಡಿ ಮೂವತ್ತರಷ್ಟು ಜನರಿದ್ದರು. ಅವರಲ್ಲಿ, ‘ ಟಾ-ಓ ’ ಹಳ್ಳಿಯ ಗಂಡಸರಷ್ಟೇ ಅಲ್ಲದೆ, ಬೇರೆ ‘ಯು’ ಮತ್ತು ‘ರೆಡ್‌ವಾಲ್’ ಮೊದಲಾದ ನೆರೆಹಳ್ಳಿಗಳಿಂದ ಬಂದ ಅತಿಥಿಗಳೂ ಇದ್ದರು. ಅವರೆಲ್ಲ ಕುಡಿಯುತ್ತ ತಿನ್ನುತ್ತ ಒಳ್ಳೇ ಹುರುಪಿನಲ್ಲಿದ್ದರು. ಸಾಧಾರಣವಾಗಿ ಎಲ್ಲರೂ ಬಿಳಿ ಅಥವಾ ನೀಲಿ ಶರ್ಟುಗಳನ್ನೂ ಪ್ಯಾಂಟುಗಳನ್ನೂ ಧರಿಸಿದ್ದರು; ಅಲ್ಲದೆ ಬರಿಗಾಲಿನಲ್ಲಿದ್ದರು. ಶ್ರೀಮಂತ ಚಿನ್, ಓದು ಬರೆಹ ಬಲ್ಲ ವ್ಯಾಪಾರಿ ‘ವೂ’, ಅಲ್ಲದೆ ಹಳ್ಳಿಗೇ ಹಿರಿಯನಾದ ಒಬ್ಬ ಮುದುಕ ಇವರು ಮಾತ್ರ ಉದ್ದಂಗಿಗಳನ್ನು ಧರಿಸಿದ್ದರು. ಕೆಲವೊಂದು ವಿಶೇಷ ಪ್ರಸಂಗಗಳಲ್ಲಿ ಮಾತ್ರ ಈ ಉದ್ದಂಗಿಯ ಮನುಷ್ಯರು ಅಂಥ ಕೀಳು ಮನೆಗಳಿಗೆ ಬರುತ್ತಿದ್ದರು. ಇಷ್ಟೇ ಅಲ್ಲದೆ ತಮ್ಮ ಆಗಮನದಿಂದ ಅವೊತ್ತಿನ ಸಮಾರಂಭಕ್ಕೆ ಬಂದಿದ್ದ ಅಪೂರ್ವ ವೈಭವ ತಮ್ಮಿಂದಲೇ ಎಂಬ ಅರಿವೂ ಅವರಿಗಿರುತ್ತಿತ್ತು.

ಅಂದಿನ ಆಹಾರ ಸಾದಾ ಇತ್ತು. ಮಾಂಸದ ನಾಲ್ಕು ದೊಡ್ಡ ತಟ್ಟೆಗಳು, ಮೀನ, ಮೂಲಂಗಿ, ಮತ್ತು ಸಾರು ಇಷ್ಟು ಟೇಬಲ್ಲಿನ ಮೇಲಿದ್ದವು. ಆದರೆ ಬರಿದಾದ ತಟ್ಟೆಗಳು ಕೂಡಲೆ ತುಂಬುತ್ತಿದ್ದವು. ಹಾಗೆ ತುಂಬಿ ತುಂಬಿದ ಹಾಗೆ ಬರಿದೂ ಆಗುತ್ತಿದ್ದವು. ಇವರದಾದ ಮೇಲೆ ಹೆಣ್ಣುಮಕ್ಕಳ ಊಟವೂ ಆಗುವದಿತ್ತು. ಯಾರೂ ಸಂಕೋಚ ಮಾಡಿಕೊಳ್ಳದೆ ಮಾಂಸದ ತಟ್ಟೆಗಳನ್ನೂ ಮದ್ಯದ ಬಟ್ಟಲುಗಳನ್ನೂ ಬರಿದು ಮಾಡಿದರು. ಅವರು ಊಟಕ್ಕೆ ಬಂದ ಕಾರಣ ಯಾವಹಿತಸಾಧನೆಗೂ ಅಲ್ಲ; ನಾಚಿಕೆಗೇಡಾದ ಮಗಳ

ತಾಯಿ ತೆತ್ತಬೇಕಾದ ಪ್ರಾಯಶ್ಚಿತ್ತದ ದಂಡಕ್ಕಾಗಿ ಎಂದಿತ್ತು. ಪಾಪ ಆ ವಿಧವೆಯಾದ ವ್ಯಾಂಗಳಿಗೆ ದುಡ್ಡಿನ ಕೊರತೆ ಎಷ್ಟೊಂದಾದರೇನು ? ಅದು ನ್ಯಾಯದಾನದ ರೀತಿಯೆ ಆಗಿತ್ತು.

ನಿಜವಾಗಿ, ಉಳಿದಿದ್ದ ಮನೆಯ ಇನ್ನೊಂದು ಭಾಗವನ್ನೂ ಒತ್ತಿ ಹಾಕಿ ವ್ಯಾಂಗಳು, ಈ ವಿಚಿತ್ರ ಸಮಾರಂಭದ ಖರ್ಚನ್ನು ಪೂರೈಸಿ ಕೊಂಡಿದ್ದಳು. ಭಾವನಾವಶನಾದಂಥ ಮನುಷ್ಯನೊಬ್ಬನಿಗೆ, ಅಥಿತಿಗಳು ಅಲ್ಲಿ ಕುಳಿತು ತಿನ್ನುತ್ತಿರುವದೆಲ್ಲ ವ್ಯಾಂಗಳ ಮೈಯ ಮಾಂಸವೇ ಎಂದೆನಿಸು ವಂತಿತ್ತು. ಸಮಾರಂಭವೆಂದರೆ ಅವಳ ಪೂರ್ಣ ನಾಶವೇ ಆಗಿತ್ತು. ಈ ತ್ಯಾಗದಿಂದ, ತನ್ನ ಮಗಳ ಜೀವವನ್ನುಳಿಸಬಹುದಾಗಿತ್ತು. ಮಗಳೇನೋ ನಿಃಸಂಶಯವಾಗಿ ಆ ತಪ್ಪನ್ನು ಮಾಡಿಯೇ ಮಾಡಿದ್ದಳು. ಆ ರೀತಿಯ ಅಪರಾಧಕ್ಕೆ ಇಬ್ಬರು ಹೊಣೆಗಾರರಾಗಬೇಕಿದ್ದರೂ, ಅಲಿಖಿತವಾದ ಆದರೆ ಸರ್ವಶಕ್ತವಾದ ಚೀನದ ನಿಯಮ ಅವಳೊಬ್ಬಳನ್ನೇ ತಪ್ಪುಗಾರಳನ್ನಾಗಿ ಮಾಡಿತ್ತು. ಮತ್ತು ಪ್ರತಿಯೊಬ್ಬ ಹಳ್ಳಿಗನಿಗೂ ಅವಳನ್ನು ಅವಮಾನ ಪಡಿಸಲು, ಬೈಯಲು, ಕೊಲ್ಲಲು ಕಡೆಗೆ ತನಗೆ ತೋರಿದಂತೆ ಮಾಡಲು ಅಧಿಕಾರ ಕೊಟ್ಟಿತ್ತು. ಆ ಹುಡಿಗಿಯ ಜೀವ ಉಳಿಯಬೇಕಾಗಿದ್ದರೆ, ಇಷ್ಟೊಂದು ವೆಚ್ಚದ ಊಟವಲ್ಲದೆ ಬೇರೆ ಯಾವ ಉಪಾಯವಿದೆ ? ಅದ-ರಲ್ಲಿಯೂ ವಿಶೇಷವಾಗಿ ಶ್ರೀಮಂತ ಚಿನ್, ವ್ಯಾಪಾರಿ 'ವೂ' ಮತ್ತು ಹಳ್ಳಿಯ ಹಿರಿಯ ಇವರ ದಯೆ ಕೇಳುವದು ಅವಶ್ಯವಾಗಿತ್ತು. ಅದರಿಂದ ತನಗೆ ಸಾವೇ ಗತಿ ಎಂದು ಗೊತ್ತಿದ್ದರೂ, ಅವಳು ಇದನ್ನು ಅನುಭವಿಸಲು ಸಿದ್ಧ-ಳಾಗಿದ್ದಳು.

ಎರಡು ದಿನಗಳ ಹಿಂದೆ ಅವಳು ತನ್ನ ಮಗನನ್ನು ಚಿನ್ನನೆಡೆಗೆ ಕಳಿ-ಸಿದ್ದಳು. ಅವನು ಅಡ್ಡಬಿದ್ದು ಕರುಣೆಯನ್ನು ಯಾಚಿಸಿ, ಮನೆಯ ಉಳಿದ ಭಾಗದ ಆಧಾರದ ಮೇಲೆ ಮೂವತ್ತು ಸಾವಿರ ಸಾಲ ಕೇಳಿದನು. ಆಮೇಲೆ ಆ ಹಣವನ್ನು ತೆಗೆದುಕೊಂಡು, ತಾಯಿಯ ಸೂಚನೆಗಳ ಪ್ರಕಾರ ಪೇಟೆಗೆ ಹೋಗಿ ಮೂವತ್ತು ಪೌಂಡು ಮಾಂಸ, ಇಪ್ಪತ್ತು ಪೌಂಡು ಮೀನ, ಒಂದು ಚೀಲ ಮೂಲಂಗಿ ಮತ್ತು ಕೆಲವು ಮಸಾಲೆಯ ಸಾಮಾನುಗಳನ್ನು

ತಂದಿದ್ದನು. ಹಿಂದಿನ ದಿನದ ನಸುಕಿನಿಂದ, ಅವಳು ಸ್ವಚ್ಛಮಾಡುವದು, ಅಡುಗೆ ಮಾಡುವದು, ಅಕ್ಕಿಯ ಮದ್ಯ ತಯಾರಿಸುವದು ಮೊದಲಾದ ಎಷ್ಟೋ ಕೆಲಸಗಳಲ್ಲಿ ನಿರತಳಾಗಿದ್ದಳು. ಹೀಗಾಗಿ ಅವಳಿಗೆ ಒಂದು ಕ್ಷಣವೂ ಬಿಡುವಿರಲಿಲ್ಲ.

ಅತಿಥಿಗಳು ಬಂದೊಡನೆ ಅವಳ ಕೆಲಸ ಮತ್ತಷ್ಟು ಹೆಚ್ಚಿತು. ಒಬ್ಬಳೇ ಬಿಟ್ಟೂ ಬಿಡದೆ ಕೆಲಸ ಮಾಡಿದಳು. ಎಲ್ಲ ತಟ್ಟೆಗಳನ್ನೂ ಅನ್ನದಿಂದ ತುಂಬಿದಳು; ತನ್ನ ದೇಹಪಾತ್ರೆಯನ್ನೇ ಬರಿದು ಮಾಡುವಂತಿದ್ದ ಬಿಸಿ ಮದ್ಯವನ್ನು ತುಂಬಿ ಕೊಟ್ಟಳು; ಇಷ್ಟಾದರೂ ನಗೆಮೊಗದಿಂದ ಕೆಲಸವನ್ನು ಸಂತೋಷದಿಂದ ಮಾಡುತ್ತಿರುವಂತೆ ತೋರಿಸಿದಳು.

" ಏ ಸುದೈವಿ ರೂಟ್ ! " ಯಾವನೋ ಒಬ್ಬ ಒದರಿದ: "ನೋಡು ಅನುಮಾನ ಮಾಡಬೇಡ. ಭಿಡೆ ಮಾಡಲಿಕ್ಕೆ ಇದೇನು ಔತಣದ ಊಟವಲ್ಲ. ನೀನೇನು ಕಡ ತೀರಿಸುವ ಹಾಗೂ ಇಲ್ಲ. ಚನ್ನಾಗಿ ಕುತ್ತಿಗೆಯತನಕ ತಿನ್ನು "

" ನೀನಂದದ್ದು ಸರಿ " ರೂಟನೆಂದ: " ಯಾಕೆ ಸಾವಕಾಶ ಮಾಡಬೇಕು ? ಈ ರೀತಿಯ ಪ್ರಸಂಗಗಳೇ ಅಪರೂಪ. ಚನ್ನಾಗಿ ಹೊಡೆದು ಬಿಡೋಣ. ನಿಜವಾಗಿ ಹೇಳಬೇಕೆಂದರೆ ಈ ಹುಡುಗಿ ಹಾ-ಓ ನಾಚಿಕೆಗೆಟ್ಟವಳು;ಆದರೂ ನೋಡಲಿಕ್ಕೆ ಚನ್ನಾಗಿದ್ದಾಳೆ. ಸುತ್ತಲಿನ ಎಷ್ಟು ಹುಡುಗಿಯರು ಅವಳಿಗೆ ಸರಿಯಾಗಬಹುದು ? ನಿಜವಾಗಿಯೂ ?...."

" ಹಾ-ಓನಂಥ ಹುಡುಗಿಯರು ಹೆಚ್ಚಾದಷ್ಟೂ ಇಂಥ ಊಟ ಹೆಚ್ಚು" ಮತ್ತೊಬ್ಬ ಒದರಿದ: " ಇನ್ನೂ ಇಂಥವರು ಹೆಚ್ಚಾಗಬೇಕೆಂದು ನನಗೆನಿಸುತ್ತದೆ. "

" ಅಯ್ಯೊ ! ಘಾ ಹೌದಲ್ಲೊ. ನಿನ್ನ ಸೊಕ್ಕು ಬಹಳ. ಯಾವಾಗಲೂ ದೆವ್ವನಂತೆ ಹೆಣ್ಣಿನ ಬೆನ್ನು ಹತ್ತುತ್ತಾನೆ. ಆದರೆ ಈ ಹುಡುಗಿಯ ವಿಷಯದಲ್ಲಿ ಕೈ ಹಾಕಬೇಡ. ನಿನ್ನ ಮುಖಬೆದುರಿಗೇ ಆ ಹುಡುಗಿ ಮತ್ತೊಬ್ಬನನ್ನು ವರಿಸುತ್ತಾಳೆ. ನೀನು ಹೀಗೇ ಕೂಡುವಿ. "

" ಫಾ, ಹಾ, ಹಾ, ಹಾ, ಹಾ "

" ಹೋ, ಫಾ ! ಏನು ? ಹಾ, ಹಾ "

ವ್ಯಾಂಗಳಿಗೆ ಈ ಭಾಷೆ ತಿಳಿದಂತೆ ಕಾಣಲಿಲ್ಲ. ಅವಳು ತನ್ನಷ್ಟಕ್ಕೆ ಕೆಲಸದಲ್ಲಿ ನಿರತಳಾಗಿದ್ದಳು. ಮುಖದಲ್ಲಿ ನಗೆ ಮಾತ್ರ ಮಾಯವಾಗಲಿಲ್ಲ. ಒಮ್ಮೆಯಾದರೂ ಹುಬ್ಬು ಗಂಟುಹಾಕಲಿಲ್ಲ. ಆದರೆ ಹಾ-ಓ ಅದನ್ನು ಕೇಳಿದಳು. ನಡುಗುತ್ತ ಮತ್ತಷ್ಟು ಗೋಡೆಗೆ ಸರಿದಳು. ಅವಳು ಅನುಭವಿಸುತ್ತಿದ್ದದ್ದು, ನಾಚಿಕೆಯೋ, ಹೆದರಿಕೆಯೋ, ಅಪಮಾನವೋ, ಅಥವಾ ದಾರುಣವ್ಯಥೆಯೋ ಅವಳಿಗೇ ತಿಳಿಯಲಿಲ್ಲ; ಬಂಡೆಗಲ್ಲಿನ ಬುಡಕ್ಕೆ ಸಿಕ್ಕಿದಂತಾಗಿತ್ತು ಅವಳಿಗೆ; ಮತ್ತು ·ಹೃದಯಕ್ಕೆ ಕಾದ ಕಬ್ಬಿಣದಿಂದ ಬರೆ ಕೊಟ್ಟಂತಾಗಿತ್ತು. ಕೆಲವು ದಿನಗಳ ಹಿಂದೆ ಧೈರ್ಯದಿಂದ ದೈವ ಕೊಟ್ಟದ್ದನ್ನು ಅನುಭವಿಸಲಿಕ್ಕೆ ಸಿದ್ಧಳಾಗಿದ್ದಳು; ಈಗ ಅವಳಿಗೆ ಉಳಿದದ್ದು ಕೇವಲ ಹಿಂದೆ ಹಿಂದೆ ಸರಿಯುವದು; ಕೇವಲ ಸರಿಯುವದು.

ತುಂಬ ತಲೆಗೂದಲುಳ್ಳ ಹಿರಿಯ ಕಡೆಗೆ ವಿಷಯಕ್ಕೆ ಬಂದ. " ನಿಜವಾಗಿ ಹೇಳಬೇಕೆಂದರೆ ಇವೇನು ಅಂಥ ಗಂಭೀರ ವಿಷಯವಲ್ಲ. ಬೆಳೆದ ಹುಡುಗಿ ಲಗ್ನವಾಗಬೇಕೆನ್ನುವದು ಸ್ವಾಭಾವಿಕ. ಆದರೆ ಯಾರಿಗೂ ತಿಳಿಯದೆ ಗುಪ್ತವಾಗಿ ಒಬ್ಬ ತರುಣನನ್ನು ಪ್ರೀತಿಸುವದೆಂದರೆ....ಆಚಾರ ವಿಚಾರ ಏನೂ ಇಲ್ಲದೆ ? ಯಾರು ಕ್ಷಮಿಸಬೇಕು ? "

" ಅದೇ ನಾನೆನ್ನುವದು " ವ್ಯಾಪಾರಿ 'ವೂ' ಹೇಳಿದ. " ವ್ಯಾಂಗ, ಪೂರ್ವಜನ್ಮದ ಪಾಪಗಳಿಗಾಗಿ ತಾಯಿಗೆ ಬಂದ ಪ್ರಾಯಶ್ಚಿತ್ತ ಇದು. ಇಂಥ ಮಗಳು, ಕೇವಲ ನಿನ್ನ ಮನೆತನಕ್ಕೇ ಕಲಂಕಪ್ರಾಯಳಲ್ಲ, ಆದರೆ ಇಡೀ ಟಾ-ಓ ಹಳ್ಳಿಗೇ ಕಲಂಕ. ಪುರಾತನ ಸಂಪ್ರದಾಯದ ಪ್ರಕಾರ ಇಂಥ ತಪ್ಪಿಗೆ ಸಾವೇ ತಕ್ಕ ಶಿಕ್ಷೆ. ಆ ಹುಡುಗಿ 'ಚ್ ೕ'ಗೆ ಏನಾಯಿತೆಂಬುದು ನೆನಪಿಲ್ಲವೇ ? ಅದು ನಡೆದದ್ದು ಎರಡು ಮೂರು ವರ್ಷಗಳ ಹಿಂದೆ; ಇದೆ ಕಲ್ಲುಬಾಗಿಲ ಹಳ್ಳಿಯಲ್ಲಿ ನಡೆದದ್ದು. ಅದೇ ತಪ್ಪಿಗಾಗಿ ಅವಳನ್ನು ಹೊಡೆದು ಕೊಂದರು. ಒಂದು ಕಾಫಿನ್ ಕೂಡ ಇಲ್ಲದೆ ಅವಳನ್ನು ಹುಗಿದದ್ದು ನೆನಪಿಲ್ಲವೇ? ಅದನ್ನು ಕ್ರೌರ್ಯವೆಂದು ಯಾರೂ ಹೇಳಲಾರರು. ಅದು ನ್ಯಾಯವಲ್ಲದೆ ಮತ್ತೇನಲ್ಲ.

ಒಳ್ಳೆಯ ನಡತೆಯ ನಿಯಮಗಳನ್ನು ಅವಳು ಮೀರಿದ್ದಳು. ಹೆಚ್ಚಿನದೆಂದರೆ ಇಂಥ ಹುಡುಗಿಯರು ಸತ್ತ ಮೇಲೂ, ತಮ್ಮ ಮನೆತನದ ಹೆಸರಿಗೆ ಕಲಂಕ ತರುತ್ತಾರೆ ಅವರ ಜೀವನವನ್ನು ಮುಗಿಸಿದರೆ ಪಾಪ ಕಳೆದಂತಾಗಲಿಲ್ಲ. ಇಷ್ಟೆ ಅಲ್ಲ, ಸಾವು ಆ ಹಾಸಿಯನ್ನು ಕೂಡ ತುಂಬಿಕೊಡಲಾರದು!"

"ನೀನು ಈಗ ಹೇಳಿದ್ದು ನಿಃಸಂಶಯವಾಗಿ ಸತ್ಯ. ಸಾವು ಪಾಪವನ್ನು ಮುಚ್ಚಲಾರದು. ಆದರೆ ಮಗಳಷ್ಟೇ ತಪ್ಪು ಮಾಡಿದವಳಲ್ಲ. ಶಿಕ್ಷಣ ಕೊಡದೆ ಸಡಿಲು ಬಿಟ್ಟದ್ದಕ್ಕೆ ತಾಯಿಯ ಪಾಲೂ ಪಾಪದಲ್ಲಿ ಇದೆ. ಅಥವಾ ತನ್ನ ಹಿಂದಿನ ಜನ್ಮಗಳಲ್ಲಿ ತಾಯಿಯೇ ಪೂರ್ಣ ನಿಷ್ಪಾಪಳಾಗಿರಲಿಕ್ಕಿಲ್ಲ. ವ್ಯಾಂಗ ಸ್ವಲ್ಪ ಕಾಳಜಿ ತೆಗೆದುಕೋ. ಈ ಜನ್ಮದಲ್ಲಿಯಾದರೂ ನಿನ್ನ ನಡತೆ ಹಿಡಿತದಲ್ಲಿರಲಿ."

ಇದನ್ನು ಮಾತಾಡಿದವನು ಹಳ್ಳಿಯ ಹಿರಿಯ. ಇದರಿಂದ ವ್ಯಾಂಗಳಿಗೆ ಸಿಟ್ಟು ಬರಲೇ ಇಲ್ಲ. ಬದಲಾಗಿ ಮಾತನಾಡಲು ಧೈರ್ಯ ಬಂತು ಸೀರೆಯ ಅಂಚಿನ ಮೇಲೆ ಕೈಯಾಡಿಸುತ್ತ ಹೆದರುತ್ತ ಮುಂದೆ ಬಂದಳು. ದುಃಖದಿಂದ ನಗುತ್ತ ಮೆಲ್ಲನ್ನ ದನಿಯಲ್ಲಿ ಮಾತನಾಡಿದಳು:

"ಹಾಗೇ ಆಗಲಿ ಪೂಜ್ಯರೇ. ಅದೇ ಸರಿ. ಅವಳು ತಪ್ಪು ಮಾಡಿದರೆ, ಅದಕ್ಕೆ ನಾನೇ ಕಾರಣ. ಹಿಂದಿನ ಜನ್ಮದಲ್ಲಿ ಯಾವ ಅಕ್ಷಮ್ಯ ಅಪರಾಧ ಮಾಡಿದ್ದೆನೋ ಗೊತ್ತಿಲ್ಲ. ಆದರೆ ನೀವು ಹೇಳಿದಂತೆ ಇರಲೇಬೇಕು. ಅವಳು ಮಾಡಿದ ತಪ್ಪಿಗೆ ತಕ್ಕ ಶಿಕ್ಷೆಯೆಂದರೆ ಮರಣವೇ, ಆದರೂ...." ಅವಳಿಗೆ ಒಮ್ಮೆಲೇ ಕಣ್ಣೀರು ಬಂದವು. "ಆದರೆ ನಾನು ಮಾತನಾಡಲಾರೆ....ನನಗೆ ಕೇಳಿಕೊಳ್ಳಲು ಮೋರೆಯಿಲ್ಲ....ಆದರೂ ದಯೆ ಇರಲಿ....ಅವಳ ಜೀವವನ್ನಾದರೂ ಉಳಿಸಿರಿ...." ಇದೊಂದು ದಿಟ್ಟತನದ ಅಸಾಮಾನ್ಯ ಬೇಡಿಕೆಯಾಗಿತ್ತು. ಹಳ್ಳಿಯ ಜನರು ಅವಳ ಮನೆಯಲ್ಲಿ ಊಟ ಮಾಡದೆ ಇದ್ದಿದ್ದರೆ ಅವಳು ಅಪಹಾಸ್ಯಕ್ಕೀಡಾಗಬಹುದಿತ್ತು. ನ್ಯಾಯ ನೀತಿಗಳನ್ನು ಅಕ್ಷರಶಃ ಮುಂದಿಯ ಮೇಲೆ ಹೇರುವದು ಅವರ ರೀತಿ. ಅಂಥವರಲ್ಲಿ ಯಾವ ಹುಡುಗಾಟವೂ ನಡೆಯಲಿಕ್ಕಿಲ್ಲ. ಆದರೂ ಅವರು ಅಲ್ಲಿ ಬಂದು ಸಂತೋಷದಿಂದ ಊಟ ಮಾಡಿದ್ದರು; ಕೆಲವರು ಔತಣವಿಲ್ಲದೇ ಬಂದಿದ್ದರು. ಆದ್ದರಿಂದ

ಹಾಗೆ ಕರಗದೆ ಇರಲು ಸಾಧ್ಯವಾಗಲಿಲ್ಲ. ಆದರೂ ಶ್ರೀಮಂತ 'ಚಿನ್', ವ್ಯಾಪಾರಿ 'ವೂ' ಮತ್ತು ಹಳ್ಳಿಯ ಹಿರಿಯ ಇವರ ಅಭಿಪ್ರಾಯದ ಮೇಲೆ ನಿರ್ಣಯ ಅವಲಂಬಿಸಿತ್ತು. ಕೊನೆಗೆ 'ಚಿನ್' ನಿರ್ಣಯವನ್ನು ಕೊಡುವ ವರೆಗೆ ಎಲ್ಲರೂ ಸುಮ್ಮನಿದ್ದರು.

" 'ವೂ' ಮಾತಾಡಿದ್ದು ಜಾಣತನದ್ದೆಂದು ನಾನು ಒಪ್ಪಿಕೊಳ್ಳುತ್ತೇನೆ. 'ಸಾವು ಪಾಪವನ್ನು ಮುಚ್ಚಲಾರದು.' ಆದ್ದರಿಂದಲೇ ಅವಳ ಸಾವಿನಿಂದ ಬರುವ ಲಾಭ ಸ್ವಲ್ಪವೇ. ತಪ್ಪನ್ನಂತೂ ಒಪ್ಪಿಕೊಂಡಿದ್ದಾಯಿತು. ವ್ಯಾಂಗ್ ದಯೆಗಾಗಿ ಬೇಡಿಕೊಂಡು ತನ್ನ ಗಂಡನ ಮಾನ ಉಳಿಸಬೇಕೆಂದು ಕೇಳಿ ಕೊಂಡಿದ್ದಾಳೆ. ತನ್ನ ಮಗಳ ಜೀವವನ್ನುಳಿಸಬೇಕೆಂದು ಅವಳ ಆಸೆ. ಅದನ್ನೂ ಮಾಡಬಹುದು. ಆದರೆ ಆ ನೀತಿಗೆಟ್ಟ ಹುಡುಗಿ ಹಳ್ಳಿಯ ಒಳ್ಳೆಯ ಹೆಸರನ್ನು ಕೆಡಿಸದಂತೆ ನೋಡಿಕೊಳ್ಳಬೇಕು. ಅವಳು ಒಮ್ಮೆಲೆ ಊರು ಬಿಟ್ಟು ಹೊರಡಬೇಕು!"

ಹಿರಿಯನ ಅಭಿಪ್ರಾಯವೂ ಇದೇ ರೀತಿಯಾಗಿತ್ತು. "ಆಗಿದ್ದು ಆಗಿಹೋಯಿತು. ಮರ್ಯಾದೆ ಹೋಗಿದ್ದರೂ, ಈಗ ಅವಳನ್ನು ಕೊಲ್ಲು ವದರಲ್ಲಿ ಅರ್ಥವಿಲ್ಲ. ನೀವು ಹೇಳಿದಂತೆ ಅವಳನ್ನು ಬಹಿಷ್ಕರಿಸಬೇಕು. ಅವಳು ಕೂಡಲೆ ಹೊರಡಬೇಕು."

ಇವರಿಬ್ಬರೂ ನಿರ್ಣಯ ವಿಧಿಸಿದ ಮೇಲೆ ಉಳಿದ ಅತಿಥಿಗಳು ತಾವು ಪಂಚರಂತೆ ತಿಳಿದುಕೊಂಡು, ತಮ್ಮ ನಾಲಗೆಯನ್ನು ಬಿಗಿ ಹಿಡಿದರು. ಆ ನಿರ್ಣಯ ಎಲ್ಲರಿಗೂ ಒಪ್ಪಿಗೆಯಾಯಿತು. ದಣಿದು ಬಾಡಿ ಹೋದ ವ್ಯಾಂಗಳ ಮುಖದಲ್ಲಿ ಒಮ್ಮೆಲೆ ನಗೆಯಾಡಿತು. ಅವಳು ಈ ಮೂರು ಪಂಡಿತರಿಗೆ ನಮಸ್ಕರಿಸಿ ಉಳಿದ ಪಂಚರಿಗೆ ಕೃತಜ್ಞತೆಗಳನ್ನು ಸಲ್ಲಿಸಿದಳು. ಕತ್ತಲೆಯಲ್ಲಿ ಹುದುಗಿಕೊಂಡಿದ್ದ ಹಾ-ಓ ಇದನ್ನು ಕೇಳಿದಳು. ಆದರೆ ಅವಳಿಗೆ ಆ ನಿರ್ಣಯದಿಂದ ಸಮಾಧಾನವಾಗಲಿಲ್ಲ. ಏನೋ ಒಂದು ಅದ್ಭುತವಾಗಿ ತನ್ನ ಜೀವ ತಿರುಗಿ ಬಂದಂತೆ ಅವಳಿಗನಿಸಿತು. ಆದರೆ ಸಾವು! ಅವಳನ್ನು ಹೆದರಿಸುತ್ತಿದ್ದಾಗ ಅದರ ಪೂರ್ಣ ಕಲ್ಪನೆ ಅವಳ ಎಳೆಮನಸ್ಸಿಗೆ ಹೊಳೆದಿರ ಲಿಲ್ಲ. ಆದರೆ ಹಳ್ಳಿಯನ್ನು ಬಿಟ್ಟು ಹೋಗುವದು, ತಾಯಿಯಿಂದ ಕೊನೆಯ

ವರೆಗೆ ಅಗಲಿಕೆ, ತಮ್ಮನಿಂದ ಚಿರವಿರಹ ಮತ್ತು ಎಲ್ಲಿಯೋ ಗೊತ್ತಾಗದ ಅನಿಶ್ಚಿತ ಭವಿತವ್ಯದಲ್ಲಿ ಬಾಳುವದು ಇವೆಲ್ಲ ಸಾವಿಗಿಂತ ಹೆಚ್ಚು ಭೀಕರ ವೆನಿಸಿತು. ದುಃಖ ಅವಳ ದೇಹವನ್ನು ನಡುಗಿಸಿತು; ಒಡೆಯಿತು. ಅದು ಆಮೇಲೆ ಪೂರ್ಣವಾಗಿರದಿದ್ದರೂ ಹೇಗೋ ಜೀವ ಅದರೊಳಗೆ ಕುಣಿ ಯುತ್ತಿತ್ತು.

(೨)

ಈ ಸಂಗತಿ ನಡೆದದ್ದು ಎರಡು ತಿಂಗಳ ಹಿಂದೆ. ಚೈತ್ರದ ಒಂದು ದಿನ. ವಾತಾವರಣದ ವೃದುತ್ವದಲ್ಲಿ ವಿಲಕ್ಷಣವಾದ ಆನಂದ ಮತ್ತು ಮದ ತುಂಬಿ ಕೊಂಡು, ಜನರನ್ನು ಮದ್ಯ ಕುಡಿದವರಂತೆ ಒಂದು ವಿಧವಾದ ಕನಸಿನ ಪ್ರಪಂಚದಲ್ಲಿ ತೇಲಿಸುತ್ತಿತ್ತು.

ಹಾ-ಓ, 'ಯು' ಹಳ್ಳಿಯಿಂದ ತಿರುಗಿ ಮನೆಗೆ ಹೋಗುತ್ತಿದ್ದಳು. ಅವಳಿಗೆ ಅಂಥ ಸುಂದರವಾದ ದಿನವನ್ನು ನೋಡಿಯೇ ಗೊತ್ತಿರಲಿಲ್ಲ. ಅವಳ ದೇಹದಲ್ಲಿ ಒಂದು ಬಗೆಯ ಕಾವು, ಒಂದು ನವೀನ ಉತ್ಸಾಹ, ಅದೇ ಅವಳು ಬಾಳಲು ಸುರುಮಾಡಿದ್ದಂತೆ, ಸಂಚರಿಸುತ್ತಿತ್ತು. ಬೀದಿಯ ಅಂಚಿ ಗಿದ್ದ ಹೊಲಗಳಲ್ಲಿ ಅರಿಸಿನ ಬಣ್ಣದ ಹೂಗಳು ಹಸಿರಿನಲ್ಲಿ ಅರಳಿದ್ದವು. ಗಿಡಗಳಿಗೆ ಹೊಸ ಜೀವನ ಬಂದಿತ್ತು. ಮತ್ತು ಅವುಗಳ ಟೊಂಗೆಗಳಲ್ಲಿ ಹೊಸ ಹಕ್ಕಿಗಳು ಹರುಷದಿಂದ ಹಾಡುತ್ತಿದ್ದವು. ಅವಳಿಗೆ ಗೊತ್ತಿದ್ದ ಇಡಿ ಜಗತ್ತು ಯೌವನ, ಹೊಸತನ, ಬೆಳವಣಿಗೆ, ಕುತೂಹಲಗಳಿಂದ ತುಂಬಿತ್ತು. ಅವಳ ಜೀವ ಪ್ರಕೃತಿಯೊಡನೆ ಸಮರಸವಾಗಿತ್ತು ಮತ್ತು ಅಷ್ಟೇ ಕುತೂಹಲ ದಿಂದ ತುಂಬಿತ್ತು. ಯಾತರ ಬಗ್ಗೆ ? ಅವಳಿಗೆ ಗೊತ್ತಾಗಲಿಲ್ಲ. ಆದರೆ ಅವಳ ಗಮನ ಮಂದವಾಯಿತು. ಯಾವುದೋ ಅಂತರ್ಗತ ಜ್ವಾಲೆಯಿಂದ ಅವಳ ಮುಖ ಪ್ರಕಾಶಮಾನವಾಗಿತ್ತು. ಒಮ್ಮೆಲೇ ಅವಳಿಗೆ ತನ್ನ ದೇಹದ ಅರಿವು ಬಂದಿತು. ದೇಹದಲ್ಲೆಲ್ಲ ಕಾವು, ರೋಮಾಂಚ ತುಂಬಿದ್ದು ಅವಳ ಬಟ್ಟೆಗೆ ತಗಲುತ್ತಿತ್ತು.

"ಹಾ-ಓ!" ಯಾರೋ ಅವಳನ್ನು ಕರೆದರು. ಅರ್ಧ ಬೆರಗಿನಿಂದ ಅರ್ಧ ಹೆದರಿಕೆಯಿಂದ ಅವಳು ತಡೆದಳು, ಅತ್ತ ಇತ್ತ, ಹೊಲಗಳಲ್ಲಿ,

ಪಾಯಿನ್ ಗಿಡಗಳ ತೋಪಿನಲ್ಲಿ, ಕಣಿವೆಯ ಹಾದಿಯಲ್ಲಿ ನೋಡಿದಳು. ಯಾರೂ ಕಾಣಲಿಲ್ಲ. ಅವಳ ನೆತ್ತಿಯ ಮೇಲೆ ಎರಡು ಹದ್ದುಗಳು ಸುತ್ತು ಹಾಕಿದವು. ಅವಳಿಗೆ ನಾಚಿಕೆಯಾಗಿ ಮುಖ ಸವರಿಕೊಂಡು ಮುಂದೆ ನಡೆದಳು.

"ಹಾ-ಓ!" ಮತ್ತೆ ಯಾರೋ ಕರೆದರು. ಈ ಸಲ ತೀರ ಹತ್ತಿರ ದಿಂದ. ಅವಳಿಗೆ ತಿಳಿಯದಂತಾಗಿ, ತಡೆದು, ಯಾರೂ ಕಾಣದಾಗಲು ಮುಂದೆ ಹೋಗುವವಳಿದ್ದಳು. ಮತ್ತೆ ಯಾರೋ ಕರೆದರು. ಈ ಸಲ ಮತ್ತೂ ಸಮೀಪದಲ್ಲಿ.

"ಹಾ-ಓ, ನಾನು."

ಒಮ್ಮೆಲೇ ತಿರುಗಿ ನಿಂತು, ಹಸಿರು ಕಂಟಿಗಳೊಳಗಿಂದ ಹಾದು ಬರುವ ಒಂದು ತಲೆಯನ್ನು ನೋಡಿದಳು. ಆಮೇಲೆ ಮೆಲ್ಲಗೆ, ನಿಲುವಂಗಿ ಧರಿಸಿದ್ದ ಒಬ್ಬ ತರುಣ ಮುಂದೆ ಬಂದು ನಿಂತ. ಅವನು ಸುಂದರವಾದ ಕೆಂಪು ಬಿರಡಿಗಳ ಟೊಪ್ಪಿಗೆಯನ್ನು ಧರಿಸಿದ್ದ. ಅವನಿಗೆ ಇಪ್ಪತ್ತು ವರ್ಷಗಳಾಗಿರ ಬಹುದು. ನೋಡಲಿಕ್ಕೆ ಸುಂದರನಾಗಿದ್ದ. ಅಲ್ಲದೆ ಅವನ ಮುಖದ ಮೇಲೆ ಸಂತೋಷದ ನಗೆಯಿತ್ತು. ಹಾ-ಓ ಅವನ ಗುರುತು ಹಿಡಿದಳು. ನೆರೆಹಳ್ಳಿಯಲ್ಲಿಯ ಒಬ್ಬ ಅಂಗಡಿಕಾರನ ಮಗ. ಅವನ ಹೆಸರು ಹಾ-ಶಿಯನ್.

"ಅಯ್ಯೋ ನೀನೇ!" ಹಾ-ಓ ನುಡಿದಳು. "ನನ್ನನ್ನು ನಾಯಿಯು ವಂತೆ ಹೆದರಿಸಿದೆ. ಎಲ್ಲಿಂದ ಬಂದೆ?"

ಮೇಲಾಗಿ ಅವನು ಅಲ್ಲಿ ಬಂದದ್ದರಿಂದ ಅವಳಿಗೆ ಸಮಾಧಾನ ವಾಗಿತ್ತು.

'ನಾನೇ?' ಅವನು ಕೇಳಿದ. "ನಾನು ಪಟ್ಟಣದಿಂದ ತಿರುಗಿ ಬರು ತ್ತಿದ್ದೆ. ಆಗ ನಿನ್ನನ್ನು ನೋಡಿ, ಸ್ವಲ್ಪ ಚೇಷ್ಟೆಗಾಗಿ ಇಲ್ಲಿ ಅಡಗಿಕೊಂಡಿದ್ದೆ."

"ನಿನಗೆ ನಾಚಿಕೆ ಇಲ್ಲ" ಅವನನ್ನು ಹೊಡೆಯುವವಳಂತೆ ಕೈಯೆತ್ತಿ ಹುರುಪಿನಿಂದ ಚೀರಿದಳು. "ನಾಯಿಯುವಂತೆ ಹೆದರಿಸಬೇಕೇ?"

"ತಪ್ಪಾಯಿತು. ನಿಜವಾಗಿಯೂ ನಿನ್ನೊಡನೆ ಸ್ವಲ್ಪ ಮಹತ್ವದ ವಿಷಯವನ್ನು ಚರ್ಚಿಸಬೇಕಾಗಿದೆ."

"ಏನು ಹೇಳು ನೋಡೋಣ?"

ಆದರೆ ಒಮ್ಮೆಲೇ ಆ ತರುಣ ಹೆದರಿದ. "ನಾ-ನಾ-ನಾ" ಎಂದು ತೊದಲುತ್ತ ಅವಳ ಕೈ ಓಡಿದ.

"ಏನಿದು ?" ಹಾ-ಓ ಕೊಸರಿಕೊಂಡು ಹಿಂದೆ ಸರಿದಳು. ಆದರೆ ಅದೇಕೋ ಅವಳ ಕಾಲುಗಳು ಹಿಂದೆ ಹೋಗಲು ಒಪ್ಪಲಿಲ್ಲ. ಅವಳ ದೇಹ ಆಘಾತ ಸ್ವೀಕರಿಸಿದಂತೆ ನಡುಗಿತು. ಮತ್ತೆ ಅದರಲ್ಲಿ ವಿದ್ಯುತ್ ಸಂಚಾರ ವಾಗಿತ್ತು. ಎಲ್ಲ ಶಕ್ತಿಯೂ ಉಡುಗಿಹೋದಂತೆನಿಸಿತು. ಅವನು ತನ್ನ ತೋಳುಗಳಿಂದ ಬಳಸಿ, ತನ್ನೆಡೆಗೆ ತಬ್ಬಿಕೊಂಡು, ಅರಣ್ಯದಲ್ಲಿ ಕರೆ ದೊಯ್ದನು. ಅವಳಿಗೆ ವಿರೋಧಿಸುವ ಶಕ್ತಿ ಇರಲಿಲ್ಲ. ಎಂದಿನಂತೆ ಅವಳ ಮನಸ್ಥಿತಿ ಇರಲಿಲ್ಲ. ಮುಂದೆ ನಡೆಯುತ್ತಿದುದ್ದರ ಅರಿವು ಅವಳಿಗಿರಲಿಲ್ಲ. ಅವಳು ಮಾತನಾಡಲಿಲ್ಲ. ಪುನಸ್ಸು ಹಕ್ಕಿಯಂತೆ ಹಗುರಾಗಿ ಹರ್ಷದಲ್ಲಿ ತ್ತು ಎಂಬುದಷ್ಟೇ ಅವಳಿಗೆ ಗೊತ್ತು.

ಇಬ್ಬರೂ ಒಂದು ಗಿಡದ ಹರಿಯ ಕಳಗೆ ಕುಳಿತರು. ಅವಳ ತಲೆ ಅವನ ತೋಳಿಗೊರಗಿತ್ತು. ಕಣ್ಣು ಮುಚ್ಚಿದ್ದವು; ಉಸಿರು ವೇಗವಾಗಿ ಹೊರಡುತ್ತಿತ್ತು. ಎದೆಯ ಮೇಲೆ ಅವನ ಕೈ ಮೆಲ್ಲಗೆ ಆಡುತ್ತಿತ್ತು. ಅಲ್ಲಿ ಅವಳ ಹೃದಯ ಬಡಿದುಕೊಳ್ಳುತ್ತಿತ್ತು. ಅವನ ತುಟಿಗಳು ಅವಳ ತುಟಿಗಳ ಹತ್ತಿರ ಬಂದವು. ಅಪೂರ್ವವಾದ ಒಂದು ಜ್ವಾಲೆ ಅವಳ ಮೈಯಲ್ಲಿ ಸಂಚರಿಸಿತು.

"ಕಾ-ಕಾ-ಕಾ ...."

ಮೇಲೆ ತಿರುಗುತ್ತಿದ್ದ ಒಂದು ಸಂಬಾರಕಾಗೆ ಅವಳನ್ನು ಹೆದರಿಸಿತು. ಒಂದು ಕ್ಷಣ ಜಗತ್ತಿನ ಅರಿವನ್ನು ಅದು ತಂದುಕೊಟ್ಟಿತು. ಅವಳು ನಡುಗಿದಳು.

"ಹಾ-ಶಿಯನ್ ! ಬೇಡ ಬೇಡ, ದಯವಿಟ್ಟು ಬೇಡ. ತಾಯಿ ನನ್ನನ್ನು ಸಾಯುವ ಹಾಗೆ ಬಡಿಯುವಳು."

"ಇಲ್ಲ! ನೀನೇನೂ ಚಿಂತೆ ಮಾಡಬೇಡ. ನನ್ನಲ್ಲಿ ನಂಬಿಕೆ ಇಡು. ಪ್ರತಿಯೊಂದೂ ಅದ್ಭುತವಾಗುವದು. ಹೀಗೆಯೇ...."

ಅವನ ದನಿಯೂ ನಡುಗಿತು. ವಿಚಿತ್ರವಾದ ಅದರ ತೆರೆಗಳು, ಅವು-ಗಳಲ್ಲಿದ್ದ ಕರೆ, ಇವೆಲ್ಲ ಅವಳನ್ನು ಪೂರ್ಣವಾಗಿ ಸೆರೆಹಿಡಿದವು. ಅವಳ

ತೋಳು, ಮುಖ, ಕೊರಳುಗಳನ್ನು ಅಪ್ಪಿಕೊಂಡನು. ಅವಳಿಗೆ ವಿರೋಧಿಸ ಲಾಗಲಿಲ್ಲ.

(೩)

" ನಿನಗೆ ಏನಾಗಿದೆ ಹಾ-ಓ ? " ವ್ಯಾಂಗಳು ಮಗಳು ಗೊಂದಲಗೆಟ್ಟು ಮನೆಗೆ ತಿರುಗಿದಾಗ ಕೇಳಿದಳು. " ಜ್ವರವೇ ? " ಮುಂಗುರುಳು ಆಡುತ್ತಿದ್ದ ಹಣೆಯನ್ನು ಮುಟ್ಟಿದಳು.

" ಚಳಿಯಲ್ಲಿ ತಿರುಗಾಡಿದಿ ಏನು ? "

" ಏನಿಲ್ಲ. ನನಗೆ ನನಗೆ....ಆರಾಮ ಎನಿಸುವದಿಲ್ಲ ಅಷ್ಟೇ ! " ಹಾ-ಓ ಸಾಧಾರಣ ತನ್ನಷ್ಟಕ್ಕೆ ತಾನೇ ಮಾತನಾಡಿದಳು. ಹಾಸಿಗೆಯಲ್ಲಿ ಹೋಗಿ ಮಲಗಿಕೊಂಡಳು. ಬಹಳ ಹೊತ್ತು ಮೌನವಾಗಿಯೇ ಇದ್ದಳು. ಮುಂದೆ ಬರಬಹುದಾದ ಗಂಡಾಂತರಗಳು, ಸಂಕಟಗಳು ಅವಳಿಗೆ ಗೊತ್ತಿದ್ದವು. ಆದರೆ ಹಾ-ಶಿಯನ್ ಮತ್ತೆ ಭೆಟ್ಟಿಯಾಗುವೆನೆಂದು ಹೇಳಿದ್ದರಿಂದ ಅವಳು ಸುಮ್ಮನಿದ್ದಳು.

ಏನಾದರೂ ಭಯಂಕರವಾಗಬಹುದೆಂದು ಅವಳು ಹೆದರಿದ್ದಳು. ಆದರೆ ಅದಕ್ಕೆ ಸಿದ್ಧಳಾಗಿಯೇ ಇದ್ದಳು. ಪ್ರತಿಸಲ ಇಬ್ಬರೂ ಕೂಡಿದಾಗ ತಮ್ಮ ತಪ್ಪು ಬೈಲಿಗೆ ಬರಬಹುದೆಂದು ತಿಳಿದಿದ್ದಳು. ಆದರೆ ಒಮ್ಮೆಯೂ ಬಾರದಿರಲು ಅವಳಿಗೆ ಅಚ್ಚರಿಯಾಗಿತ್ತು, ತನ್ನ ಪ್ರಣಯುಸಮರ್ಥನೆ ಮಾಡಿಕೊಳ್ಳಬಹುದೆಂದೂ, ಶಿಕ್ಷೆಯನ್ನು ಅನುಭವಿಸಬಹುದೆಂದೂ ತಿಳಿದಿದ್ದಳು. ಅವನಿಗೆ ಅವಮಾನವಾಗುವ ಪ್ರಸಂಗ ಬಂದರೆ ಅಭಿಮಾನದಿಂದ ಅವನ ಹತ್ತಿರ ನಿಂತು, ಅವನ ದೈವಕ್ಕೆ ಬಂದದ್ದೆಲ್ಲವನ್ನೂ ಅನುಭವಿಸುವಂತೆ ಕಲ್ಪಿಸಿಕೊಂಡಿದ್ದಳು. ಕೊನೆಗೆ ಅವಳು ಹೆದರಿದಂತೆಯೇ ಆಯಿತು, ಆದರೆ ಪರಿಣಾಮ ಮಾತ್ರ ಅವಳ ರಮ್ಯಕಲ್ಪನೆಗೆ ವಿರುದ್ಧವಾಗಿತ್ತು. ವ್ಯಾಂಗಳು ಹಳ್ಳಿಗರಿಗೆ ಒಳ್ಳೆಯ ಭೋಜನ ಹಾಕಿಸಿದ ದಿನಕ್ಕೆ ಮೂರು ದಿನ ಹಿಂದೆ.

ಕೆಂಪು ಪರ್ವತದ ಹಿಂದೆ ಒಂದು ಸಣ್ಣ ಗುಡ್ಡವಿತ್ತು. ಅದರ ಹೆಸರು ಯಾರ ನೆನಪಿನಲ್ಲಿಯೂ ಇರಲಿಲ್ಲ. ಅದರ ಹತ್ತಿರವೇ ಗಿಡಗಳ ಗುಂಪಿನಲ್ಲಿ ಪರ್ವತ ದೇವತೆಯ ಸಣ್ಣ ಗುಡಿ ಇತ್ತು. ಆದರೆ ಯಾರೂ ಅಲ್ಲಿ ಹೋಗು

ತ್ತಿರಲಿಲ್ಲ. ಆಗಾಗ ಕಲ್ಲುಬಾಗಿಲ ಹಳ್ಳಿಯಿಂದ ಬರುವ ಜನರು ಸಮೀಪದ ಹಾದಿ ಎಂದು ಅಲ್ಲಿ ಬರುತ್ತಿದ್ದರು. ಸುತ್ತಲಿನ ಕಾಡುಗಳು ಒಬ್ಬ ಶ್ರೀಮಂತ ಜಮೀನದಾರನ ವಶದಲ್ಲಿದ್ದವು. ಯಾರೂ ಅವುಗಳಲ್ಲಿ ಹಾದು ಹೋಗುವ ಧೈರ್ಯ ಮಾಡುತ್ತಿರಲಿಲ್ಲ. ಸುತ್ತಲೂ ಸ್ಮಶಾನ ಶಾಂತಿಯಿತ್ತು. ಆದರೆ ತರುಣ ಪ್ರಣಯಿಗಳಿಗೆ ಅದು ಒಳ್ಳೆಯ ಸ್ಥಾನವಾಗಿತ್ತು.

ಆ ದಿನ, ಹುಳುಕು ಮೋರೆಯ ಕಟ್ಟಿಗೆ ಕಡಿಯುವ, ಲಾ:ಟಿ, ಕಟ್ಟಿಗೆ ಕಡಿಯಲು ಅಡವಿ ಹೊಕ್ಕ. ಎಲ್ಲ ಕಟ್ಟಿಗೆಗಳನ್ನು ಆರಿಸಿ ಹೊರೆ ಕಟ್ಟಿದ. ಆಗ ಮುಳುಗುವ ಸೂರ್ಯನ ಹೊಂಗಿರಣಗಳು ಗುಡಿಯ ಹಿಂದಿನ ಗೋಡೆ ಯನ್ನು ಕೆಂಪಾಗಿಸಿದ್ದವು. ಆ ದೃಶ್ಯ ಅವನನ್ನು ಮೋಹಿಸಿತು. ಹೆಗಲ ಮೇಲಿನ ಹೊರೆಯನ್ನು ಜಗಲಿಯ ಮೇಲಿಳಿಸಿ, ನಿಟ್ಟುಸಿರು ಬಿಟ್ಟು ಚಿಲುಮೆ ಹೊತ್ತಿಸಿದ. ಶೂನ್ಯವಾಗಿ ಸುತ್ತಲೂ ನೋಡಿದ.

ಏನೋ ದನಿ ಕೇಳಿರಬೇಕು. ಚಿಲುಮೆಯನ್ನು ನಡುವಿನೊಳಗೆ ತುರುಕಿ ಕೊಡಲಿಯನ್ನು ತೆಗೆದುಕೊಂಡು, ಯಾವ ಕಾಡು ಪ್ರಾಣಿ ಬಂದರೂ ಬಡಿ ದಾಡಲು ಸಿದ್ಧನಾಗಿ ನಿಂತ. ನಿರೀಕ್ಷೆ ತುಂಬಿ ಕೆಲವು ಕ್ಷಣ ಕಾಯುತ್ತ ನಿಂತ. ಓಡಿ ಹೋಗಬೇಕೆಂದು ಮನಸ್ಸಾಯಿತು; ಆದರೆ ಮತ್ತೊಮ್ಮೆ ವಿಚಾರ ಮಾಡಿ,ತಪ್ಪಿನಿಂದಲೇ ತಪ್ಪು ಮುಚ್ಚಬೇಕೆಂದು ತಿಳಿದುಕೊಂಡ. ಒಂದು ದೊಡ್ಡ ಕಲ್ಲನ್ನು ಆರಿಸಿ, ತನ್ನ ಶಕ್ತಿಯನ್ನೆಲ್ಲ ವೆಚ್ಚಮಾಡಿ ಕಾಡಿನೆಡೆಗೆ ತೂರಿದ.

ಆದರೆ ಗಿಡಗಳ ಗುಂಪಿನಿಂದ ಕಾಡು ಪ್ರಾಣಿಗಳ ಬದಲಾಗಿ ಮನು ಷ್ಯನು ಬಂದದ್ದು ಅವನಿಗೆ ಆಶ್ಚರ್ಯವೆನಿಸಿತು. ಬಂದವನು ನಿಲ್ಲಲೂ ಇಲ್ಲ, ಲಾ:ಟಿ 'ನ ಕಡೆಗೆ ನೋಡಲೂ ಇಲ್ಲ. ದೆವ್ವನಂತೆ ಮರೆಯಾದ. ಆದರೆ ಅವನು ಹಾ-ಶಿಯಾನ್ ಎಂದು 'ಲಾ:ಟಿ' ನಿಗೆ ಗೊತ್ತಾಯಿತು. ಸ್ವಲ್ಪ ಚಕಿತನಾಗಿ ಅವನು ಹೋದ ದಿಕ್ಕಿಗೇ ನಡೆದ.

ಒಂದು ಕ್ಷಣದಲ್ಲಿ ಹಾ-ಓ ಅವನ ಕಣ್ಣಿಗೆ ಬಿದ್ದಳು. ಆಲಸ್ಯದಿಂದ ಮಲಗಿದ್ದಳು; ಉಟ್ಟ ವಸನ ಸಡಿಲಾಗಿತ್ತು; ಕೂದಲ ಮೇಲೆ ಹಸಿರೆಲೆಗಳು ಬಿದ್ದಿದ್ದವು. ಮುಖದ ಮೇಲೆ ಉದಾಸೀನ ಭಾವವಿತ್ತು. ಆ ದೃಶ್ಯ 'ಲಾ:ಟಿ'ನ ಮನಸ್ಸಿನಲ್ಲಿ ಉರಿಯೆಬ್ಬಿಸಿತು. ಅವನು ತಿರಸ್ಕಾರದಿಂದ ನಡುಗಿದ. ಕಣ್ಣು

ಅಗಲವಾಗಿ ತೆರೆದು ನೋಡಿದ. ಆಮೇಲೆ ಕೆಳಗೆ ಬಾಗಿ ಅವಳಿಗೆ ಒಂದು ಬಿಗಿದ.

" ಹಾ ಹಾ-ಓ ! ದೆವ್ವ ! ಎಂಥ ಒಳ್ಳೆಯ ಕೆಲಸ ಮಾಡಿದೆ ! "

ಅವಳು ಮಾತನಾಡಲಿಲ್ಲ. ಆದರೆ ದಯೆಯನ್ನು ಯಾಚಿಸುವ ಕಣ್ಣುಗಳಿಂದ ಅವನನ್ನು ನೋಡಿದಳು.

'' ನಾಚಿಕೆ ಇಲ್ಲದವಳೇ ! ಗುಟ್ಟಾಗಿ ಅವನೊಡನೆ ಮಲಗಲಿಕ್ಕೆ ಬಂದಿದ್ದೀಯಲ್ಲ ! '' ನಿರ್ದಯನಾಗಿ ಅವಳನ್ನು ಹೊಡೆದ.

ಈ ದೃಶ್ಯ ಆಮೇಲಿನ ' ಲಾ:ಟೀ 'ನ ಬೈಗಳು ಇವೆಲ್ಲ ಹಾ-ಓಳ ಮನಸ್ಸಿನಲ್ಲಿ ಅಸ್ಪಷ್ಟವಾಗಿಯೇ ಉಳಿದವು. ಅವನು ತನ್ನನ್ನು ಅದೇ ಅಪಮಾನದಲ್ಲಿ ಹೇಗೆ ಕರೆದುಕೊಂಡು ಹೋದ, ಕ್ಷಣದಲ್ಲಿಯೇ ತನ್ನ ಪ್ರಣಯವಾರ್ತೆ ಊರಲ್ಲಿ ಹೇಗೆ ಹಬ್ಬಿತು ಎಂಬುದು ಅವಳಿಗೆ ಗೊತ್ತೇ ಇಲ್ಲ. ಆಮೇಲೆ ಅವಳು ನೋಡಿದ ಎಲ್ಲ ಕಣ್ಣುಗಳಲ್ಲಿಯೂ ಸಿಟ್ಟು ಬೆಂಕಿಯಾಗಿತ್ತು. ದ್ವೇಷದಿಂದ ಹೊಳೆಯುತ್ತಿದ್ದ ಕಣ್ಣುಗಳವು. ಅವಳ ತಾಯಿ ಕೂಡ ಅವಳನ್ನು ಸಿಟ್ಟಿನಿಂದ ದ್ವೇಷದಿಂದ ನೋಡಿದಳು. ಆದರೆ ಆ ಕಣ್ಣುಗಳ ಆಳದಲ್ಲಿ ತೀವ್ರ ವೇದನೆಯಿತ್ತು. ಅದು ಅವಳನ್ನು ತೊಂದರೆಗೊಳಿಸಿತು. ಬಿದಿರುಗಳಗಳ ಹೊಡೆತ, ಬೇರೆ ಬೇರೆ ಕೈಗಳ ಹೊಡೆತ, ತೂರಿಬಂದ ಶಾಪಗಳು, ಇವುಗಳಲ್ಲಿ ಒಂದೂ ಅವಳಿಗೆ ನೋವನ್ನಾಗಲಿ ನಾಚಿಕೆಯನ್ನಾಗಲಿ ಉಂಟುಮಾಡಲಿಲ್ಲ.

ಅವಳು ಇದೆಲ್ಲವನ್ನೂ ನಿರೀಕ್ಷಿಸಿದ್ದಳು. ಮತ್ತು ಹಾಗೆಯೇ ಆಯಿತು. ಅದೇನು ಚಮತ್ಕಾರವಾಗಿರಲಿಲ್ಲ. ದೈವ ಮಾಡಿದಂತೆ ಅನುಭೋಗಿಸಲು ಸಿದ್ಧಳಾಗಿಯೇ ಇದ್ದಳು. ಆದರೆ ಅವಳ ಊಹೆಗೆ ವಿರುದ್ಧವಾಗಿದ್ದ ಒಂದೇ ಒಂದು ಸಂಗತಿ ಅವಳನ್ನು ಗಾಸಿಗೊಳಿಸಿತು. ಅವಳ ಪ್ರಣಯಿಗೆ ಅವಳ ಪರಿಣಾಮದಲ್ಲಿ ಒಂದೂ ಆಗಲಿಲ್ಲ. ಅವನು ಇವಳಲ್ಲಿ ಪ್ರಿತಿಯನ್ನೂ ತೆಗೆದುಬಿಟ್ಟ.

(೪)

ಆ ಮೂರು ದಿನಗಳೂ ಕನಸಿನಂತೆ ಕಳೆದುಹೋದುವು. ಈಗ ಊರಿನ ಪಂಡಿತರೆಲ್ಲ ನಿರ್ಣಯವನ್ನು ಕೊಟ್ಟಿದ್ದರು. ಸಾಯಬೇಕೆಂದಲ್ಲ; ನಿಜ, ಈ

ನಿರ್ಣಯ ಅವಳಿಗೆ ಸ್ವಲ್ಪ ಸಮಾಧಾನವನ್ನು ಕೊಟ್ಟಿತು. ಆದರೂ ಅವಳಿಗೆ ಆನಂದವಾಗಲಿಲ್ಲ. ಮುದುಕಿಯಾದಂತೆ, ದಣಿದಂತೆ ಅವಳಿಗನಿಸಿತು. ಅವಳ ಬಗ್ಗೆ ಮಾತಾಡಿದ್ದು, ವರ್ತಿಸಿದ್ದು ಅಥವಾ ಅವಳ ತಾಯ ಕಣ್ಣುಗಳಲ್ಲಿಯ ತೀವ್ರ ವ್ಯಥೆ ಇವಾವೂ ಅವಳಿಗೆ ದುಃಖ ಕೊಡಲಿಲ್ಲ. ಆದರೆ ತನ್ನ ಪ್ರಣಯಿಯ ಹೊಣೆಯಿಲ್ಲದ ಹೇಡಿ ನಡತೆಯಿಂದ ಅವಳ ಮನಸ್ಸು ಸಂಪೂರ್ಣವಾಗಿ ನುಚ್ಚುನುಚ್ಚಾಯಿತು.

ಗಂಡಸರ ಊಟ ಮುಗಿಯುವ ಮೊದಲೇ, ಅವರಿನ್ನೂ ಮದ್ಯದ ಕೊನೆಯ ಗುಟುಕು ತೆಗೆದುಕೊಳ್ಳುತ್ತಿರುವಾಗಲೇ ಹೆಣ್ಣುಮಕ್ಕಳು ಬರಲಾರಂಭಿಸಿದರು. ಹಾ-ಓ ಹೆಚ್ಚಾಗಿ ಗೋಡೆಗೆ ಸರಿಯುತ್ತಿದ್ದಳು. ಅವಳಿಗೂ ಹಸಿವೆಯಾಗಿತ್ತು. ಅವಳು ನಡುಗುತ್ತಿದ್ದಳು. ಚಳಿಯಿಂದಾಗಲಿ ಸಾವಿನ ಹೆದರಿಕೆಯಿಂದಾಗಲಿ ಅಲ್ಲ. ಹೆಸರಿಲ್ಲದ ಯಾವುದೋ ಒಂದು ದುಃಖ ಅವಳನ್ನು ಕಾಡುತ್ತಿತ್ತು. ಗಂಡಸರಿಗಿಂತ ಹೆಣ್ಣುಮಕ್ಕಳೇನು ಕಡಿಮೆ ಉಣ್ಣಲಿಲ್ಲ. ಅವರೆಲ್ಲರ ಊಟ ಮುಗಿಯುವ ಹೊತ್ತಿಗೆ ರಾತ್ರಿಯಾಗಿತ್ತು. ಒಬ್ಬೊಬ್ಬರಾಗಿ ಮನೆಗೆ ತೆರಳಿದರು. ಗಂಡಸರಂತೆಯೇ ಅವರೂ, ನಿರ್ದಯದಿಂದ ತಾಯಿ ಮಗಳನ್ನು ಇರಿಯುವ ಚುಚ್ಚು-ಮಾತುಗಳನ್ನು ಆಡಿದರು.

ಹಾಶಿಯನ್‌ನ ತಾಯಿ ಮಿಸೆಸ್ 'ಲೀ' ಅನಿರೀಕ್ಷಿತವಾಗಿ ಊಟಕ್ಕೆ ಬಂದಾಗ ನಾಟಕಕ್ಕೆ ಕಳೆಯೇರಿತು. ಅವಳು ಬಂದದ್ದು ತನ್ನ ಮಗ ಮಾಡಿದ ತಪ್ಪಿಗಾಗಿ ಕ್ಷಮೆ ಕೇಳಿಕೊಳ್ಳಲಿಕ್ಕಲ್ಲ. ಆದರೆ ವ್ಯಾಂಗಳು ತನ್ನ ಮಗಳನ್ನು ಹಾಗೆ ಬಿಟ್ಟು ತನ್ನ ಮಗನನ್ನು ಬಲಿಗೆ ಹಾಕಿಕೊಂಡದ್ದಕ್ಕಾಗಿ ಅವಳನ್ನು ಶಪಿಸಲಿಕ್ಕೆ ಬಂದಿದ್ದಳು. ಮನೆಯನ್ನು ಪ್ರವೇಶಿಸುವ ಮೊದಲೇ ಬೈಯಲಿಕ್ಕೆ ಆರಂಭಿಸಿದ್ದಳು. ವ್ಯಾಂಗಳು ಅವಳ ಸ್ಥೂಲಕಾಯ ಅಂಗಳದಲ್ಲಿರುವಾಗಲೇ, ಹುದುಗಿಕೊಂಡು ಭೆಟ್ಟಿಯಾಗಲು ಹೋದಳು. ಹಳ್ಳದ ಮೇಲೆ ಕಮಾನಿನಂತಿದ್ದ ಕಲ್ಲಿನ ಸೇತುವೆಗೆ ಆತು ನಿಂತಿದ್ದ ಮಿಸೆಸ್ 'ಲೀ' ಒಮ್ಮೆಲೆ ವ್ಯಾಂಗಳ ಬಾಗಿಲಿಗೆ ನುಗ್ಗಿದಳು. ಕೂಡಲೇ ದುಃಖಿತಳಾದ ತಾಯಿಯನ್ನು ನೋಡಿ, ಸ್ವಲ್ಪ ಹಿಂದೆ ಸರಿದು ಶಪಿಸಲು ಸುರು ಮಾಡಿದಳು:

"ಸುಟ್ಟ ಹೆಣ್ಣುಮಗಳು ! ಅಂಥ ಮಗಳಿದ್ದಲ್ಲಿ ಇಂಥ ತಾಯಿ ಇರಲೇ

ಬೇಕು. ಅದೂ ನನ್ನನ್ನು ಕಾಣಲು ಧೈರ್ಯ ಬಂತೇ ನಿನಗೆ? ನನ್ನ ಮಗ ಪರಿಶುದ್ಧ ಒಳ್ಳೆಯ ನಡತೆಯವ. ಕಾನ್‌ಫ್ಯೂಸಿಯಸ್‌ನ ಮೂರ್ತಿಯ ಎದುರು ಆಣೆ ಮಾಡಿದ್ದಾನೆ. ಆ ಮಹಾಪುರುಷನ ತತ್ವಗಳನ್ನು ತಿಳಿದುಕೊಂಡಿದ್ದಾನೆ. ಆದರೂ ನಾಚಿಕೆಯಿಲ್ಲದ ತಾಯಿ, ನೀತಿಗೆಟ್ಟ ಮಗಳು ಕೂಡಿ ಅವನನ್ನು ಕೆಡಿಸಲು ಪ್ರಯತ್ನ ಮಾಡಿದ್ದೀರಿ. ನಿನ್ನನ್ನು ಕೊಂದೇ ಸಾಯಬೇಕೆಂದು ಪ್ರತಿಜ್ಞೆ ಮಾಡಿದ್ದೇನೆ."

ಹೀಗೆ ಹೇಳುತ್ತ ವ್ಯಾಂಗಳ ಹತ್ತಿರ ನುಗ್ಗಿ, ಅವಳ ತಲೆ ಒಡೆದುಬಿಡಬೇಕೆಂದೇ ಬಂದಳು. ಉಳಿದ ಹೆಣ್ಣುಮಕ್ಕಳೂ ಓಡಿ ಬಂದು ಸುತ್ತುಗಟ್ಟಿ (ಅವರಿಗೂ ಒಳಗೊಳಗೇ ತೃಪ್ತಿಯಾಗಿತ್ತು.) ಸಮಾಧಾನ ಮಾಡಿ 'ಲೀ'ಯ ಸಿಟ್ಟನ್ನು ಶಾಂತಗೊಳಿಸಿದರು. ಹೆಣ್ಣುಮಗಳು ಅದೆಲ್ಲವನ್ನೂ ಮರೆತು ಅವರನ್ನು ಒಳಗೊಯ್ದಳು. ಅವಳೂ ಹೊಟ್ಟೆತುಂಬ ಊಟ ಮಾಡುತ್ತ ಆಗಾಗ ಅನ್ನುತ್ತಿದ್ದಳು: "ಅವಳು ನನ್ನ ಮಗನನ್ನು ಕೆಡಿಸಿದಳು........ ಇನ್ನು ಅವನಿಗೆ ಮಾನದಿಂದ ಬದುಕಲು ದಾರಿ ಇಲ್ಲ!"

ಎಲ್ಲರೂ ಹೋದ ಮೇಲೆ ಆ ಮುದುಕಿ ಒಂದು ದೀಪವನ್ನು ತೆಗೆದುಕೊಂಡು ಹಾ-ಓಳಿಗೆ ಕರೆದಳು. ಅವಳೂ ಮೆಲ್ಲಗೆ ಹೊರಗೆ ಬಂದಳು. ಆದರೆ ಇಡೀ ದಿವಸ ಒಳಗೇ ಇದ್ದದ್ದರಿಂದ ಅವಳು ದಣಿದುಹೋಗಿದ್ದಳು. ನೆಟ್ಟಗೆ ನಿಲ್ಲಲೂ ಅವಳಿಂದ ಆಗಲಿಲ್ಲ. ಸ್ವಲ್ಪ ಹೊತ್ತಿನ ಹಿಂದೆ ಅವಳಿಗೆ ಅಸಾಧ್ಯ ಹಸಿವೆಯಾಗಿತ್ತು. ಈಗ ಒಂದು ತುತ್ತೂ ಗಂಟಲದಲ್ಲಿ ಇಳಿಯಲಿಲ್ಲ.

ನಡುರಾತ್ರಿ. ವ್ಯಾಂಗಳು ಇನ್ನೂ ಮಲಗಿರಲಿಲ್ಲ. ಹಾ-ಓ ಹೊರಡುವ ಮುಂದೆ ಬೇಕಾಗುತ್ತವೆಂದು, ಸಾಮಾನುಗಳನ್ನು ಕೂಡಿಡಹತ್ತಿದ್ದಳು. ಕೊನೆಗೆ ಒಂದು ಗಂಟು ಕಟ್ಟಿದಳು. ಮತ್ತೆ ಬಿಚ್ಚಿ ಎರಡು ಕಾಲ್-ಚೀಲಗಳನ್ನು ಕಟ್ಟಿದಳು. ಸ್ವಲ್ಪ ವೇಳೆ ವಿಚಾರಮಾಡಿದಳು. ಆಮೇಲೆ ಮುರಿದ ಕಪಾಟಿನಿಂದ ಒಂದು ಪರಕಾರವನ್ನು ತೆಗೆದಳು. ಅಲ್ಲಿಗೆ ಅವಳ ಸಂವರಣೆ ಮುಗಿಯಿತು.

ಬೇಸಿಗೆಯ ರಾತ್ರಿಗಳು ಸಣ್ಣವು. ಸ್ವಲ್ಪ ಹೊತ್ತು ಬಿಟ್ಟು ಕೋಳಿಗಳು ಕೂಗಲಾರಂಭಿಸಿದವು. ವ್ಯಾಂಗಳು ಎದ್ದು ಮಗನನ್ನೂ ಮಗಳನ್ನೂ ಎಬ್ಬಿಸಿ

ಕಂದೀಲು ಹಚ್ಚಿ, ಅವರಿಗೆ ಊಟ ಮಾಡಿಸಿ ಮಗಳನ್ನು ಅಂಗಳದ ತನಕ ಕಳಿಸಿದಳು.

" ಮಗಳೇ, ನಿನ್ನನ್ನು ಹಾಳು ಮಾಡಿದವಳು ನಾನಲ್ಲವೆಂದು ನೆನಪಿನಲ್ಲಿರಲಿ. ನಿನ್ನನ್ನೇ ನೀನು ಹಾಳು ಮಾಡಿಕೊಂಡೆ. "

ಆದರೆ ದುಃಖದಿಂದ ಅವಳ ಬಾಗಿದ ದೇಹ ನಡುಗಿತು. ಗಾಳಿಯಿಂದ ಅವಳಿಗೆ ತೇಕು ಹತ್ತಿದಂತಾಗಿತ್ತು. ಹೇಗೋ ನಗಲು ಪ್ರಯತ್ನ ಮಾಡಿ ಮುಂದರಿಸಿದಳು: " ಸ್ವಲ್ಪ ಎಚ್ಚರಿಕೆ ಇರಲಿ ಹಾ-ಓ. ಇಂದಿನಿಂದ ನಿನ್ನ ಕಾಲ ಮೇಲೆ ಗಟ್ಟಿಯಾಗಿ ನಿಲ್ಲಲು ಕಲಿ. ಅಂದರೆ ನನಗೇನೂ ಚಿಂತೆ ಇಲ್ಲ. ನನ್ನ ಬಗ್ಗೆ ಹೇಳಬೇಕೆಂದರೆ, ನಾನು ಸತ್ತೆನೆಂದು ತಿಳಿ. ಈ ಜನ್ಮದಲ್ಲಿ ಭೆಟ್ಟಿಯಾಗದಿದ್ದರೆ, ಸತ್ತ ಮೇಲಾದರೂ ಕಾಣಬಹುದು. "

ಅವರ ಮನೆಯಿಂದ ಅರ್ಧ ಮೈಲು ದೂರದಲ್ಲಿ ರಾಜಮಾರ್ಗಕ್ಕೆ ಹೊಂದಿ ಒಂದು 'ಓಕ್' ಗಿಡವಿತ್ತು. ಅಲ್ಲಿಯ ತನಕ ಹಾ-ಓಳ ಜೊತೆಯಾಗಿ ಬಂದಳು. ಅಲ್ಲಿ ನಿಂತು ಮಗಳಿಗೆ ಕೊನೆಯ ಸಲ ಹರಸಿದಳು. ಆಮೇಲೆ, ಕಂದೀಲಿನ ಬೆಳಕು, ಶೂನ್ಯ ಮರಣದಲ್ಲಿ ಮರೆಯಾಗುವ ಜೀವನದ ಕೊನೆಯ ಸ್ಪಂದನದಂತೆ, ಮರೆಯಾಗುತ್ತಿರಲು ಅದನ್ನೇ ನೋಡುತ್ತ ನಿಂತಳು.

---

## ಪರಿಚಯ

## ಟಿನ್-ಚುನ್

(೧೯೦೮ —)

ಲು-ಶೂನನ ಅಭಿಪ್ರಾಯದ ಮೇರೆಗೆ ಟಿನ್-ಚುನ್ ಇವನು ( ಇವನ ನಿಜವಾದ ಹೆಸರು ಶಿಯೊ-ಚುನ್ ಎಂದು ) ಆಧುನಿಕ ಚೀನಿ ಸಾಹಿತ್ಯದಲ್ಲಿ ಅತ್ಯುತ್ತಮ ಬರೆಹಗಾರ. ಅವನ ಹೆಂಡತಿಯಾದ ಶಿಯೊ-ಹುಂಗ್ ಇವಳೂ ಹೆಣ್ಣುಮಕ್ಕಳಲ್ಲಿ ಅದ್ವಿತೀಯ ಲೇಖಕಿ. ಟಿಂಗ್-ಲಿಂಗ್‌ಳಿಗಿಂತ ಒಂದು ತೂಕ ಹೆಚ್ಚೆಂದರೂ ಸಲ್ಲುವದು.

ಟಿನ್-ಚುನ್ ಇವನು 'ಪ್ರೊಲಿಟೇರಿಯನ್' ( ಶ್ರಮಜೀವಿಗಳ ಕೈವಾರಿ) ಲೇಖಕ. ಈ ಜಾತಿಯ ಬರೆಹಗಾರರು, ಇದ್ದರೂ, ಚೀನದಲ್ಲಿ ತೀರ ವಿರಳ. ಜಪಾನೀಯರ ವಿರುದ್ಧ ಹೋರಾಡುವ ಸ್ವಯಂಸೇವಕರ ಜೀವನವನ್ನು ಚಿತ್ರಿಸುವ ಇವನ ಕಾದಂಬರಿ " ಶ್ರಾವಣದ ಹಳ್ಳಿ " ೧೯೩೫ರಲ್ಲಿ ಪ್ರಕಟವಾದಾಗ ಅತ್ಯಂತ ಪ್ರಖ್ಯಾತಿಯನ್ನು ಪಡೆಯಿತು. ವಿಮರ್ಶಕರೆಲ್ಲ ಹೊಗಳಿದರು. ಒಬ್ಬ ಸಂಪಾದಕನ ಬಿನ್ನಹದ ಮೇರೆಗೆ ಅವನು ಈ ರೀತಿ ತನ್ನ ಜೀವನ ಚಿತ್ರವನ್ನು ಬಣ್ಣಿಸುತ್ತಾನೆ:

" ಹತ್ತಿರದ ನಗರಕ್ಕೆ ೭೦ ಮೈಲು ದೂರದ ಗುಡ್ಡದ ಹಾದಿಗಳಿಂದ ಬೇರೆಯಾದ ಮಂಚೂರಿಯಾದ ಒಂದು ದೊಡ್ಡ ಹಳ್ಳಿಯಲ್ಲಿ ೧೯೦೮ರಲ್ಲಿ ನಾನು ಹುಟ್ಟಿದೆ. ಆ ಊರ ಜನರಲ್ಲಿ, ಒಕ್ಕಲಿಗರು, ಉದ್ಯೋಗಸ್ಥರು, ಬೇಟೆಗಾರರು, ಸೈನಿಕರು, ಮತ್ತು ಕಳ್ಳ-ಕಾಕರೂ ಇರುತ್ತಿದ್ದರು.

" ನನ್ನ ಅಜ್ಜ ಒಕ್ಕಲಿಗನಾಗಿದ್ದ. ನನ್ನ ತಂದೆ ಮತ್ತು ಕಕ್ಕಂದಿರು ಮೊದಲು ಒಕ್ಕಲಿಗರಾಗಿದ್ದು, ಆಮೇಲೆ ಬಡಿಗರಾಗಿ, ನಂತರ ವ್ಯಾಪಾರಿಗಳೂ, ಸೈನಿಕರೂ, ಕಡೆಗೆ ಕಳ್ಳರೂ ಆಗಿದ್ದರು. ಕೆಲವು ದಿನಗಳ ವರೆಗೆ ನಮಗೆ ಆಸ್ತಿ ಇತ್ತು. ಕೆಲವು ಕಾಲ ಏನೂ ಇರಲೇ ಇಲ್ಲ. ' ಮುಕ್‌ಡೆನ್ ' ಪ್ರಸಂಗ

ವಾದ ಮೇಲೆ ( ಸಪ್ಟೆಂಬರ ೧೮, ೧೯೩೧ ಜಪಾನು ಮಂಚೂರಿಯಾದ ಮೇಲೆ ದಾಳಿ ಮಾಡಿದಾಗ ) ನನ್ನ ತಂದೆ ಮತ್ತು ಅವನ ಮೂರು ತಮ್ಮಂದಿರೂ, ಇನ್ನೂ ಬಡಿಗರಾಗಿದ್ದಾಗಲೆ, ಜಪಾನೀಯರ ವಿರುದ್ಧ ಹೋರಾಡುವ ಸ್ವಯಂ ಸೇವಕ ದಳವನ್ನು ಸೇರಿದರು. ನನ್ನ ಮೂರನೆಯ ಚಿಕ್ಕಪ್ಪ ಈಗ ಮಂಚೂಕೊ ದಲ್ಲಿ ಸೆರೆಯಾಗಿದ್ದಾನೆ. ಮಂಚೂಕೊ ಅಧಿಕಾರಿಗಳು ನಮ್ಮ ಇದ್ದ ಬಿದ್ದ ಆಸ್ತಿಯನ್ನೆಲ್ಲ ಜಪ್ತಿಮಾಡಿದರು.

" ನನಗೆ ಶಾಸ್ತ್ರಶುದ್ಧವಾದ ಶಿಕ್ಷಣ ದೊರೆಯಲೇ ಇಲ್ಲ. ನಾನು ಹೋದ ಪ್ರತಿಯೊಂದು ಶಾಲೆಯಿಂದಲೂ ನನಗೆ ಹೊರಗೆ ಹಾಕಿದರು. ಆರೇಳು ವರ್ಷ ಹಾಗೂ ಹೀಗೂ ಶಾಲೆಯಲ್ಲಿ ಕಲಿತೆ.

" ೧೯೨೫ರಲ್ಲಿ ಸೈನ್ಯವನ್ನು ಸೇರಿ, ೬ ವರ್ಷಗಳ ವರೆಗೆ ಸೈನಿಕನಾಗಿದ್ದೆ. ನಾನು, ಅಶ್ವದಳ, ಕಾಲ್ದಳ, ಶಸ್ತ್ರಶಾಲೆ, ಮುಂತಾದವುಗಳಲ್ಲಿ ಕೆಲಸ ಮಾಡಿ ಆಮೇಲೆ ಅಧಿಕಾರಿಯಾದೆ. ಆಮೇಲೆ ಸ್ವಯಂಸೇವಕ ದಳವನ್ನು ಸೇರಿದೆ. ಅದರ ನಂತರ ಮಂಚೂರಿಯಾದಲ್ಲಿ ನನ್ನ ಸಾಹಿತ್ಯಜೀವನ ಪ್ರಾರಂಭ ವಾಯಿತು.

" ಸೈನ್ಯದಲ್ಲಿಯ ನನ್ನ ಜೀವನವಲ್ಲದೆ ನಾನು ಹುಂಬರ ಜೊತೆಗೆ ತಿರು ಗಾಡಿದೆ; ಸೆಕ್ರುಟರಿಯಾಗಿದ್ದೆ; ಒಬ್ಬ ಬಾಕ್ಸರನ ( ಮುಷ್ಟಿಯುದ್ಧ ಮಲ್ಲನ ) ಹತ್ತಿರ ಕಲಿಯುತ್ತಿದ್ದೆ; ಮಾಣಿಯಾಗಿದ್ದೆ; ಒಂದು ವನಸ್ಪತಿಯಿಂದ ಮೊಸರು ತಯಾರಿಸುವ ಅಂಗಡಿಯಲ್ಲಿ ಬೀಸುವಕಲ್ಲು ತಿರುಗಿಸುವವನಾಗಿದ್ದೆ. ಒಂದೇ, ಎರಡೇ, ಏನೇನೋ ಆಗಿದ್ದೆ. ನನ್ನ ಆಕಾಂಕ್ಷೆ ಬಂಡುಗಾರರ ದಳದಲ್ಲಿ ಹೋಗಬೇಕೆಂದಿತ್ತು. ಅದು ಸಫಲವಾಗದಿದ್ದರೂ ಮತ್ತು ಈಗ ನಾನು ಲೇಖಕನಾಗಿದ್ದರೂ, ನನಗೆ ಇನ್ನೂ ಆ ಆಸೆ ಇದೆ. ಅದು ಸಫಲವಾಗುವ ಕಾಲವೂ ಬರಬಹುದು.

" ಬಾಲ್ಯದಲ್ಲಿದ್ದಾಗಲೇ ನನಗೆ ಸಾಹಿತ್ಯದಲ್ಲಿ ಅಭಿರುಚಿ ಇತ್ತು. ಹತ್ತು ವರ್ಷಗಳ ಹಿಂದೆ ನಾನು ಬರೆಯಲು ಪ್ರಾರಂಭಿಸಿದೆ. ಆಗ ನಾನು ಸೈನ್ಯ ದಲ್ಲಿದ್ದೆ. ಮೊದಲು, ಚೀನದ ಸುಸಂಸ್ಕೃತ ಸಾಹಿತ್ಯವಾದ 'ಶಿ' ಮತ್ತು 'ಟ್ಸು' ಕಾವ್ಯಗಳನ್ನು ಅಭ್ಯಾಸ ಮಾಡಿದೆ. ಮುಂದೆ, ಲು-ಶೂನನ ಕತೆಗಳನ್ನೂ

ಕೌ-ಮೊ-ಜೊನ ಕಾವ್ಯವನ್ನೂ ಓದಿದೆ. ಹೊಸ ಸಾಹಿತ್ಯದ ಮೊದಲ ಕೃತಿಗಳಲ್ಲಿ ಲು-ಶೂನ್‌ನ 'ಕಾಡು-ಹುಲ್ಲು' ನನಗೆ ಬಹಳ ಮೆಚ್ಚಿಕೆಯಾಯಿತು. ಪರದೇಶದ ಸಾಹಿತಿಗಳಲ್ಲಿ 'ಗಯಟೆ' ಮತ್ತು 'ಚೆಕಾವ್'ನನ್ನ ಪ್ರೀತಿಯವರು. ಹೆಚ್ಚು ಓದಿದಂತೆ ರಶಿಯನ್ ಸಾಹಿತ್ಯ ಕಣ್ಣಿಗೆ ಬಿತ್ತು. ಗಾರ್ಕಿಯ 'ಮದರ್' ಮತ್ತು 'ಎ. ಸೆರಾಂಫ್ರೊವ್ವಿಚ್'ನ 'ಶೆಲ್ಲಿ ಫ್ರೊಟೊಕ್' ಇವು ನನ್ನನ್ನು ಮರುಳುಗೊಳಿಸಿದವು. ಅದರಲ್ಲಿಯೂ ಎರಡನೆಯದರ ಪ್ರಭಾವ ನನ್ನ ಮೇಲೆ ಸಂಪೂರ್ಣವಾಗಿ ಇದೆ. ಲು-ಶೂನ್ ಮತ್ತು ಕೌ-ಮೊ-ಜೊ ಇವರನ್ನು ಬಿಟ್ಟರೆ ಸಮಕಾಲೀನ ಸಾಹಿತಿಗಳನ್ನು ನಾನು ಓದಿಕೊಂಡಿಲ್ಲ. ಅಂತಲೇ ಅವರ ಪ್ರಭಾವದಿಂದ ದೂರವಾಗಿದ್ದೇನೆ.

"ನಾನು ಸೃಷ್ಟಿಸಿದ ಪಾತ್ರಗಳೇ ನನ್ನನ್ನು ಮರುಳುಗೊಳಿಸಿವೆ. ಅವರೆಲ್ಲ ಜೀವಂತವಾಗಿದ್ದಾರೆ. ನಾನೇ ಚಿತ್ರಿಸಿದ ವಾತಾವರಣದಲ್ಲಿ ನಾನು ಜಗತ್ತನ್ನೇ ಮರೆಯುತ್ತೇನೆ. ನನ್ನ ಕಲೆ ನನ್ನನ್ನೇ ವಂಚಿಸುತ್ತಿದೆಯೆಂದು ನಾನು ಒಪ್ಪಿಕೊಳ್ಳುತ್ತೇನೆ.

"ಎಲ್ಲ ದುಃಖಪೀಡಿತ ಜನರನ್ನೂ ಅವರ ಕರುಣಸ್ಥಿತಿಯಿಂದ ಬಿಡುಗಡೆ ಮಾಡುವದೇ ನನ್ನ ಸಾಹಿತ್ಯದ ಪರಮ ಉದ್ದೇಶ."

"ಶಾಂಘಾಯಿ"
ಮೇ ೨೧, ೧೯೫೬

## ' ಎಸ್. ಎಸ್. ಡಾಯರೆನ್-ಮೂರು ' § § § § ಹಡಗದಲ್ಲಿ—

ನಮ್ಮ ಗೆಳೆಯ ' W ' (ಡಬ್ಲೂ) — ಡಾಯರೆನ್-ಮೂರು ಹಡಗದ ವರೆಗೆ ಕಳುಹಬಂದವನು ' ಹೋಗಿ ಬರುತ್ತೇವೆ ' ಎಂದು ಹೇಳಿ ನಮ ಸ್ಕರಿಸುವುದರೊಳಗಾಗಿಯೇ ಮಾಯವಾಗಿದ್ದ.

ಹಡಗದ ಮೇಲಿನ ಕೋಣೆಯ ನಾತದ ಗಾಳಿ ನಮ್ಮೊಡನೆ ಇನ್ನೂ ಸಲಿಗೆ ಬೆಳೆಸಿರಲಿಲ್ಲ. ಅಷ್ಟರೊಳಗೆ ನಮಗೆ ಮುತ್ತಿಗೆ ಹಾಕಲಾಯಿತು.

ನನ್ನ ಹೆಂಡತಿಯೂ ನಾನೂ ಹಾಸಿಗೆ ಹೊದ್ದಿಕೆಯನ್ನು ಸರಿಪಡಿಸು ತ್ತಿದ್ದೆವು.

ದಪ್ಪನಾದ ಕುಳ್ಳನೊಬ್ಬನು — " ಎಲ್ಲಿಗೆ ಹೊರಟಿದ್ದೀರಿ ? " ಎಂದು ಗದ್ದರಿಸಿದ. ಅವನ ಹಿಂದೆ ನಾಲ್ಕು ಜನರಿದ್ದರು. ಇಬ್ಬರಿಗೆ ಪೋಲಿಸಿನವರ ವಸ್ತ್ರಗಳೂ ಕೈಯಲ್ಲಿ ಪಿಸ್ತೂಲುಗಳೂ ಇದ್ದುವು; ಇಬ್ಬರು ಹಾಗೆಯೇ ಇದ್ದರು.

" ಸಿಂಗಟ್ಯಾವೋವಿಗೆ. "

ಇದನ್ನೆಲ್ಲ ನಾವು ಮೊದಲಿಗೇ ಅರಿತಿದ್ದರೂ ಕೂಡ ಹಾಗೆ ಹೇಳುವಾಗ ನನ್ನೆದೆ ಢಗಗ್ಗನೆ ಹಾರಿತು. ಝೂಂತಿಯು ಅಷ್ಟೇನು ಕಠೋರವಾಗಿರಲಿಕ್ಕಿಲ್ಲ ಎಂದು ನನ್ನ ಆಶೆಯಿತ್ತು. ಅದೊಂದು ಮುಗಿಯಿತೆಂದರೆ ನಾನು ಈ ಸಮು ದ್ರದ ಆ ದಂಡೆಗಿರುವ ನನ್ನ ಪ್ರೀತಿಯ ಜನ್ಮಭೂಮಿಯಲ್ಲಿ ಕಾಲಿಟ್ಟೊಡನೆ ಎಲ್ಲವೂ ನನ್ನ ಸಂರಕ್ಷಣೆಗೆ ಸನ್ನದ್ಧವಾಗುವುದು.

ಅವರು ತಮ್ಮ ಕೈ ಕಣ್ಣುಗಳಿಂದ ನನ್ನ ದೇಹವನ್ನೆಲ್ಲ ಪರೀಕ್ಷಿಸಿ ನಾಯಿ ಗಳಂತೆ ನಮ್ಮ ಗಂಟು-ಗದಡಿಗಳನ್ನು ಅಸ್ತವ್ಯಸ್ತವನ್ನಾಗಿ ಮಾಡಿದರು.

ನನ್ನ ಹೆಂಡತಿಯ ಬಣ್ಣವೇ ಇಳಿಯಿತು. ಅವಳು ಅದೇ ಆಗ ಜೇನೆಯಿಂದ ಎದ್ದಿದ್ದಳು. ಅವಳ ತೀರ ಒಳಹೊಕ್ಕ ಕಣ್ಣುಗಳು ಈಗ ಚಿಂತೆಯಿಂದ ತುಂಬಿ ಸೂಸಿದವು. ಹಿಂಸ್ರ ಪ್ರಾಣಿಯ ನವಡೆಯಲ್ಲಿ ಸಿಕ್ಕವರು ಜೀವಕ್ಕಾಗಿ ಹೆಣಗಾಡಿದಂತೆ ನಮ್ಮ ಸ್ಥಿತಿಯಾಗಿತ್ತು.

"ಹುಂ, ಎಲ್ಲಿಂದ ಬಂದಿರಿ?"

"........ಲ್ಲಿಂದ."

ನನ್ನ ರಕ್ತ ಹಾಗೆಯೇ ಕುದಿಯುತ್ತಿತ್ತು. ಅದನ್ನೆಂತೊ ಬಿಗಿಹಿಡಿದೆ.

"ಅಲ್ಲೇನು ನಿನಗೆ ಕೆಲಸವಿತ್ತು?"

"........ವರ ಠಾಣೆಯಲ್ಲಿ ಕಚೇರಿಯೊಳಗಿನ ಕೆಲಸಗಾರ."

ನಿಜವಾಗಿ ನನ್ನೊಬ್ಬ ಗೆಳೆಯ ಅಲ್ಲಿ ಕೆಲಸಕ್ಕಿದ್ದನು. ಸದ್ಯಕ್ಕೆ ನಾನು ಅವನ ಸೋಗು ಹಾಕಿಕೊಂಡೆನು. ನಾನು ಬಹಳ ದಿನಗಳಿಂದಲೂ — ನಾಚಿಕೆಯೇಕೆ? ಹೇಳಿಯೇಬಿಡುತ್ತೇನೆ — ಬರಿಗೈಯ ಭಿಕಾರಿಯಾಗಿದ್ದೆ.

"ನಿಮ್ಮ ಸೇನಾಪತಿಯ ಹೆಸರು, ಅವನ ಠಾಣ್ಯದ ಹೆಸರು, ಅವನ ಮನೆತನದ ಹೆಸರು, ಅವನ ರಾಜಕೀಯ ಹೆಸರು, ಅವನಿಗಿಟ್ಟ ಹೆಸರು, ಅವನ ವಯಸ್ಸು ಹೇಳು."

ನನ್ನ ನೆತ್ತರ ಸಳಮುಳನೆ ಕುದಿದು, ಹರಿದು, ಸಿಡಿದು ಮಿಡಿದು ಹೊರಗೊಡೆಯುವದೆಂದೆನಿಸಿತು.

"ಅವನ ಮನೆತನದ ಹೆಸರು...., ಸರಕಾರಿ ಹೆಸರು...., ಖಾಸಗಿ ಹೆಸರು............ಅವನಿಗೆ ಸುಮಾರು ಐವತ್ತು ವರ್ಷ........"

"ಏನು? ಏನು? ಸುಮಾರು ಐವತ್ತೇ?"

ಅವನ ಆ ಚಿವುಗಣ್ಣುಗಳು ಅಗಲವಾದುವು. ಅವನ ಹರುಹಿದ ಮುಖದ ಸೆರೆ ಬಿಗಿದುವು. ಹಿಂದೆ ನಿಂತ ಜನರು ಕಣ್ಣು ಕಿಸಿದು ದಿಟ್ಟಿಸಿ ನೋಡಿದರು. ಆಯುಧವುಳ್ಳ ಇಬ್ಬರಂತೂ ಪಿಸ್ತೂಲಿಗೆ ಕೈ ಹಾಕಿದ್ದನ್ನು ನಾನು ಕಂಡೆ. ಉಳಿದಿಬ್ಬರ ಕೈಡೊಣ್ಣೆಗಳು ಅಲ್ಲಾಡಹತ್ತಿದ್ದುವು.

ಚಿಂತಾಕುಲತೆಯಿಂದ ನನ್ನ ಹೆಂಡತಿಯ ಕಣ್ಣುಗಳು ಇಷ್ಟಗಲಾದುವು.

" ಇಲ್ಲ, ನಮ್ಮ ಸೇನಾಪತಿಗಳಿಗೆ ಹೋದ ವರ್ಷ ಐವತ್ತಾಯಿತು. ಈ ವರ್ಷ ಐವತ್ತು ಮುಗಿದು ಐವತ್ತೊಂದು " ಎಂದು ತಿಳಿಸಿ ಹೇಳಿದೆ.

" ಹೌದೋ, ನಿನ್ನ ಮೇಲಧಿಕಾರಿಯ ವಯಸ್ಸನ್ನೂ ನೀನು ಮರೆತು ಬಿಡುವುದುಂಟೇ ! ಇರಲಿ, ಈಗ ಸಿಂಗ್‌ಟ್ಯಾವೋವಿಗೆ ನೀನೇಕೆ ಹೊರಟೆ ? ಯಾರು ಈ ಹೆಂಗಸು ? " ಎಂದವನು ಪ್ರಶ್ನಿಸಿದ.

" ಆಕೆ ನನ್ನ ಹೆಂಡತಿ. ನಾವು ಮನೆಗೆ ಹೊರಟಿದ್ದೇವೆ. " ಎಂದು ನಾನು ತಿಳಿಸಿ ಹೇಳಿದೆ.

" ಹಾಂ ! ಹಾಗಾದರೆ ನೀವು ಶಾಂಟೂಂಗದ ಜನ ! ನೀವು ಮಾತನಾಡುವುದು........" ಎಂದು ಅವನು ಏನೇನೋ ಸುರುಮಾಡಿದ.

" ನಾನು ಮಂಚುಕೋ ಮನುಷ್ಯ " ಎಂದು ತಣ್ಣಗಾಗಿ ಹೇಳಿದೆ.

" ಹಾಗಾದರೆ ನಿನ್ನ ಮನೆಯೇಕೆ ಶಾಂಟೂಂಗ್‌ದಲ್ಲಿ ? "

" ನನ್ನ ತಂದೆ ಅಲ್ಲಿ ಇದ್ದಾರೆ. "

" ನಿನ್ನ ತಂದೆ ಅಲ್ಲಿ ಏನು ಮಾಡುತ್ತಾರೆ ? "

" ವ್ಯವಹಾರ. "

" ಎಂತಹ ವ್ಯವಹಾರ ? "

" ಹಣ ಕೊಡಕೊಳ್ಳುವುದು. "

" ಅವನಂಗಡಿಯ ಹೆಸರೇನು ? "

" .................. "

" ಯಾವ ಬೀದಿಯ ಮೇಲೆ ? "

" ...........ಬೀದಿ. "

" ನೀನು ಮನೆಗೇಕೆ ಹೊರಟಿದ್ದೀ ? "

ಇನ್ನೊಂದು ಪ್ರಶ್ನಾವಳಿಗೆ ಪ್ರಾರಂಭವಾಗುವಂತೆ ತೋರಿತು.

" ಮೊನ್ನೆ ಮೊನ್ನೆ ನಮ್ಮ ಮದುವೆಯಾಯಿತು. ನಮ್ಮ ತಾಯಿ-ತಂದೆ ಕಾಣಲು ನಾವು ಮನೆಗೆ ಹೊರಟಿದ್ದೇವೆ. "

" ಏನು ? ಮೊನ್ನೆ ಮೊನ್ನೆ ಮದುವೆಯೇ ? " ಅವನ ಕಣ್ಣುಗಳು

ನನ್ನ ಮುಖದಿಂದ ನನ್ನ ಹೆಂಡತಿಯ ಮುಖಕ್ಕೂ ಅಲ್ಲಿಂದಿಲ್ಲಿಗೂ ತೂಗಾಡಿ ದವು. ನಾವು ಹೊಸದಾಗಿ ಮದುವೆಯಾಗಿ ಶೋಭನಪ್ರಸ್ತ-ಪ್ರವಾಸಕ್ಕೆ ಹೊರಟ ದಂಪತಿಗಳಂತೆ ಅವನಿಗೆ ಕಾಣುತ್ತಿದ್ದೆವೋ ಇಲ್ಲವೋ ನನಗೆ ತಿಳಿಯಲಿಲ್ಲ.

" ನೀನೇನು ಕೆಲಸಕ್ಕೆ ರಾಜೀನಾಮೆ ಕೊಟ್ಟೆಯೋ ? ರಜೆ ಪಡೆದು ಬಂದಿದ್ದೆಯೋ ? "

" ರಾಜೀನಾಮೆ. "

" ತಾ ಇಲ್ಲಿ, ನಿನ್ನ ಹೆಸರಿನ ಕಾರ್ಡು. ಮತ್ತು ನಿನ್ನ ರಾಜೀನಾಮೆಯ ಪ್ರಮಾಣಪತ್ರ. " ಎಂದಂದು ಕೈಯೊಡ್ಡಿದ. ದಪ್ಪನಾದ ಅವನ ಮಾಸಂದ ಹಸ್ತದ ಮೇಲೆ ನಿರ್ದಯತೆಯು ಗೆರೆ ಕೊರೆದು ಬರೆದಂತಿತ್ತು.

" ನನ್ನಲ್ಲಿಲ್ಲ ಆ........"

ನಿಶ್ಶಬ್ದ ! ಎಲ್ಲ ಕೋಣೆಗಳಲ್ಲಿಯೂ ನಿಶ್ಶಬ್ದ ! ಉಗಿ-ಹಡಗಕ್ಕೆ ಚುಕ್ಕಿ ಬಡಿದಂತೆ ಕೈ ತಟ್ಟುವ ಧ್ವನಿಯು ಸಮುದ್ರದ ಸಪ್ಪಳವು ಮಾತ್ರ ನನ್ನ ಕಿವಿ ತಟ್ಟಿತು. ವಸಂತಾಂತ್ಯದ ಕಿರಣವೊಂದು ನನ್ನಿದಿರು ಚಾಪೆಯ ಮೇಲೆ ಚಾಚಿಕೊಂಡಿತ್ತು. ಹಡಗದ ಜಾರುಗಿಂಡಿಯೊಳಗಿಂದ ಅದೇ ಕಾಲಕ್ಕೆ ಗಾಳಿಯ ಸುಳಿಯೊಂದು ನುಸುಳಿ ಬಂತು.

" ನನಗೇನು ಇವುಗಳ ಅಗತ್ಯವಿಲ್ಲ ಎಂದು ತೋರಿತು. ನಾನೇನು ಚಾಕರಿಯ ವೇಷದಲ್ಲಿ ಬಂದಿಲ್ಲ. ನನ್ನ ಗುರುತಿನ ಪ್ರಮಾಣಪತ್ರಗಳು ಬೇಕಾ ಗಿಲ್ಲ. " ಎಂದು ನಾನು ಉತ್ತರ ಕೊಟ್ಟೆ.

" ಇಲ್ಲವೇ ! ಹೋ ! ನೀನೊಳ್ಳೆಯ ಮನುಷ್ಯನಾಗಿ ಕಾಣುವುದಿಲ್ಲ. " ಆ ಸ್ಥೂಲಕಾಯದವನ ಕಣ್ಣುಗಳು ನನ್ನನ್ನು ಕಾಲಿಂದ ತಲೆವರೆಗಳೆದು ನನ್ನ ಕಣ್ಣಿಗೆ ಬಂದು ಚುಚ್ಚಿ ನಿಂತವು.

" ಕೇವಲ ನಿನ್ನ ಕಣ್ಣಿಂದ ಪರೀಕ್ಷೆ ಮಾಡಿದರೂ ನೀನು ಒಳ್ಳೆಯ ಮನುಷ್ಯನಾಗಿಲ್ಲ........ಒಳ್ಳೆಯವನಿಗೆ ನಿನ್ನಂಥ ಕಣ್ಣಿರುವುದಿಲ್ಲ....ಬಾ ನನ್ನೊ ಡನೆ........" ಎಂದು ಅವನು ಆಜ್ಞಾಪಿಸಿದನು.

ಅಂತೂ ನನ್ನ ಕಣ್ಣುಗಳು ಆ ಮಹಾರಾಯನನ್ನು ಕೆಣಕಿದುವು !

ನಾವು ಹೋದ ಆ ಮತ್ತೊಂದು ಸ್ಥಳದಲ್ಲಿ ಪ್ರಶ್ನೋತ್ತರಗಳು ಒಂದು ತಾಸಿನ ವರೆಗೆ ಸಾಗಿದವು. ಹೆಚ್ಚಿನ ಪರೀಕ್ಷೆಗಾಗಿ ನನ್ನನ್ನು ದಂಡೆಗೇ ಒಯ್ಯಬೇಕಾಗುವುದು ಎಂದು ಅವನು ಕೊನೆಗೆ ಹೇಳಿಬಿಟ್ಟನು. ಅದನ್ನು ಕೇಳಿ ನಿರಾಶೆಯ ನಿಕರಕ್ಕೆ ಬಂದಂತೆ ನೆನಪಿಸಿದೆ. ಅವನು ನನಗೆ ಬಂದರಿನ ಪೋಲಿಸ ಠಾಣ್ಯಕ್ಕೆ ಒಯ್ದಿದ್ದೇ ಆದರೆ ಎಲ್ಲ ಬಗೆಯ ಚಿತ್ರಹಿಂಸೆ ನನಗಾಗುವುದೆಂದು ನನಗೆ ಗೊತ್ತಿತ್ತು. ಚಬಕದಿಂದ ಹೊಡೆಯುವುದು, ಕಲ್ಲೆಣ್ಣೆಯನ್ನೋ ಮೆಣಸಿನ ನೀರನ್ನೋ ಮೂಗಿನ ಹೊರಳೆಗಳೊಳಗಿಂದ ದಬ್ಬುವುದು,....ಎಲ್ಲವೂ ಎಲ್ಲವೂ ! ನನ್ನ ಇತಿಶ್ರೀಯಾಗುವುದು ನಿಶ್ಚಯ.

ನಿರಾಶೆ ಮಿತಿಮೀರಿದಾಗ ಎಲ್ಲರಿಗೂ ಅತಿ ಶಾಂತತೆ ಬರುತ್ತದೆ. ಒಂದಿಷ್ಟು ಉತ್ಸಾಹವೂ ಆಗ ತಲೆದೋರುವುದು. ಅಂತೂ ನಾನು ದೃಢ ನಿಶ್ಚಯದ ಹೆಜ್ಜೆಗಳನ್ನಿಕ್ಕುತ್ತ ಅವನಿಗಿಂತ ಮುಂದೆ ಹೊರಟೆ. ನಾನು ಅಲ್ಲಿಯ ಬಾಗಿಲು ತಲುಪುವ ಹೊತ್ತಿಗೆ ಅವನು ನನ್ನನ್ನು ನಿಲ್ಲಿಸಿದ.

" ನಿಲ್ಲು........ಇತ್ತ ಬಾ. "

ನಾನು ಅವನು ಕೈ ತೋರಿಸಿದತ್ತ ಹೊರಳಿದೆ. ನನ್ನ ಹೆಂಡತಿಯನ್ನೂ ನನ್ನೊಡನೆ ಕರೆದೊಯ್ಯಬೇಕೆಂದು ಅವನ ಅಪೇಕ್ಷೆ ಇರಬೇಕೆಂದು ನಾನು ತಿಳಿದೆ. ಅದು ಒಳ್ಳೆಯದೆ. ಇಬ್ಬರೂ ಕೂಡಿಯೇ ಸೆರೆಸಿಕ್ಕೋ ಸತ್ತೋ ಬಿಡಬಹುದಷ್ಟೇ !

ನನ್ನ ಹೆಂಡತಿಯ ಪರೀಕ್ಷಕರು ಇಷ್ಟೊತ್ತಿಗೆ ಅವಳನ್ನು ಬಿಟ್ಟು ಬಂದಿದ್ದರು. ಅವಳು ಹಡಗದ ಜಾರುಗಿಂಡಿಗೆ ಲೀನಳಾಗಿ ಸಮುದ್ರವನ್ನು ದಿಟ್ಟಿಸಿ ನೋಡುತ್ತಿದ್ದಳು. ಬೇನೆ ಬಳಲಿಕೆಯಿಂದ ಅವಳ ಬೆನ್ನು ಎಷ್ಟು ಸೊರಗಿತ್ತು ಎಂಬುದನ್ನು ನಾನು ಕಂಡೆ. ನನ್ನೆದೆಯೊಳಗೆ ಮಿಂಚು ಹೊಡೆದಂತಾಯಿತು.

" ನಿಮ್ಮ ಸಾಮಾನು ಇಲ್ಲಿ ತಕ್ಕೊಂಡು ಬಾ. ನಾನು ಅವುಗಳನ್ನು ಪರೀಕ್ಷಿಸಬೇಕಾಗಿದೆ. " ಎಂದು ಆ ಮನುಷ್ಯ ನನಗೆ ಆಜ್ಞಾಪಿಸುತ್ತಿದ್ದನು. ನಾನು ತಂದವುಗಳನ್ನೆಲ್ಲ ಅಲ್ಲಿ ಎತ್ತಿಟ್ಟೆ— ಒಂದು ಮಧ್ಯಮಾಕಾರದ ಕ್ಯಾನ್ವಾಸ್ ಪೆಟ್ಟಿಗೆ, ಇನ್ನೊಂದು ಸಿಳ್ಳಿನ ಪೆಟ್ಟಿಗೆ. ಪಿಸ್ತೂಲುಗಳನ್ನೂ ದೊಣ್ಣೆಗಳನ್ನೂ ಹಿಡಿದ ಜನ ಮತ್ತೆ ಬಂದಿತು. ದಪ್ಪನಾದ ಆ ಗಟ್ಟಿಗ ಪ್ರತಿಯೊಂದು ಶರ್ಟನ್ನೂ ಒಂದೊಂದು ಕಾಲ್‌ಚೀಲವನ್ನೂ ಪರೀಕ್ಷಿಸಿ ನೋಡಿದ. ಅವ

ನೇನು ಹಳೇ ಅರಿವೆ ಕೊಳ್ಳುವ ವ್ಯಾಪಾರಿಯೋ, ಸಾಮಾನು ಒತ್ತೆ ಇಟ್ಟು ಕೊಳ್ಳುವ ಸಾಹುಕಾರನೋ ಎಂಬಂತಿತ್ತು, ಅವನ ನಿರೀಕ್ಷಣೆಯ ರೀತಿ. ಕೊಡಕೊಳ್ಳುವ ಹಿಗ್ಗುಮುಗ್ಗಾಟದ್ದಷ್ಟೇ ಕೊರತೆ!

ಅವನು ಬಿಳಿ ಕಾಗದಗಳ ಹೊರೆಯೊಂದನ್ನು ಒಂದೊಂದೆ ಕಾಗದದಂತೆ ಬೆಳಕಿಗೆ ಹಾಗೊಮ್ಮೆ ಹೀಗೊಮ್ಮೆ ಹಿಡಿದು ಸಾವಧಾನವಾಗಿ ಪರೀಕ್ಷಿಸಿದನು. ಯಾವ ನಾಯಿಯೂ ತನ್ನ ಯಜಮಾನನ ಕೆಲಸವನ್ನು ಇಷ್ಟು ಶ್ರದ್ಧೆ ವಹಿಸಿ ಮಾಡುತ್ತಿರಲಿಕ್ಕಿಲ್ಲ ಎಂದು ನಾನೆಂದುಕೊಂಡೆ.

ಎಲ್ಲದರ ಪರೀಕ್ಷೆಯಾಯಿತು. ಆ ಕಾಲಕ್ಕೆ ನಾವು ಸೇಬುಹಣ್ಣೊಂದನ್ನು ತಿನ್ನುತ್ತಿರುವುದನ್ನು ಆ ಮನುಷ್ಯನು ಕಂಡು "ಏನು, ಒಳ್ಳೇ ಖುಷಿಯಾಗಿದ್ದೀ" ಎಂದಂದ.

ಕೋಣೆ ಬಿಟ್ಟು ಹೊರಟಾಗ ಮತ್ತೆಮತ್ತೆ ಹಿಂದುರಿಗಿ ನನ್ನನ್ನು ಕೆಟ್ಟ ಗಣ್ಣಿನಿಂದ "ಈ ಮನುಷ್ಯನೇನು ಒಳ್ಳೆಯವನಾಗಿ ಕಾಣುವುದಿಲ್ಲ." ಎನ್ನುವಂತೆ ನಿಟ್ಟಿಸುತ್ತ ಹೋದನು. ಹಾಯಿ ಎತ್ತುವ ರಾಟೆಯ ಸಪ್ಪಳವು ಕೇಳಬಂತು. ನಾವಿಕರು ಲಂಗರವನ್ನು ಎತ್ತಲಿರುವದನ್ನು ನಾನು ತಿಳಿದೆ.

ತೆರೆಗಳು ಸ್ವಾತಂತ್ರ್ಯದ ಚಲ್ಲಾಟದಲ್ಲಿ ಕುಣಿಕುಣಿದಾಡಿದವು. ಆದರೆ ನನ್ನ ಹೃದಯ ನನ್ನ ಮೈ ಮಾತ್ರ ಸಂಕೋಲೆ ಬಿಗಿದಂತೆ ಸಂಕೋಚಗೊಂಡವು. ನನ್ನ ಹೆಂಡತಿ ನನ್ನನ್ನು ನೋಡಿದಳು; ನಾನು ಅವಳನ್ನು ನೋಡಿದೆ; ಇಬ್ಬರೂ ಮೌನ. ಇಬ್ಬರ ದೃಷ್ಟಿಯೂ ಕಡಲತ್ತ ಹೊರಳಿತು. ಯಾರಿಂದಲೂ ಪಾದಾಕ್ರಾಂತವಾಗದಿದ್ದ ಕಡಲಾಚೆಯ ದಂಡೆಗೆ ನಮ್ಮ ಮನೆ ಇದ್ದಿತು. ಅತ್ತ ಮನಸ್ಸು ಹರಿಯಿತು. ನಟ್ಟಿರುಳಲ್ಲಿ ಹಡಗದಟ್ಟದ ಮೇಲೆ ನಾವಿಬ್ಬರಲ್ಲದೆ ಯಾರೂ ಇಲ್ಲದಾಗ ನನ್ನ ಹೆಂಡತಿ ಸಕಂಪವಾದ ಜಿನುಗುದನಿಯಲ್ಲಿ ಕೇಳಿದಳು: "ಉಗಿಹಡಗ ಬಂದರು ಸೇರುವುದಾವಾಗ?"

"ನಾಳೆ ಹತ್ತು ಹನ್ನೆರಡು ಹೊಡೆಯುವ ವರೆಗೂ ಇಲ್ಲ" ಎಂದು ನಾನುತ್ತರವಿತ್ತೆ.

ಹಡಗದಟ್ಟದ ಕಟಾಂಜನವನ್ನು ನಾನು ಹಿಡಿದು ನಿಂತಿರುವಾಗ ಅವಳ ಕೈ ನನ್ನ ಕೈ ಸವರಿ ಬಂತು.

“ ಇದಿನ್ನೊವ್ಮ್ಮಾದರೆ........” ನಾವಿಬ್ಬರೂ ಸುತ್ತಲೂ ನೋಡಿದೆವು. ಅಲ್ಲಿಯೂ ನಮ್ಮಿಬ್ಬರ ಹೊರತು ಯಾರಿರಲಿಲ್ಲ.

“ ಇದಿನ್ನೊವ್ಮ್ಮಾದರೆ........ಅವರಿನ್ನೊವ್ಮೆ ಬಂದು ಕಾಡಿದರೆ ಮಾತ್ರ ನಾನು ಈ ಕಡಲಲ್ಲಿಯೇ ಹಾರಿಕೊಳ್ಳತಕ್ಕವಳು........ಕಡಲ ತಿಮಿಂಗಲುಗಳ ಬಾಯಿಗೆ ಈ ಮೈ ತುತ್ತಾಗಿ ಕೊಡಬಹುದಲ್ಲದೆ ಇವರ ಕೈಗೆ........”

ನನ್ನ ಹೆಂಡತಿಯ ಮುಖ ಇನ್ನಷ್ಟು ಬಿಳುಪೇರಿತು. ಚಿಂತೆ ಅವಳನ್ನು ಮತ್ತೆ ಗ್ರಾಸಿಸಲಿತ್ತು. ನಾನೆಂದೆ: “ ಛೀ, ನೀನು ಹಾಗೆನಬಾರದು. ”

ಉಗಿಹಡಗದ ಬುಡದಲ್ಲಿ ಸತತವಾಗಿ ಮಂಥನ ನಡೆಯಿಸಿದ ಸಾಗರ ವೀಚಿಗಳ ಸಪ್ಪಳವು ಕೇಳಬರುತ್ತಲೇ ಇತ್ತು. ಗಾಳಿಯು ಮಂದತೆಯನ್ನು ತೊರೆದಿತ್ತು. ನಾವು ನಮ್ಮ ಕೋಣೆ ಸೇರಿದೆವು. ಹೆಂಡತಿಗೆ ನಿದ್ದೆ ಹತ್ತಿತು. ನಾನೂ ಕಡಲಿನಾಕ್ರೋಶವನ್ನು ಕೇಳುತ್ತ ಬಿದ್ದುಕೊಂಡಿದ್ದೆ. ಜಕ್ಕಣಿಯಂತೆ ಕಾಣುವ ಮುದುಕಿಯೊಬ್ಬಳು ಹೊರಗೆ ಅಲ್ಲಿಯೇ ಚಾಪಿಯ ಮೇಲೆ ಎಲ್ಲ ಪ್ರಪಂಚವನ್ನೂ ನಿರ್ಲಕ್ಷಿಸುವಂತೆ ಅಫು ಸೇದುತ್ತ ಕುಳಿತಿದ್ದಳು.

ಮರುದಿನ ಬೆಳಗು ಸಿಂಗ್‌ಟ್ಯಾವೋವಿನ ಹಸಿರು ಬೆಟ್ಟಗಳು ದಿಗಂತ ದಲ್ಲಿ ಅಂಚಿನಂತೆ ಕಂಗೊಳಿಸಿದುವು. ಹೆಪ್ಪುಗಟ್ಟಿದ ನನ್ನ ಹೃದಯದ ಮೇಲೆ ಬೆಚ್ಚನುಸಿರೊಂದು ಬೀಸಿದಂತಾಯಿತು.

ಮೈದುಂಬಿದಂತೆಯೇ ನಾವಿಬ್ಬರೂ “ ಆಹಾ! ತಾಯಿನಾಡೇ! ” ಎಂದು ಕೂಗಿದೆವು.



# ಬಿಡುಗಡೆ     

ಹೊಲಗಳಲ್ಲಿ ಕೆಂಪು ತೆನೆಗಳಿಂದ ಕೂಡಿದ ಬೆಳೆ, ಬಿಸಿಲಿನಲ್ಲಿ ಹೊಳೆಯುತ್ತಿತ್ತು. ಸುಗ್ಗಿ ದಿನದಿನಕ್ಕೂ ಹತ್ತಿರವಾಗುತ್ತಿತ್ತು, ಆದರೂ ಯಾರೂ ಅದರ ಬಗ್ಗೆ ಚಿಂತೆ ಮಾಡುತ್ತಿರಲಿಲ್ಲ. ಅದರಲ್ಲಿಯೂ ತರುಣ ಒಕ್ಕಲಿಗರಿಗೂ ಆ ಸಂಗತಿ ಲಕ್ಷ್ಯಕ್ಕೆ ಬರಲೇ ಇಲ್ಲ.

ಕುಡುಗೋಲುಗಳು ನಾಗಂದಿಯ ಮೇಲೆ ಜಂಗು ತಿನ್ನುತ್ತ ಬಿದ್ದಿದ್ದವು. ಬೆಳೆ ಕೊಯ್ಯಲು ಯಾವ ಸಿದ್ಧತೆಯೂ ಇರಲಿಲ್ಲ. ತರುಣರು, ಬಂದೂಕುಗಳನ್ನು ಹೆಗಲಿಗೇರಿಸುವದರಲ್ಲಿ, ಅಥವಾ ತಮಗೆ ನಿಯಮಿಸಿದ ಸ್ಥಳಗಳನ್ನು ಪರೀಕ್ಷಿಸುವದರಲ್ಲಿ ಹೊತ್ತುಗಳೆಯುತ್ತಿದ್ದರು. ಆಗಾಗ ಕೆಲವರು ಕೂಡಿದಾಗ ಕೇಂದ್ರ ಕಚೇರಿಯ ಸುದ್ದಿಗಳನ್ನು ಚರ್ಚಿಸುತ್ತಿದ್ದರು. ಹಳೆಯ ಜನರಿಗೆ ಗೊತ್ತಾಗದ ರೀತಿಯಲ್ಲಿ ಮಾತಾಡುತ್ತಿದ್ದರು. ನಿಜವಾಗಿಯೂ ಹೊಸ ಕಥೆಗಳನ್ನೇ ಹೇಳುತ್ತಿದ್ದರು.

ಯಾರೂ ಹೆದರಿದಂತೆ ತೋರುತ್ತಿರಲಿಲ್ಲ. ಪ್ರತಿಯೊಬ್ಬ ತರುಣನೂ ಧೈರ್ಯ ತೋರಿಸುವಲ್ಲಿ ಮತ್ತೊಬ್ಬನೊಡನೆ ಸ್ಪರ್ಧಿಸುತ್ತಿದ್ದನು. ಜಪಾನೀ ಸೈನ್ಯವನ್ನು ಅದರಲ್ಲಿಯೂ ಮುಖ್ಯಾಧಿಕಾರಗಳನ್ನು ಸುಡುವೆನೆಂದು ಪಣ ತೊಡುತ್ತಿದ್ದರು. ವೈರಿಗಳಲ್ಲಿ ಶುದ್ಧ ತಿರಸ್ಕಾರ ತೋರಿಸುತ್ತಿದ್ದರು. ಅವರೆಲ್ಲ ಕೆಲಸಕ್ಕೆ ಬಾರದವರೆಂದು ತಿಳಿದಿದ್ದರು. ಕೆಲವು ಸಾರೆ ರಶಿಯನ್ನರನ್ನೂ ಬೈಯುತ್ತಿದ್ದರು. ರಶಿಯಕ್ಕೂ ಜಪಾನಕ್ಕೂ ಯುದ್ಧ ನಡೆದಾಗ ಎಷ್ಟೋ ರಶಿಯನ್ನರು ಸೋತು ಓಡಿ ಹೋಗಿದ್ದರೆಂದು ಅವರು ಹಿರಿಯರಿಂದ ಕೇಳಿದ್ದರು. ಅದಕ್ಕೆ ಕಾರಣವೆಂದರೆ ರಶಿಯನ್ ಸೈನಿಕರು ಕ್ರಮವರಿಯದ ಕುಡುಕರಾಗಿದ್ದರಂತೆ.

"ಇಂಥ ವೇಳೆಯಲ್ಲಿ ಯುದ್ಧ ಮಾಡದೆ ಬೇರೆ ಮಾರ್ಗವೇ ಇಲ್ಲ. ಕೊನೆಗೆ ಅವರು ಸಾಯದೆ ನಾವು ಜೀವಿಸುವ ಹಾಗಿಲ್ಲ. ದಿನದಿನಕ್ಕೂ

ಜಪಾನೀ ಸೈನಿಕರೂ ನಮಗಿಂತ ಹೆಚ್ಚು ಬಲಿಷ್ಠರೂ ಧೈರ್ಯಶಾಲಿಗಳೂ ಆಗುವದನ್ನು ನೋಡಿ ಸುಮ್ಮನೆ ಹೇಗೆ ಇರುವದು ? ಸುಮ್ಮನೆ ನಮ್ಮ ಹೆಂಡಿರು-ಮಕ್ಕಳನ್ನು ಅವರ ವಶಕ್ಕೊಪ್ಪಿಸಬೇಕೇ ? ಅವರನ್ನೂ ತಂದೆ ತಾಯಿಗಳನ್ನೂ ಆ ಹೇಡಿಗಳು ಹೊಡೆದು ಕೆಡವುತ್ತಿರುವದನ್ನು ನಾವು ನೋಡ ಬೇಕೇ ? ನಮ್ಮ ದಳಪತಿ, ಹೌದು, ಅವನೇ ನಿಜವಾದ ಮನುಷ್ಯ ! "

" ದಳಪತಿಯೇ ? ಅವನ ಸಂಸಾರವೆಲ್ಲ ಜಪಾನೀಯರಿಂದ ಹಾಳಾ ಗಿರದಿದ್ದರೆ ಅವನು ಈ ರೀತಿ ಯುದ್ಧ ಮಾಡುತ್ತಲೇ ಇರಲಿಲ್ಲ ಶೌರ್ಯ ದಿಂದ ಕಾದಬೇಕಾದರೆ, ಮನುಷ್ಯರು ಭಯಂಕರ ಪೀಡೆಗೊಳಗಾಗಿರಬೇಕು. ಈಗಂತೂ ಸಮೃದ್ಧಿಯ ನಗರದಿಂದ ಏಳು ಜನರು ಹೊಸದಾಗಿ ಬಂದಿದ್ದಾರೆ ನಿನಗೆ ಗೊತ್ತಿದೆಯೇ ? ಅವರೆಲ್ಲರ ಹತ್ತಿರ ಬಂದೂಕುಗಳಿವೆ. " ಒಂದ ಗಿಡದ ಕೆಳಗೆ ಬಂದೂಕನ್ನು ಹತ್ತಿರ ಇಟ್ಟುಕೊಂಡು, ಕಣ್ಣುಗಳನ್ನು ಅರ್ಧ ಮುಚ್ಚಿದ್ದ ಟ್ಯಾಂಗ್ ಹೇಳಿದ.

" ಮೊದಲು ಇವರು ಒಂಬತ್ತು ಜನರಿದ್ದರಂತೆ. ಬರುವಾಗ ಇಬ್ಬರು. ಅದೃಶ್ಯರಾದರಂತೆ. ನಮ್ಮವರಲ್ಲಿಯೇ ಒಬ್ಬನಾದ ಶಿಯೊ-ವಿಂಗ್‌ನನ್ನು ನಾನು ಹಿಡಿದಿಲ್ಲ. "

" ಶಿಯೊ-ವಿಂಗ್ ! ಅವನು ತರುಣನಿದ್ದಾನೆ. ಆಗಬಹುದು. ಅವನು ಮೊದಲು ವಿದ್ಯಾರ್ಥಿಯಾಗಿದ್ದ. ಆದರೆ ನಮ್ಮಂತೆಯೇ ಅವನಿಗೂ ಕಹಿ ಕೂಳು ಸಿಕ್ಕಿದೆ. ಅವನು ವ್ಯರ್ಥವಾಗಿ ಓದಿಕೊಂಡಿಲ್ಲ. "

ನೆತ್ತಿಯ ಮೇಲೆ ಸೂರ್ಯನ ಉರಿನಾಲಿಗೆಗಳು ಅವರೆಡೆಗೆ ಚಾಚಿ ದ್ದವು. ಪ್ರತಿಯೊಬ್ಬರೂ ಗಿಡದ ನೆರಳಿಗೆ ಸೇರಿದ್ದರು. ಬೆಳೆಯೂ ಕಾಡಿನ ಹುಲ್ಲೂ ಜೋಲುಮೋರೆ ಹಾಕಿದ್ದವು. ಸತತವಾಗಿ ಝೇಂಕರಿಸುವ ಭ್ರಮರ ಗಳನ್ನು ಬಿಟ್ಟರೆ ಉಳಿದ ಹುಳಗಳೂ ಸ್ತಬ್ಧವಾಗಿದ್ದವು. ಹಳ್ಳಿಯ ಕೊನೆಯ ಭಾಗದಲ್ಲಿ, ಹಂದಿಗಳು ಮರಿಗಳನ್ನು ಕಟ್ಟಿಕೊಂಡು ಜವುಳು ನೆಲದಲ್ಲಿ ಬಿದ್ದಿ ದ್ದವು. ಗೋಡೆಗಳ ನೆರಳಿಗೆ, ನೀಳವಾದ ನಾಲಗೆಗಳನ್ನು ಚಾಚಿ ನಾಯಿ ಗಳು ನಿಂತಿದ್ದವು. ಉಬ್ಬಿದ ಹೊಟ್ಟೆಯ ಬತ್ತಲೆ ಹುಡುಗರು,—ಕಾವಲು ಗಾರರು ಮಲಗಿದ್ದನ್ನು ನೋಡಿ,—ತೋಟಗಳಿಂದ ಎಳೆಯ ಸೌತೆಕಾಯಿ ಗಳನ್ನು ಕದಿಯುತ್ತಿದ್ದರು.

ಸಾವಿರ ವರ್ಷಗಳ ಹಿಂದಿನ ಮೌನವೇ ಅಲ್ಲಿ ನೆಲಸಿದಂತಿತ್ತು. ಕೋಳಿಗಳ ಕೂಗು ಮೆಲ್ಲಗೆ ಏರಿ ಅಷ್ಟೇ ಮೆಲ್ಲಗೆ ಇಳಿಯುತ್ತಿತ್ತು. ಮಧ್ಯಾಹ್ನ ಅದೆಷ್ಟು ಮೌನವಾಗಿತ್ತು !

ಆದರೆ ಟ್ಯಾಂಗ್‌ನಿಗೆ ನಿದ್ದೆ ಬರಲಿಲ್ಲ. ಒಂದು ಎಳೆಯ ಹುಲ್ಲಿನ ಗರಿಯನ್ನೆಳೆದು, ತುಟಿಗಳ ನಡುವೆ ಇಟ್ಟು, ಪಕ್ಷಿಗಳ ಹಾಡನ್ನು ಅನುಕರಿಸಿದನು. ಸುತ್ತಲೂ ಮಲಗಿದವರು ಗೊಣಗುತ್ತ ಶಪಿಸಿದರು. ನಗುನಗುತ್ತ ಬಂದೂಕನ್ನು ಹೆಗಲಿಗೇರಿಸಿ ಮುನ್ನಡೆದನು. ಸ್ವಲ್ಪ ದೂರದಲ್ಲಿ ಬೀದಿಯ ಮಗ್ಗುಲಿನ ಒಂದು ಗುಡಿಸಲಲ್ಲಿ ಮಿಸೆಸ್ 'ಲೀ' ಇರುತ್ತಿದ್ದಳು. ಸರಿಯಾಗಿ ಅಲ್ಲಿಗೇ ಅವನು ಅಶಾಂತ ಮನಸ್ಕನಾಗಿ ನಡೆದಿದ್ದ........

ಗೋಡೆಯಲ್ಲಿಯ ಒಂದು ಖಿಂಡಿಯೊಳಗಿನಿಂದ ಒಳಗೆ ಹಣಿಕಿ ಹಾಕಿ ನೋಡಿದ. ಅವಳು ತನ್ನ ಮಗುವನ್ನು ಎದೆಗವಚಿಕೊಂಡು ನಿಂತಿದ್ದಳು. ಅವಳ ತಲೆಯ ಕುರುಳು ತೆರೆತೆರೆಯಾಗಿ ಇಳಿದಿದ್ದವು. ಅವಳಾಗ ಸಣ್ಣ ಧ್ವನಿಯಲ್ಲಿ ಹಾಡುತ್ತಿದ್ದಳು. ಅವಳ ತುಂಬಿದ ಎದೆಯಷ್ಟೇ ಅವಳ ಧ್ವನಿಯಲ್ಲಿಯೂ ಒಂದು ಮರುಳು ಮಾಡುವ ಶಕ್ತಿಯಿತ್ತು. ಒಂದು ಸಣ್ಣ ಹರಳನ್ನೆತ್ತಿ ಅವಳು ನಿಂತಿದ್ದ ಕಿಡಿಕಿಯ ಪಡಕಿಗೆ ಒಗೆದ.

" ಯಾರವರು ? " ಮೆಲ್ಲಗೆ ಕೇಳಿದಳು.

ಬಾಗಿಲನ್ನು ನೂಕಿ ಮೊದಲು ತನ್ನ ಮುಖವನ್ನಷ್ಟೇ ತೋರಿಸಿದ. ಮಿಸೆಸ್ 'ಲೀ' ಸವಿಯಾಗಿ ಮುಗ್ಧವಾಗಿ ನಕ್ಕಳು.

" ಏನು ಉದ್ಧಟ ನೀನು! ದೆವ್ವನಂತೆ ಹೀಗೇಕೆ ಬರುತ್ತೀ ? ಏನು ತೋಳಕ್ಕೆ ಹೆದರಿದಿಯೋ ಅಥವಾ ಜಪಾನೀಯರಿಗೋ ? "

ಟ್ಯಾಂಗ್ ಚಿವುಗಣ್ಣು ಮಾಡಿ ಬಾಯಿ ಕಿವಿವರೆಗೆ ಹೋಗುವಂತೆ ನಕ್ಕ ಮಾತ್ರ. ಉತ್ತರ ಕೊಡಲಿಲ್ಲ. ಅವನು ಮಾತಿನವನೇ ಅಲ್ಲ; ಕೃತಿವೀರ. ಒಳಗೆ ಬಂದವನೆ ಅವಳ ಹಿಂದೆ ನಿಂತ. ತನ್ನ ಕೈಗಳಷ್ಟೆ ಒರಟು ಮತ್ತು ಬಿರುಸಾದ ಕಿಡಕಿಯ ಪಡಕಿನ ಮೇಲೆ ಕೈಗಳನ್ನಿರಿಸಿದ, ಮನಸ್ಸು ಮಾಡಿದ್ದರೆ ಅಲ್ಲಿಂದಲೆ ಅವಳನ್ನು ಆತ ಮುಟ್ಟಬಹುದಾಗಿತ್ತು, ಆ ಮಧ್ಯಾನ್ಹದ

ಮರಬಿಸಿಲಿನ ಶಾಂತ ಸಮಯದಲ್ಲಿ ಉಳಿದೆಲ್ಲ ಜಗತ್ತು ನಿದ್ರಿಸುತ್ತಿರುವಾಗ.

" ನಿನ್ನ ಕೆಲಸ ಬಿಟ್ಟು ಮತ್ತೇಕೆ ಇಲ್ಲಿಗೆ ಬಂದೆ ? " ಮಿಸೆಸ್ 'ಲೀ' ಕೇಳಿದಳು. ಪ್ರತಿ ಕ್ಷಣಕ್ಕೂ ಅವನ ಅಂಗವಿನ್ಯಾಸಗಳನ್ನು ಅವಳ ಕಣ್ಣುಗಳು ನೋಡಿ ನೋಡಿ ಬಿಸಿಯೇರುತ್ತಿದ್ದವು. ಅವನ ದಟ್ಟವಾದ ಕೂದಲಿನ ಕಪ್ಪು, ಬಂಗಾರ ಬಣ್ಣದ ಎದೆ-ಹರವು ಮತ್ತು ತೆರೆದ ದುಂಡು ತೋಳು.... ಇವು ಅವಳ ಮನಸ್ಸನ್ನು ಚಂಚಲವಾಗಿಸಿದವು.

" ಕೂಸು ಮಲಗಿದೆಯೋ ? "

" ಯಾಕೆ ಕೇಳುತ್ತೀ ? ನಿನಗೇನು ಸಂಬಂಧ ? ನಿನ್ನ ಮನಸ್ಸಿನಲ್ಲಿ ಇದ್ದದ್ದಾದರೂ ಏನು ? "

ಅವನು ಉತ್ತರ ಕೊಡಲಿಲ್ಲ. ಅವಳ ಕೆಂಪೇರುತ್ತಿದ್ದ ಕೆನ್ನೆಗಳನ್ನು ಸವರುವದರಲ್ಲಿ ತೊಡಗಿದ್ದ. ಅವು ಮಾತ್ರ ಹೆಚ್ಚಾಗಿ ಕೆಂಪೇರಿದವು. ಜೊತೆಗೆ ಹೃದಯ ಹೆಚ್ಚು ವೇಗದಿಂದ ಹಾರಹತ್ತಿತು.

" ಸ್ವಲ್ಪ ತಡೆ....ಮಗುವನ್ನು ಮಲಗಿಸಿ ಬರುತ್ತೇನೆ. ಒಮ್ಮೆ ಚೆನ್ನಾಗಿ ಏಟು ತಿನ್ನದ ವರೆಗೆ ನನ್ನ ನೀರು ನಿನಗೆ ಗೊತ್ತಾಗದು. "

ಅವನಿಂದ ಬಿಡಿಸಿಕೊಂಡು ಮಗುವನ್ನು ಚಾಪೆಯ ಮೇಲೆ ಮಲಗಿಸಿದರೂ, ಅವನನ್ನು ಹೊಡೆಯುವ ಗೋಜಿಗೆ ಮಾತ್ರ ಹೋಗಲಿಲ್ಲ. ಅವಳ ಗಲ್ಲಗಳು ಇನ್ನೂ ಕೆಂಪಾಗಿದ್ದವು. ತಲೆಯೆತ್ತುವ ಧೈರ್ಯ ಅವಳಿಗಿರಲಿಲ್ಲ. ಬದಲಾಗಿ ಅವಳು ತನ್ನ ಕೂದಲನ್ನು ಸರಿಪಡಿಸಿಕೊಳ್ಳಹತ್ತಿದಳು. ಹಾಗೆ ಮಾಡುವಾಗ, ಅದು ಹೇಗೋ ಅವನ ಗಡ್ಡ ಅವಳ ಕೆಂದುಟಿಗೆ ತಾಕಿದವು. ಒಂದು ಕ್ಷಣದಲ್ಲಿ ಅವನ ಕೆಂಪು ತೋಳು ಅವಳ ತುಂಬಿದ ಎದೆಯನ್ನು ಬಳಸಿದವು; ಒಂದು ಗಳಿಗೆ ಇಬ್ಬರೂ ಸುಮ್ಮನೆ ನಿಂತರು. ಆಮೇಲೆ ಅವಳು ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಇಬ್ಬರೂ ಜಗಳಾಡಿದರು, ಒಬ್ಬರನ್ನೊಬ್ಬರು ಶಪಿಸಿದರು. ಹೊರಗೆ ಯಾರಾದರೂ ನೋಡಿದ್ದರೆ ಇಬ್ಬರೂ ಒಬ್ಬರನ್ನೊಬ್ಬರು ನುಂಗುತ್ತಾರೇನೊ ಎಂದು ತಿಳಿದುಕೊಳ್ಳಬಹುದಾಗಿತ್ತು.

ಮೆಲ್ಲಗೆ ಗುಡಿಸಲಿನ ಬಾಗಿಲು ಮುಚ್ಚಿ ಹೊರಗೆ ಬಂದ. ಎಚ್ಚರದಪ್ಪಿದವರಂತೆ ಅಶಕ್ತನಾಗಿದ್ದ. ಈಗ ಹುಲ್ಲುಕಡ್ಡಿಯಿಂದ ಪಕ್ಷಿಗಳ ಧ್ವನಿಯನ್ನು

ಅನುಕರಿಸುವ ಸ್ಥಿತಿಯಲ್ಲಿರಲಿಲ್ಲ. ಹೆಗಲ ಮೇಲಿದ್ದ ಬಂದೂಕು ಐದಾರು ಪೌಂಡು ಹೆಚ್ಚಿಗೆ ಭಾರವಾದಂತೆನಿಸಿತು.

ದೊಡ್ಡ ಗಿಡದ ಕೆಳಗೆ ಬಂದೂಕನ್ನು ಹಿಡಿದು ಜನರು ಕುಳಿತಿರುವದನ್ನು ನೋಡಿ 'ಏನಾದರೂ ಆಗಿರಬಹುದೇ?' ಎಂದು ಅವನು ಒಮ್ಮೆಲೇ ಬೆಚ್ಚಿದ.

"ಕತ್ತೇ; ಎಲ್ಲಿ ಹೋಗಿದ್ದೆ ತಿರಗಾಡಲು? ನಿಮ್ಮಂಥವರು ನಮ್ಮನ್ನು ಹಾಳು ಮಾಡುತ್ತೀರಿ. ಇನ್ನೊಮ್ಮೆ ಹೀಗೆ ಆದರೆ ಕೇಂದ್ರ ಕಚೇರಿಯವರಿಗೆ ತಿಳಿಸಬೇಕಾಗುತ್ತದೆ."

ದಳಪತಿ ಸಿಟ್ಟಿಗೆದ್ದಿದ್ದ. ಅವನು ಎತ್ತರವಾಗಿದ್ದು, ಮುಂಗೈಯಿಂದ ಒಂದು ಪಿಸ್ತೂಲು ತೂಗಾಡುತ್ತಿದ್ದು, ರೆಕ್ಕೆಯಿಲ್ಲದ ಹದ್ದಿನಂತೆ ಕಾಣುತ್ತಿದ್ದ. ಮೊದಲು ಅವನು ಫೆಂಗ್-ಟಾಯಿನ್‌ದ ಒಕ್ಕಲಿಗನಾಗಿದ್ದ. ಆಮೇಲೆ ಸೈನಿಕನಾಗಿದ್ದ. ನಂತರ ಕಳ್ಳಕಾಕರ ಗುಂಪಿಗೆ ಸೇರಿ ಅಲ್ಲಿಂದ ಜನರ ಕ್ರಾಂತಿ ಸೈನ್ಯಕ್ಕೆ ಹೊಕ್ಕಿದ್ದ. ಅವನು ಜಪಾನೀಯರ ಜೊತೆಗೆ ಯುದ್ಧ ಮಾಡಿದ್ದ. ಇಷ್ಟೇ ಅಲ್ಲದೆ ಅವರಿಗೆ ಯಾವ ರೀತಿಯಲ್ಲಾದರೂ ಸಹಾಯ ಮಾಡಿದವರು, ಮತ್ತು ಕ್ರಾಂತಿಯನ್ನು ವಿರೋಧಿಸಿದವರು ಅವನಿಗೆ ಬಲಿಯಾಗಿದ್ದರು. ಅವನು ಹಾಕಿದ ಕ್ರಮವನ್ನು ಎಲ್ಲರೂ ನಡೆಸಲೇಬೇಕು. ಅವನ ಪರಾಕ್ರಮಕ್ಕೂ, ದರ್ಪಕ್ಕೂ ಗುರುತಾಗಿ ಜನರು 'ಕಬ್ಬಿಣದ ಹದ್ದು' ಎಂದು ಅವನಿಗೆ ಹೆಸರಿಟ್ಟಿದ್ದರು.

"ಇವನನ್ನು ಕೇಂದ್ರ ಕಚೇರಿಗೆ ಒಯ್ದು ತಿರುಗಿ ಕರೆದುಕೊಂಡು ಬಾ" ಒಬ್ಬ ಹೊಸಬನನ್ನು ತೋರಿಸಿ, ಟ್ಯಾಂಗ್‌ನಿಗೆ ಆಜ್ಞಾಪಿಸಿದನು.

ಅಂಥ ದಳಪತಿಯ ಎದುರಿಗೆ, ತಿಳಿಸಿ ಹೇಳಬೇಕೆಂದರೆ ಟ್ಯಾಂಗ್‌ನಿಗೆ ಶಬ್ದ ಸಿಗಲಿಲ್ಲ. ಅವನು ವಿನಯದಿಂದ ಹೊಸಬನಿಗೆ ಹಾದಿ ತೋರಿಸಲು ಮುಂದಾದನು. ಹೊಸಬನ ವೇಷ ಒಕ್ಕಲಿಗನಂತಿದ್ದರೂ ನಿಜವಾದ ಕಾರ್ಯಕರ್ತರ ಕಳೆ ಅವನಲ್ಲಿತ್ತು. ಅವನ ಮೂಗಿನ ಹೊಳ್ಳೆಗಳನ್ನು ಮತ್ತು ಆಳವಾದ ಕಣ್ಣುಗಳನ್ನು ನೋಡಿದಾಗಲೆ ಕಬ್ಬಿಣದ ಗಣಿಯಲ್ಲಿ ಕೆಲಸ ಮಾಡಿದವನೆಂದು ಹೇಳಬಹುದಾಗಿತ್ತು.

" ಗೆಳೆಯ, ಸ್ಪ್ರಿ ಮಾರ್ಕೆಟ್ಟಿನಿಂದ ಬಂದಿರುವಿಯೇನು ? " ಟ್ಯಾಂಗ್ ಕೇಳಿದ.

" ಹೌದು ಸ್ಪ್ರಿ ಮಾರ್ಕೆಟ್ಟಿನಿಂದ " ಅವನು ಬಹಳ ವೇಗವಾಗಿ, ಅಥವಾ ಬಹಳ ದೂರ ಓಡಿದವರಂತ ತುಂಬ ದಣಿದಿದ್ದ. ಹೊಲಗಳನ್ನು ಹಾದು ಹೋಗುವಾಗ ' ಕೇಂದ್ರ ಕಚೇರಿ ಎಷ್ಟು ದೂರ ಇದೆ ? ' ಎಂದು ಕೇಳುತ್ತಿದ್ದ.

ಅವನು ತಂದಿರಬಹುದಾದ ಸುದ್ದಿ, ಅವನ ಕೆಲಸ ಇವುಗಳ ವಿಷಯ ವಾಗಿ ಟ್ಯಾಂಗ್‌ನಿಗೆ ಕುತೂಹಲ ಕೆರಳಿತು. ಆದರೆ ಅದು ತನ್ನ ಕೆಲಸವಲ್ಲ ವೆಂದು ಸುಮ್ಮನಿದ್ದ. ಕೊನೆಗೆ ಕೇಳಿದ: " ನೀನು ರೇಲ್ವೇ ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿಯೇನು ? "

" ಹೌದು " ಎಂದು ಹೇಳಿ ಅವನು ಮುಖ ತಿರುಗಿಸಿದ. ಆಗ ಟ್ಯಾಂಗನ ತೋಳಿನ ಮೇಲಿನ, ಪಳದಿಯ ನಕ್ಷತ್ರದಿಂದ ಕೂಡಿದ ಕೆಂಪು ಅರಿವೆಯು ಹೂ ಕಣ್ಣಿಗೆ ಬಿತ್ತು. ಮಾಸಿದ್ದರೂ ಅದರ ಮೊದಲಿನ ಬಣ್ಣ ಕೆಂಪು ಎಂದು ಗೊತ್ತಾಗುತ್ತಿತ್ತು. ಹೊಸಬ ನಕ್ಕ.

" ನಿಮ್ಮ ಕಡೆಗೆ ಶಸ್ತ್ರಗಳಿವೆ! ಆದರೂ ನಮಗಿದ್ದ ಬಲವಾದ ಅಸ್ತ್ರ ವೆಂದರೆ ಸಂಪು. ಆದ್ದರಿಂದಲೇ ನಾವು ಸಂಪು ಹೂಡುತ್ತೇವೆ. ನಮ್ಮ ಫ್ಯಾಕ್ಟರಿಯ ಸುತ್ತಲೂ ಮುಳ್ಳು-ತಂತಿಯ ಬೇಲಿ ಮತ್ತು ತಗ್ಗುಗಳಿವೆ. ಹಗಲು ರಾತ್ರಿ ಮಶಿನ್‌ಗನ್ನುಗಳು ನಮ್ಮ ಎದೆಗೆ ಮುಖ ಮಾಡಿ ನಿಂತಿವೆ. ಜಪಾನೀ ಸೈನ್ಯ ನಮ್ಮ ಸುತ್ತಲೂ ಇದೆ. ಆದರೂ ಅವರಿಗೆ ಧೈರ್ಯವಿಲ್ಲ...."

ಒಮ್ಮೆಲೇ, ಹಾರುತ್ತಿದ್ದ ಕೆಂಪು ಧ್ವಜ ಅವನ ಕಣ್ಣಿಗೆ ಬೀಳಲು ಅವನು ಟೊಪ್ಪಿಗೆಯನ್ನು ತೆಗೆದ. ಅವನ ಕಣ್ಣುಗಳಲ್ಲಿ ಆನಂದ ತುಂಬಿತ್ತು.

" ಅದೇ ಕೇಂದ್ರ ಕಚೇರಿಯೇನು ? "

ಹೌದೆಂದು ಟ್ಯಾಂಗ್ ಹೇಳಿದ. ಹೊಸಬನಲ್ಲಾದ ಭಾವಪರವಶತೆ ಯನ್ನು ನೋಡಿ ಅವನಿಗೆ ತನ್ನಲ್ಲಿಯೇ ಗೌರವ ಹುಟ್ಟಿತು. ಇಬ್ಬರಿಗೂ ಸಾಮಾನ್ಯವಾದ ಉದ್ದೇಶದ ವೈಭವದೆದುರು ಉಳಿದವೆಲ್ಲವೂ ಅರ್ಥಹೀನ ವೆನಿಸಿತು. ಅವನ ಹೃದಯದಲ್ಲಿ ಒಂದು ವಿಚಿತ್ರವಾದ ಪೌರುಷಯುಕ್ತ

ವಾದ ಆನಂದ ತುಂಬಿತು. ಮಿಸೆಸ್ 'ಲೀ'ಯ ಸಾನಿಧ್ಯದಲ್ಲಿ ದೊರಕುವ ಸುಖಕ್ಕಿಂತ ಇದು ಬೇರೆಯಾಗಿತ್ತು; ಹೆಚ್ಚು ಉದಾತ್ತವಾಗಿತ್ತು."

"ನಿನ್ನ ಹೆಸರೇನು ಕಾ:ಮ್ರೇಡ್ ?"

ಟ್ಯಾಂಗ್ ತನ್ನ ಹೆಸರನ್ನಷ್ಟೇ ಹೇಳಲಿಲ್ಲ. ಉತ್ಸಾಹಪೂರ್ಣನಾಗಿ ತಾನು, ತನ್ನ ಸೈನ್ಯ ಇವುಗಳ ವಿಷಯವಾಗಿ ಎಲ್ಲವನ್ನೂ ಈ ನಗರದವನಿಗೆ ಹೇಳಿದ.

ಮೃದುವಾದ ಗಾಳಿಯ ಸುಳಿಯೊಂದು ಮರ್ಮರ ನಾದ ಹುಟ್ಟಿಸುತ್ತ ಬೆಳೆಯೊಳಗಿಂದ ಹಾದು ಬಂದಿತು. ಅದರ ಹಿಂದೆಯೇ ಕಾಡಿನ ಹಣ್ಣುಗಳ ಸುವಾಸನೆ, ಮತ್ತು ದೂರದ ಹಳ್ಳಿಯೊಂದರ ನಗೆ ಇವು ಬಂದವು.

"ಜಪಾನೀಯರು ವಿಷಜಂತುಗಳು. ಕತ್ತೆಗಳಷ್ಟು ಮೂರ್ಖರಿದ್ದರೂ ಬೆಟ್ಟಗಳನ್ನೇರಬಲ್ಲೆವೆಂದು ತಿಳಿದುಕೊಂಡಿದ್ದಾರೆ. ಇಲ್ಲಿ ಅವರ ಸಿದ್ಧತೆ ಎಷ್ಟಿದ್ದರೂ ನಿರುಪಯುಕ್ತವೇ -- ಅವರ ಭಾರವಾದ ಮಶಿನ್‌ಗನ್ನುಗಳು, ವಿಮಾನದಿಂದ ಕೆಳಗೆ ಒಗೆಯುವ ಬಾಂಬುಗಳು ಎಲ್ಲ! ಇಡೀ ದೇಶವೆಲ್ಲ ನಮಗೆ ಗೊತ್ತು. ಎಲ್ಲಿ ರಾಜಮಾರ್ಗಗಳು, ಕಾಲುದಾರಿಗಳು ಗವಿಗಳು ಇರುತ್ತವೆಂಬುದನ್ನು ಬಲ್ಲೆವು. ನಮ್ಮ ಸಂಖ್ಯೆ ಹೆಚ್ಚುತ್ತಿದೆ. ಪ್ರತಿ ದಿನವೂ ಒಬ್ಬ ಹೊಸಬ ನಮ್ಮನ್ನು ಕೂಡಿಕೊಳ್ಳುತ್ತಾನೆ."

"ಕೇಂದ್ರ ಕಚೇರಿಯಲ್ಲಿ ಒಬ್ಬ ಹುಡುಗಿ ಇದ್ದಾಳೆ. ಅವಳು ನಿನ್ನ ಜೊತೆಗೆ ಮಾತಾಡಬಹುದು. ಅವಳು ನಮಗೆ ಭಾಷಣ ಕೊಡುತ್ತಾಳೆ.... ಎಂಥ ಮಾತುಗಾರಿಕೆ ಅದು! ಅವಳಿಗೆ ಬಂದೂಕನ್ನು ಹೊಡೆಯುವ ಕಲೆಯೂ ಗೊತ್ತು. ಇದಲ್ಲದೆ ನಮಗೆಲ್ಲ ಅಕ್ಷರಗಳನ್ನು ಹೇಳಿಕೊಡುತ್ತಾಳೆ. ನಾವು ಜಪಾನೀಯರ ಜೊತೆಗೆ ಯುದ್ಧಮಾಡುವದೇಕೆಂದು ತಿಳಿಸಿ ಹೇಳುತ್ತಾಳೆ."

ಅವನ ಗಂಟಲು ಒಣಗಿತ್ತು. ಅವನಿಗೆ ಮಾತನಾಡಲು ಆಗುತ್ತಿರಲಿಲ್ಲ. ಆದರೂ ಎಲ್ಲವನ್ನೂ ಹೇಳಬೇಕೆಂದು ನಿಶ್ಚಯಮಾಡಿದ್ದ.

"ಅವಳು ಬೇರೆ ದೇಶದವಳೆಂದು ನಿನಗೆ ಗೊತ್ತೇ ಆಗುವದಿಲ್ಲ.

ಅವಳು ಕೋರಿಯಾದವಳೆಂದು ತಿಳಿಯಲಾರೆ. ಅವಳ ತಂದೆ ಕೋರಿಯದ ಕ್ರಾಂತಿಯ ಮುಂದಾಳಾಗಿದ್ದ. ಶಾಂಘಾಯಿಯಲ್ಲಿ ಜಪಾನೀಯರು ಅವನನ್ನು ಕೊಂದರು....ಅವಳು ಚೀನದಲ್ಲಿ ಶಿಕ್ಷಣ ಹೊಂದಿದಳು."

ಅವರು ಕಾವಲಿದ್ದ ಗೇಟಿನಿಂದ ಮುಣ್ಣು ಗೋಡೆಗಳ ಹಳ್ಳಿಗೆ ಹೋದರು. ಒಬ್ಬ ಕಾವಲುಗಾರನು ಹೊಸ ಕಾ:ಮ್ರೇಡನನ್ನು ಪ್ರಶ್ನಿಸಿ ಒಳಗೊಯ್ದ. ಟ್ಯಾಂಗ್ ತನ್ನ ಗೆಳೆಯರೊಂದಿಗೆ ಹರಟೆ ಹೊಡೆಯಲು ಹೊರಟು ಹೋದ.

* * * *

ಸಂಜೆಯ ದಾಳಿಯ ಸಿದ್ಧತೆ ಎಲ್ಲ ಆಗಿತ್ತು.

ಗಾಳಿ ಸುಳಿಯುತ್ತಿರಲೇ ಇಲ್ಲ. ಎತ್ತರವಾದ ಬೆಳೆ ಒಂದಿಷ್ಟೂ ಅಲುಗಾಡಲಿಲ್ಲ. ಗಾಡಿಯ ಹಳಿಯ ಮಗ್ಗುಲಲ್ಲಿ ಮೂವತ್ತು ಸ್ವಯಂಸೇವಕರು ಕೇವಲ ಇಪ್ಪತ್ತು ಬಂದೂಕುಗಳನ್ನು ತೆಗೆದುಕೊಂಡು ಸುಮ್ಮನೆ ಮಲಗಿದ್ದರು.

ದಳಪತಿಯು, ಮುಂಗೈಯಿಂದ ಪಿಸ್ತೂಲನ್ನು ತೂಗಾಡಿಸುತ್ತ, ಪ್ರತಿಯೊಬ್ಬನ ಸ್ಥಾನವನ್ನು ಪರೀಕ್ಷಿಸುತ್ತ, ಕಣ್ಣುಗಳನ್ನು ಭಯಂಕರವಾಗಿ ಹೊರಳಿಸುತ್ತ, ಅತ್ತ ಇತ್ತ ಅಡ್ಡಾಡುತ್ತಿದ್ದನು. ' ಬಂದೂಕುಗಳನ್ನು ತೀರ ಮೇಲಕ್ಕೆ ಎತ್ತಿ ಹಿಡಿದಿದ್ದರೆ ವೈರಿಗಳಿಗೆ ಕಾಣಿಸಬಹುದು. ಮೇಲೇರಿ ಬರುವ ಅವರು ತಡೆದು, ಸಿದ್ಧರಾಗಬಹುದು. ಅದರಿಂದ ಮತ್ತಿಷ್ಟು ತೊಡಕಾಗಬಹುದು. ಗುಂಡುಗಳನ್ನು ವ್ಯರ್ಥ ಹಾರಿಸಬಾರದಲ್ಲ!"

"ಗೆಳೆಯರೆ, ನನ್ನ ಆಣತಿಗಾಗಿ ಕಾಯುತ್ತಿರಿ!"

ಅವನ ಮಾತಿನಲ್ಲಿ ಯಾವಾಗಲೂ ಮೊನೆಯಿರುತ್ತಿತ್ತು; ಅದು ನೇರವಾಗಿಯೆ ಬರುತ್ತಿತ್ತು. ತನ್ನ ಮಾತಿಗೆ ಪ್ರತಿ ಮಾತನ್ನು ಅವನು ಕೇಳಿದವನೆ ಅಲ್ಲ. ಅವನೊಮ್ಮೆ ಒಂದು ಆಣತಿಯಿತ್ತನೆಂದರೆ ತೀರಿತು, ತಾನೇ ಅದರ ಪ್ರಾಣವಾಗಿಬಿಡುತ್ತಿದ್ದ; ಅದಕ್ಕಾಗಿ ಪ್ರಾಣ ಕೊಡುತ್ತಿದ್ದ. ಟ್ಯಾಂಗ್‌ನಿಗೆ ಇದು ಸರಿಬರುತ್ತಿರಲಿಲ್ಲ. ಕೆಲವೊಂದು ವಿಷಯುಗಳನ್ನು ವಿಚಾರ ವಿನಿಮಯದಿಂದ ಚರ್ಚಿಸಿ ನಿರ್ಣಯಿಸುವದಗತ್ಯವೆಂದು ಅವನಿಗೆ ತೋರುತ್ತಿದ್ದರೂ ಕೊಟ್ಟ ಆಣತಿಯನ್ನೇನು ಮೀರುತ್ತಿರಲಿಲ್ಲ.

ಅವನು ಯಾವೋ ವನಸ್ಪತಿಗಳ ಎಲೆಗಳನ್ನು ಸುರಿಸತೊಡಗಿದ್ದವನು ಅವನ್ನು ಉಗುಳಿ ಮತ್ತೆ ಬೇರೆ ಎಲೆಗಳನ್ನು ಬಾಯಲ್ಲಿ ಹಾಕಿಕೊಂಡ. ಅವನಿಗೆ ಮಿಸೆಸ್ 'ಲೀ'ಯ ತುಂಬಿದ ಎದೆಯು ನೆನಪಾಗುತ್ತಿತ್ತು.

ಟೊಪ್ಪಿಗೆಯು ಬದಲು ಎಲೆಗಳ ಮಾಲೆಯನ್ನು ತಲೆಯ ಮೇಲೆ ಹಾಕಿಕೊಂಡು ಯಾರಿಗೂ ಕಾಣಿಸದಂತೆ ಮಲಗಿಕೊಂಡರು. ಅವರ ಹಿಂದೆ ಬಂದೂಕು ಇಲ್ಲದ ಹತ್ತು ಜನರು ಕೆಲವು ಚೂಪಾದ -ಕಲ್ಲುಗಳನ್ನು ಹುಡುಕಾಡ ತೊಡಗಿದರು.

"ಯಾರೂ ಕಾಣಿಸಲಿಲ್ಲವೇ?" ಒಬ್ಬ ಕೇಳಿದ.

"ಹಳಿಯ ಮೇಲೆ ಏನಾದರೂ ಕೇಳಿಸುತ್ತಿದೆಯೇ?"

"ದೈವಗೇಡಿಗಳು! ಹೊಟ್ಟೆ ತುಂಬ ತಿಂದಿದ್ದರ ಫಲವಾಗಿ ಜೀವ ಕಳಕೊಳ್ಳುವ ಪ್ರಸಂಗ ಬಂದಿದೆ."

"ಸ್ವಾಪ್ಮಾರ್ಕೆಟ್ಟಕ್ಕೆ ಇಲ್ಲಿಂದ ನೂರು ಫರ್ಲಾಂಗುಗಳಷ್ಟಾಗಬಹುದು. ವೈರಿಗಳು ಕುಡಿದಿದ್ದಾರು. ಗಾಡಿಯಿಂದ ನಮಗೇನಾದರೂ ಮಾಂಸ ಮದ್ಯ ತರಬಹುದು. ನಿಜವೋ ಅಲ್ಲವೋ?"

"ಹುಶ್...."

ಹತ್ತಿರದಲ್ಲಿಯೇ ದೀರ್ಘವಾದ ಸಿಳ್ಳು ಕೇಳಿಸಿತು. ಹಳಿಯಿಂದ, ಗಾಲಿಗಳ ಯಾಂತ್ರಿಕ ಸಪ್ಪಳ ಕೇಳತೊಡಗಿತು. ಎತ್ತರವಾದ ಗಿಡದಿಂದ, ಒಬ್ಬನು ಕೆಂಪು ಧ್ವಜ ತೋರಿಸಿ ಸನ್ನೆ ಮಾಡಿದ.

ಎತ್ತರವಾದ ಪರ್ವತಗಳೆರಡರ ನಡುವೆ ಹಳಿ ಹಾದು ಹೋಗಿತ್ತು. ಕಣಿವೆಯಂತೆ ಇಕ್ಕಟ್ಟಾಗಿ ಸುರಕ್ಷಿತವಾಗಿತ್ತು.

ದಳಪತಿಯು ಆ ದಳದ ತಲೆಯ ಮೇಲೆಯೇ ನಿಗಿದ. ಅವನ ಬಾಯಲ್ಲಿ 'ಸೀಟಿ' ಇನ್ನೂ ನೇತಾಡುತ್ತಿತ್ತು. ಆದರೆ ಅವನ ಮುಂಗೈಯಲ್ಲಿ ಪಿಸ್ತೂಲು ಮಾತ್ರ ಇರಲಿಲ್ಲ.

ಹಳಿಯ ಮೇಲಿನ ಸಪ್ಪಳ ಹೆಚ್ಚಾಯಿತು. ಪ್ರತಿಯೊಂದು ಮುಖದ ಅಪುಡೂ ಬಿಗಿಯಾದವು. ಕಣ್ಣುಗಳು ಉದ್ವೇಗದಿಂದ ತುಂಬಿದವು. ಅವರು

ಉಸಿರಾಡಿಸುತ್ತಲೇ ಇರಲಿಲ್ಲ. ಇದು ಅವರಿಗೆ ಬಂದ ಮೊದಲನೆಯ ಪ್ರಸಂಗವಾಗಿರದಿದ್ದರೂ ಅವರ ಕೈಗಳು ನಡುಗಹತ್ತಿದವು.

ಒಮ್ಮೆಲೆ ಗಾಳಿಯು ಒಂದು ಸೆಳಕು ಹೊಲಗಳಲ್ಲಿ ಕುಣಿಯಿತು. ಅದು ತಣ್ಣಗಾಗಿ ಸವಿಯಾಗಿತ್ತು. ಸಂಜೆ ಸೌಮ್ಯವಾಗಿತ್ತು!

ಕೂಡಲೆ ಎಲ್ಲಿಯೊ ಸ್ಫೋಟವಾದಂತೆ ಸಪ್ಪಳ ಕೇಳಿಸಿತು. ಸೀಟಿ ಹುಚ್ಚಿನಿಂದ ಚೀರತೊಡಗಿತು. ಹಳಿ ತಪ್ಪಿ ಗಾಡಿ, ಸ್ತಂಭಿತವಾದ ಹಾವಿನಂತೆ ಬದಿಗೆ ಬಿದ್ದಿತು. ಆದರೂ ಅದರ ಗಾಲಿಗಳು ತಿರುಗುತ್ತಲೇ ಇದ್ದವು.

ಹೆದರಿದ ಪ್ರವಾಸಿಕರಲ್ಲಿ ಕೂಡಲೆ ಶಾಂತತೆಯನ್ನು ಹುಟ್ಟಿಸಿದರು. ಮಂಚುಕೌ ಗಾರ್ಡರನ್ನು ಒಂದು ಕಡೆಗೆ ಕಲೆಹಾಕಿದರು. ಅವರೂ ಅವರಂತೆಯೇ ಚೀನೀಯರಾಗಿದ್ದರು. ಗಾಡಿಯಲ್ಲಿ ಸಿಂಗ್‌ಚೌನದಲ್ಲಿಯ ಜಪಾನೀಯರಿಗಾಗಿ ಕಳಿಸುತ್ತಿದ್ದ, ಮದ್ಯ, ಆಹಾರ ಬೇಕಾದಷ್ಟು ಸಿಕ್ಕಿತು. ಅಲ್ಲಿ ಶಸ್ತ್ರಸಾಮುಗ್ರಿಯೂ ಇತ್ತು.

"ಶಸ್ತ್ರಗಳನ್ನು ಒಯ್ಯುವ ಗೆಳೆಯರೇ, ನಿಮ್ಮ ಉಪಕಾರ ಬಹಳವಾಯಿತು. ಈ ಸಲ ಬೇಕಾದಷ್ಟು ಬಂದೂಕುಗಳನ್ನು ತಂದಿದ್ದೀರಿ."

ದಳಪತಿಯು ತನ್ನ ಕೈದಿಗಳ ಕಡೆ ಕರುಣೆಯಿಂದ ಆದರೆ ಜುಗುಪ್ಸೆಯಿಂದ ನೋಡಿದ. ಪಿಸ್ತೂಲು ಮತ್ತೆ ಅವನ ಕೈಗೆ ಬಂದಿತು, ಗಾಡಿಯ ಗಾರ್ಡರು ದಣಿದಿದ್ದರು. ಆದರೆ ಬರಬರುತ್ತ ಅವರ ಹೆದರಿಕೆ ಕಡಿಮೆಯಾಗತೊಡಗಿತು. ಅವರಲ್ಲಿ ಧೈರ್ಯಶಾಲಿಯಾದವನೊಬ್ಬ, ಸ್ವಲ್ಪ ಹೊತ್ತಿನ ಮೇಲೆ ದಳಪತಿಯ ಹೆಸರು ಹಿಡಿದು ಕೂಗಿದನು:

"ದಳಪತಿಗಳೇ!" ಅವನೆಂದ: "ನಮಗೆ ನಿಮ್ಮ ಪರಿಚಯವಿದೆ. ನೀವು ನನ್ನನ್ನು ಶಸ್ತ್ರನ್ಯಾಸಮಾಡಿಸಿದ್ದು ಇದು ಎರಡನೆಯ ಸಾರೆ. ನಿಮಗೆ ಮೂರನೆಯ ಬಂದೂಕು ಬೇಕಾಗಿದ್ದರೆ ನಮ್ಮ ಬಿಡುಗಡೆಯಾಗಬೇಕು. ಮೂರನೆಯ ಬಂದೂಕನ್ನು ಕೂಡಲೇ ಕೊಡುತ್ತೇವೆ."

"ಹಾಗೇ ಆಗಲಿ, ಇದೊಂದು ವಚನ. ನಿಮ್ಮನ್ನು ಗಾಸಿಗೊಳಿಸಿದ್ದಕ್ಕೆ ನನಗೆ ದುಃಖವಾಗುತ್ತದೆ. ಆದರೆ ಉಪಾಯವಿದ್ದಿಲ್ಲ. ನಿಮ್ಮನ್ನು ಕೂಡಲೇ ಬಿಡುಗಡೆ ಮಾಡುತ್ತೇನೆ.

ಆದರೆ ಇಬ್ಬರು ನಾಯಕರನ್ನು ಮಾತ್ರ ಗುಂಡಿಕ್ಕಿ ಕೊಲ್ಲಲು ಒಯ್ಯಲಾಯಿತು.

ತಿರುಗಿ ಹೋಗುವಾಗ ಪ್ರತಿಯೊಬ್ಬನಲ್ಲಿಯೂ ಎರಡೆರಡು ಬಂದೂಕುಗಳಿದ್ದವು. ಆದರೆ ಆ ದಳಪತಿಯ ಕೈಯಲ್ಲಿ ಮಾತ್ರ ಅದೆ ಪಿಸ್ತೂಲು ತೂಗಾಡುತ್ತಿತ್ತು.



# ಪರಿಚಯ

## ( ಲಿನ್-ಯು-ಟಿಯಾಂಗ್ )

## ( ೧೮೯೫ — )

' My Country and My People ' ( ನನ್ನ ದೇಶ ಮತ್ತು ನನ್ನ ಜನ) ಎಂಬ ಜನಪ್ರಿಯವಾದ ಪುಸ್ತಕವನ್ನು ಬರೆದು ಲಿನ್-ಯು-ಟಿಯಾಂಗನು ದೇಶವಿದೇಶಗಳಲ್ಲಿ ಪ್ರಖ್ಯಾತನಾಗಿದ್ದಾನೆ. ಈ ಗ್ರಂಥದಲ್ಲಿ ಚೀನಾ ದೇಶದ ಪುಂಡಪಾಳಿಗಾರಿಯ ಕಾಲದ ನಾಗರಿಕತೆಯ ಪತನ ಹಾಗು ವಿನಾಶವನ್ನು ಬಣ್ಣಿಸಿದ್ದಾನೆ. ಹಾಗೆ ಮಾಡುವಾಗ ಪರದೇಶಿಯಾದವನ ಸ್ವದೇಶ ಪ್ರೇಮದ ಆತುರ ಆವೇಶದ ಶೈಲಿಯ ಹೃದಯಂಗಮತೆಯು ಇವನ ಈ ಗ್ರಂಥದಲ್ಲಿ ಸೂಸಿದೆ.

ಇವನು ಹುಟ್ಟಿದ್ದು, ' ಎಮೂಯ್ ' ದ ' ಚಾಂಗಚ್ವಿ 'ನಲ್ಲಿ. ಶಾಂಘಾಯಿಯೊಳಗಿನ ' ಸೇಂಟ್‌ಜೋನ್ ' ಮಿಶನರಿ ಶಾಲೆಯಲ್ಲಿ ಇವನು ಕಲಿತದ್ದು. ೧೯೧೬ರಲ್ಲಿ ಪದವೀಧರನಾದ. ೧೯೧೬ರಿಂದ ೧೯೧೯ರ ವರೆಗೆ ' ಶಿಂಗ್-ಹುವ್ ' ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಕನಾಗಿದ್ದ. ಆಮೇಲೆ ಇವನು ' ಹಾರ್ವರ್ಡ ' ವಿಶ್ವವಿದ್ಯಾನಿಲಯದಲ್ಲಿ ಹಾಗು ' ಲೆಪ್ಜಿಕ್ 'ನಲ್ಲಿ ವಿದ್ಯಾಭ್ಯಾಸ ಮಾಡಿ ' ಡಾಕ್ಟರ ' ಪದವಿಯನ್ನು ಪಡೆದ. ಮುಂದೆ ೧೯೨೩ರಿಂದ ೧೯೨೬ರ ವರೆಗೆ ' ಪೇಕಿಂಗ್ ' ನ್ಯಾಶನಲ್ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಕವರ್ಗವನ್ನು ಸೇರಿ ಕೆಲಸ ಮಾಡಿದನು.

೧೯೨೭ರ ನಂತರದಲ್ಲಿ ಇವನು ಇಂಗ್ಲಿಷ ಹಾಗು ಚೀನಿ ಭಾಷೆಯೆರಡರಲ್ಲೂ ಲೇಖನಗಳನ್ನು ಬರೆದು ಕೀರ್ತಿಯನ್ನು ಅದರಲ್ಲಿ ಗಳಿಸಿದ. ' ಚೀನಾ ಕ್ರಿಟಿಕ್ ' ಎಂಬ ಇಂಗ್ಲೀಷ ದೈನಿಕ ಪತ್ರಿಕೆಯೊಂದು ಶಾಂಘಾಯಿಯ ವಿದ್ವಾಂಸರ ಸಂಘದಿಂದ ಪ್ರಕಟವಾಗುವುದು. ಲಿನ್-ಯು-ಟಿಯಾಂಗನು ' The Little Critic ' ( ಕಿರಿ ವಿಮರ್ಶಕ ) ಎಂಬ ವಿಭಾಗವನ್ನು ಬರೆದು

ಅದಕ್ಕೆ ಹೆಸರು ತಂದಿದ್ದಾನೆ. ಇಷ್ಟರಲ್ಲಿಯೆ ಲಿನ್‌ನು ಹಾಸ್ಯ ವಿಡಂಬನೆಗಳುಳ್ಳ ಎರಡು ಜನಪ್ರಿಯ ಮಾಸಪತ್ರಿಕೆಗಳನ್ನು ಸಂಪಾದಿಸಿದ್ದಾನೆ. The Analects ಮತ್ತು Gen chein ship ಎಂಬೆರಡು, ಈ ಮಾಸಿಕಗಳು ಚೀನಾ ಸಾಹಿತ್ಯದಲ್ಲಿ ವಿನೋದ ಲೇಖನಕಲೆಯ ಎಷ್ಟೊ ಪ್ರಚಾರವನ್ನು ಮಾಡಿವೆ. ಶಾಂಘಾಯಿಯ 'Tien Hsia' ಎಂಬ ಆಂಗ್ಲ ಮಾಸ ಪತ್ರಿಕೆಯ ಸಹಸಂಪಾದಕನಾಗಿ ಇವನು ಕೆಲಸ ಮಾಡುತ್ತಾನೆ.

'ನನ್ನ ದೇಶ ಮತ್ತು ನನ್ನ ಜನ' ಎಂಬ ಗ್ರಂಥವಲ್ಲದೆ ಅನೇಕ ನಿಬಂಧ ಸಂಗ್ರಹಗಳನ್ನೂ, ಕೆಲವು ಆಂಗ್ಲ ಪಠ್ಯಪುಸ್ತಕಗಳನ್ನೂ, ಭಾಷಾಶಾಸ್ತ್ರವಿಷಯಕ ಗ್ರಂಥಗಳನ್ನೂ ಇವನು ಬರೆದಿದ್ದಾನೆ.

# ಶ್ವಪಾಕ ಸೇನಾಧಿಪತಿ   

## (೧)

ಅಂತೂ ಜಿಪಾ್‌ಸನ್ ಚೆಂಗನು - ಶ್ವಪಾಕ ಸೇನಾಧಿಪತಿಯು-ಇಂದಿನ ಬೆಳಗಿನ ಪತ್ರಿಕೆಗಳ ವೃತ್ತಾಂತದ ಪ್ರಕಾರ ಕೊಲ್ಲಲ್ಪಟ್ಟನು. ಅಯ್ಯೋ, ಪಾಪ! ಅವನ ಗತಿಯೇನು? ತಾಯಿಯ ಗತಿಯೇನು? ಅವನು ಹಿಂದೆ ಬಿಟ್ಟು ಹೋದ ಹದಿನೆಂಟು ಸೂಳೆಯರ ಗತಿಯೇನು? ಮತ್ತೆ ಇಂಥ ಎಷ್ಟೋ ಹದಿನೆಂಟು, ಆ ಮೊದಲೇ ಹಿಡಿದು ಬಿಟ್ಟ ಸೂಳೆಯರ ಗತಿಯೇನು? ಪಾಪ! ಈ ವಿಕಟ ಮನ್ವಂತರಗಳ ವಿಗಡದಂಡನಾಯಕರನ್ನು ಕುರಿತು ಅವರು ಸತ್ತೊಡನೆ ಸ್ಮೃತಿಗೀತಗಳನ್ನು ಬರೆಯುವ ಕಲೆಯಲ್ಲಿ ನಾನು ಪಾರಂಗತ ನಾಗಬೇಕೆಂದು ನನ್ನ ಉದ್ದೇಶವಿರುವದರಿಂದ ಶ್ವಪಾಕಸೇನಾಧಿಪತಿಗಳ ವರ್ಣನೆಯಿಂದಲೆ ಆ ಕೃತಿಗೆ ಪ್ರಾರಂಭ ಮಾಡುತ್ತೇನೆ.

ಅಂತೂ ನಮ್ಮ ಶ್ವಪಾಕಸೇನಾಧಿಪತಿ ಸತ್ತ! ಎಂಥ ಮಹತ್ವದ ಸಂಗತಿ! ಕಾಲಿಗೆ ಕೆರವು, ಕೈಗೆ ಬಾಕು ಬರ್ಚಿಗಳಿಲ್ಲದ ನಮ್ಮ ಬಡಜನರಿಗೂ ಚೀನ ದೇಶಕ್ಕೂ ಈ ಸಾವು ಒಳ್ಳೇ ದೈವಿಕ ಅರ್ಥವುಳ್ಳದ್ದಾಗಿದೆ. ಇಂಥ ಸಂಗತಿಗಳೇನು ದಿನಾಲು ಸಂಭವಿಸಲಾರವು? ಇನ್ನೇನು, ಒಂದು ವೇಳೆ ಸಂಭವಿಸಿದರೆ ಚೀನ ದೇಶದ ದುಃಖಗಳೆಲ್ಲ ಒಮ್ಮೆಲೆ ನಿವಾರಣೆಯಾಗಿ ನಿರಂಬಳವಾದೀತು! ಇಂಥ ಈ ಅಘಟಿತ ಘಟನೆಯು ಆದದ್ದೇ ಆದರೆ ಐದು 'ಯುವಾನು'ಗಳು ಇಲ್ಲದಾಗಿ, ಡಾಕ್ಟರ ಸನ್ಯತ್‌ಸೇನನ ವೃತ್ಯುಪತ್ರ ಚೂರುಚೂರಾಗಿ, ಕೋಮಿಂಗ್‌ಟಂಗ್ ಮಧ್ಯವರ್ತಿ ಕಾರ್ಯಕಾರಿ ಸಮಿತಿಯ ನೂರಾರು ಸದಸ್ಯರು ದಿಕ್ಕೇಡಾಗಿ, ಚೀನದೇಶದ ಶಾಲೆ, ವಿಶ್ವ ವಿದ್ಯಾಲಯಗಳಿಗೆ ಬೀಗ ಬಿದ್ದು, ನಿಮಗೆಲ್ಲರಿಗೂ ಈ 'ಕಮ್ಯುನಿಜಂ'

'ಫ್ಯಾಸಿಜಂ' 'ಡಿಮಾಕ್ರಸಿ' ಮೊದಲಾದ ರಾಜಕೀಯ ನೀತಿವಾದಗಳ ತಲೆಶೂಲೆ ಇಲ್ಲದಾಗಿ, ಸಾರ್ವತ್ರಿಕ ಮತದಾನ ಆಬಲೋದ್ಧಾರಗಳ ಸೊಲ್ಲಿಡಗಿ, ಇಷ್ಟೆಲ್ಲಾ ಆದರೂ ನಮ್ಮ ಬಡಜನರು ಶಾಂತಿ ಸಮೃದ್ಧಿಗಳಿಗೆ ಕೊರತೆಯಿಲ್ಲದೆ ಸುಖವಾಗಿ ಬಾಳಬಹುದು.

ಅಂತೂ ಇನ್ನೊಬ್ಬ ಚಿತ್ರವಿಚಿತ್ರ ಚಾರಿತ್ರ್ಯದ ಮಧ್ಯಯುಗೀನ ಚೀನ ದೇಸದ ದಂತಕಥಾನಾಯಕನೊಬ್ಬನು ಶಾಶ್ವತ ಸಾಮ್ರಾಜ್ಯ ಸೇರಿದನು! ಹೀಗಿದ್ದೂ ಈ ಶ್ವಪಾಕಸೇನಾಧಿಪತಿಯ ಜೀವನವು ನನ್ನ ಮಟ್ಟಿಗೆ ಇನ್ನೂ ಅರ್ಥಪೂರ್ಣವಾಗಿ ತೋರುವದು. ಅವನ ಬಾಳಿನ ಬಣ್ಣ, ಜೀವನ ಪುರಾಣ ಪದ್ಧತಿ, ಅವನ ನಿರ್ಲಜ್ಜಧೈರ್ಯ ಇವೆಲ್ಲ ಗುಣಗಳಿಂದ (ಸದ್ಯದ ಚೀನ ದೇಶದ ನಾಯಕರಲ್ಲಿ ನನಗೆ ಅವನು ಶ್ರೇಷ್ಠನಾಗಿ ತೋರುತ್ತಾನೆ.) ಸದ್ಯದ ಚೀನ ದೇಶಕ್ಕೆ ಇಂಥ ಗಂಡು ಯಜಮಾನರೇ ಬೇಕು! ಆಳು ಒಳ್ಳೇ ಆರು ಫೂಟು ಎತ್ತರ, ದೆವ್ವಿನಂಥವ. ವಕ್ರದೃಷ್ಟಿ, ಮೊರಗೈ; ತನಗೆ ಬೇಕಾದಾಗ ಅವನು ಇದಿರಿದಿರಾದ ಅಪ್ರತಿಹತವಾದ ಭಯಂಕರವಾದ ಕಾರ್ಯಪ್ರಾವಿಣ್ಯವನ್ನು ಪ್ರಕಟಿಸುತ್ತಿದ್ದನು. ಒಳ್ಳೆ ಛಲಗಾರ. ಬುದ್ಧಿ ಅಷ್ಟಕಷ್ಟು; ತನ್ನ ಇದ್ದ ಬುದ್ಧಿಗೂ ಹೋಳಿದಷ್ಟು ದೇಶಭಕ್ತಿಯು ಅವನಲ್ಲಿತ್ತು. ಇನ್ನೇನು, ಕೋಮಿಂಗ್‌ಟಂಗಿಗೆ ಪ್ರತಿಪಕ್ಷಿಯಾದರೂ ಕಮ್ಯುನಿಸ್ಟರಿಗೂ ವಿರೋಧಿಯಾಗಿದ್ದನು ಸಾಕು! ಕೋಮಿಂಗ್‌ಟಂಗಿನ ಅವನ ವಿರೋಧವು ತಾತ್ವಿಕವಲ್ಲ; ತಾತ್ಕಾಲಿಕ. ಅವನಿಗೆ ಕೋಮಿಂಗ್‌ಟಂಗಿನೊಡನೆ ಹೋರಾಡುವ ಇಚ್ಛೆ ಇರಲಿಲ್ಲ. ಕೋಮಿಂಗ್‌ಟಂಗಿನವರೇ ಅವನಿದಿರು ಕಾದಾಡಿ ಅವನ ಸೀಮೆ ಕಸಿದುಕೊಳ್ಳಬೇಕೆಂದಿದ್ದರು. ಪಾಪ, ಪ್ರಾಮಾಣಿಕ ಮನುಷ್ಯ! ಹೇಡಿಯಾಗಿ ಬೆನ್ನುಗೊಡುವದೇನು, ಎಂದು ಬಡಿದಾಡಿದ. ಕೋಮಿಂಗ್‌ಟಂಗಿನವರು ಅವನ 'ಶಾಜುಟೂಜು' ಪ್ರಾಂತವನ್ನು ಅವನಿಗೆ ಮರಳಿ ಕೊಟ್ಟರೆ ಅವನೇನು, ಕೋಮಿಂಗ್‌ಟಂಗ್‌ನ್ನು ಸೇರುವನು. 'ಶಾನ್‌ವಿನ್' ತತ್ವದಿಂದ ಅಪಾಯವೇನೂ ಇಲ್ಲವೆಂದು ಅವನೂ ಒಪ್ಪಿಕೊಂಡಿದ್ದ.

ಒಳ್ಳೇ ಕುಡುಕ ಅವನು. ನಾಯಿಯ ಮಾಂಸ ಎಂದರೆ ಬ್ರಹ್ಮಾಂಡ ಪ್ರೀತಿ ಅವನಿಗೆ ಅವನ ಮೇಲಾಧಿಕಾರಿಗಳು ಕೆಳಗಿನಧಿಕಾರಿಗಳು ಯಾರೇ

ಇರಲಿ, ಏನೇ ಅನ್ನಲಿ, ಅವನ ಮಾತು ಆಣೆ, ಶಪಥ ಬೈಗಳಿಂದ ಬೇಕಾದ ಹಾಗೆ ತುಂಬಿಕೊಂಡಿರುತ್ತಿದ್ದವು. ತಾನು ಸಭ್ಯಗೃಹಸ್ಥ ಎಂಬ ಜಂಭ ಅವನಿಗಿರಲಿಲ್ಲ. ಜೊಳ್ಳು ಮಾತಿನ ಒಳ್ಳೇ ಸಂದೇಶಗಳ ಸಾರ್ವತ್ರಿಕ ತಂತಿಗಳನ್ನು ಉಳಿದ ನಾಯಕರಂತೆ ಕಳಿಸುವ ಚಟ ಅವನಿಗಿರಲಿಲ್ಲ. ಪ್ರಾಮಾಣಿಕ ಎಂದರೆ ತೀರಿತು, ಅದರಲ್ಲಿ ಕಸರಿಲ್ಲ. ಅವನ ಈ ಪ್ರಾಮಾಣಿಕತನದಿಂದಲೇ ತನ್ನ ಸಾಕ್ಷಾತ್ ಸಂಗಡಿಗರಿಗೆ ಅತ್ಯಂತ ಪ್ರಿಯನಾಗಿದ್ದ. ತನಗೆ ಹೆಂಗಸು ಬೇಕೆಂದರೆ ಸಾಕು, ಹಾಗೆ ಬಾಯಿಬಿಟ್ಟು ಹೇಳುತ್ತಿದ್ದ. ಪರದೇಶದ ಯಾವ ರಾಯಭಾರಿಗಳನ್ನೂ, ರಶಿಯನ್ ರಮಣಿಯೊಬ್ಬಳನ್ನು ತೊಡೆಯಲ್ಲಿರಿಸಿಕೊಂಡು ಕೂಡ ಕಾಣುತ್ತಿದ್ದ. ತಾನು ಹತ್ತು ಹಾದರಗಿತ್ತಿಯರೊಡನೆ ಹುಡುದಿ ಹಾಕುತ್ತಿರಲಿ, ಅದನ್ನು ಶತ್ರು-ಮಿತ್ರರಾರಿಂದಲೂ ಮರೆಮಾಚುತ್ತಿದ್ದಿಲ್ಲ. ತನ್ನ ಕೈಯೊಳಗಿನವನ ಹೆಂಡತಿಯೇ ತನಗೆ ಬೇಕಾಗಲಿ, ಅವನು ಕೇಳಿಬಿಡುತ್ತಿದ್ದ! ಡೇವಿಡ್ ರಾಜನಂತೆ ಪಶ್ಚಾತ್ತಾಪ ಗೀತಗಳನ್ನು ಬರೆಯುವ ಸಂಭ್ರಮ ಅವನೆಂದೂ ಮಾಡಲಿಲ್ಲ. ಅವನೀ ವ್ಯವಹಾರದಲ್ಲಿ ಉದ್ಧರಿಯೇನೂ ಇರಲಿಲ್ಲ. ತಿಳಿಯಿರಿ, ಅವನು ತನ್ನ ಕೈಕೆಳಗಿನವನ ಹೆಂಡತಿಯನ್ನು ಬಳಸಿದ; ಆದರೆ ಅವನು ಆಕೆಯ ಗಂಡನನ್ನು 'ಸೀನಾನಿನ' ಪೋಲಿಸಾಧಿಕಾರಿಯನ್ನಾಗಿ ಮಾಡುತ್ತಿದ್ದ. ತಾನು ಹೀಗೆ ಮಾಡಿದಷ್ಟಕ್ಕೆ ಎಲ್ಲರಿಗೂ ಅನೀತಿಯ ಹುಚ್ಚುಚ್ಚು ಮಾಡಿಸಿಕೊಡುತ್ತಿರಲಿಲ್ಲ. ಸೀನಾನಿನ ಉಪವನಗಳಲ್ಲಿ, ಸಂದಿ-ಮೂಲೆಗಳಲ್ಲಿ ನಿಂತ ಗೋರಿಲ್ಲಾ ಮಂಗಗಳಂತೆ ನಿರ್ಲಜ್ಜರಾಗಿ ಮೈಯೇರಬರುವ ಜನರಿಂದ ಮಾನರಕ್ಷಣೆಯಾಗಲೆಂದು ಶಾಲೆಯ ಹುಡುಗೆಯರು ಅಂಥಲ್ಲಿ ಹೋಗಬಾರದೆಂದು ಅವನು ಪ್ರತಿಬಂಧಿಸುತ್ತಿದ್ದ. ಮತ್ತು ಅವನು ಧಾರ್ಮಿಕನೂ ಆಗಿದ್ದನು. ಅಂತಃಪುರ ಎಂಬುದೊಂದು ಅವನಿಗೆ ಇತ್ತು. ಬಹುಪತ್ನೀತ್ವವು ಅದರಂತೆಯೆ ಬಹುಪತೀತ್ವವು ಅವನಿಗೆ ಒಪ್ಪಿಗೆಯಿತ್ತು. ತನಗೆ ಬೇಡಾದಾಗ ತನ್ನ ಸೂಳೆಯರು ಮತ್ತಾರನ್ನಾದರೂ ಕೂಡಿಕೊಳ್ಳಬಹುದೆಂದು ಅವನು ಅವರಿಗೆ ಸ್ವಾತಂತ್ರ್ಯ ಕೊಟ್ಟಿದ್ದ. ಮಹಾತ್ಮಾ 'ಕಾನ್ಫೂಸಿಯಸ್ಸ'ನ ಆದರವಿತ್ತು ಅವನಿಗೆ. ಅಲ್ಲದೆ ಅವನು ದೇಶಭಕ್ತನೂ ಆಗಿದ್ದ. ಬೆಪ್ಪೂ ನಗರದಲ್ಲಿ ಜಪಾನಿನ ಹಾಸಿಗೆಯಲ್ಲಿ ಒಂದು ತಗಣೆ ದೊರೆತದ್ದನ್ನು

ಕೇಳಿ ಅವನಿಗೆ ಪರಮಾಲ್ಹಾದವಾಯಿತೆಂದೂ ಈ ಸಂಗತಿಯಿಂದ ಚೀನ ಸಂಸ್ಕೃತಿಯ ಮೇಲ್ಮೆಯು ಸಿದ್ಧವಾಗುವದೆಂದೂ ಅವನು ಕಂಡಕಂಡವರಿಗೆಲ್ಲ ಎಷ್ಟು ಸಲ ಹೇಳಿದರೂ ದಣಿಯಲಿಲ್ಲವೆಂದು ಒಂದು ಕಥೆ ಹೇಳುತ್ತಾರೆ. ಕಾರಣ ತನ್ನ ಕೊಲೆಗಡಕನ ಬಗ್ಗೆ ಅವನಿಗೆ ಬಹಳ ವಿಶ್ವಾಸ. ತಾಯಿಯಲ್ಲಿ ಸಂಪೂರ್ಣ ಮಾತೃಭಕ್ತಿ.

ಈ ಶ್ವಪಾಕಸೇನಾಧಿಪತಿಯ ಅಪೂಟ ಪ್ರಾಮಾಣಿಕತೆಯ ಬಗ್ಗೆ ಎಷ್ಟೆಷ್ಟೋ ದಂತಕಥೆಗಳಿವೆ. ಒಬ್ಬ ರಶಿಯನ್ ಸೂಳೆಯ ಮೇಲೆ ಒಮ್ಮೆ ಇವನ ಮನಸ್ಸು ಕೂತಿತು. ಆ ಸೂಳೆಯೂ ಯಾವದೊ ಬಿಡಾಡಿ ನಾಯಿಗೆ ಬೆರಗಾಗಿದ್ದಳು. ಈ ಮಹಾರಾಯಾ ಆ ಬಿಡಾಡಿಯ ಮುಂದೆ ತನ್ನ ವೇಶ್ಯಾಪ್ರೀತಿಯನ್ನು ಪ್ರಕಟಿಸಲು ತನ್ನ ಸೇನೆಯ ಒಂದು ಪಟಾಲಂನ್ನೇ ಓಡಾಡಿಸಿದನು. ಒಮ್ಮೆ 'ಶಾಙ್‌ಟೊಙ್' ಜಿಲ್ಲೆಯೊಳಗಿನ ಒಂದು ಪ್ರಾಂತದಲ್ಲಿ ಯಾರೊ ಒಬ್ಬನನ್ನು ಇವನು ಮ್ಯಾಜಿಸ್ಟ್ರೇಟನನ್ನಾಗಿ ನಿಯಮಿಸಿದನು. ಅದೇ ಕೆಲಸಕ್ಕೆ ಮತ್ತೊಮ್ಮೆ ಮತ್ತೊಬ್ಬನನ್ನು ನಿಯಮಿಸಿ ಇಬ್ಬರಿಗೂ ಜಗಳ ಹಚ್ಚಿದನು. 'ಸಾಕ್ಷಾತ್ ಶ್ವಪಾಕಸೇನಾಧಿಪತಿಯೆ ನನಗೆ ನಿಯಮಿಸಿದ್ದಾನೆ, ತನಗೆ ನಿಯಮಿಸಿದ್ದಾನೆ'ಂದು ಇಬ್ಬರೂ ಉದ್ಘೋಷಿಸಿದರು. ನ್ಯಾಯನಿರ್ಣಯಕ್ಕಾಗಿ ಸೇನಾಪತಿ ಇದ್ದಲ್ಲಿಗೆ ಹೋಗಬೇಕೆಂದು ಇಬ್ಬರೂ ಒಪ್ಪಿಕೊಂಡರು. ಅವರು ಬಂದಾಗ್ಗೆ ಸಂಜೆಯಾಗಿತ್ತು. ಅಷ್ಟೊತ್ತಿಗೆ ಚಾಂಗ್ ಸೇನಾಪತಿಯು ಹಾಸಿಗೆಯಲ್ಲಿ ಬಿದ್ದುಕೊಂಡಿದ್ದ. ಸುತ್ತಲೂ ಹೆಣ್ಣಿನ ಸಂತೆಯ ಎಲ್ಲ ಲೀಲಾವಿಲಾಸಗಳೂ ಸಾಗಿದ್ದವು. "ಬನ್ನಿ ಒಳಕ್ಕೆ" ಎಂದು ಅವರನ್ನು ಇವನು ಕರೆದೇಬಿಟ್ಟ. ಅವನಲ್ಲಿ ಮುಚ್ಚುಮರೆಯೇ ಇರಲಿಲ್ಲ. ಇಬ್ಬರೂ ಮ್ಯಾಜಿಸ್ಟ್ರೇಟರು ಇದ್ದ ಸಂಗತಿ ನಿರೂಪಿಸಿ ತಮ್ಮಿಬ್ಬರನ್ನೂ ಒಂದೇ ಜಿಲ್ಲೆಗೆ ಸೇನಾಪತಿಯೆಂದು ನಿಯಮಿಸಿದ್ದಾಗಿ ಹೇಳಿದರು. ಅದನ್ನು ಕೇಳಿ ಇವನು "ಹುಚ್ಚುಖೋಡಿಗಳಿರಾ, ಇಂಥ ಸಣ್ಣ ಸಂಗತಿಯಲ್ಲಿಯೂ ನಿಮಗೆ ಬಗೆಹರಿಯುವುದಿಲ್ಲವೆ? ಅಷ್ಟಿಷ್ಟಕ್ಕೂ ನನಗೆ ಕಾಡುವಿರಾ?" ಎಂದು ಕೂಗಿದನು.

ಚೀನಾದೇಶದ 'ಶೂಯಿ-ಹೂ' ಎಂಬ ಮಹಾ ಕಾದಂಬರಿಯೊಳಗಿನ

ನಾಯಕರಂತೆ ಅವನೂ ಪ್ರಾಮಾಣಿಕ ಮನುಷ್ಯನಾಗಿದ್ದನು. ತನಗಾದ ಉಪಕಾರವನ್ನು ಅವನೆಂದೂ ಮರೆಯುತ್ತಿರಲಿಲ್ಲ. ತನಗೆ ಸಹಾಯ ಮಾಡಿದವರ ಬಗ್ಗೆ ಒಂದು ಹಟದಿಂದ ಋಣಿಯಾಗಿ ನಡೆದುಕೊಳ್ಳುತ್ತಿದ್ದನು. ಅವನ ಚಲ್ಲಣದ ಜೇಬಿನಲ್ಲಿ ಯಾವಾಗಲೂ ಹಣ ತುಂಬಿರುತ್ತಿತ್ತು. ಯಾವ ಜನವೂ ಸಹಾಯ ಕೆಳಬಂದರೆ ನೋಟಿನ ಪುಡಿಕೆಯೊಂದನ್ನು ಹೊರಕ್ಕೆ ತೆಗೆದು ಹಿಡಿಗೆ ಬಂದಷ್ಟನ್ನು ಅವರಿಗೆ ಅವನು ಕೊಡುತ್ತಿದ್ದನು. ನವ ಕೋಟಿ ನಾರಾಯಣನಾದ ' ರಾಕ್‌ಫೆಲರ 'ನು ಪಾವಲಿಗಳನ್ನು ಹಂಚಿದಂತೆ ಇವನು ಬರಿ ಹಸಿರು ನೋಟುಗಳನ್ನೇ ಹಂಚುತ್ತಿದ್ದ.

ಅವನ ಈ ಔದಾರ್ಯ, ಈ ಪ್ರಾಮಾಣಿಕತೆಯ ಮೂಲಕ ಜೊತೆಯ ಜನರ ದ್ವೇಷಕ್ಕೆ ಅವನು ಈಡಾಗಿರಲಿಲ್ಲ.

ಇಂದು ಬೆಳಿಗ್ಗೆ ನಾನು ಆಫೀಸು ಸೇರಿದೊಡನೆ ನನ್ನ ಜೊತೆ ಕೆಲಸ ಗಾರರಿಗೆ ಇವನ ಮಹಾ ಸಂಗತಿಯನ್ನು ತಿಳಿಸಿದೊಡನೆ ಪ್ರತಿಯೊಬ್ಬರೂ ಮುಗುಳು ನಗೆ ನಕ್ಕರು. ನೋಡಿ, ಪ್ರತಿಯೊಬ್ಬರಿಗೂ ಅವರ ಬಗ್ಗೆ ಎಷ್ಟು ಸ್ನೇಹ! ಯಾರೂ ಅವನನ್ನು ದ್ವೇಷಿಸುತ್ತಿರಲಿಲ್ಲ. ಏನೆಂದು ದ್ವೇಷ ಮಾಡಬೇಕು ?

ಚೀನಾದೇಶವು ಇನ್ನೂ ಇವನಂಥ ಜನರಿಂದಲೇ ಆಳಲ್ಪಡುತ್ತದೆ. ಇಷ್ಟೆ, ಇವನ ಪ್ರಾಮಾಣಿಕತೆ, ಔದಾರ್ಯ, ಕೃತಜ್ಞತಾಭಾವ ಅವರಲ್ಲಿಲ್ಲ. ಸದ್ಯಕ್ಕೆ ಚೀನಾದೇಶಕ್ಕೆ ಬೇಕಾದಂಥ ಮನುಷ್ಯ ! ಹುಟ್ಟುರಾಜ ! ಇದ್ದವರ ಲ್ಲೆಲ್ಲ ಇವನೇ ಅತ್ಯುತ್ತಮ ಪುರುಷ !

---

## ಪರಿಚಯ

## ಯು–ಟಾ–ಫೂ

( ೧೮೯೬ — )

ಲು-ಶೂನ್, ವೂ-ವೊ-ಟನ್ ಮತ್ತು ಇನ್ನಿತರ ಕೆಲವು ಪ್ರಸಿದ್ಧ ಬರೆಹಗಾರರಂತೆ, ಯು-ಟಾ-ಫೂ ಇವನೂ ಚೇಕಿಂಗ್ ಪ್ರಾಂತದ ನಿವಾಸಿ. ಫೂಯಾಂಗ್ ನಗರದಲ್ಲಿ ಇವನು ಹುಟ್ಟಿದನು. ೧೯೧೧ರ ವರೆಗೆ, ಇವನು ಅಲ್ಲಿಯ ಪ್ರಾಂತಗಳ ಶಾಲೆಗಳಲ್ಲಿ ಶಿಕ್ಷಣ ಹೊಂದಿ ಜಪಾನಕ್ಕೆ ಹೋದನು. ೧೮ನೆಯ ವರ್ಷಕ್ಕೆ ಟೋಕಿಯೋದ ಇಂಪೀರಿಯಲ್ ವಿಶ್ವವಿದ್ಯಾಲಯದಿಂದ, ಅರ್ಥಶಾಸ್ತ್ರವನ್ನು ಐಚ್ಛಿಕ ವಿಷಯವಾಗಿಟ್ಟುಕೊಂಡು, ಬಿ. ಎ. ಪಾಸಾದನು. ಜಪಾನದಲ್ಲಿ ೧೯೨೨ರ ವರೆಗೆ ಇದ್ದನು. ಇವನ ಎಷ್ಟೋ ಕತೆಗಳ ಹಿನ್ನೆಲೆ ಜಪಾನವಾಗಿದೆ.

ಕಳೆದ ಎರಡು ದಶಕಗಳಲ್ಲಿ, ತರುಣ ಕವಿ ಎಂದು ಇವನ ಕೀರ್ತಿ ಹಬ್ಬಿತು. ಇಂದಿನ ಪೀಳಿಗೆಯಲ್ಲಿ ಇವನ ಸಣ್ಣ ಕತೆ, ಕಾದಂಬರಿಗಳು ಕ್ರಾಂತಿಯನ್ನೆಬ್ಬಿಸಿದವು. ಬಹಿಷ್ಕೃತ ವಿಷಯವಾದ ಆಧುನಿಕ ಪ್ರಣಯವನ್ನು ಕುರಿತು ಬರೆದವರಲ್ಲಿ ಇವನೇ ಮೊದಲಿನವನು. ಇವನ ಮೊದಲಿನ ಕೃತಿಗಳೆಲ್ಲ ಜನರಲ್ಲಿ ತಿರಸ್ಕಾರವನ್ನು ಹುಟ್ಟಿಸಿದವು. ಚೀನೀ ಜನಾಂಗದ, ಲಗ್ನ, ವಿವಾಹವಿಚ್ಛೇದ, ಮತ್ತು ಭಕ್ತಿ ಇವುಗಳ ಹಳೆಯ ಸಂಪ್ರದಾಯಗಳನ್ನು ತಿರಸ್ಕರಿಸಿದನು; ಸಾಧಾರಣವಾಗಿ ಎಲ್ಲ ಲೈಂಗಿಕ ಸಂಬಂಧಗಳ ಮೇಲಿದ್ದ ಎಷ್ಟೋ ಶತಮಾನಗಳ ಪೀಡೆಯನ್ನು ಬದಿಗೊತ್ತಿದನು. ಇದರಿಂದಾಗಿ, ಹೊಸದಾಗಿ ಸ್ವಾತಂತ್ರ್ಯದ ಸವಿಗಂಡ ತರುಣರು ಇವನನ್ನು ಹೊಗಳಿದರು.

ಚೀನೀ ಕಲೆಯಲ್ಲಿ ಇವನು ಪರಿಣಾಮುವಾದದ ಪ್ರತಿನಿಧಿ. ಬೇಸರ ತರುವಂಥ ಅಂತರ್ಮುಖತೆ, ಅತಿಯಾದ ಭಾವನಾವಶತೆ, ಜೀವನದಲ್ಲಿ

ಅತೃಪ್ತಿ, ಆದರೆ ಸಮಾಜವನ್ನು ಬದಲಿಸುವ ಪ್ರಯತ್ನದಲ್ಲಿ ನಿಷ್ಕ್ರಿಯತೆ, ಇವು ಇವನ ಪಾತ್ರಗಳ ಗುಣಾವಗುಣಗಳು. ಹೇಡಿತನ ಮತ್ತು ನಿರಾಶಾವಾದ ದಿಂಪ, ಇಂದಿನ ಕ್ರಾಂತಿಯುಗದ ತರುಣರಿಗೆ ಅವು ಹಿಡಿಸುವದಿಲ್ಲ. ಏನೇ ಆದರೂ ಅವೆಲ್ಲ ಇಂದಿನ ಜೀವನದ ಪ್ರತೀಕಗಳಾಗಿವೆ. ೧೯೨೭ರಲ್ಲಿ ಯು-ಟಾ-ಫೂ ಪ್ರಗತಿಶೀಲ ಸಾಹಿತ್ಯಕ್ಕೆ ತಿರುಗಬೇಕೆಂದು ಮಾಡಿದ್ದ. ಆದರೆ ಅಲ್ಲಿ ಅಯಶಸ್ವಿಯಾಗಿ, ಮತ್ತೆ ತಾನೇ ಹೇಳುವಂತೆ ತನ್ನ 'ಇಳಿಮುಖವಾದ ಅದ್ಭುತರಮ್ಯತಗೆ' ತಿರುಗಿದ.

ಪ್ರಕಟವಾದ ಅವನ ಕೃತಿಗಳಲ್ಲಿ ಒಟ್ಟು ೧೨ ಕಾದಂಬರಿ ಮತ್ತು ಸಣ್ಣ ಕತೆ, ಕವಿತೆಗಳ ಎಷ್ಟೋ ಸಂಪುಟಗಳು ಸಮಾವೇಶವಾಗುತ್ತವೆ. ಎಷ್ಟೋ ಯುರೋಪಿಯನ್ ಕಾದಂಬರಿಗಳನ್ನು ಅನುವಾದಿಸಿದ. ಇದಲ್ಲದೆ ಕಮರ್ಶಿಯಲ್ ಪ್ರೆಸ್ಸಿನವರಿಂದ ಪ್ರಕಟವಾದ 'All Western Library of Translations'ದ ಸಂಪಾದಕನಾಗಿದ್ದ.

ಎಷ್ಟೋ ಮಾಸಪತ್ರಿಕೆಗಳ ಸಂಪಾದಕನಾಗಿ ಇಂದಿನ ಸಾಹಿತ್ಯದ ಒಲವುಗಳ ಮೇಲೆ ತನ್ನ ಪ್ರಭಾವ ಬೀರಿದ್ದಾನೆ. ಇವನದೇ ಆದ ಶೈಲಿ, ತಂತ್ರ, ಇವುಗಳ ಅನುಯಾಯಿಗಳು ಎಷ್ಟೋ ಜನರಿದ್ದಾರೆ.

ಈಗ ಅವನು ಫೂಕಿನ್‌ದಲ್ಲಿ ಒಂದು ಸರಕಾರೀ ಹುದ್ದೆಯಲ್ಲಿದ್ದಾನೆ.

## ಪರಾಶ್ರಯಿ    

**ಹತಭಾಗಿನಿ,**

ನಡುಹಗಲು ಮೌನವಾಗಿದೆ. ನಾನೂ ಒಬ್ಬನೇ ಇದ್ದೇನೆ. ಮನೆಯಲ್ಲಿ ನನ್ನೊಬ್ಬನನ್ನು ಬಿಟ್ಟು ಯಾರೂ ಇಲ್ಲ. ಇಂಥ ಒಂದೂ ಸಪ್ಪಳವಿರದ ಶಾಂತ ವಾತಾವರಣದಲ್ಲಿ ನಾನೂ ಶಾಂತಿಯಿಂದಿರಬೇಕು. ಆದರೂ ನನ್ನ ಮನಸ್ಸಿನಲ್ಲಿ ಒಂಟಿಯಾಗಿದ್ದೇನೆಂಬ ವಿಚಾರದ ಹೊರತು ಮತ್ತೊಂದಿಲ್ಲ. ಹೃದಯದಲ್ಲಿ ದುಃಖವನ್ನು ಬಿಟ್ಟು ಬೇರೆ ಭಾವನೆ ಇಲ್ಲ.

ಈಗಿನ್ನೂ ಮೂರೂವರೆ ಗಂಟೆಯಾಗಿದೆ. ದಾರಿ ಸೂರ್ಯನ ಬೆಳಕಿನಿಂದ ಹೊಳೆಯುತ್ತಿದೆ. ಗಾಳಿಯಲ್ಲಿ ವಸಂತದ ಸೌರಭ ತುಂಬಿದೆ. ಆದರೆ ನನ್ನ ಕೋಣೆಯಲ್ಲಿ ಸುಳಿಯುವ ಅದೇ ಗಾಳಿಯಲ್ಲಿ ಆ ಮಾಧುರ್ಯವಾಗಲಿ ಹೊಸತನವಾಗಲಿ ಏಕಿಲ್ಲ? ಬಹುಶಃ ತರುಣ ತರುಣಿಯರು ಸುಂದರವಾದ ಉಡಿಗೆಯಲ್ಲಿ,ಹಸುರಿನಲ್ಲಿ, ಇಲ್ಲವೆ 'ಲುಂಗ್-ವ್ಹಾ' ತೋಪಿನಲ್ಲಿ 'ಪೀಚ್' ಗಿಡಗಳ ನೆರಳಿನಲ್ಲಿ ಓಡಾಡುತ್ತಿರಬೇಕು. ತಿಳಿಯಾದ ನೀಲ ಆಕಾಶದ ಕೆಳಗೆ ಹರ್ಷದಿಂದ ಹಾಡುತ್ತಿರಬೇಕು. ಕಿಡಿಕಿಯಿಂದ ಕಾಣುವ ಅದೇ ಆಕಾಶ, ನನ್ನ ಹೃದಯವನ್ನು ಅಣಕಿಸುತ್ತಿರುವಂತೆ ಯಾಕೆ ಕಾಣಬೇಕು? ನನ್ನ ಚೈತನ್ಯ, ಉತ್ಸಾಹ, ದೇಹ, ಮನಸ್ಸು, ಹೊಸ ಜೀವನದಿಂದ ತುಂಬಿ ಯಾಕೆ ಕುಣಿಯಬಾರದು? ಈ ಋತುವಿನ ಹಿತವಾದ ತಂಪಿಗೂ ತಂಪಾದ ಬಿಸಿಲಿಗೂ ನನ್ನ ಹೃದಯ ಮಾರ್ದನಿಗೊಡಲಾರದಲ್ಲ! ಅಥವಾ ಭೂಮಿಯ ಎದೆಯಿಂದ ಚಿಗುರುವ ಹಸಿರಿನಂತೆ, ಹೊಸ ಚಿಗುರನ್ನು ತೋರುವದಿಲ್ಲವಲ್ಲ!

ಅಯ್ಯೋ! ನನ್ನ ದೈವದಂತೆ ನೀನೇ ನನ್ನ ಪ್ರಣಯಿನಿ, ಆದರೂ ನಾನು ನಿನ್ನನ್ನು ಪ್ರೀತಿಸಲಾಗುವದಿಲ್ಲ! ಜಗತ್ತೇ ನನಗೆ ಬೇಡವಾಗಿದೆ.

ಯಾಕಂದರೆ, ನಾನು ನಿನಗೆ ತೋರಿಸಿದ ಅಸಭ್ಯ ವರ್ತನೆಗೆ ನನಗೆ ನಾನೇ ಬೇಡವಾಗಿದ್ದೇನೆ.

ನೀನು ಹತ್ತಿದ ಗಾಡಿ ಆಗಲೇ ಸುನ್-ಶಿನ್ ಪಟ್ಟಣವನ್ನು ದಾಟಿರಬಹುದು. ನೀನು ಶೂನ್ಯದೃಷ್ಟಿಯಿಂದ ಕುಳಿತಂತೆ ಕಾಣುತ್ತಿರುವೆ. ಹೊಲಗಳನ್ನಾಗಲಿ ಅಥವಾ ಬೀದಿಯಲ್ಲಿ ಹಾಸುಹೊಯ್ಯುತ್ತಿರುವವರನ್ನಾಗಲಿ ನೋಡುತ್ತೀ. ಏನನ್ನು ವಿಚಾರಿಸುತ್ತೀ? ನಿನ್ನ ಕಣ್ಣಲ್ಲಿ ನೀರು ಸುರಿಯುವದರಿಂದ, ಅವನ್ನು ಹುಡುಕುವದು ಅಷ್ಟೇನೂ ಕಠಿಣವಿಲ್ಲ. ನಾವಿಬ್ಬರೂ ಜೊತೆಯಾಗಿ ಬಾಳಿದಾಗಿನ, ನನ್ನ ಅಸಭ್ಯ ನಡತೆಯನ್ನು ನೆನೆಸುತ್ತಿರಬೇಕು. ನನ್ನ ಜೀವನಸಂಗಿನಿ, ಆದರೂ ಪ್ರೀತಿಸಲಾಗದವಳೇ ಕೇಳು! ಏನೇ ಸಂಭವಿಸಿದರೂ, ನನ್ನ ಹೃದಯದಲ್ಲಿ ನಿನಗಾಗಿ ನಿಜವಾದ ಅನುಕಂಪ ಇದೆ ಎಂದು ತಿಳಿ. ನಿನಗೆ ಮಾಡಿದ ಅಪಮಾನ, ಕೊಟ್ಟ ಪೀಡೆ, ಬೈಗಳು ಎಲ್ಲಾ ಸಮಾಜ ನನ್ನಂಥವರನ್ನು ಹುಟ್ಟಿಸಿದ್ದಕ್ಕಾಗಿ ಉಂಟಾದ ದ್ವೇಷದ ವಿಕೃತ ಸ್ವರೂಪಗಳಷ್ಟೇ. ನಿಜವಾಗಿಯೂ ನಿನ್ನ ನನ್ನ ಅಂತರಂಗವನ್ನು ನೋಡಲು ಅಪೇಕ್ಷಿಸಿದರೆ, ನನ್ನ ಅಸಭ್ಯ ನಡತೆಯನ್ನು ನೀನು ಕ್ಷಮಿಸಬಹುದು.

ಇಂದು ಚಿಂಗ್-ಮಿಂಗ್ ಉತ್ಸವ. ಆದರೂ ತರುಣರು, ಆನಂದದಿಂದ ಕಾಡಿನಲ್ಲಿ ಓಡಾಡುತ್ತಾರೆ. ನೀನು ಗಾಡಿಯ ಕಿಡಿಕಿಯೊಳಗಿಂದ ಕೆಲವರನ್ನು ನೋಡುತ್ತಿರಬಹುದು. ಅದನ್ನು ನೋಡಿ ನನ್ನ ವಿಷಯವಾಗಿ ಮತ್ತಷ್ಟು ಜುಗುಪ್ಸೆ ಹುಟ್ಟಿರಬಹುದು. ನನ್ನ ಬಗ್ಗೆ ತುಂಬಿದ ತಿರಸ್ಕಾರದಿಂದ ಭಾರವಾದ ಮನಸ್ಸನ್ನು ಹಗುರು ಮಾಡಿಕೊಳ್ಳಲು ನಿನ್ನ ಭಾವನೆಗಳೆಲ್ಲ ಕತ್ತಲೆಯಲ್ಲಿ ಅರಳುತ್ತ ನಡೆದಿರಲಿ. ಎಷ್ಟು ಬೇಕೋ ಅಷ್ಟು ಕಠಿಣವಾಗಿ ದ್ವೇಷಿಸು! ಆದಷ್ಟು ಬೇಗ ನನ್ನ ಸಾವಿನ ಸಲುವಾಗಿ ಪ್ರಾರ್ಥಿಸು! ಆದರೆ ಪಾಪ, ನಿನ್ನ ಕಡೆಯಿಂದ ಅದು ಸಾಧ್ಯವಿಲ್ಲ. ಅದನ್ನು ಮಾಡಲು ಎಳ್ಳಷ್ಟೂ ಸಾಮರ್ಥ್ಯ ಇಲ್ಲ. ಸ್ವಲ್ಪ ಪ್ರಯತ್ನಿಸಿದರೂ, ಏನಾದರೂ ನೆವ ಹೇಳಿ, ನನ್ನನ್ನು ಕ್ಷಮಿಸಲು ಕಾರಣ ಹುಡುಕುತ್ತೀ. ನಿಃಸಂಶಯವಾಗಿ ನಿನ್ನದು ಮೃದುಹೃದಯ. ಆದರೂ ನಿನ್ನ ಮೇಲೆ ಸಿಟ್ಟಿಗೇಳುತ್ತೇನೆಂಬುದೇ ನನಗೂ ಆಶ್ಚರ್ಯ.

ಇಬ್ಬರೂ ಜೊತೆಯಾಗಿ ಎಷ್ಟು ಆನಂದದ ದಿನಗಳನ್ನು ಕಳೆದೆವೆಂಬುದು

ಗೊತ್ತಿಲ್ಲ. ಆದರೂ ನಮ್ಮ ಲಗ್ನ ಮುರಿಯಲೇಬೇಕಾದದ್ದು ಅನಿವಾರ್ಯ. ನಾನು ಮನೆ ಬಿಟ್ಟು ಹೋದಾಗ ಕೇವಲ ಹದಿನೇಳು ವರ್ಷದವನಿದ್ದೆ. ಆದರೆ ಆ ವಯಸ್ಸಿನಲ್ಲಿ ಕೂಡ, ಮನೆಯಲ್ಲಿರುವದಕ್ಕಿಂತ ಅಪರಿಚಿತ, ಪ್ರೀತಿ ರಹಿತ ದೇಶದಲ್ಲಿರುವದೇ ಒಳ್ಳೆಯದಾಗಿತ್ತು. ಆ ಎಂಟು ದೀರ್ಘ ವರ್ಷಗಳ ವರೆಗೆ ಹೊರಗೇ ಇದ್ದೆ. ಅಷ್ಟು ಅವಧಿಯಲ್ಲಿಯೂ, ಚಳಿಗಾಲದ ಬಿಡುವಿನಲ್ಲಾಗಲಿ, ಬೇಸಿಗೆಯ ಬಿಡುವಿನಲ್ಲಾಗಲಿ, ಒಂದು ದಿನವೂ ಮನೆಗೆ ಹೋಗಲಿಲ್ಲ. ಯಾಕೆ ಗೊತ್ತೇ? ಮದುವೆಯ ವಿಚಾರವನ್ನೇ ನಾನು ದ್ವೇಷಿಸುತ್ತಿದ್ದೆ, ನಿನ್ನನ್ನಲ್ಲ ಮತ್ತೆ, ತಿಳಿಯಿತೇ? ಸಂಪ್ರದಾಯವೆಂದು ಕಣ್ಣು ಮುಚ್ಚಿ ಕೂಡಿಸುವ ಲಗ್ನಗಳ ಈ ಕರಾರೀ ಪದ್ಧತಿಯನ್ನು. ಅದರ ವಿರುದ್ಧ ಹೋರಾಡಲು ಮೊದಲೆ ನಿಶ್ಚಯಿಸಿದ್ದೆ. ಆದ್ದರಿಂದ ಜಪಾನದಲ್ಲಿರುವ ತನಕ ಲಗ್ನವಾಗುವದು ಸಾಧ್ಯವಿರಲಿಲ್ಲ.

ಕೊನೆಗೆ, ನಾಲ್ಕು ವರ್ಷಗಳ ಹಿಂದೆ ನಾನು ಮನೆಗೆ ಬಂದೆ. ನನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ, ನನ್ನ ಸ್ವಭಾವದ ವಿರುದ್ಧವಾಗಿ, ನಾನು ಮದುವೆಗೆ ನಿರ್ವಾಹವಿಲ್ಲದೆ ಒಪ್ಪಬೇಕಾಯಿತು. ನಮ್ಮ ದೇಶದ ನಿಷ್ಠುರ ಸಂಪ್ರದಾಯಗಳು, ನಿಶ್ಚಯವನ್ನು ಮುರಿಯುವದು ಪಾಪವೆಂದು ಗಣಿಸಿವೆ. ನಿನ್ನ ತಂದೆ-ತಾಯಿಗಳು, ತಡಮಾಡಬಾರದೆಂದು ಮೇಲೆ ಮೇಲೆ ಹೇಳತೊಡ್ಡಗಿದರು. ನನ್ನ ತಾಯಿ ಕಣ್ಣೀರು ತಂದು, ಮಾತು ಮೀರುವ ಮಗನೆಂದು ಆರೋಪ ಹೊರಿಸತೊಡಗಿದಳು. ಹೃದಯವಿಲ್ಲದ ಈ ಜನರೆಲ್ಲ ಕೂಡಿ, ನನಗೆ ಬೇಡಾದ ಈ ಮದುವೆಗೆ ನನ್ನನ್ನು ನೂಕಿದರು. ನನ್ನ ಹೋರಾಟ ಕುಸಿದು ಬಿತ್ತು. ಈಗ ನಡೆದ ದುರಂತಕ್ಕೆ ನಾವೆಲ್ಲ ಹೊಣೆಗಾರರು — ಆದರೆ ಆ ತಂದೆ-ತಾಯಿಗಳು, ನಾವಲ್ಲ; ನಮ್ಮ ಚೀನ ದೇಶ! ಆದರೆ ಇಲ್ಲಿಯ ವರೆಗೆ ನಾನು ನಿನಗೆ ಹೇಳದೆ ಇರಬಾರದಾಗಿತ್ತು.

ಅದೆಲ್ಲ ನಿನಗೆ ಎಂಥ ಅಸಮಾಧಾನಕರ ಸಂಭ್ರಮವಾಗಿರಬೇಡ! ನನಗೆ ಅದರ ಬಗ್ಗೆ ಚಿಂತೆ ಇರಲಿಲ್ಲ. ಅದನ್ನು ಸಹಿಸಲೇಬೇಕಾಗಿದ್ದರಿಂದ, ಏನೂ ಗೊಂದಲ ಮಾಡಬಾರದೆಂದು ಸುಮ್ಮನಿದ್ದೆ. ಸ್ವಾಗತವಿರಲಿಲ್ಲ. ಆಶೀರ್ವಾದಕ್ಕೆ ಹಿರಿಯರಿಲ್ಲ, ಅತಿಥಿಗಳಿಲ್ಲ. ಎರಡು ಮೇಣಬತ್ತಿಗಳಿಲ್ಲ.

ಒಂದು ಮುದ್ದನ್ನೂ ಹಾರಿಸಲಿಲ್ಲ! ಒಂದು 'ಸೀಡನ್' ಕುರ್ಚಿಯ ಮೇಲೆ ಕುಳಿತು, ಸಂಜೆಗೆ ಮೌನವಾಗಿ ನೀನು ಬಂದೆ. ಇಪ್ಪತ್ತೆರಡು ಮೈಲು ದೂರದ ನಿನ್ನ ಮನೆಯನ್ನು ಬಿಟ್ಟು ಬಂದು, ನನ್ನ ತಾಯಿಯ ಜೊತೆಗೆ ಊಟ ಮಾಡಿದೆ. ಆಮೇಲೆ ಅಟ್ಟವನ್ನು ಏರಿ, ಒಬ್ಬಳೇ ನನ್ನ ಕೋಣೆಗೆ ಬಂದೆ.

ನಿನಗೆ ಚಳಿಜ್ವರ ಬರುತ್ತವೆಂದು ನನಗೆ ತಿಳಿದಿತ್ತು. ನಡು ರಾತ್ರಿಗೆ ನಿನ್ನ ಹಾಸಿಗೆಗೆ ಬಂದು ಸುಮ್ಮನೆ ನಿನ್ನ ಕಡೆಗೆ ನೋಡುತ್ತ ನಿಂತೆ. ಮೃದುವಾದ ಚೀನಾ ರೇಶಿಮೆಯ ಬಟ್ಟೆಯೊಂದು ನಿನ್ನ ಮೈಮೇಲಿತ್ತು. ಗೋಡೆಯ ಕಡೆಗೆ ಮುಖ ತಿರುಗಿತ್ತು. ನಿನಗೆ ನಿದ್ದೆ ಹತ್ತಿತ್ತು. ನಾನು ಹಾಸಿಗೆಯಲ್ಲಿ ಮಲಗಿಕೊಳ್ಳಲು ಬಂದಾಗ, ದೀಪದ ಬೆಳಕಿನಲ್ಲಿ ನೀನು ನನ್ನನ್ನು ದಿಟ್ಟಿಸಿ ನೋಡಿದಾಗ, ಆಸೆಯಿಂದ ತುಂಬಿದ ನಿನ್ನ ಆ ಮುಖಮುದ್ರೆ ನನಗಿನ್ನೂ ನೆನಪಿದೆ. ನೀನು ಅಳುತ್ತಿದ್ದೆ ಎಂಬುದು ಸ್ಪಷ್ಟವಾಗಿತ್ತು. ನಿನ್ನ ತುಟಿಗಳು ನಡುಗುತ್ತಿದ್ದವು. ನಿನ್ನ ಸಣ್ಣ ಮುಖ ದಣಿವು, ಬೇನೆ ಮತ್ತು ಕರುಣೆಯಿಂದ ತುಂಬಿತ್ತು. ಅದನ್ನು ನೆನೆಸಿದರೆ, ಇನ್ನೂ ನನ್ನ ಕಣ್ಣಲ್ಲಿ ದುಃಖದ ಕಣ್ಣೀರು ಬರುತ್ತವೆ.

ನೀನು ದೊಡ್ಡ ಪಟ್ಟಣದ ಹವೆಯಲ್ಲಿ ಉಸಿರಾಡುತ್ತಿದ್ದುದು ಇದು ಮೊದಲ ಸಲ. ಬಾಲ್ಯವನ್ನೆಲ್ಲ ಒಂದು ಸಣ್ಣ ನಿರ್ಜನವಾದ ಹಳ್ಳಿಯಲ್ಲಿ ಕಳೆದು, ಮನೆಯಲ್ಲಿಯೇ ಇದ್ದು ಮತ್ತು ಒಮ್ಮೆಯಾದರೂ ಸರಕಾರಿ ಶಾಲೆಗೆ ಹೋಗದೆ, ನೀನು ಮುಗ್ಧಳಾಗಿದ್ದೆ. ಆದರೂ ಚೀನಾ ದೇಶದ ಹೆಣ್ಣು ಮಕ್ಕಳ ಸಂಪ್ರದಾಯದಲ್ಲಿ ಮಾತ್ರ ಪೂರ್ಣವಾಗಿ ಸಂಸ್ಕೃತಳಾಗಿದ್ದೆ. ನೀನು ನಮ್ಮ ಮನೆಗೆ ಬಂದಾಗ ಒಂದು ಲೈಬ್ರರಿಯಷ್ಟು ಪುಸ್ತಕಗಳನ್ನೇ ತಂದಿದ್ದೆ. ವೀರವನಿತೆಯರ ಚರಿತ್ರೆಗಳು, 'ಸ್ತ್ರೀಯರ ನಾಲ್ಕು ಪುಸ್ತಕಗಳು' ಇದಲ್ಲದೆ ನಿನ್ನ ಮನೆಯಲ್ಲಿಯ ಕೆಲವು ಪುಸ್ತಕಗಳೂ ಇದ್ದವು. ಜೀವನದ ವಿಷಯವಾಗಿ ಜ್ಞಾನವನ್ನು ಅವೇ ನಿನಗೆ ಕೊಟ್ಟಿದ್ದವು. ನೀನು ಪುರುಷರನ್ನು ಮರುಳುಗೊಳಿಸುವ ಕಲೆಯನ್ನು ಕಲಿತಿರಲಿಲ್ಲ ಮತ್ತು ಥಳಕಮುಳಕವಾಗಿ ಉಡುಪು ಧರಿಸುವದೂ ನಿನಗೆ ಗೊತ್ತಿರಲಿಲ್ಲ. ಆದರೂ 'ಕಾನ್‌ಫ್ಯೂಷಿಯಸ್'ನ ವಿನಯಧರ್ಮದಲ್ಲಿಯ ಒಂದು ಶಬ್ದವನ್ನೂ ನೀನು ಮೀರಿರಲಿಲ್ಲ.

ಲಗ್ನವಾದ ಮೇಲೆ ನಿನ್ನ ಮನೆಯ ಊರಿಗೆ ಹೋದೆವು. ಪಟ್ಟಣದ ಹಾಳು ವಾತಾವರಣ ಬೇಡವಾಗಿತ್ತು. ಮತ್ತು ಅಲ್ಲಿ ಸ್ವಲ್ಪ ಸುಖ ಸಿಕ್ಕಿತು. ನಾವು ಅಲ್ಲಿಯೇ ಇರಬಹುದಾಗಿತ್ತು. ಆದರೆ ಸೊಕ್ಕಿನ ನಿನ್ನ ಅಣ್ಣನ ಮಗನಿದ್ದನಲ್ಲ. ನನ್ನನ್ನೂ ಸಿಟ್ಟಿಗೆಬ್ಬಿಸಿದ್ದ, ನಿನಗೂ ತೊಂದರೆ ಕೊಟ್ಟು ದುಃಖದಲ್ಲಿ ನೂಕಿದ್ದ. ಆ ಜಗಳವಾದ ಮರುದಿನವೇ ನಾವು ಪಟ್ಟಣಕ್ಕೆ ತಿರುಗಿದೆವು. ಎರಡು ಮೂರು ದಿನಗಳಲ್ಲಿಯೇ ನಾನು ಬೇನೆ ಬಿದ್ದೆ; ನಿನ್ನ ಚಳಿಜ್ವರ ಮರುಕಳಿಸಿತು. ಇಬ್ಬರೂ ದುಃಖದಲ್ಲಿದ್ದೆವು.

ಬೇನೆ ಬಿದ್ದಿದ್ದರೂ, ಎದೆಯ ಮೇಲೆಯೇ ಬಿದ್ದಂತಿದ್ದ ಆ ಹಾಳು ವಾತಾವರಣವನ್ನು ಬಿಟ್ಟು-ಹೊರಡಬೇಕೆಂದಿದ್ದೆ. ಹೊರಡುವ ಮುನ್ನ ರಾತ್ರಿ ಒಂದು ಮಾತನ್ನೂ ನಾವು ಆಡಲಿಲ್ಲ. ನಾನು ಕೆಲವು ಗೆಳೆಯರೊಡನೆ ಹೋಗಿ, ಕುಡಿದು ಮನೆಗೆ ಬಂದು ಮಲಗಿಕೊಂಡೆ. ಅಸಹ್ಯವಾದ ಆ ನೋಟ, ನಿನಗೆ ನೆನಪಿರಬೇಕು. ಮೃದುವಾದ ಕಂದೀಲಿನ ಬೆಳಕಲ್ಲಿ ನೀನು ಮೌನ ವಾಗಿ ಕುಳಿತಿದ್ದುದರ ಅರಿವು ಸ್ವಲ್ಪ ಮಾತ್ರ ನನಗಿತ್ತು. ಮರುದಿನ ಎದ್ದಾಗ ನೀನಿನ್ನೂ ಕುಳಿತಿದ್ದೆ. ಇಡಿ ರಾತ್ರಿ ನನ್ನ ಹತ್ತಿರ ಬರುವ ಧೈರ್ಯ ವನ್ನು ನೀನು ಮಾಡಿರಲಿಲ್ಲ. ಆದರೂ, ನಿನಗೆ ಏನೂ ಹೇಳಬೇಕಾದುದಿರ ಲಿಲ್ಲ. ನಾನು ಹೊರಡುವ ಮುಂಚೆಯೂ ನೀನು ನನಗೇನೂ ಹೇಳಲಿಲ್ಲ. ತಾಯಿ ಬಂದು, ಆಗಲೇ ಹಡಗ 'ಡಿಯರ್' ಪರ್ವತ ತದಿಯಲ್ಲಿ ಕಾಣು ತ್ತಿದೆಯೆಂದು ಹೇಳಿದಳು.

ಎರಡು ವರ್ಷಗಳ ಕಾಲ, ಆ ಅಗಲಿಕೆಯ ನೆನಪಿನೊಡನೆ ನಾನು ನಿನ್ನನ್ನು ಬಿಟ್ಟಿದ್ದೆ. ನನ್ನ ಅಜ್ಜಿ ನನ್ನನ್ನು ನೋಡಲು ಕಾತರಳಾಗಿರುವ ಳೆಂದೂ, ಬಿಡುವಿನಲ್ಲಿ ಒಮ್ಮೆ ಬಂದು ಹೋಗಬೇಕೆಂದೂ ನೀನು ಬರೆದಿದ್ದೆ. ನನ್ನ ತಾಯಿ ದಿನದಿನಕ್ಕೆ ಮುಪ್ಪಾಗುತ್ತಿರುವಳೆಂದೂ, ಅವಳನ್ನು ಹರ್ಷ ಗೊಳಿಸಲು ಬರಬೇಕೆಂದೂ, ನೀನು ನೆನಪು ಕೊಟ್ಟಿದ್ದೆ. ಆದರೆ ನಿನ್ನ ಕಾರ್ಯ ಸಫಲವಾಗಲಿಲ್ಲ. ಅಯೋಗ್ಯ ಗೆಳೆಯರೂ, ಜಪಾನದ ಹೆಣ್ಣು ಹುಡುಗಿಯರೂ ನನ್ನನ್ನು ತಡೆಹಿಡಿದರು. ಚೀನದಲ್ಲಿ ನನಗೆ ಆಸಕ್ತಿ ಏನೂ ಇರಲಿಲ್ಲ. ನನ್ನ ಜವಾಬ್ದಾರಿಗಳೂ ಕಳಚಿ ಹೋಗಿದ್ದವು. ಇರಲಿಕ್ಕೇ

ಸ್ವಾತಂತ್ರ್ಯವಿಲ್ಲದ ಜೀವನದಿಂದ ಏನು ಪ್ರಯೋಜನ? ನಾನು ಹೆಚ್ಚಾಗಿ ಕುಡಿಯಲು ಸುರುಮಾಡಿದ್ದೆ; ವಾಸ್ತವವಾಗಿ ಯಾವಾಗಲೂ ಕುಡಿದೇ ಇರುತ್ತಿದ್ದೆ. ಎಷ್ಟು ಬೇರೆ ಹೆಣ್ಣುಗಳು ಬಂದು ಹೋದವೋ ನೆನಪಿಲ್ಲ. ಅವರಾರಿಗೂ ಹೃದಯವಿದ್ದಿರಲೇ ಇಲ್ಲ. ನನಗೂ ಅವರೊಡನೆ ಆಟವಾಡುವದರ ಹೊರತು, ಮತ್ತೇನೂ ಬೇಕಾಗಿರಲಿಲ್ಲ. ಪೂರ್ಣ ಮದ್ಯದಲ್ಲಿ ಮುಳುಗಿದ್ದರೂ ಒಮ್ಮೊಮ್ಮೆ ನಿನ್ನ ನೆನಪಾಗುತ್ತಿತ್ತು. ಆಗ ಗಾಳಿ ತಣ್ಣಗಾಗಿ ಬೀಸಿದಂತೆಯೂ, ಆಕಾಶದಲ್ಲಿ ಚಂದ್ರ ಹೆಪ್ಪುಗಟ್ಟಿದಂತೆಯೂ ಅನಿಸುತ್ತಿತ್ತು. ಎಷ್ಟೋ ಸಾರೆ ಅಳುತ್ತಿದ್ದೆ. ಲಗ್ನವಾಗಿದ್ದರ ಸಲುವಾಗಿ ನನ್ನನ್ನೇ ದ್ವೇಷಿಸುತ್ತಿದ್ದೆ.

ಮೊನ್ನಿನ ವರುಷ ಸ್ವಲ್ಪ ಬಿಡುವು ಮಾಡಿಕೊಂಡು ಚೀನಕ್ಕೆ ಬಂದಾಗ, ತೋರಿಸಿದಷ್ಟು ಜುಗುಪ್ಸೆಯನ್ನು ಮತ್ತಾವಾಗಲೂ ತೋರಿಸುವದು ಸಾಧ್ಯವಿಲ್ಲ. ನಿನ್ನ ಹತ್ತಿರ ಬರುವದನ್ನು ಬಿಟ್ಟು, 'ಆ-ಮೊಯ'ದ ಕೆಲವು ಗೆಳೆಯರ ಔತಣ ಸ್ವೀಕರಿಸಿ ಅಲ್ಲಿಯೆ ಮೂರು ತಿಂಗಳು ಇದ್ದೆ. ಆಮೇಲೆ ಶಾಂಘಾಯಿಯಲ್ಲಿ ಚೈತ್ರಮಾಸವನ್ನು ಕಳೆದು, ಟೋಕಿಯೊಕ್ಕೆ ಹೊರಟು ಹೋದೆ. ಆದರೆ ಕಡೆತನಕ ಶಾಲೆಯಲ್ಲಿಯೇ ಇರಲಾಗಲಿಲ್ಲ. ಕಳೆದ ಬೇಸಿಗೆಯಲ್ಲಿ ಒಂದು 'ಥೀಸಿಸ್' ಬರೆದು ಕೊಟ್ಟೆ. ಜಗತ್ತನ್ನು ಎದುರಿಸಲಿಕ್ಕೆ ಸಿದ್ಧನಾಗಬೇಕಿತ್ತು. ಎಷ್ಟೋ ಉಪಯೋಗವಿಲ್ಲದ ಪುಸ್ತಕಗಳನ್ನು ಕಟ್ಟಿಕೊಂಡು ಶಾಂಘಾಯಿಯಲ್ಲಿ ಕೆಲಸಕ್ಕಾಗಿ ಬೇಟೆಯಾಡಲು ಪ್ರಾರಂಭಿಸಿದೆ.

ಆದರೆ ಯಾವ ಕೆಲಸ? ನಾನು ಏನು ಮಾಡಬಲ್ಲವನಾಗಿದ್ದೆ? ನಮ್ಮ ನಿಃಸತ್ವ ಸರಕಾರಕ್ಕೂ ಅಪ್ರಬುದ್ಧ ದೇಶಬಾಂಧವರಿಗೂ ನನ್ನ ಕೃತಜ್ಞತೆಗಳು. ನನ್ನಂಥ ಅಯೋಗ್ಯ ಆದರೂ ಅಹಿಂಸಾತ್ಮಕ ಜೀವಿಗೆ ತೆರಿಗೆಯ ಖಾತೆಯ ಅಭ್ಯಾಸಕ್ಕಾಗಿ ಕೆಲಸ ಸಿಕ್ಕಿತು. ಸರಕಾರದವರು ಕೊಡುತ್ತಿದ್ದ ಸಂಬಳ ಯಾತಕ್ಕೂ ಸಾಕಾಗುತ್ತಿರಲಿಲ್ಲ. ಆದರೆ ಅದೊಂದು ನಿಯಮಿತ ಸಂಬಳವಾಗಿತ್ತು. ಮತ್ತು ಏನಾದರೂ ನೆವ ಹೇಳಿ ಅಣ್ಣನಿಂದ, ತಾಯಿಯಿಂದ ರೊಕ್ಕ ಕೇಳುತ್ತಿದ್ದೆ. ಆದರಿಂದ ನನಗೆ ರಾಜಧಾನಿಯಲ್ಲಿ ದುಂದುಗಾರಿಕೆಯ ಜೀವನ ನಡೆಸುವದು ಸಾಧ್ಯವಾಯಿತು. ಕಡೆಗೆ ಅವಧಿ ತೀರಿ, ನಾನು ಆ

ಲೈಬ್ರರಿಯ ತಂಪು ನೆರಳನ್ನು ಬಿಟ್ಟು ಹೋಗಬೇಕಾಯಿತು. ನನ್ನ ಕನಸುಗಳಿಗೆ ಕೊನೆ ಬಂದಿತು. ಕೆಲವು ಅಧಿಕಾರಿಗಳು ಅಷ್ಟರಲ್ಲಿ ವಿದ್ಯಾರ್ಥಿಗಳಿಗೆ ಕೊಡುತ್ತಿದ್ದ ವೇತನವನ್ನು ನಿಲ್ಲಿಸಿಬಿಟ್ಟಿದ್ದರು. ಕಳೆದ ಜೂನದಿಂದ ನನ್ನ ಸಂಬಳ ಪೂರ್ಣ ನಿಂತು ಹೋಯಿತು.

ಆದರೇನು ? ಬಹಳ ದಿನಗಳ ತನಕ ನನಗೆ ಸಹಾಯ ಸಿಕ್ಕಿತ್ತು. ನನಗಾಗಲೇ ವಯಸ್ಸು ಮೂವತ್ತಕ್ಕೆ ಸಮೀಪಿಸುತ್ತಿತ್ತು. ಸಾಮಾಜಿಕ ಜೀವನದಲ್ಲಿ ನಾನೇ ಒಂದು ಸ್ಥಾನವನ್ನು ದೊರಕಿಸುವದು ಅವಶ್ಯವಾಗಿತ್ತು. ಆಗಲೇ ಬೇರೆ ದೇಶದ ವಿಶ್ವವಿದ್ಯಾಲಯದಿಂದ ನನಗೆ ಬಿ. ಎ. ಡಿಗ್ರಿ ದೊರೆತಿತ್ತು. ನನ್ನ ತಾಯಿಯಿಂದ ಮತ್ತು ದೊಡ್ಡಮನಸಿನ ಅಣ್ಣನಿಂದ ನೆರವು ಬೇಡುವದಕ್ಕೆ ಮೋರೆ ಇರಲಿಲ್ಲ. ಕಳೆದ ಬೇಸಿಗೆಯಲ್ಲಿ, ಮನೆಗೆ ಬರುವದಕ್ಕೆ ಮೊದಲು, ಶಾಂಘಾಯಿಯಲ್ಲಿ ಒಂದು ತಿಂಗಳು ಯಾಕೆ ಇದ್ದೆ ಗೊತ್ತೇ ? ಇನ್ನು ಯಾವ ರಹಸ್ಯವನ್ನು ಇಟ್ಟುಕೊಳ್ಳುವದೂ ಅವಶ್ಯವಿಲ್ಲ. ಗಾಡಿಯ ಖರ್ಚು ಪೂರೈಸುವ ತನಕ ಅತ್ತ ಇತ್ತ ತಿರುಗಾಡಬೇಕೆಂದಿದ್ದುದು ನಿಜವೇ. ಆದರೂ ಅದಕ್ಕೆ ಇನ್ನೊಂದು ಕಾರಣವಿದೆ. ಹಾಗೆಯೇ ಇರುವದಕ್ಕೆ ಏನಾದರೂ ಯೋಗ್ಯ ಸೇವೆ ಇದೆಯೋ ಎಂಬುದನ್ನು ನಿಶ್ಚಯಿಸಬೇಕಾಗಿತ್ತು. ಹೃದಯವೆ ಪುಡಿಪುಡಿಯಾಗಿತ್ತು. ಜೀವನಕ್ಕೆ ಪ್ರಯೋಜನವಾಗಬೇಕಾದದ್ದು ಏನುಳಿದಿತ್ತು ?

ಒಂದು ಸೆಕೆಯಾದ ರಾತ್ರಿ 'ಹಾಂಗಪೂ'ದ ನದಿಯ ತೀರದ ಮೇಲೆ, ಪೂರ್ಣ ನಿರಾಶನಾಗಿ, ನಡುಗುವ ನೀರಿನ ಕಡೆಗೆ ನೋಡುತ್ತ ನಿಂತಿದ್ದೆ. ಬೇರೆ ದೇಶದ ಒಂದು ಅರ್ಥವಿಲ್ಲದ ಹಾಡು ನೆನಪಿಗೆ ಬಂತು :

" ವೀರನಾಗಿ ಜೀವನವ ಗೆದ್ದು ಹಿಂತಿರುಗು ಮನೆಗೆ ನೀನು.
ವಿಧಿಯ ಶಾಪಕೋ, ಜಗದ ತಾಪಕೋ ಸೋತು ಬಂದರೇನು ?
ನಿನ್ನ ಪೀಳಿಗೆಯಲಿರುವ ಮಕ್ಕಳಿಗೆ ಇಂಥ ಸೋಲು ಬೇಡ.
'ಲಡ್ಲೊ' ಗೋಪುರವು ಬೀಳುವನಕ ನೆನೆಯುವರು ನಿನ್ನ ನೋಡ."

ನನ್ನ ಮನಸ್ಸು ಹೆದರಿತ್ತು, ಅಂತರ್ಮುಖವಾಗಿತ್ತು. ಇಷ್ಟು ದಿವಸ ಹೊರಗೇ ಇದ್ದ ನನ್ನಿಂದ ಏನನ್ನೂ ದೊರಕಿಸುವದು ಸಾಧ್ಯವಾಗಲಿಲ್ಲ. ಒಂದು

ಲೇಖನವನ್ನೂ ಬರೆಯುವದು ನನ್ನಿಂದಾಗಲಿಲ್ಲ. ನನ್ನ ಬುದ್ಧಿಗೆ ತಕ್ಕಂತೆ ಬರೆಯುವದಾಗಲಿ ಮಾತನಾಡುವದಾಗಲಿ ಶಕ್ಯವಾಗಲಿಲ್ಲ. ಒಮ್ಮೆಯಾದರೂ ವಿದ್ಯಾರ್ಥಿಗಳ ಉತ್ಸಾಹಪೂರ್ಣವಾದ ಬಿಸಿ ಚರ್ಚೆಯಲ್ಲಿ ಭಾಗ ವಹಿಸಲಿಲ್ಲ. ಅಥವಾ ಹೊಸ ತರುಣರು ಜನರ ಚಳವಳಿಯನ್ನು ಆರಂಭಿಸಿದಾಗ ಕೆಲಸ ಮಾಡಲಿಲ್ಲ. ನಾನು ಯಾವಾಗಲೂ ನಿರುತ್ಸಾಹಿಯಾಗಿಯೆ ಇದ್ದೆ. ಆ ಚಟುವಟಿಕೆಗಳಿಗೆ ಬೇಕಾಗುವ ಹುರುಪು ನನ್ನಲ್ಲಿರಲಿಲ್ಲ. ನನಗೇನಾಗಿತ್ತು ? ಇಂಥ ಸ್ಥಿತಿಗೆ ಆಳಾಗಿದ್ದ ನನ್ನ ಜೀವನದ ಉದ್ದೇಶವಾದರೂ ಏನಿತ್ತು? ಕೆಲಸ ದೊರಕಿಸುವದರಲ್ಲಿಯೂ ಯಶಸ್ಸು ದೊರಕಲಿಲ್ಲ. ನಾನು ಈ ಜಗತ್ತಿನಲ್ಲಿ ಮಾಡಬೇಕಾಗಿದ್ದ ಒಳ್ಳೆಯ ಕೆಲಸವೆಂದರೆ, ಆ ಜಗತ್ತನ್ನೆ ಬಿಟ್ಟು ಹೋಗುವದು. ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ನಿರ್ಧರಿಸಿದ್ದೆ.

ವಾಸ್ತವವಾಗಿ ಇಂಥ ವಿಚಾರಗಳಿಂದ ಕ್ಷುಬ್ಧನಾಗಿ, ಪ್ರತಿರಾತ್ರಿ 'ಹಾಂಗಪೂ' ತೀರಕ್ಕೆ ಬರುತ್ತಿದ್ದೆ. ಆದರೂ ಏನಾದರೂ ಪ್ರಯೋಜನಕಾರಿಯಾದ ಕೆಲಸ ಮಾಡದೆ, ನನ್ನಿಂದ ಸಾಯುವದು ಆಗಲಿಲ್ಲ. ನನ್ನ ರೀತಿಯಿಂದ ಪ್ರಯೋಜನಕಾರಿಯಾದ ಕೆಲಸವೆಂದರೆ, ಎಲ್ಲಿಂದಲೋ ಬಹಳ ಹಣ ಗಳಿಸುವದು, ಮನದಣಿಯೆ ಕುಡಿದು ಇಬ್ಬರು ಮೂವರನ್ನಾದರೂ ಕೊಲ್ಲುವದು. ನನ್ನ ಮನಸ್ಸಿನಲ್ಲಿ ಇಂಥ ಒಬ್ಬ ವ್ಯಕ್ತಿಯಾಗಲಿ, ಜಾತಿಯ ಭೇದವಾಗಲಿ ಇರಲಿಲ್ಲ. ಒಬ್ಬ ಶ್ರೀಮಂತನನ್ನೇ ಕೊಲ್ಲುವದಾದರೆ ಸಮಾಜಕ್ಕೆ ಒಳ್ಳೆಯದೇ. ಬಡವನಾಗಿದ್ದರೆ, ಅವನ ದುಃಖಪೂರ್ಣ ಇತಿಹಾಸವನ್ನು ಮುಗಿಸಿದ ಶ್ರೇಯಸ್ಸು ಸಿಗುತ್ತಿತ್ತು. ಆಮೇಲೆ ನಾನು ಹಾಂಗಪೂದಲ್ಲಿ ಜಿಗಿಯಬಹುದು.

ಈ ಎಲ್ಲ ಅವಿಚಾರಗಳಿಂದ ಮನಸ್ಸು ತುಂಬಿದಾಗ, ಒಮ್ಮೆಯಾದರೂ ಸತ್ತಮೇಲೆ ನನ್ನ ಸ್ಥಿತಿ ಏನಾಗಬಹುದೆಂದು ನನಗೆ ಆಶ್ಚರ್ಯವಾಗಲಿಲ್ಲ. ನನ್ನ ಅಜ್ಜಿಯಾಗಲಿ ತಾಯಿಯಾಗಲಿ ಯಾರೂ ನನ್ನ ವಿಚಾರಕ್ಷೇತ್ರದಲ್ಲಿ ಬರಲಿಲ್ಲ. ನಾನು ಹೊಣೆಗೆಟ್ಟು ನಿಂತಿದ್ದೆನೆಂದು ನೀನು ಹೇಳಬಹುದು. ನಿಜವಾಗಿಯೂ. ಮತ್ತು ಅದರಿಂದ ನನಗೆ ಒಂದು ಭೀಕರ ಆನಂದವಾಗು

ತ್ತಿತ್ತು. ಮೊದಲನೆಯದಾಗಿ ಇದು ನಾವಿರಲೇಬೇಕಾದ ಅನಾಗರಿಕ ಸಮಾಜದ ತಪ್ಪು; ಎರಡನೆಯದಾಗಿ, ನಿನ್ನ ತಂದೆ-ತಾಯಿಗಳು, ಇದಕ್ಕೆ ಹೊಣೆಗಾರರು. ಅವರು ನಿನಗೆ ಸ್ವಾತಂತ್ರ್ಯವನ್ನಾಗಲಿ, ಸ್ವಾವಲಂಬತೆಯನ್ನಾಗಲಿ ಕಲಿಸಿರಲಿಲ್ಲ. ಆಮೇಲೆ ಇದು ನನ್ನ ತಾಯಿಯ, ನನ್ನ ಕುಟುಂಬದ ಹೊಣೆ. ಇದಲ್ಲದೆ ನಮ್ಮನ್ನು ಆಳುತ್ತಿರುವ ಪೀಳಿಗೆಯ ತಪ್ಪು. ಇವರೆಲ್ಲ, ನಿನ್ನನ್ನು ನಾನು, ಶಾಲೆಯಲ್ಲಿದ್ದಾಗ ಸಾಕಲು ಅನರ್ಹನೆಂದು ಗೊತ್ತಿದ್ದರೂ ಲಗ್ನವಾಗಲಿಕ್ಕೆ ಒತ್ತಾಯಪಡಿಸಿದರು. ನಾನೂ ಆಗ ಇವುಗಳ ಬಗ್ಗೆ ವಿಚಾರ ಮಾಡಲಿಲ್ಲ. ನಿನ್ನ ಬಗ್ಗೆಯೂ ನಾನು ಯೋಚಿಸಲಿಲ್ಲ.

ಇಷ್ಟರಲ್ಲಿ ಅನಿರೀಕ್ಷಿತವಾಗಿ, ಆ-ಮೊಯದ ಗೆಳೆಯರಿಂದ ಪತ್ರ ತೆಗೆದುಕೊಂಡು, ' ಟಿ ' ನನ್ನೆಡೆಗೆ ಬರದಿದ್ದರೆ ಏನಾಗುತ್ತಿತ್ತೋ ? ಸಾಧಾರಣವಾಗಿ ' ಟಿ ' ನನ್ನ ಕರೆಗೆ ಉತ್ತರವನ್ನೇ ಕೊಡುತ್ತಿರಲಿಲ್ಲ. ಆದ್ದರಿಂದ ಆ ಮಳೆಗಾಲದ ಸಂಜೆ ಅವನು ನನ್ನ ಕೋಣೆಗೆ ಬರಲು, ಏನೋ ಅಸಾಮಾನ್ಯ ಸುದ್ದಿಯಿರಬೇಕೆಂದು ಗೊತ್ತಾಯಿತು. ನನ್ನ ಊಹೆ ನಿಜವಾಗಿತ್ತು. ಮುರಿದ ನನ್ನ ಖುರ್ಚಿಯ ಮೇಲೆ ಕೂಡುತ್ತಲೆ ಹೇಳಿದ:

" ಆ-ಮೊಯುವಲ್ಲಿ ಶಿಕ್ಷಕನಾಗಲು ನಿನಗೆ ಸಂಧಿ ದೊರೆತಿದೆ. ಏನನ್ನುವೆ ? "

ಕಲಿಸುವದು ನನಗೆಷ್ಟು ಬೇಸರ ಎನ್ನುವದನ್ನು ನಿನಗೆ ಹೇಳುವ ಅವಶ್ಯವಿಲ್ಲ. ಕಲಿತವರಾದರೂ, ನಿರ್ಧನರಾದ ಜನರ ವಿಶಿಷ್ಟ ನರಕ ಅದು. ಆರು ತಿಂಗಳು ನೀನು ನನ್ನ ಜೊತೆಗಿದ್ದರೆ, ಅದರ ಬಗ್ಗೆ ಯಾವ ಆಶೆಯೂ ಉಳಿಯಲಾರವು. ಮತ್ತು ಎಲ್ಲಕ್ಕೂ ಹೀನ ಸಂಗತಿಯೆಂದರೆ, ಆ ಕಾಲೇಜಿನಲ್ಲಿ ನೂರಾರು ಮತಗಳಿದ್ದವು. ಎಷ್ಟೋ ಆಕಾಂಕ್ಷೆಯುಳ್ಳ ಜನರು ದೊಡ್ಡಸ್ತಿಕೆಗೆ ಕಾದಾಡುತ್ತಿದ್ದರು. ಮತ್ತು ಅಲ್ಲಿ ಕಲಿಸುವ ಯಾವ ಶಿಕ್ಷಕನೂ ಈ ಗೊಂದಲದಿಂದ ಪಾರಾಗುವಂತಿರಲಿಲ್ಲ. ನನಗೆ ಆಗ ಅನ್ನಕ್ಕೆ ಗತಿ ಇಲ್ಲದಿದ್ದರೂ, ಈ ಎಲ್ಲ ಪರಿಸ್ಥಿತಿಯ ನಡುವೆ ಕೆಲಸ ದೊರಕಿಸುವ ವಿಚಾರವೂ ಎಂಥ ಹೇಯವಾಗಿತ್ತೆಂಬುದರ ಕಲ್ಪನೆ ನಿನಗೆ ಈಗ ಕೂಡ

ಬರುವದು ಸಾಧ್ಯವಿಲ್ಲ. ಅಯ್ಯೋ! ನಾನು ಬಹಳ ಕೆಲಸದಲ್ಲಿದ್ದೇನೆಂದು ಮನೆಗೆ ಪತ್ರ ಬರೆದದ್ದು ನಿನಗೆ ನೆನಪಿದೆಯೇ ?

ನಿಜವಾಗಿಯೂ, ನಾನು ತಲೆ ತೆಗೆದೇ ನಿಂತಿದ್ದೆ. ತಾನಾಗಿ ಬಂದ ಕೆಲಸವನ್ನು ತಿರಸ್ಕರಿಸುವ ಧೈರ್ಯವೂ ನನಗಿದ್ದಿಲ್ಲ. 'ಟಿ' ನನಗೆ ಆ ಪತ್ರವನ್ನು ಕೊಟ್ಟ ಕ್ಷಣ, ನನ್ನಲ್ಲಿದ್ದುದೆಲ್ಲವನ್ನೂ— ಬಟ್ಟೆಗಳನ್ನೂ ಕೂಡ ಒತ್ತೆ ಇಟ್ಟು ದುಡ್ಡು ತರಬೇಕಾಯಿತು. ಪಟ್ಟಣಕ್ಕೆ ಕೀರ್ತಿಯನ್ನು ಗಳಿಸಹೋದ, ದುರ್ದೈವಿಯಾದ ಜರ್ಮನ್ ಕವಿ ಗ್ರ್ಯಾಬನಂತೆಯೇ ನನ್ನ ಸ್ಥಿತಿಯಾಗಿತ್ತು. ಅವನು ಹೊರಡುವ ಮುನ್ನ ಅವನ ತಾಯಿ, ಬಹಳ ತಲೆಮಾರಿನಿಂದ ಕಾದಿಟ್ಟಿದ್ದ ಬೆಳ್ಳಿಯ ತಾಟು-ಬಟ್ಟಲಗಳನ್ನು ಕೊಟ್ಟಿದ್ದಳು. ನಗರದಲ್ಲಿದ್ದುಕೊಂಡು, ದಿನಾಲು ಅವುಗಳಿಂದ ಸ್ವಲ್ಪಸ್ವಲ್ಪ ಮಾರಿ ಜೀವಿಸುತ್ತಿದ್ದನು. ಕೆಲವು ದಿನಗಳಲ್ಲಿಯೇ ಬೆಳ್ಳಿಯ ಸಾಮಾನುಗಳೆಲ್ಲ ಅವನ ಕೈಬಿಟ್ಟವು. ನನ್ನ ಹತ್ತಿರ ಅಂಥ ಬೆಲೆ ಬಾಳುವ ಹಳೆಯ ವಸ್ತುಗಳಾವೂ ಇರಲಿಲ್ಲ. ಟೋಕಿಯೋದಲ್ಲಿದ್ದಾಗ ನಿನಗಾಗಿ ಕೊಂಡುಕೊಂಡ, ಬೆಳ್ಳಿಯ ಫೋಟೋ ಚೌಕಟ್ಟು ಮಾತ್ರ ಇತ್ತು. ಎಷ್ಟೋ ಸಾರೆ ಅದನ್ನೂ ಅಡವು ಇಡಬೇಕೆಂಬ ಮೋಹ ನನ್ನನ್ನು ಕಾಡುತ್ತಿತ್ತು. ಆದರೂ ಎಂಥ ಕಠಿಣ ಪ್ರಸಂಗಗಳಲ್ಲಿಯೂ ಅಷ್ಟು ಮಾಡದೆ, ಹೇಗೊ ಸೈರಿಸಿಕೊಂಡಿದ್ದೆ. ಶಕ್ಯವಾದರೆ, ಅದನ್ನು ನಿನಗೆ ಕಾಣಿಕೆ ಕೊಡಬೇಕೆಂದು ನಿಶ್ಚಯಿಸಿದ್ದೆ. ಇಷ್ಟಾದರೂ (ಮತ್ತೊಂದು ದೈವ ವಿಡಂಬನ) ಆ ಪತ್ರ ಕೈಗೆ ಸಿಕ್ಕೊಡನೆ, ಅದನ್ನು ಒಬ್ಬ ಸಾಲಗಾರನ ಹತ್ತಿರ ಇಡಬೇಕಾಯಿತು. ಅಜ್ಜಿಯನ್ನೂ, ತಾಯಿಯನ್ನೂ ಮತ್ತು ಹೆದರಿದ ಕುರಿಯಂತಿದ್ದ ನಿನ್ನನ್ನೂ ನೋಡಲು ಬರಲು, ದಾರಿಯ ವೆಚ್ಚಕ್ಕೆ ಹಣ ಬೇಕಾಗಿತ್ತು!

ಒಂದು ಹೃದಯವಿದ್ರಾವಕ ಸೌಂದರ್ಯ ಅಂದಿನ ಮಧ್ಯಾಹ್ನದಲ್ಲಿತ್ತು. ಹಾಂಗ್-ಚೌದಿಂದ, ವಿಶಾಲವಾಗಿ ಹರಿಯುವ, 'ಚೈನ್-ಟ್ಯಾಂಗ್' ನದಿಯನ್ನು 'ಟಿ' ಪವಿತ್ರ ಸೇತುವೆಯ ಮೇಲೆ ಹಾದು, 'ಲೀ' ಪರ್ವತವನ್ನು ಬಳಸಿ, ದಟ್ಟವಾದ ಅರಣ್ಯ ಬೆಳೆದ ಕಂದರಗಳನ್ನು ಕಳೆದು, ನನ್ನೂರ ಅಗಸಿಗೆ ಬಂದು ಮುಟ್ಟಿದೆ. ನನಗೆ ಹರ್ಷವೂ ಹೆದರಿಕೆಯೂ ಒಂದೇ ಕಾಲಕ್ಕೆ ಉಂಟಾದವು. ನಗರದ ಸುತ್ತಲೂ ನಿಂತಿದ್ದ ಬೆಟ್ಟಗಳನ್ನು ನೋಡಿ

ನನ್ನ ಹೃದಯವು ವೇಗವಾಗಿ ಬಡಿದುಕೊಳ್ಳುತ್ತಿತ್ತು. ನಾನು ಮೃದುವಾಗಿ ಹಾಡಹತ್ತಿದೆ. ಎರಡು ವಿರುದ್ಧ ಭಾವನೆಗಳು ಒಂದೇ ಕಾಲಕ್ಕೆ ಹುಟ್ಟು ವದು ಶಕ್ಯವಿದ್ದರೆ, ಅದೇ ಸಮಯಕ್ಕೆ ನಾನು ಮನಸ್ಸಿನಲ್ಲಿಯೇ ಬೇಡಿ ಕೊಳ್ಳಹತ್ತಿದೆ: "ಸ್ವರ್ಗದಲ್ಲಿರುವ ತಂದೆಯೇ! ನನ್ನ ಗುರುತಿದ್ದವರಾರೂ, ನನ್ನ ಚ್ಯುತಿಯನ್ನು ನೋಡದಿರಲಿ. ಸೋತು ಬಂದ ನನ್ನನ್ನು ಅವರು ನೋಡಿದರೆ, ನಾನು ತಡೆಯಲಾರೆ."

ದೋಣಿ ನಿಂತೊಡನೆಯೇ, ಎರಡು ಚೀಲಗಳನ್ನು ಕೈಯಲ್ಲಿ ಹಿಡಿದು, ಬಿಸಿಲಿನಲ್ಲಿ ಮನೆಗೆ ಧಾವಿಸಿದೆ. ಗುಂಪಿನಲ್ಲಿ ಹಾದು ಹೋಗುವಾಗ, ದೇಶ ಭ್ರಷ್ಟನಂತೆ ತಲೆತಗ್ಗಿಸಿಕೊಂಡಿದ್ದೆ. ನಾನು ಸುರಕ್ಷಿತವಾಗಿ ಮನೆ ಮುಟ್ಟಿದೆ. ಮುಂಚೆಯ ಬಾಗಿಲಿನಿಂದ ಒಳಗೆ ಹೋಗಿ ನೋಡಿದಾಗ, ನನ್ನ ತಾಯಿ ಒಬ್ಬಳೇ ಕುಳಿತು ಚಹ ಕುಡಿಯುತ್ತಿದ್ದಳು. ಆತುರದಿಂದ, ಆನಂದದಿಂದ, ಒಮ್ಮೆಲೇ ಓಡಿ ಹೋಗಿ, "ಅವ್ವಾ, ಅವ್ವಾ!" ಎಂದು ಪ್ರೀತಿಯಿಂದ ಕರೆಯಬೇಕೆಂದು ಮಾಡಿದ್ದೆ. ಆದರೆ ಹಾಗೆ ಅವಳು ಕುಳಿತದ್ದನ್ನು ನೋಡಿ ನನ್ನೆದೆಯಲ್ಲಿ ತಿರಸ್ಕಾರದ ತೆರೆಯೆದ್ದು, ನಾನು ಅವಳ ಹತ್ತಿರ ಹೋಗಲಿಲ್ಲ. ನಾನು ಬಲಿಬಿದ್ದ ಅನ್ಯಾಯವನ್ನು ದೂಷಿಸದೆ ಇರಲು ನನ್ನಿಂದಾಗಲಿಲ್ಲ. ನಾನು ಏನೂ ಮಾತಾಡದೆ, ತೊಗಲಿನ ಚೀಲವನ್ನು ಬೆಂಚಿನ ಮೇಲೊಗೆದು, ಅಟ್ಟದ ಮೇಲಿನ ನನ್ನ ಕೋಣೆಗೆ ಹೋದೆ. ಯಾವ ನಾಟಕವಾಡುವುದೂ ನನಗೆ ಬೇಕಾಗಿರಲಿಲ್ಲ.

ಹಾಸಿಗೆಯ ಮುಂದೆ ಮೊಣಕಾಲೂರಿ, ಮೊದಲೇ ನೀನು ಅಲ್ಲಿ ಕುಳಿತ ದ್ದನ್ನು ನೋಡಿ ನನಗೆ ಆಶ್ಚರ್ಯವಾಯಿತು. ನಿನ್ನ ದೇಹ ಬಿಕ್ಕುಗಳಿಂದ ನಡುಗುತ್ತಿತ್ತು. ಮುಖ ಕಣ್ಣೀರಿನಿಂದ ಕೆಂಪಾಗಿತ್ತು. ಮನದಲ್ಲಿ ಜುಗುಪ್ಸೆ ಹುಟ್ಟಿ ಸುಮ್ಮನೆ ನಿನ್ನನ್ನು ನೋಡುತ್ತ ನಿಂತೆ ಕಡೆಗೊಮ್ಮೆ ಶುಷ್ಕವಾದ ಇಳಿದ ಸ್ವರದಿಂದ "ಏನಾಯಿತು ?" ಎಂದು ಕೇಳಿದೆ. ನೀನು ಮತ್ತಷ್ಟು ಅಳಲು ಪ್ರಾರಂಭಿಸಿದೆ. ನಾನು ಮತ್ತೊಮ್ಮೆ ಪ್ರಶ್ನೆ ಮಾಡಿದರೂ ಉತ್ತರ ಕೊಡದೆ ಹಾಗೆಯೇ ಅಳಹತ್ತಿದೆ. ಬೇರೆಯವರ ಅಳುವನ್ನು ನಿಲ್ಲಿಸಲು ನನ್ನಿಂದಾಗದು. ಅದಕ್ಕೆ ವಿರುದ್ಧವಾಗಿ ಜನರು ದುಃಖದಲ್ಲಿದ್ದಾಗ ನನಗೇ

ಕಣ್ಣೀರು ಬರುತ್ತವೆ. ಕೂಡಲೆ ನಿನ್ನ ತಲೆಯನ್ನಪ್ಪಿಕೊಂಡು, ನಿನ್ನೊಡನೆ ಅಳುತ್ತ ನನ್ನ ಹೃದಯವನ್ನು ಹಗುರ ಮಾಡಿಕೊಳ್ಳಹತ್ತಿದೆ. ಸ್ವಲ್ಪ ಹೊತ್ತಿನ ಮೇಲೆ ತಾಯಿ ಗಂಭೀರವಾಗಿ ನುಡಿದಳು :

" ಏನು ಮಹಾರಾಣಿಯಾಗಿದ್ದಾಳೆ ! ಏನೋ ಅಂದದ್ದಕ್ಕೆ ಸಿಟ್ಟಿನಿಂದ ಕೋಣೆಯನ್ನು ಬಿಟ್ಟು ಹೋಗಿದ್ದೀ. ನೀನಂತೂ ಹುಚ್ಚ ಪಶು, ಶಾಂಘಾಯಿಯಿಂದ ಇಲ್ಲಿಗೆ ಬಂದವನು ! ಒಂದು ತಿಂಗಳ ಅಲ್ಲಿಲ್ಲಿ ಕೆಲಸ ಬಿಟ್ಟು ತಿರುಗಾಡಿ ಬಂದು, ನನಗೇನನ್ನೂ ಹೇಳದೆ ನಿನ್ನ ಚೀಲಗಳನ್ನು ಮಾತ್ರ ನನ್ನ ಹತ್ತಿರ ಒಗೆದಿದ್ದೀ. ಎಂಥ ನಡತೆ ಇದು ! ನೀನು ಒಂದು ವೇಳೆ ರಾಜನಾಗಿದ್ದರೂ ಇಂಥ ಅಪಮಾನವನ್ನು ತಡೆಯಲು ಸಾಧ್ಯವಿಲ್ಲ. ನನಗೆ ಎಂದೋ ಗೊತ್ತು. ನೀವಿಬ್ಬರೂ ಗಂಡ-ಹೆಂಡಿರು, ಪತ್ರಗಳ ಮೂಲಕ ಸಂಚು ಹೂಡಿ ನನ್ನನ್ನು ಕೊಲ್ಲಲು ಪ್ರಯತ್ನಿಸಿದ್ದೀರಿ. "

ನನ್ನ ಕಣ್ಣೀರು ಬತ್ತಿ ಹೋಗಿ, ನನ್ನ ರಕ್ತ ಒಮ್ಮೆಲೇ ತಣ್ಣಗಾಯಿತು. ಒಳಗೆ ಬೆಂಕಿ ಉರಿಯುತ್ತಿದ್ದರೂ, ನನ್ನ ದೇಹ, ಚಳಿಗಾಲದ ಮಧ್ಯರಾತ್ರಿಯ ಗಾಳಿಗೆ ಸಿಕ್ಕಂತೆ ತಣ್ಣಗೆ ಆಣೆಕಲ್ಲಾಯಿತು. ನನಗೆ ಒಳ್ಳೆಯ ಹೊಡೆತ ಬಿದ್ದಂತಾಗಿ, ಸಿಟ್ಟಿನಿಂದ ಒದರುವವನಿದ್ದೆ. ನೀನು ನನ್ನನ್ನು ತಡೆಯದಿದ್ದರೆ, ಏನಾದರೂ ಭಯಂಕರ ಕೃತಿ ಮಾಡಿ, ತಾಯಿಗೆ ಕೂಸೆಯ ತನಕ ಶರಣು ಹೊಡೆಯುತ್ತಿದ್ದೆ. ಏನೇ ಆಗಲಿ ನನ್ನನ್ನು ಅಂಥ ಕೃತಘ್ನ ಅಪರಾಧದಿಂದ ಉಳಿಸಿದ್ದಕ್ಕಾಗಿ ನಿನಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ನಾನು ಬರಬಹುದೆಂದು ನೀವಿಬ್ಬರೂ ಎಣಿಸಿರಲಿಲ್ಲ. ಎಲ್ಲ ಸಮಾಧಾನವಾದ ಮೇಲೆ, ನಾನು ಶಾಂಘಾಯಿಯಲ್ಲಿ ಬಹಳ ದಿನ ಇದ್ದದ್ದಕ್ಕಾಗಿ ತಾಯಿ ನಿನ್ನನ್ನು ಹೇಗೆ ಬೈದಳೆಂದು ಗೊತ್ತಾಯಿತು. ಅದೇ ಮೊದಲನೆಯ ಪ್ರಸಂಗವಾಗಿರಲಿಲ್ಲ. ನಾನು ಆ-ಮೊಯಕ್ಕೆ ನಿನ್ನನ್ನು ಬಿಟ್ಟು ಹೋಗುತ್ತೇನೆಂದು ತಿಳಿದ ಮೇಲೆ ನಿನ್ನನ್ನು ಸಂತೈಸುವದು ಅಸಾಧ್ಯವಾಯಿತು. ಆದರೆ ಅದನ್ನು ಅಕ್ಷರಶಃ ವಿರೋಧಿಸುವದು ನಿನಗೆ ಹೊಳೆದಿರಲಿಕ್ಕಿಲ್ಲೇ ಇಲ್ಲ. ಉದಾಸೀನತೆ, ಮತ್ತು ದೈನ್ಯ ಇವೇ ನಿನ್ನ ಅನಂತ ದುಃಖಕ್ಕೆ ಕಾರಣ. ಅದರಂತೆಯೇ, ವಿರೋಧವಿಲ್ಲದೆ ಇರುವದು, ಮತ್ತು ಸಮಾಜದ ಹೀನ ವ್ಯವಸ್ಥೆಯ ವಿರುದ್ಧ, ಹೋರಾಡಲು ಅಸಹಾಯತೆ ಇವು ನನ್ನ ದುಃಖಕ್ಕೆ ಕಾರಣ.

ಬಂಡು! ಬಂಡು ಹೂಡುವದು. ನಮಗೆ ಈ ಶಬ್ದ ಗೊತ್ತಿದೆ. ಆದರೆ ಹೇಗೆ, ಎಲ್ಲಿ, ಅದನ್ನು ಪ್ರಾರಂಭಿಸುವದು? ನಮ್ಮಂಥ ನರ ಸತ್ತ ಅನಿಶ್ಚಿತ ಜೀವಿಗಳಿಗೆ ಅದನ್ನು ಯಾರೂ ಹೇಳಲಾರರು.

ಆ ದುಃಖಪೂರ್ಣ ದೃಶ್ಯ ಮುಗಿದ ಮೇಲೆ, ನೀನು ಚಳಿಜ್ವರದಲ್ಲಿ ಇದ್ದಾಗಿನಕಿಂತ ಹೆಚ್ಚಾಗಿ ಅಶಕ್ತಳಾಗಿರುವೆಯೆಂದು ತಿಳಿದು ಬಂತು. ನಿನ್ನ ಮಾಂಸರಹಿತವಾದ ಕಾಲುಗಳು ಬಿದಿರಿನಂತೆ ತೆಳ್ಳಗಾಗಿದ್ದವು. ನಿನ್ನನ್ನು ಆ-ಮೊಯಕ್ಕೆ ಕರೆದುಕೊಂಡು ಹೋಗಬೇಕೆಂದು ನಿಶ್ಚಯ ಮಾಡಿ, ಖರ್ಚಿಗಾಗಿ ಕಾಲೇಜಕ್ಕೆ ಪತ್ರ ಬರೆದೆ. ನಾವು ಎರಡು ನೂರು ಡಾಲರಗಳಿಗಾಗಿ ದಾರಿ ಕಾಯುತ್ತಿದ್ದರೂ, ಈ ನನ್ನ ಸಿದ್ಧತೆಯನ್ನು ತಾಯಿಗೆ ಹೇಳಿರಲೇ ಇಲ್ಲ. ಆದರೆ ರೊಕ್ಕ ಬಂದ ಮೇಲೂ ನೀನು ಸ್ವಲ್ಪ ಅನುಮಾನಿಸಿದೆ.

"ನೀವು ಅಲ್ಲಿ ಕೆಲಸ ಕಳೆದುಕೊಂಡರೆ? ಮತ್ತೆ ನಾನು ನಿರ್ಧನನಾದರೆ? ಏನು ಮಾಡಬೇಕು? ಎಲ್ಲಿ ಹೋಗಬೇಕು?" ಒಬ್ಬ ಗ್ರೀಕ ಭವಿಷ್ಯವಾದಿನಿಯಂತೆ, ನೀನು ಮುಂದೆ ಅನಾಹುತವನ್ನೇ ಎಣಿಸಿದೆ. ನಮ್ಮ ಬಾಳು ದುರಂತವಾಗುವದೆಂದು ನನಗೆ ಹೇಗೆ ಗೊತ್ತಾಗಬೇಕು?

ಕೆಲವು ದಿವಸಗಳ ಸಹವಾಸದಲ್ಲಿಯೇ ಇಂಥ ಬೇಡಾದ ಪ್ರತಿಫಲ ಸಿಗಬೇಕೆಂದರೆ! ನಾವು ಆ-ಮೊಯದಲ್ಲಿ ನೆಲಸಿದೊಡನೆಯೆ, ಇದ್ದ ನಿನ್ನ ಆರೋಗ್ಯವೂ ಹಾಳಾಯಿತು. ನಿನ್ನ ಊಟ ಕಡಿಮೆಯಾಯಿತು. ಆಗಾಗ ವಾಂತಿಯಾಗುತ್ತಿತ್ತು. ಯಾವಾಗಲೂ ದಣಿವಿನಿಂದ ಹಾಸಿಗೆಯ ಮೇಲೆಯೆ ಇರುತ್ತಿದ್ದೆ. ತಿಂಗಳ ತನಕ ನಿಜಸಂಗತಿ ಗೊತ್ತಾಗದೆ ನಿನ್ನನ್ನು ಬೈಯುತ್ತಿದ್ದೆ. ಮೂರು ನಾಲ್ಕನೆಯ ತಿಂಗಳಲ್ಲಿ ಪೂರ್ಣ ಗೊತ್ತಾದ ಮೇಲೂ, ನಿನ್ನೊಡನೆ ಅಲ್ಲದ ರೀತಿಯಲ್ಲಿ ವರ್ತಿಸಿದೆ.

ಅದೇ ಕಲಿಸಿ, ಕಲಿಸಿ ನನಗೆ ಬೇಸರ ಬಂದಿತ್ತು. ಅದು ನೀರಸವೆಂದು ನನಗೆ ಗೊತ್ತಿತ್ತು. ಅದು ನನ್ನನ್ನು ತುಳಿದುಬಿಟ್ಟಿತ್ತು. ಅನ್ಯಾಯವಾಗಿ ಹಿಡಿಯಲ್ಪಟ್ಟು ಪೀಡಿತನಾದವನಂತೆ ಕ್ಲಾಸಿಗೆ ಒಂದು ಹೋಗುತ್ತಿದ್ದೆ. ಹೃದಯದಲ್ಲಿ ಅದೇ ದೌರ್ಬಲ್ಯ. ಅದಕ್ಕಿಂತ ಹೆಚ್ಚು ನಿನ್ನ ಬಗ್ಗೆ ಕರುಣೆ.

ಬಹಳ ದಿನಗಳ ಹಿಂದೆ ನಾನು ಬರೆದ ಒಂದು ಪ್ರಬಂಧ ನನ್ನ ಅಪ್ಪಣೆ

ಯಿಲ್ಲವೆ ಒಂದು ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಇದರಿಂದ ಜನರ, ಅದರಲ್ಲಿಯೂ ಕೆಲ ಮತ್ಸರಗ್ರಸ್ತ ಸಹೋದ್ಯೋಗಿಗಳ ಮುತ್ತಿಗೆಗೆ ನಾನು ಗುರಿಯಾದೆ. ಅದು ನನ್ನನ್ನು ಗಾಸಿಗೊಳಿಸಿತು. ನಾನು ಎಷ್ಟು ಸಿಟ್ಟಿಗೆದ್ದಿದ್ದೆ! ಆದರೂ ಅಸಹಾಯನಾಗಿದ್ದೆ! ಕೃತಿ ಮತ್ತು ವಿಚಾರಸ್ವಾತಂತ್ರ್ಯ ನನಗೆ ಬೇಕಾಗಿದ್ದವು. ಆದರೂ ನನ್ನ ಉದ್ಯೋಗ ಬಿಡಲು ನನ್ನಿಂದಾಗಲಿಲ್ಲ. ನಿನ್ನನ್ನೂ, ಬರಬೇಕಾದ ಮಗುವನ್ನೂ ಸಾಕಬೇಕಾದಾಗ, ಕಳೆದ ಜೂನದ ಸ್ಥಿತಿಯನ್ನು ತರುವದು ಬೇಡವಾಗಿತ್ತು.

ಸಮಾಜಕ್ಕೆ ಬಲಿಯಾದ ಒಂದು ವ್ಯಕ್ತಿ ಎಂದು ತಿಳಿದು, ಕೃತಿಜೀವನದಲ್ಲಿಯ ನನ್ನ ಹೇಡಿತನವನ್ನು ಮುಚ್ಚಿಕೊಂಡೆ. ಆದರೆ ಮನೆಯಲ್ಲಿ ನಿನಗೆ ತೊಂದರೆ ಕೊಟ್ಟು ಆ ಹಾನಿಯನ್ನು ತುಂಬಿಕೊಂಡೆ. ನಿಜವಾಗಿಯೂ ನಾನಲ್ಲ — ನೀನು, ಸಮಾಜಕ್ಕೆ ಬಲಿಯಾದವಳು; ನನ್ನ ಮುಖಾಂತರ, ಸಮಾಜದ ವಧಸ್ತಂಭಕ್ಕೆ ಹತವಾದ ನಿಷ್ಪಾಪ ಪ್ರಾಣಿ ನೀನು. ನನ್ನನ್ನು ಸಮರ್ಥನೆ ಮಾಡಿಕೊಳ್ಳಲು ಎಂಥ ಅರ್ಥವಿಲ್ಲದ ನೆವ ಹೇಳಿವೆ!

ಯಾವುದೋ ಕಾರಣದಿಂದ ಸಿಟ್ಟಿಗೆದ್ದು ಮನೆಗೆ ಬಂದು ನೀನು ಮಾಡಿದ ಅನ್ನ ಒಳ್ಳೆಯದಿಲ್ಲವೆನ್ನುತ್ತಿದ್ದೆ. ನಿನ್ನ ಮನೆಯಾಡಳಿತವೂ ನನಗೆ ಸರಿಬರುತ್ತಿರಲಿಲ್ಲ. ಒಮ್ಮೊಮ್ಮೆ ನೀನೇ ನನ್ನ ದುಃಖಗಳಿಗೆ ಕಾರಣಳೆಂದು ಬಯ್ಯುತ್ತಿದ್ದೆ. ನನ್ನ ಕೆಲಸ ಹೋಗುವ ಚಿಂತೆ ನನ್ನನ್ನು ಕಾಡಿದಾಗ ಸಿಟ್ಟಿಗೆದ್ದು, ನಿನ್ನನ್ನು ಬಯ್ಯುತ್ತಿದ್ದೆ. ಆ ಶಾಪಗಳು ಇನ್ನೂ ಅಚ್ಚಳಿಯದೆ ನನ್ನ ನೆನಪಿನಲ್ಲಿವೆ.

"ನೀನು ಯಾಕೆ ಸಾಯುವದಿಲ್ಲ? ನೀನು ಸತ್ತ ಮೇಲೆಯೇ ನನಗೆ ಜೀವನ. ನನಗೂ ನಿನಗೂ ಏನು ಸಂಬಂಧ? ದನದಂತೆ ದುಡಿದು, ನಿನ್ನನ್ನು ಸಾಕಬೇಕು ಯಾಕೆ? ಈ ಹಾಳು ಗುಲಾಮಗಿರಿಯಿಂದ ಸ್ವಲ್ಪಾದರೂ ಸ್ವಾತಂತ್ರ್ಯ ದೊರೆಯಲಾರದೇ? ಅಯ್ಯೋ! ಜೀವಂತ ಹೆಣ ನೀನು! ನೀನು ಜೀವಿಸುವದಾದರೂ ಯಾತಕ್ಕೆ?"

ನಿನ್ನ ಸಹನೆ ಮೀರಿದಾಗ ನೀನು ಅಳುತ್ತಿದ್ದೆ. ಆದರೂ ನಾನು ನೋಡಬಾರದೆಂದು ನೀನು ಮೌನವಾಗಿಯೇ ಕಣ್ಣೀರು ಸುರಿಸುತ್ತಿದ್ದೆ. ನನಗೆ

ಪಶ್ಚಾತ್ತಾಪವಾಗಿ, ಕ್ಷಮೆ ಕೇಳಿಕೊಂಡು ತಿಳಿಸಿ ಹೇಳುತ್ತಿದ್ದೆ. ಮೃದುವಾಗಿ ನಿನ್ನನ್ನು ಅಪ್ಪಿಕೊಳ್ಳುತ್ತಿದ್ದೆ. ನಾನು ಪ್ರೀತಿಸುತ್ತಿದ್ದುದು ನಿನ್ನನ್ನಲ್ಲ, ಸಮಾಜ ವನ್ನು ಎಂದು ತಿಳಿಸಿ ಹೇಳಿ, ನನ್ನ ಮನವನ್ನು ಹಗುರು ಮಾಡಿಕೊಳ್ಳುತ್ತಿದ್ದೆ. ನಿನ್ನನ್ನು ನನ್ನ ದುಃಖಗಳ ಕೊಳವನ್ನಾಗಿ ಮಾಡುತ್ತಿದ್ದೆ. ಇದರಿಂದ ನಿನ್ನ ದುಃಖ ಹೆಚ್ಚಾಗಿ, ಇಬ್ಬರೂ ತೋಳತೆಕ್ಕೆಯಲ್ಲಿ ಬಿಕ್ಕುತ್ತಿದ್ದೆವು. ಇಂಥ ಪ್ರಸಂಗಗಳು ಮೊದಲು ಆಗಾಗ ಆಗುತ್ತಿದ್ದವು. ಚೈತ್ರದ ರಜೆಯಲ್ಲಂತೂ ದಿನಕ್ಕೊಮ್ಮೆ ಅಥವಾ ಎರಡು ಸಾರೆ ಈ ಪ್ರಸಂಗ ನಡೆಯುತ್ತಿದ್ದವು.

ಇದೆಂಥ ಕರುಣ ಸ್ಥಿತಿ ನಮ್ಮದು ? ಮದುವೆಯೇ ಅಪರಾಧವೋ ? ಸಮಾಜವೇ ತಪ್ಪು ಮಾಡುತ್ತಿದೆಯೋ ? ಸಮಾಜದ ತಪ್ಪೇ ಆಗಿದ್ದರೆ, ನಮ್ಮ ಜೀವನದ ವ್ಯವಸ್ಥೆಯಲ್ಲಿಯೇ ಈ ತಪ್ಪು ಅಡಗಿದ್ದರೆ, ನಮ್ಮ ನಿಯಮ ಗಳನ್ನು ಬದಲಿಸಲೇ ಬೇಕು. ದುಃಖವನ್ನು ಕಡಿಮೆ ಮಾಡಲು, ನಾವು ಮಾಡಿದಂತೆ ಮತ್ತೊಬ್ಬ ಪಾಲುಗಾರನನ್ನು ತರಲೇಬೇಕು. ತಿಂಗಳದ ಕೂಸಿ ದ್ದಾಗಲೇ, ಅವನಿಗೆ ನಮ್ಮ ದುಃಖಗಳು ಒಂದೊಂದಾಗಿ ಬಂದವು. ಮುಂದಿನ ದುಃಖದ ಮೋಣಿಯಾಗಿದ್ದ ನಮ್ಮ ಮಗ. ಅವನು ಎಷ್ಟು ಅಶಕ್ತನಾಗಿದ್ದಾನೆ, ಎಷ್ಟು ಸುಲಭವಾಗಿ ತನ್ನ ದುಃಖವನ್ನು ಒದರಿ ಹೇಳುತ್ತಾನೆ! ಕೂಡಲೇ ಹಾಲು ಕೊಡದಿದ್ದರೆ, ಹೇಗೆ ಅವನ ಹಣೆಯ ಮೇಲೆ ನೀಲಿಯ ನರಗಳೇಳು ತ್ತವೆ? ಜೀವನವೇ ಬೇಡಾದ ನಾನು ಹೇಗೆ ಈ ಬಡಪ್ರಾಣಿಯನ್ನು ಬೆಳೆಸಬಲ್ಲೆ? ಎಷ್ಟು ಕೀಳಾದ ಆತ್ಮವಿರೋಧ! ಇದು ನಿಶ್ಚಯವಾಗಿ ಅಕ್ಷಮ್ಯ ಅಪರಾಧ! ಅದನ್ನು ತಿಳಿಸುವದೂ, ಸಮರ್ಥಿಸುವದೂ ನನ್ನಿಂದ ಸಾಧ್ಯವಿಲ್ಲ. ದಯವಿಟ್ಟು ನನಗಾಗಿ ಉತ್ತರ ಹೇಳುವೆಯಾ ?

ತಿಂಗಳ ಹಿಂದೆ ನಮ್ಮ ಸ್ಥಿತಿಯ ಕೊನೆಯ ಹಂತ ಬಂದಿತು. ನನಗೆ ನೆನಪಿದ್ದಷ್ಟು ನಿನಗಿರಲಿಕ್ಕಿಲ್ಲ. ಸ್ವಾಭಾವಿಕವಾಗಿ ನೀನು ಹೆದರಿಕೆಯಿಂದ ಬುದ್ಧಿ ಇಲ್ಲದವಳಾಗಿದ್ದೆ. ಅರಗಿನಿಂದ ಮುದ್ರೆ ಮಾಡಿದಂತೆ ಪ್ರತಿಯೊಂದು ಸನ್ನಿವೇಶವೂ ನನ್ನೆದೆಯಲ್ಲಿ ಅಚ್ಚೊತ್ತಿವೆ. ಆ ಹೊತ್ತಿಗೆ ಆಗಲೇ ರಾತ್ರಿ ಯಾಗಿತ್ತು. ಚಂದ್ರ ಪೂರ್ವದಲ್ಲಿ ಮೂಡಿ ಬಂದಿದ್ದ.

ಆಗ ನಾನು ನನ್ನ ವೃತ್ತಿಗೆ ರಾಜಿನಾಮೆ ಕೊಟ್ಟಿದ್ದೆ. ನನ್ನ ಅಣ್ಣ

ಒಂದು ಹೊಸ ಬ್ಯಾಂಕಿನಲ್ಲಿ ಕೆಲಸ ಕೊಡಿಸಿದ್ದ. ಕೆಲ ರಾಜಕೀಯ ಕಾರಣಗಳ ಮೂಲಕ ಆ ಹೊಸ ಬ್ಯಾಂಕು ಪ್ರಾರಂಭವಾಗುವದೇ ತಡವಾಯಿತು. ಈ ನಡುವೆ ನಾನೇನೂ ಕೆಲಸವಿಲ್ಲದೆ ಇದ್ದೆ. ಅಂದು ರಾತ್ರಿ ಪೂರ್ಣ ಕುಡಿದು, ದಿನದಕಿಂತ ಹೆಚ್ಚು ಭಂಗ ಹೊಂದಿ, ಮನೆಗೆ ಬಂದೆ. ನಿನ್ನ ಮತ್ತು ಮಗುವಿನ ನೋಟ, ನನ್ನಲ್ಲಿ ವಿವೇಕಶೂನ್ಯ ಸಿಟ್ಟಿನ ಕಿಚ್ಚೆಬ್ಬಿಸಿತು. ಸುಡುವ ಶಾಪ ಗಳಿಂದ ನಿಮ್ಮನ್ನು ಬಯ್ಯುತ್ತ, ನೀವಿಬ್ಬರೂ ನನ್ನ ಕಾಲಿಗೆ ತೊಡಿಸಿದ ಸಂಕೋಲೆ ಎಂದೆ. ನಾನು ಕೊಂದುಕೊಳ್ಳುತ್ತೇನೆಂಬ ಹೆದರಿಕೆಯನ್ನು ಹಾಕಿದೆನೆಂದು ಕಾಣುತ್ತದೆ. ಆಮೇಲೆ ನಿನ್ನನ್ನು ಮಗುವಿನೊಡನೆ ತವರು ಮನೆಗೆ ಹೋಗಲು ಒತ್ತಾಯಪಡಿಸಿದೆ. ಇಷ್ಟೆಲ್ಲ ಒದರಾಡಿ ದಣಿದ ಮೇಲೆ ಜ್ವರಗ್ರಸ್ತನಾದವನಂತೆ ಅರೆಯೆಚ್ಚರದಲ್ಲಿ ಹಾಸಿಗೆಯ ಮೇಲೆ ಬಿದ್ದುಕೊಂಡು ಮಚ್ಛರದಾಣಿಯೊಳಗಿಂದ ನಿನ್ನನ್ನು ನೋಡಿದ ನೆನಪಿದೆ. ನೀನಾಗ ಮಗು ವಿಗೆ ಹೀಗೇನೊ ಹೇಳುತ್ತಿದ್ದುದು ಕೇಳಿಸಿತು:

" ಹಟ ಮಾಡಬೇಡ, ಮಲಗು ಮಗು ಮಲಗು. ನಿನ್ನ ತಾಯಿ ಹೋದ ಮೇಲೆ ಅಪ್ಪನನ್ನು ಸಿಟ್ಟಿಗೆಬ್ಬಿಸಬೇಡ. "

ನೀನು ದೀಪದ ಬೆಳಕಿನಲ್ಲಿ ಅಳುತ್ತಿದ್ದುದು ಕಾಣಿಸಿತು. ಆ ಚಿತ್ರ ನನ್ನನ್ನು ಸಿಟ್ಟಿಗೆಬ್ಬಿಸಿತು. ಅವಸರದಿಂದ ಮುಖ ಮತ್ತೊಂದೆಡೆಗೆ ತಿರುಗಿ ಸಿದೆ. ಸ್ವಲ್ಪ ಹೊತ್ತಿನ ಮೇಲೆ ನೀನು ನನ್ನ ಹತ್ತಿರ ಬಂದು ಪರದೆಯನ್ನು ಸರಿಸಿ ನನ್ನ ಕಡೆ ನೋಡಿದೆ. ಆಗ ನನಗೆ ನಿದ್ದೆ ಬಹಳ ಬೇಕಾಗಿದ್ದರಿಂದ ನಾನು ಅಲುಗಾಡಲಿಲ್ಲ.

ನನಗೆ ಎಚ್ಚರವಾದಾಗ, ಯಾರೋ ಜೋರಿನಿಂದ ಬಾಗಿಲು ಬಡೆಯು ತ್ತಿದ್ದರು. ನಾನು ಎದ್ದು ಬಾಗಿಲು ತೆರೆದೆ. ಕೆಲವು ರಿಕ್ಷಾ ಎಳೆಯುವವರು ಇದ್ದರು. ಅವರು ನಿನ್ನನ್ನು ಹೊತ್ತು ತಂದುದನ್ನು ನೋಡಿ ನಾನು ಚಕಿತ ನಾದೆ. ಎಡವುತ್ತ ನಿನ್ನೆಡೆಗೆ ಬಂದೆ. ನಿನ್ನ ಕುರುಳು ಸಡಿಲಾಗಿ ಒದ್ದೆಯಾಗಿ ಬಿದ್ದಿದ್ದವು. ನಿನ್ನ ಸೀರೆ ಪೂರ್ಣ ತೊಯ್ದು ಹೋಗಿತ್ತು. ಅದರ ಮೇಲೆ ನೀಲಿ ಕೆಂಪು ಕಲೆಗಳಿದ್ದವು. ಚಂದ್ರನ ಬೂದಿ-ಬೆಳಕು ನಿನ್ನ ಮೇಲೆ ಬಿದ್ದು ನಿನ್ನ ಮುಖ ಭಯಂಕರವಾಗಿತ್ತು. ಹೆದರಿ, ನಿನ್ನನ್ನು ಅಪ್ಪಿಕೊಂಡು ಹೆಸರು ಹಿಡಿದು ಕರೆಯತೊಡಗಿದೆ. ಕೊನೆಗೆ ನಿನ್ನ ಕಣ್ಣು ಸ್ವಲ್ಪ ತೆರೆದವು,

ಆದರೆ ಕೂಡಲೆ ಮುಚ್ಚಿಕೊಂಡವು. ಹನಿಗಳು, ಹರಿದ ಹಾರದಿಂದ ಮಣಿ ಜಾರುವಂತೆ ಉದುರತೊಡಗಿದವು. ಅಯ್ಯೋ! ಆಗ ನೀನು ನನ್ನನ್ನು ದ್ವೇಷಿಸುವದಿಲ್ಲವೆಂದು ತಿಳಿಯಿತು. ಆದರೆ ಯಾಕೆ ಅನ್ನುವದು ಇನ್ನೂ ತಿಳಿದಿಲ್ಲ. ಅಂಥ ಸ್ಥಿತಿಯಲ್ಲಿ ನಾನು ಅಳಬಾರದಾಗಿತ್ತು. ಆದರೂ ಎಲ್ಲರ ಎದುರಿಗೇ ನಾನು ಅಳಹತ್ತಿದೆ.

ಅವರು ನಿನ್ನನ್ನು ಕೋಣೆಯೊಳಗೆ ಒಯ್ದರು. ಆ ಸಪ್ಪಳದಿಂದ ಮಗುವಿಗೆ ಎಚ್ಚರವಾಯಿತು. ಅವನೂ ಅಳಹತ್ತಿದ್ದ. ಬಹುಶಃ ಅವನ ಸವಿದನಿಗೇ ನೀನು ಕಣ್ದೆರೆದು ನನ್ನನ್ನು ನೋಡಿದೆ. ನಿನ್ನ ತೆರೆಯದ ಅರಿವೆಗಳನ್ನು ಹಿಂಡಿ, ನಿನ್ನನ್ನು ಮಲಗಲು ಜುಲುಮೆ ಮಾಡಿದೆ. ಇಷ್ಟರಲ್ಲಿ ಹತ್ತಿರದ ಕೋಣೆಯಲ್ಲಿ ಮಲಗಿದ್ದ ಆಳು ಎದ್ದು ಬಂದು, ಏನಾಯಿತೆಂದು ಕೇಳಿದಳು. ಆಗ ನೀನು ಮಗುವನ್ನು ಬೇಡಿದ್ದರಿಂದ, ಅವಳಿಗೆ ತರಲು ಹೇಳಿದೆ. ಅದೇ ವೇಳೆಗೆ, ಯಾವುದೊ ಹೊಳೆಯ ಬಂದವರನ್ನು ಬಿಡುವದಕ್ಕಾಗಿ ಒಂದು ಹಡಗ ಕಿವುಡಾಗುವಂತೆ ಸಿಳ್ಳು ಹಾಕಿತು.

ನೀನು ಆಸ್ಪತ್ರೆಯಲ್ಲಿ ನರಳುತ್ತಿದ್ದಾಗ, ನನ್ನ ಮನಸ್ಸು ಶುದ್ಧವಾದಷ್ಟು ಮತ್ತಾವಾಗೂ ಆಗಿಲ್ಲ. ನಿನ್ನ ಹೃದಯ ಪ್ರೇಮದಿಂದಲೂ ಉಚ್ಚ ಜೀವನೋದ್ದೇಶಗಳಿಂದಲೂ ತುಂಬಿತ್ತು. ನಾನು ನನ್ನ ದುಃಖವನ್ನೆಲ್ಲ ಮರೆತು ನಿನ್ನನ್ನೇ ಯೋಚಿಸತೊಡಗಿದೆ. ಮಾನವೀಯ ಘನತೆಯೊಂದು ನನ್ನಲ್ಲಿ ತಲೆದೋರಿತು. ನೂರಾನಾಲ್ಕು ಡಿಗ್ರಿ ಜ್ವರವೇರಿ ನೀನು ಬಡಬಡಿಸುತ್ತಿದ್ದಾಗ ನಾನು ನಿನ್ನ ಹತ್ತಿರ ಕುಳಿತಿದ್ದೆ.

“ಮಗು ನೀನು ಹೇಗಿದ್ದೀ? .... ನಿವು ಬ್ಯಾಂಕಿಗೆ ಎಂದು ಹೋಗುತ್ತೀರಿ?” ಎಂದು ನೀನು ಕೇಳುತ್ತಿದ್ದೆ.

ಕಡೆಗೊಮ್ಮೆ ನಾವು ಆ-ವೊಯ ಬಿಟ್ಟ ಮೇಲೆ ನಿನ್ನ ಕರೆದುಕೊಂಡು ನಮ್ಮೂರಿನಲ್ಲಿ ನೆಲಸಬೇಕೆಂದು ಮಾಡಿದ್ದೆ. ಆಧುನಿಕ ಜಗತ್ತಿನಲ್ಲಿ ಬಾಳಲು ನಾನು ಅನರ್ಹನಾಗಿದ್ದೆನೆಂಬುದು ನನಗೆ ಗೊತ್ತಾಯಿತು. ನನಗೆ ಕೆಲಸ ಸಿಕ್ಕರೂ ಕೂಡ, ಅದಕ್ಕೆ ಮಹತ್ವ ಬರಲಾರದು. ಅದೊಂದು ಲಾಭವಿಲ್ಲದ

ಬೇಸರದ ಕೆಲಸ ಎಂದೆನಿಸಿತು. ನಮ್ಮ ಹಳೆಯ ಮನೆಯೇ ಉತ್ತಮ ಸ್ಥಾನವೆನಿಸಿತು.

ನಮ್ಮ ಮನೆಯವರು ಸಾಕಷ್ಟು ಶ್ರೀಮಂತರಲ್ಲದಿದ್ದರೂ ನಮಗೆ ಅನ್ನಕ್ಕೆ ಕೊರತೆ ಇರಲಿಲ್ಲ. ನಮಗೆ ಯಾವಾಗಲೂ ಅಲ್ಲಿ ಸ್ಥಾನ ಸಿಗುತ್ತಿತ್ತು. ನಿನಗೆ ಇಪ್ಪತ್ತೇಳು ವರ್ಷ ನನಗೆ ಇಪ್ಪತ್ತೆಂಟು ವರ್ಷ, ನಾವು ಐವತ್ತರ ವರೆಗೇ ಉಳಿಯಬಹುದೆಂದು ತಿಳಿದುಕೊಂಡರೂ, ಅದೇನು ದೂರವಿಲ್ಲ. ನನಗೆ ಕೀರ್ತಿಯ ಆಸೆಯಾಗಲಿ, ಐಶ್ವರ್ಯದ ಬಯಕೆಯಾಗಲಿ ಇರಲಿಲ್ಲ. ಹಣವನ್ನು ಗಳಿಸಬೇಕಾದರೆ ಬೇರೆಯವರನ್ನು ತುಳಿದು ಬರುವಷ್ಟು ಬಿರುಸುತನ ನನ್ನಲ್ಲಿರಲಿಲ್ಲ. ನನಗೆ ಸಂಧಿ ಸಿಕ್ಕಿದ್ದರೂ ಅದು ಸಾಧ್ಯವಿರಲಿಲ್ಲ.

ನಾವು ಆ ಮನೆಯ ಬಿಟ್ಟಾಗಲೇ ಇದೆಲ್ಲ ನನಗೆ ಹೊಳೆಯಿತು. ನಿನಗೆ ತೋರಿಸಲು ತಂದ ಕಟ್ಟಡಗಳ ನಕ್ಷೆಗಳನ್ನು ನೋಡುವದರಲ್ಲಿಯೇ ಬಹಳ ಹೊತ್ತು ವೆಚ್ಚವಾಯಿತು. ಪಟ್ಟಣದ ಉತ್ತರಕ್ಕೆ ಒಂದು ಸುಂದರವಾದ ಹುಲ್ಲು ಗುಡಿಸಲನ್ನು ಹೇಗೆ ಕಟ್ಟಿಸಬೇಕೆಂದು ವಿಚಾರ ಮಾಡಿದೆವು. ಬಂಗಾರದ ಮಳಲಿನ ನದಿಯನ್ನು ದಾಟುವಾಗ, ಶಾಂಘಾಯಿಯನ್ನು ಮುಟ್ಟಿದ ಮೇಲೂ ಈ ವಿಚಾರ ಬದಲಾಗಿದ್ದಿಲ್ಲ. ಎರಡನೆಯ ದಿನದಿಂದ ನನ್ನ ನಿಶ್ಚಯ ಸಡಿಲಾಗತೊಡಗಿತು. ನಿನಗೆ ಚೆನ್ನಾಗಿ ನೆನಪಿರಬೇಕು. ನಾವು ಫೋಟೋ ತೆಗೆಸಿಕೊಂಡೆವು. ಊಟವಾದ ಮೇಲೆ ಜಪಾನದಿಂದ ಬಂದ ಒಬ್ಬ ಗೆಳೆಯನನ್ನು ನೋಡಲು ನಾನು ಹೋದೆ. ನಾನು ಅವನೆದುರಿಗೆ ನಮ್ಮ ಯೋಜನೆಗಳನ್ನು ಹೇಳಿದೆ. ಸುಮ್ಮನೆ ಅವನು ಹತ್ತಿರ ಆಡುತ್ತಿದ್ದ ಹುಡುಗರನ್ನು ತೋರಿಸಿ ಹೇಳಿದ:

"ಸ್ವಲ್ಪ ಇಲ್ಲಿ ನೋಡು. ಇದೆಲ್ಲ ನನ್ನ ಹೊಣೆ. ಮತ್ತು ಅದನ್ನು ಕಳೆದುಕೊಳ್ಳಲು ನಾನು ಬಯಸುವದಿಲ್ಲ. ನನ್ನ ಹೊಣೆ ನಿನಗಿಂತ ಭಾರವಾಗಿದೆ. ಆದರೆ ಅದರ ಬಗ್ಗೆ ನಾನೆಂದೂ ದೂರು ಹೇಳಲಾರೆ"

ಅಯ್ಯೋ! ಎಷ್ಟು ಸುಲಭವಾಗಿ ಸೋತೆನೆಂದು ನಾನು ತಿಳಿದುಕೊಂಡೆ. ಜಗತ್ತಿನೊಡನೆ ಮೊದಲನೆಯ ಹೋರಾಟಕ್ಕೆ ನಾನು ಮುಖ ತಿರುಗಿಸಿದ್ದೆ. ಇಷ್ಟು ಸುಲಭವಾಗಿ ಸೋಲುವವನಿಗೆ ಏನನ್ನಬೇಕು? ಆಮೇಲೆ ಅದರ

ಬಗ್ಗೆ ವಿಚಾರ ಮಾಡುತ್ತ ಇಡೀ ರಾತ್ರಿ ನಾನು ನಿದ್ದೆ ಮಾಡಲಿಲ್ಲ. ಸಹಜವಾಗಿಯೇ ಅದು ನಿನಗೆ ಗೊತ್ತಾಗಿ ನೀನು ಸುಮ್ಮನಿದ್ದೆ. ಏನಾದರೂ ಹೇಳಿದರೆ, ನಾನು ಸಿಟ್ಟಿಗೇಳಬಹುದೆಂದು ಬಹುಶಃ ನೀನು ಹಾಗಿರಬೇಕು. ನೀನು ಆಸ್ಪತ್ರೆಯಲ್ಲಿ ಇದ್ದ ರಾತ್ರಿಯಿಂದ, ಮೊದಲ ಸಲ ನನ್ನಲ್ಲಿ ಗೊಂದಲ ಪ್ರಾರಂಭವಾಯಿತು. ಆಮೇಲೆ ಮೂರು ದಿನಗಳ ವರೆಗೆ ನಾನು ಇದೇ ಸ್ಥಿತಿಯಲ್ಲಿದ್ದೆ. ಕಳೆದ ರಾತ್ರಿ ನನ್ನ ಗತಿಗೆ ದುಃಖಪಟ್ಟು, ನಾನು ಸುಮ್ಮನೆ ಮಲಗಿದಾಗ ನೀನು ಹೇಳಿದೆ :

" ನಿಮ್ಮನ್ನು ದುಃಖಿತರನ್ನಾಗಿ ನಾನು ಮಾಡಲಾರೆ. ಇಲ್ಲಿಯೇ ಶಾಂಘಾಯಿಯಲ್ಲಿರಿ. ನಾನು ಮಗುವಿನೊಡನೆ ತಿರುಗಿ ಹೋಗುತ್ತೇನೆ. ನನ್ನನ್ನು ಗಾಡಿಗೆ ಕಳಿಸಿ ಬಂದುಬಿಡಿರಿ. ಏನೂ ತಡ ಮಾಡದೆ, ನಾಳೆ ಚೇಕಿಂಗಕ್ಕೆ ಹೊರಡುವೆ "

ಇಂದು ರಾತ್ರಿ ನಾವು ಒಂದು ಔತಣವನ್ನು ಸ್ವೀಕರಿಸಿದ್ದೆವು. ಆದರೆ ನಾನು ವಿಚಾರಗಳನ್ನು ಬದಲಿಸಿ, ನಿನ್ನನ್ನೂ ಮಗುವನ್ನೂ ಹೋಗಗೊಡಲಾರೆನೆಂದು ಹೆದರಿ ನೀನು ಒಮ್ಮೆಲೆ ಹೊರಡಬೇಕೆಂದು ಮಾಡಿದೆ. ಇದರ ಸಲುವಾಗಿ ನಿನ್ನಲ್ಲಿ ನನಗೆ ಕೃತಜ್ಞತೆ ಹುಟ್ಟಿತು. ಆದರೂ ಒಂದು ದೃಷ್ಟಿಯಿಂದ ಜುಗುಪ್ಸೆಯೂ ಜನಿಸಿತು. ಆದ್ದರಿಂದಲೆ, ಊರಿಗೆ ಹೊರಡುವ ಸಿದ್ಧತೆ ಮಾಡಿದಾಗ ನಾನು ಸುಮ್ಮನೇ ಇದ್ದೆ. ಸ್ಟೇಶನ್ನಿಗೂ ಹೋದೆವು. ನೀನು ಏನೂ ಮಾತಾಡದೆ ಗಾಡಿಯಲ್ಲಿ ಕುಳಿತೆ. ಆಗ ಏನೋ ಸುಮ್ಮನೆ ದಿನದ ಹವಾಮಾನದ ಬಗ್ಗೆ ನಾನು ಮಾತನಾಡಿದೆ.

" ದಿನ ಸುಂದರವಾಗಿದೆಯಲ್ಲವೇ ? "

ನಿನಗೆ ಅದು ತಿಳಿದಿರಬೇಕು. ಮುಖವನ್ನು ತಿರುಗಿಸಿದೆ. ಆಕಾಶದ ಸ್ಥಿತಿಯನ್ನು ಬಹಳ ಹೊತ್ತು ನಿರೀಕ್ಷಿಸುತ್ತಿರುವಂತೆ ಕಂಡುಬಂತು. ನೀನು ತುಂಬಿದ ಕಣ್ಣುಗಳಿಂದ ಒಮ್ಮೆ ನೋಡಿದ್ದರೂ ನನಗೆ ತಡೆಯುವದಾಗುತ್ತಿರಲಿಲ್ಲ. ಬಹುಶಃ ನಾನು ನಿನ್ನನ್ನು ತಡೆಯುತ್ತಿದ್ದೆ; ಇಲ್ಲವೆ ನಿನ್ನೊಡನೆ ಬರುತ್ತಿದ್ದೆ. ಕಡೆಗೆ ಹಾಂಗ್-ಚೌದ ವರೆಗೆ ಬರುತ್ತೇನೆಂದು ಹಟ ಹಿಡಿಯುತ್ತಿದ್ದೆ. ಆದರೆ ನೀನು ತಿರುಗಿ ನೋಡಲಿಲ್ಲ; ನಾನೂ ಏನೂ ಹೇಳಲಿಲ್ಲ.

ಈ ರೀತಿ ನಾವಿಬ್ಬರೂ ಬೀಳ್ಕೊಟ್ಟೆವು. ಕೆಲ ಹೊತ್ತಿನ ವರೆಗೆ ಪ್ಲ್ಯಾಟ ಫಾರ್ಮಿನ ಮೇಲೆ, ನಿನ್ನನ್ನು ಕಿಡಿಕಿಯಲ್ಲಿ ನೋಡುತ್ತ ನಿಂತಿದ್ದೆ. ಗಾಡಿ ಹೊರಡುವಾಗ ಬೀಳ್ಕೊಡಲು ಕೈ ಎತ್ತಿದೆ. ನಿನ್ನ ಎಡ ಗಲ್ಲದ ಮೇಲೆ ಕಣ್ಣೀರಿನ ರೇಖೆಯಿತ್ತು. ಮುಂದೆ ಎಷ್ಟೊ ಹೊತ್ತಿನ ವರೆಗೆ, ಎಲ್ಲರೂ ಹೋದ ಮೇಲೂ ನಾನು ಗಾಡಿಯು ಕಡೆಗೇ ನೋಡುತ್ತಿದ್ದೆ. ಕಾಲೆಳೆಯುತ್ತ ತಿರುಗಿದಾಗ, ನಿನ್ನನ್ನು ಎಂದೆಂದಿಗೂ ಕಾಣಲಾರೆನೆಂಬ ಅರಿವುಂಟಾಯಿತು.

ಆದರೂ ನಿನ್ನ ಸಲುವಾಗಿ ನಾನು ನೋಯುತ್ತಿದ್ದೇನೆ.

---

## ಪರಿಚಯ

### ಕೌ-ಮೊ-ಜೊ

( ೧೮೯೨ — )

ಕವಿ, ನಾಟಕಕಾರ, ವಿಮರ್ಶಕ, ಅನುವಾದಕ, ಸಣ್ಣಕತೆಗಾರ ಮತ್ತು ಕಾದಂಬರಿಕಾರ. ಹೀಗೆ ಕೌ-ಮೊ-ಜೊ ಕೇವಲ ತನ್ನ ಬಹುಮುಖ ಪ್ರತಿಭೆಯೊಂದರಿಂದಲೆ, ಚೀನದೇಶದ ನವಯುಗದ ಸಾಹಿತ್ಯದ ಮುಂದಾಳು ಗಳಲ್ಲಿ ಉನ್ನತಸ್ಥಾನವನ್ನು ಪಡೆಯಬಲ್ಲ.

ಸಣ್ಣವನಿದ್ದಾಗಲೆ ಜಪಾನಕ್ಕೆ ಹೋಗಿ ಕೌ-ಮೊ-ಜೊ ( ತನ್ನ ಗೆಳೆಯ, ಲು-ಶೂನ್‌ನಂತೆ ) ಟೋಕಿಯೋದಲ್ಲಿ ವೈದ್ಯವಿದ್ಯೆಯನ್ನು ಕಲಿತ. ಚೀನಕ್ಕೆ ಮರಳುವ ಮೊದಲೇ ಒಬ್ಬ ಜಪಾನೀ ಹುಡುಗಿಯನ್ನು ಮದುವೆಯಾದ. ಇದರಿಂದಾಗಿ ಜಪಾನದ ಯಾತ್ರೆಗೆ ಮೊದಲಾಯಿತು. ಅಲ್ಲಿಯ ದೀರ್ಘ ವಾಸದಿಂದ ಕೆಲವು ಗೆಳೆಯರ ಪರಿಚಯವಾಯಿತು. ಅವನ ಕೆಲವು ಕತೆ ಗಳ ಹಿನ್ನೆಲೆ ಜಪಾನ ದೇಶದ್ದು; ಮತ್ತು ಕೆಲವು ಪಾತ್ರಗಳೂ ಕೂಡ ಜಪಾ ನೀಯರು. ಅವನ ಪ್ರಖ್ಯಾತಿ ಚೀನದಲ್ಲಿದ್ದಷ್ಟೇ ಜಪಾನದಲ್ಲೂ ಇದೆ. ಕೆಲವು ವರ್ಷಗಳ ಹಿಂದೆ, ರಾಜಕೀಯ ಬಂಡುಗಾರನೆಂದು ಅವನನ್ನು ಹಿಡಿಯುವ ದಕ್ಕೆ ಆಜ್ಞೆ ಹೊರಟಿತ್ತು. ಈಗ ಅವನು ಜಪಾನದಲ್ಲಿಯೇ ಇರಬೇಕಾಗಿದೆ. ಪರಭಾಷೆಯ ಭಾಷಾಂತರಗಳನ್ನು ಹಿಡಿದು, ಅವನ ಹತ್ತು ಕೃತಿಗಳನ್ನು ಕೊಮಿಂಟಾಂಗದವರು ಬಹಿಷ್ಕರಿಸಿದ್ದರು.

ಕೌ-ಮೊ-ಜೊ ಪ್ರಖ್ಯಾತ ಭೂಗರ್ಭವಿಜ್ಞಾನಿಯೂ ಹೌದು. ಹೊನಾನ್‌ದಲ್ಲಿಯ ಅಗೆತದ ವಿಷಯವಾಗಿ ಇವನು ಇತ್ತೀಚೆಗೆ ಪ್ರಕಟಿಸಿದ ಕೆಲವು ಸಂಪುಟಗಳು ಚೀನ ಜಪಾನ ಪಂಡಿತರನ್ನೆಲ್ಲ ಮರುಳುಗೊಳಿಸಿವೆ. 'ಯಿನ್' ಅಸ್ಥಿಗಳ ಮೇಲಿನ ಇವನ ಲೇಖನಗಳು, ಚೀನದ ನಾಗರಿಕತೆ ಈಗ ತಿಳಿದುಕೊಂಡದ್ದಕ್ಕಿಂತ ಸಾವಿರಾರು ವರ್ಷ ಪ್ರಾಚೀನವೆಂದು ಸಿದ್ಧಪಡಿಸಿವೆ ಯೆಂದು ಪ್ರತೀತಿ ಇದೆ.

---

## ಸತ್ವಪರೀಕ್ಷೆ    

“……..ನಾನು ಶಾಂಘಾಯಿಯಲ್ಲಿ ನಿನ್ನೊಡನಿದ್ದಾಗ ನಿನಗೊಂದು ಭಾರವಾಗಿದ್ದೆ. ಅದನ್ನು ನಾನು ಬಲ್ಲೆ. ಮತ್ತೆ ನಿನ್ನನ್ನು ಬಿಟ್ಟು ಹೊರಟಾಗಲಂತೂ ನಿನಗೆ ಇನ್ನೊಂದಿಷ್ಟು ಸಂಕಟವನ್ನೊದಗಿಸಿದೆ.

“ ನಾವು ಹಡಗದಲ್ಲಿ ಹೊರಟಾಗ ಹವೆ ಸುಮಾರಾಗಿತ್ತು. ಆದರೆ ಅಂದು ಮಧ್ಯಾನ್ಹ ಕಡಲು ಮೊರೆಯಹತ್ತಿತು. ನಮಗೆಲ್ಲರಿಗೂ ಅಸ್ವಸ್ಥ. ಮೂರೂ ಮಕ್ಕಳಿಗೂ ಸರಿಯಿರಲಿಲ್ಲ. ಚಿಕ್ಕ ‘ ಪೀಸ ’ನಿಗೆ ಬಹಳೇ ಬಳಲಿಕೆ. ಆದರೆ ಮಾರನೆಯ ದಿನ ಅವನಿಗೆ ಗುಣವಾಯಿತು. ನಾವು ನಾಗಾಸ್ಕಿಗೆ ಬಂದಾಗ ಹಿಮವಿನ್ನೂ ಬೀಳುತ್ತಲಿತ್ತು. ಘೂಗನ್ನಿಗೆ ಬಂದಾಗ ಇಳಿಹೊತ್ತಾಗಿದ್ದರೂ ಬಿರುಗಾಳಿಯ ಭಾರ ಇನ್ನೂ ಹಾಗೆಯೇ ಇತ್ತು. ನಾವು ಅಲ್ಲಿ ‘ ಶಿ-ಚುವಾ ’ನನ ಮನೆಯಲ್ಲಿ ರಾತ್ರಿಯನ್ನು ಕಳೆದೆವು. ಮರುದಿನ ಬೆಳಗ್ಗೆ ‘ ಯು-ಹೂ ’ನಲ್ಲಿಗೆ ಹೋದೆವು.

“ ‘ಯು-ಹೂ ’ನ ಮನೆಯಲ್ಲಿ ಎರಡೇ ದಿನ ನಾವಿದ್ದದ್ದು. ಅಷ್ಟರಲ್ಲಿ ಹೊರಡಬೇಕೆನಿಸಿತು. ಅವನ ಮನೆಯ ಮಾಳಿಗೆ ಅಷ್ಟು ಕ್ಷೇಮವಿಲ್ಲ…. ನಿನಗೆ ಗೊತ್ತಿದೆಯಷ್ಟೇ? ಅಲ್ಲಿ ತಂಡಿ ಬಹಳ. ಹಾಕಿದ ಮರಕಟ್ಟಿಗೆ ಹುಳುಕು-ಟೊಳಕು. ಇಷ್ಟಾಗಿ ಚಿಕ್ಕಮಕ್ಕಳು ಆಟತಕ್ಕವು, ಓಡತಕ್ಕವು; ಯಾವಾಗಲೂ ಅವುಗಳ ಮೇಲೆ ಕಣ್ಣಿರಬೇಕು. ಚಿಕ್ಕಮಕ್ಕಳನ್ನು ಕಟ್ಟಿಕೊಂಡು ಅಟ್ಟದ ಮೇಲಿರುವುದು ಬಹಳೇ ಅನಾನುಕೂಲ. ಅಂತೆಯೆ ನಾನು ತಿಂಗಳಿಗೆ ಇಪ್ಪತ್ತು ಡಾ:ಲರು ಕೊಟ್ಟು ಒಂದು ಮನೆಯನ್ನು ಬಾಡಿಗೆ ಹಿಡಿದಿದ್ದೇನೆ. ಮುದ್ದಾದ ಮನೆ. ಮನೆಯ ಮುಂದೆ ಒಂದು ಚಿಕ್ಕದಾದ ಕಿತ್ತಳೆಯ ತೋಟ. ಅಲ್ಲಿ ಮಕ್ಕಳಾಡಬಹುದು.

“ ಬಹಳ ಮಾಡಿ ನಿನಗೆ ನೆನಪಿರಬೇಕು, ನಾವು ಪೂರ್ವದಲ್ಲಿ ಇದ್ದೆ

ವಲ್ಲ, ಆ ಸ್ಥಳದಿಂದ ಈ ಗಿಡಗಳು ಒಂದಿಷ್ಟು ಕಾಣಿಸುತ್ತಿದ್ದವು, ನಿನಗೆ ನೆನಪಾಗುವದಿಲ್ಲವೆ? ಅದೇ ಆ ಸ್ಥಳ. ಬಾಡಿಗೆಯಿಂದ ಹಿಡಿಯುವ ಮೊದಲು ಕಾಗದ ಬರೆದು ನಿನ್ನ ಸಲಹೆಯನ್ನು ಕೇಳಬೇಕೆಂದೊಮ್ಮೆ ಅನಿಸಿತು. ಏಕೆ? ಬಾಡಿಗೆ ಸ್ವಲ್ಪ ಹೆಚ್ಚು ಎಂದು. ಆದರೆ ಕೊನೆಗೆ ನನ್ನಷ್ಟಕ್ಕೆ ನಾನೇ ನಿಶ್ಚಯ ಮಾಡಿದೆ. ಚಿಕ್ಕಮಕ್ಕಳ ಕೆಲಸ, ತಾತ್ಕಾಲ ಮನೆ ಬಿಡುವದೇ ಲೇಸು ಎಂದೆ. ಸದ್ಯಕ್ಕಂತೂ ಇಲ್ಲಿಯ ವೆಚ್ಚ ನನಗೆ ಸೀಗುತ್ತಾ ಇದೆ.

“ ಶಾಂಘಾಯಿಯಲ್ಲಿ ಈಗ ನೀನು ಹೇಗಿರುವೆ? ನನಗೆ ಇಲ್ಲಿ ಬಹಳೇ ಭಣಭಣ ಎನಿಸುತ್ತಿದೆ. ಯಾವಾಗಲೂ ಮನದಲ್ಲಿ ನಾನು ನನ್ನ ದುಃಖ, ನನ್ನ ದುಃಖ ಮತ್ತು ನಾನು. ಇದರ ಚಕ್ರವೇ ಭ್ರಮಿಸುತ್ತಿರುವದು. ಮನೆಯ ಹೊರಗೋ ಇದಕ್ಕೂ ಅಸಹ್ಯ. ಸಂತತ ಹಿಮಪಾತ! ನನ್ನ ಮನವೆಲ್ಲ ವ್ಯಗ್ರವಾಗಿ ಹೋಗಿದೆ. ನಾವು ಅಗಲಿ ಇನ್ನೂ ಅರ್ಧ ತಿಂಗಳಾಗಿಲ್ಲ; ಅರ್ಧ ವರ್ಷವಾದಂತೆ ನನಗೆ ತೋರುತ್ತಿದೆ.

“ ನಿನ್ನೆ ಅಲ್ಲ ಮೊನ್ನೆ ಮುಗಿಲು ಸ್ವಲ್ಪ ಹೊತ್ತು ಹೊರವಾಗಿತ್ತು. ಮಕ್ಕಳನ್ನು ಸಂತೆಯಲ್ಲಿ ಅಂಗಡಿಗೆ ಕರೆದುಕೊಂಡು ಹೋಗಿದ್ದೆ. ಬರುವಾಗ ಒಂದು ಸಿನೇಮಾಗ್ರಹ ಹತ್ತಿತು. ಮಕ್ಕಳು ಚಿತ್ರಪಟವನ್ನು ನೋಡೋಣ ಎಂದು ಬಹಳೇ ಬೇಡಿಕೊಂಡವು. ಅದನ್ನು ಮೊದಲಿನಿಂದ ಕೊನೆಯ ವರೆಗೆ ನೋಡುವದು ಬಹಳೇ ಬೇಸರದ್ದಾಯಿತು. ತಿರುಗಿ ಮನೆಗೆ ಬರುವಾಗ ಕೆಲವು ಸೂಜಿ-ಪಾಜಿ ಕೊಳ್ಳಲು ನಿಂತೆವು. ಅದೇ ಹೊತ್ತಿಗೆ ನಮ್ಮ ಮಗು ‘ ಫೂ ’ ಬೆನ್ನಮೇಲೆ ಹೊತ್ತುಕೊಂಡು ಹೋಗಬೇಕೆಂದು ಹಟ ತೆಗೆದ. ಅರ್ಧ ಹಾದಿಯಷ್ಟು ಅವನನ್ನು ಬೆನ್ನ ಮೇಲೇರಿಸಿಕೊಂಡು ಬರಬೇಕಾಯಿತು. ಏನು ಜಡ ಆಗುತ್ತಿದ್ದಾನೆ ಹುಡುಗ! ಅಂದು ರಾತ್ರಿ ನನ್ನ ಬೆನ್ನೆಲ್ಲ ಶೂಲಿ ಹಾಕಿ ನಿದ್ದೆಯೇ ಬರಲಿಲ್ಲ.

“ ಎಷ್ಟೆಷ್ಟೋ ಮಾತು ನಿನಗೆ ಬರೆಯಬೇಕೆನಿಸುತ್ತದೆ. ಆದರೆ ಈಗ ಬರೆಯಲು ಕುಳಿತಿರುವೆನಲ್ಲ, ಏನೂ ಬರೆಯುವದೇ ಆಗುವದಿಲ್ಲ. ಎಲ್ಲಾ ವ್ಯರ್ಥ ಹಾಳು ಹರಟೆ! ಏನು ಮಾಡಿದರೂ ಮನಸ್ಸು ನಿರುತ್ಸಾಹಿತ ಆಗಿಯೇ ಆಗುತ್ತಿದೆ. ನಾನೇನು ಈಗ ಚಿಕ್ಕ ಪ್ರಾಯದವಳಲ್ಲ; ಆಗ

ಬಹಳೇ ಬೆಲೆಯುಳ್ಳವೆಂದು ತೋರಿದ ಅನೇಕ ವಸ್ತುಗಳು ಈಗ ಪ್ರಪಂಚ ದಲ್ಲಿ ಹಾಗೆ ತೋರುವದಿಲ್ಲ. ಅನರ್ಘ್ಯವಸ್ತುಗಳೆಂದು ಕೈಯಲ್ಲಿ ಗಟ್ಟಿ ಯಾಗಿ ಹಿಡಿದ ವಸ್ತುಗಳು — ಬೆರಳೊಳಗಿಂದ ನೀರು ಬಸಿದು ಹೋಗು ವಂತೆ — ಹಿಡಿತದೊಳಗಿಂದ ಜಾರಿ ಹೋಗಿವೆ. ಮುಂದೆ ಹೇಗೋ? ಎಂದು ಭಯಂಕರ ಚಿಂತೆ ನನ್ನನ್ನಾವರಿಸುವದು. ಜೀವನಕಾಲವೆಂಬುದು ಎಷ್ಟು ಅಲ್ಪ! ಹೆಂಗಸು ಮೂವತ್ತು ಮೀರಿದ ಮೇಲೆ ಅವಳಿಗೆ ಸಂಸಾರದಲ್ಲಿ ಏನು ರುಚಿ? ನನ್ನ ಮಕ್ಕಳ ತಂದೆ, ಇದರ ಬಗ್ಗೆ ನಿನ್ನ ಅಭಿಪ್ರಾಯವೇನು?

"ಈಗ ತಲೆಯಲ್ಲಂತೂ ಆಯಾಸ, ಒಬ್ಬಂಟಿಗತನದ ಬೇಜಾರ, ಗೊಂದಲ ಹಾಕುತ್ತಿವೆ. ಬರೆಯುವದನ್ನು ಮತ್ತೊಮ್ಮೆ ಬರೆಯುತ್ತೇನೆ."

*　　*　　*　　*

ಮಿಸೆಸ್ 'ಏ-ಇ-ಮೊ' ಜಪಾನಕ್ಕೆ ಹೋಗಿ ಮೂರು ವಾರಗಳಾಗಿ ದ್ದರೂ ಕಾಗದ ಬಂದಿರಲಿಲ್ಲ. ಆಕೆಯ ಗಂಡ ಅಲ್ಲಿಯ ಸುದ್ದಿಯನ್ನು ತಿಳಿ ಸಲು ಒಂದು ಕಾಗದ ಬರೆದಿದ್ದ. ಅದಕ್ಕೆ ಉತ್ತರ ಬರದಾಗಲು ಬಹಳೇ ಗೊಂದಲಗೆಟ್ಟಿದ್ದ. ಆಮೇಲೆ ಒಳಗೊಳಗೆ ಚಿಂತೆಗೆ ಪ್ರಾರಂಭವಾಯಿತು. ಕೊನೆಗೆ ಬಯಸಿ ಬೇಡಿದ ಕಾಗದವೇ ಇದು. ಅವನು ಅದರೊಳಗಿನ ಅಕ್ಷರಕ್ಷರಗಳನ್ನೂ ಕಣ್ಣಲ್ಲಿ ಕಣ್ಣಿಟ್ಟು ಓದಿದ. ಓದುವಾಗ ಅವನ ಕಣ್ಣು ಆ ಕಾಗದವನ್ನು ಕುಡಿಯುತ್ತಿದ್ದವೋ ಏನೋ! ಮೂಗಿನ ಹೊರಳಿಗಳನ್ನು ಹೀಗೆ ಹಿಗ್ಗಿಸುತ್ತಿದ್ದ, ಉಬ್ಬುಸಬಟ್ಟಂತೆ ಉಸಿರೆಳೆಯುತ್ತಿದ್ದ.

ಕಾಗದವು ಪೆನ್ಸಿಲ್ಲಿನಿಂದ ಬರೆದಿತ್ತು. ಅಕ್ಷರಗಳು ಅಸ್ಪಷ್ಟವಾಗಿದ್ದವು. ಮಕ್ಕಳಾಟ, ಪ್ರವಾಸ ಇವುಗಳಿಂದ ಅವಳಿಗೆ ತೊಂದರೆಯಾಗಿರಬಹುದೆಂದು ಆ ತಾಳ್ಮೆಗೆಟ್ಟ ಬರೆಹದಿಂದಲೇ ತಿಳಿದುಕೊಂಡ. ಕಡೆಯ ಭಾಗವನ್ನು ನಿದ್ದೆ ಗೆಟ್ಟು ಬರೆದಿರಲೇಬೇಕೆಂದು ಅವನಿಗೆ ನಿಶ್ಚಯವಾಗಿ ತಿಳಿಯಿತು. ಅಷ್ಟು ಗಜಿಬಿಜಿಯಾಗಿತ್ತು. ಮಕ್ಕಳ ಕಾಳಜಿ ಬಿಟ್ಟಾಗ, ತನ್ನ ವಿರಹ ಅವಳನ್ನು ಕಾಡುತ್ತಿರಬೇಕು. ಆದರೆ ಅದನ್ನು ಯಾರೂ ತಪ್ಪಿಸುವಂತಿಲ್ಲ. ಅವನಿಗೊಂದು ಸ್ವತಂತ್ರ ಜೀವನವನ್ನು ಮಾಡಬೇಕಿತ್ತು. ಆದ್ದರಿಂದ ಅವರಿಬ್ಬರೂ ಜೊತೆಯಾಗಿ ಬಾಳುವಂತಿರಲಿಲ್ಲ. ಅವಳ ಪತ್ರವನ್ನು ಮತ್ತೊಮ್ಮೆ ಓದಿದ.

ಬರೆಯುವಾಗ ಪತ್ರದ ಮೇಲೆ ಬಿದ್ದಿದ್ದ ಅವಳ ಕಣ್ಣೀರಿನೊಡನೆ ಇವನ ಕಣ್ಣಿನ ಹನಿಗಳೂ ಬೆರೆತುಕೊಂಡವು.

"ಹೌದು, ನಿಜವಾಗಿಯೂ ಮನುಷ್ಯರು ಅನಿತ್ಯರು. ಅವರ ಜೀವನವೂ ಎಷ್ಟೊಂದು ಕ್ಷಣಿಕ! ಇಂಥ ಒಂದು ಭಾರ ನಮ್ಮ ನಮ್ಮ ಮೇಲಿದ್ದರೂ, ನಮ್ಮ ಪಾಲಿಗೆ ಬಂದ ಕೆಲವು ವರ್ಷಗಳನ್ನಾದರೂ ನಾವು ಸುಖದಿಂದ ಅನುಭವಿಸಲಿಕ್ಕಿಲ್ಲ. ಕುದುರೆ ಆಕಳುಗಳಿಗಿಂತ ನಮ್ಮ ಬಾಳು ನಿಕೃಷ್ಟವಾಗಿದೆ. ನಾಯಿಗೂ ಕೂಡ ತನಗೆ ಬೇಕಾದಲ್ಲಿ ಹೋಗಿ ಶಾಂತಿಯಿಂದ ಮಲಗಲು ಸ್ವಾತಂತ್ರ್ಯವಿದೆ. ನಮಗಿಲ್ಲ. ಹುದುಗಿರಿಸಿದ ದುಃಖದಿಂದ ನಾವು ತೊಳಲುತ್ತೇವೆ. ದುಃಖಸಾಗರದಲ್ಲಿ ಬಿದ್ದು ವ್ಯರ್ಥವಾಗಿ ಒದ್ದಾಡುತ್ತೇವೆ.

"ನಾವು ಬಾಳುವದಾದರೂ ಯಾತಕ್ಕೆ? ನಮ್ಮ ಮಿದುಳನ್ನು ಯಾಕೆ ಹಿಂಡುತ್ತೇವೆ? ಕೇವಲ ದುಡ್ಡಿದ್ದವರ ಸಲುವಾಗಿಯೇ ಈ ಜೀವನವ್ಯಾಪಾರ ನಡೆದಿಲ್ಲವೇ? ಸದ್ಯದ ಪರಿಸ್ಥಿತಿಯಲ್ಲಿಯು ನಮ್ಮ ಗತಿಯಿನ್ನೇ ನಮ್ಮ ಮುಂದಿನ ಪೀಳಿಗೆಯ ಮೇಲೆ ನಾವು ಹೇರುತ್ತೇವಲ್ಲವೇ? ನಾವೆಲ್ಲ ದುಃಸಹರಾದ ಜೀವಿಗಳು. ಹುಲ್ಲು-ಕರಿಕೆಯಂತಿದ್ದೇವೆ. ಸೀರಿಸಂತಿದ್ದೇವೆ. ಇಲ್ಲ ಅದಕ್ಕೂ ಅಗ್ಗವಾಗಿದ್ದೇವೆ, ಹೀನರಾಗಿದ್ದೇವೆ. ಕಲೆ? ಸಾಹಿತ್ಯ? ಮರ್ಯಾದೆ, ಕೀರ್ತಿ? ಕೊನೆಯದಾಗಿ ಸಾಹಸ? ಇವೆಲ್ಲ ಗಿಲೀಟಿನ ವಂಚಿಸುವ ಶಬ್ದಗಳಲ್ಲವೇ? ಕನಸಲ್ಲವೇ?

"ಕಲಾವಿದನಾಗಲು ನಾನು ನನ್ನ ಮಾನವತೆಯನ್ನು ಬಲಿ ಕೊಡಲು ಸಿದ್ಧನಿಲ್ಲ. ನನ್ನಲ್ಲಿಯೇ ಮಾನವತೆಯು ಅವತಾರವಾಗಬೇಕಾಗಿದೆ. ಕೊನೆಯಲ್ಲಿ ನಾನು ಭಿಕ್ಷುಕನಾಗಬಹುದು. ಹಾದಿಯ ಹೆಣವಾಗಿ ಸಾಯಬಹುದು. ಆದರೂ ನನ್ನ ಹೆಂಡತಿಯ ಒಲುಮೆಯ ಗಂಡನಾಗಬೇಕು, ಮಕ್ಕಳಿಗೆ ಪ್ರೀತಿಯ ತಂದೆಯಾಗಬೇಕು. ಎಷ್ಟೇ ಸಂಕಟಗಳು ನನ್ನನ್ನು ಅಡ್ಡಗಟ್ಟಲಿ! ಪ್ರಿಯತಮೆ, ನಾನು ಇಂದು, ನಾಳೆ ಕೊನೆಯ ವರೆಗೆ ನಿನ್ನವನಾಗುತ್ತೇನೆ. ನಿನ್ನೆಡೆಗೆ ಬರಲು ಎಂತಹ ಆಸೆ ಇದೆ! ಕಡೆಗೆ ಜೀವನವೇ ಅಶಕ್ಯವೆನಿಸಿದಾಗ,

ಮಕ್ಕಳನ್ನು ಕೊಂದು, ನಾವೂ ' ಫ್ರೋಟೋ '* ನದಿಯಲ್ಲಿ ಹಾರಿಕೊಂಡು ಎಲ್ಲವನ್ನೂ ಮುಗಿಸಿಬಿಡೋಣ !

" ಹೆಚ್ಚು ಮರುಗುವದು ಬೇಡ ! ನಾನು ನಿಶ್ಚಯವಾಗಿಯೂ ತಿರುಗಿ ಬರುತ್ತೇನೆ.

" ಒಂದು ವರ್ಷದ ಕಾಂಟ್ರಾಕ್ಟಿನ ಮೇಲೆ ನಮ್ಮ ಮಾಸಪತ್ರಿಕೆ ಪ್ರಕಟ ವಾಗುತ್ತದೆ. ಅದರ ಮೊದಲ ಸಂಚಿಕೆ ಇನ್ನು ೩೦–೪೦ ದಿನಗಳಲ್ಲಿ ಬೆಳಕು ಕಾಣಬೇಕು. ಅದರ ಪ್ರಕಟಣೆಯ ಹೊಣೆಯೆಲ್ಲ ನನ್ನ ಮೇಲಿದೆ. ಮೊದ ಲಿನ ಈ ೩೦–೪೦ ದಿನಗಳಾದ ಮೇಲೆ ಪತ್ರಿಕೆ ಪ್ರಕಟವಾಗಲಿ ಬಿಡಲಿ, ನಾನು ನಿಶ್ಚಯವಾಗಿಯೂ ತಿರುಗುತ್ತೇನೆ. ನಮ್ಮ ದೈವದಲ್ಲಿ ಜೊತೆಯಾಗಿ ಬಾಳ ಬೇಕೋ ಇಲ್ಲ ಸಾಯಬೇಕೋ ಎಂಬುದನ್ನು ಆಮೇಲೆ ನಿಶ್ಚಯಿಸುತ್ತೇನೆ. ನಿನ್ನನ್ನು ಅನುಸರಿಸುವಾಗ ಯಾವ ವಿಘ್ನಗಳನ್ನೂ ನಾನು ಲಕ್ಷಿಸಲಾರೆ. ನೀನು ಹೋದಲ್ಲಿ ನಾನು ಬರುತ್ತೇನೆ. ಬೆಂಕಿ, ನೀರು, ಆತ್ಮಹತ್ಯೆ ಯಾವು ದಾದರೂ ಸರಿಯೇ. ನೀನು ಎಲ್ಲಿ ಮನೆ ಮಾಡುವಿಯೋ ಅಲ್ಲಿಯೇ ನನ್ನ ಮನೆ."

ಅವನು ಇದೇ ರೀತಿಯಲ್ಲಿ ತನ್ನಷ್ಟಕ್ಕೆ ತಾನೇ ವಿಚಾರ ಮಾಡಹತ್ತಿ ದನು. ನಡುನಡುವೆ ದುಃಖದ ಕಣ್ಣೀರು. ಆಮೇಲೆ ಮೆಲ್ಲಗೆ ಅವನ ಇಂದ್ರಿಯಗಳು ಸ್ವಾಧೀನಕ್ಕೆ ಬಂದವು. ತನ್ನ ಸಣ್ಣ ಕೋಣೆಯಲ್ಲಿ ಅತ್ತ ಇತ್ತ ತಿರುಗಾಡಹತ್ತಿದನು. ಆಗ ಅದೇ ಮಧ್ಯಾಹ್ನ ಎರಡು ಗಂಟೆಯಾಗಿತ್ತು. ಪಕ್ಕದ ಕಿಡಿಕಿಯೊಳಗಿಂದ ಬಿಸಿಲು ತೂರಿ ಬರುತ್ತಿತ್ತು. ಸೂರ್ಯನ ಕಿರಣ ಗಳು ಒಮ್ಮೆ ಉಲ್ಲಾಸವನ್ನುಂಟುಮಾಡಿದರೆ, ಮತ್ತೊಮ್ಮೆ ನಿರಾಶೆಯ ನ್ನುಂಟುಮಾಡುತ್ತಿದ್ದವು. ಪುಸ್ತಕಗಳ ಶೆಲ್ಫಿನ ಹೊರತು ಗೋಡೆಗಳೆಲ್ಲ ಬರಿದಾಗಿದ್ದವು. ಒಂದು ಕಡೆ ಗಯಟೆಯ ಚಿತ್ರವಿತ್ತು. ಮತ್ತೊಂದು ಕಡೆ ಬೀಥಾವೆನ್ನನ ಭಾವಚಿತ್ರ ತೂಗುತ್ತಿತ್ತು.

" ನಿನ್ನ ಭಾವನೆಗಳೆಲ್ಲ ಎಷ್ಟು ಸತ್ವಹೀನವಾಗಿವೆ ! ಹಗಲೆಲ್ಲ ತಕರಾರು

---

* ಜಪಾನದಲ್ಲಿಯ ಒಂದು ನದಿ. ವಿರಸಗೊಂಡ ಪ್ರೇಮಿಗಳು ಅದರಲ್ಲಿ ಬಿದ್ದು ಆತ್ಮಹತ್ಯ ಮಾಡಿಕೊಳ್ಳುವರಂತೆ.

ಹೇಳುವದು ನಿನಗೊಂದು ಚಟವಾಗಿದೆಯಲ್ಲ! ನಿನ್ನ ದೈನಂದಿನ ಜೀವನ ಎಷ್ಟೊಂದು ಕರುಣೆಯಿಂದ ತುಂಬಿದೆ! ನಿನ್ನ ವಿಚಾರಗಳೂ ಎಷ್ಟು ಸಂಕುಚಿತ ಮತ್ತು ಸ್ವಾರ್ಥಪರವಾಗಿವೆ! ನಿನ್ನಲ್ಲಿರುವ ಈ ಭಾವನೆಗಳೇ, ನಿನ್ನಲ್ಲಿಯ ಕಲಾವಿದನನ್ನು ಕಲಂಕಗೊಳಿಸಲು ಸಾಕಾಗಿವೆ. ಏನೆಂದರೂ ನೀನು ತಪ್ಪುಗಾರನಾದ ಕಲಾವಿದ!"

ಈ ರೀತಿ ತನ್ನನ್ನೇ ದೂಷಿಸುತ್ತ ತನ್ನ ಹೃದಯ ಎರಡು ವಿಧದಲ್ಲಿ ಹೊಯ್ದಾಡುತ್ತಿದೆಯೆಂದು ಅವನಿಗನಿಸಿತು. ಅದು ಒಡೆಯಬಹುದೆಂಬ ಭೀತಿಯೂ ಉಂಟಾಯಿತು. ಆದರೆ ಅದನ್ನು ಲಕ್ಷ್ಯಕ್ಕೆ ತಾರದೆ, ತನ್ನಲ್ಲಿಯ ಗೊಂದಲವನ್ನು ಹೇಗೋ ಸೈರಿಸಿಕೊಂಡು ವಿಚಾರಮಾಡುತ್ತ ಹಿಂದೆ ಮುಂದೆ ಅಡ್ಡಾಡಹತ್ತಿದ. "ನನ್ನ ಬೀಥಾವೆನ್, ನನ್ನ ಗಯಟೆ! ನನ್ನನ್ನು ಹೀಗೆ ದಿಟ್ಟಿಸಿ ನೋಡಬೇಡಿರಿ! ಇನ್ನು ಮುಂದೆ ನನಗೂ ನಿಮಗೂ ಏನೂ ಸಂಬಂಧವಿಲ್ಲ. ಮುಂದೆ ಎಂದಿಗೂ, ನಿಮ್ಮ ಮೀನದ ಹೆಸರಿನಲ್ಲಿ ನನ್ನ ಕೊಳೆತ ಮಾಂಸವನ್ನು ಮಾರುವದಿಲ್ಲವೆಂದು ವಚನ ಕೊಡುತ್ತೇನೆ. ಇಲ್ಲ ಇನ್ನೆಂದಿಗೂ ಇಲ್ಲ. ನಿಮಗೆಲ್ಲ ನನ್ನ ಕೊನೆಯ ನಮಸ್ಕಾರ!" ಹೀಗೆ ಅನ್ನುತ್ತ ನಿಜವಾಗಿಯೂ, ಆ ಚಿತ್ರಗಳ ಎದುರಿಗೆ ಕೊನೆಯ ಸಾರೆ ನಮಸ್ಕರಿಸುವವನಂತೆ ನಿಂತನು.

ಏ-ಇ-ಮೋನಿಗೆ ಆಳವಾದ ನೋವುಂಟಾಗಿತ್ತು. ಹೆಂಡತಿಯ ಪತ್ರವನ್ನೋದಿದ ಮೇಲೆ, ಅವಳಿಗೆ ತನ್ನ ದುಃಖದ ಆಳವನ್ನು ತಿಳಿಸಲು ನಿಶ್ಚಯಿಸಿದನು. ಲೆಕ್ಕಣಿಕೆಯನ್ನು ಕಾಗದಕ್ಕೆ ಹಚ್ಚುವಾಗಲೇ ಬಾಗಿಲು ಬಡಿದ ಸಪ್ಪಳ ಕೇಳಬಂತು.

"ಇದು ಏ-ಇ-ಮೋನ ಮನೆಯೇನು?"

"ಹೌದು."

"ಮಿ. ಏ-ಇ-ಮೋ ಮನೆಯಲ್ಲಿದ್ದಾರೆಯೇ?"

"ನಾನೇ ಏ-ಇ-ಮೋ."

"ಹೇ! ಹೇ!"

ಬಂದ ಇಬ್ಬರು ಅತಿಥಿಗಳು ಆದರದಿಂದ ಅವನಿಗೆ ನಮಸ್ಕರಿಸಿದರು.

ಆದರೂ ಅವರು ಮನಗಂಡಂತೆ ಕಾಣಲಿಲ್ಲ. ಏ-ಇ-ವೋ ಅವರನ್ನು ತನ್ನ ಕೋಣೆಗೆ ಬರಹೇಳಿದ. ಅವರಿಬ್ಬರೂ ತಮ್ಮ ಹೆಸರು ಹೇಳಿದರು. ಏ-ಇ-ವೋ ಅವರ ಮುಖಮುದ್ರೆಯಿಂದಲೇ ತಿಳಿದುಕೊಂಡಂತೆ ಅವರ ಹೇಳಿಕೆ ಕೇವಲ ಉಪಚಾರ ಮಾತ್ರವಾಗಿತ್ತು.

ಅವರು ಶಿ-ಚುವಾನದ ಪಶ್ಚಿಮ ಪ್ರಾಂತದ 'ಶಿ....' ಪಟ್ಟಣದಿಂದ ಬಂದಿದ್ದರು.

'ಶಿ....' ಪಟ್ಟಣದ ರೆಡ್‌ಕ್ರಾಸ್ ಸಮಾಜದಿಂದ ಏ-ಇ-ವೋಗೆ ಎರಡು ವಾರ ಮೊದಲೇ ತಾರು ಬಂದಿತ್ತು. ತಿರುಗಿ ಡಾಕ್ಟರನ ಸ್ಥಳಕ್ಕೆ ಬರಬೇಕೆಂದು ಕೇಳಿಕೊಂಡಿದ್ದರು. ರೆಡ್‌ಕ್ರಾಸ್ ಸಮಾಜದವರು ಕಳಿಸುವ ಪ್ರತಿನಿಧಿಗಳು, ಧನಸಹಿತವಾಗಿ ಬರುವರೆಂದೂ, ಅವರ ಬೇಡಿಕೆಯನ್ನು ಸಲ್ಲಿಸಬೇಕೆಂದೂ ತಾರಿನಲ್ಲಿತ್ತು. ಎರಡು ದಿನಗಳ ನಂತರ, 'ಶಿ....' ಪಟ್ಟಣದಲ್ಲಿದ್ದ ಅವನ ಅಣ್ಣನಿಂದ ಈ ದೀರ್ಘ ಪತ್ರ ಬಂದಿತ್ತು :

"ನಾನು ಎಷ್ಟೋ ಸಾರೆ ನಿನಗೆ ಬರೆದಿದ್ದರೂ ನಿನ್ನಿಂದ ಪತ್ರವೇ ಇಲ್ಲ. ಏನಾದರೂ ವಿಶೇಷ ಕಾರಣವಿರಬಹುದೇ ಎಂದು ನನಗನಿಸುತ್ತದೆ. ಹಾಗಿದ್ದರೆ, ಅದೇನೆಂದು ಕೂಡಲೇ ತಿಳಿಸಬೇಕೆಂದು ನಾನು ಆಶಿಸುತ್ತೇನೆ.

'ಶಿ....' ಪಟ್ಟಣದ ರೆಡ್‌ಕ್ರಾಸದವರಿಂದ ನನಗೊಂದು ಪತ್ರ ಬಂದಿದೆ. ಅದನ್ನು ಇದರ ಜೊತೆಯಲ್ಲಿಟ್ಟಿದ್ದೇನೆ. ಇನ್ನೊಂದು ತಾರೂ ಅಲ್ಲಿದೆ. ಅದೇನೆಂಬುದನ್ನು ನೀನೇ ನೋಡು. ಈಗ ಕೆಲಸ ದೊರಕಿಸುವದು ಎಷ್ಟು ಕಠಿಣವೆಂದು ನಾನು ಹೇಳಬಯಸುತ್ತೇನೆ. ವಿಶೇಷವಾಗಿ, ಕಾಯಮ್ ನೌಕರಿ ದೊರಕಿಸುವದಂತೂ ತೀರ ಕಠಿಣ. ಇಲ್ಲಿಯ ರೆಡ್‌ಕ್ರಾಸ್ ಸಮಾಜ, ಉಳಿದ ಸ್ಥಳಗಳಿಗಿಂತ ಹೆಚ್ಚು ವಿಶಾಲವಾಗಿ ಸಂಘಟಿತವಾಗಿದೆ. ಮತ್ತು ಯಾವುದಾದರೂ ಬೇರೆ ಆಫೀಸಿನ ಕೆಲಸಗಳಿಗಿಂತ, ಅದನ್ನು ಆಶ್ರಯಿಸುವದೇ ಒಳ್ಳೆಯದು. ಇಂಥ ಸಂಧಿಯನ್ನು ನೀನು ಬಿಡಲಾರೆಯೆಂದು ನನಗನಿಸುತ್ತದೆ.

ತಂದೆ-ತಾಯಿಗಳ ವಯಸ್ಸು ಹೆಚ್ಚುತ್ತ ಬಂದಿದೆಯೆಂಬುದು ನಿನಗೆ ಗೊತ್ತಿದೆ. ನಿನ್ನಿಂದ ಬಹಳ ಕೆಲಸವನ್ನು ಅವರು ಅಪೇಕ್ಷಿಸಿದ್ದಾರೆ. ನೀನು ತಿರುಗಿ ಬಂದರೆ, ನನಗೂ ಹೆಚ್ಚು ಆನಂದವಾಗುತ್ತಿದೆ.

ನಿನಗೆ ಪ್ರೀತಿಯ ಹರಕೆಗಳು. ನಿನ್ನ ಹೆಂಡತಿ ಮಕ್ಕಳನ್ನು ನಾನು ನೆನೆಸುತ್ತೇನೆಂದು ಹೇಳು.

ನಿನ್ನ ಪ್ರೀತಿಯ ಅಣ್ಣ

W....

ಜೊತೆಗಿರಿಸಿದ ಪತ್ರದ ಸಾರ ಹೀಗಿತ್ತು:

ಪ್ರೀತಿಯ W....

ಏ-ಇ-ಮೋನನ್ನು ನಮ್ಮ ಜೊತೆಗೆ ಬರಲು ಕರೆಯಬೇಕೆಂದು ನಿಶ್ಚಯಿಸಿದ್ದೇವೆ. ಸಂಬಳ ಹೆಸರಿಗೆ ೪೦೦ ಡಾಲರುಗಳಷ್ಟಾಗಬಹುದು. ಆದರೆ ನಮ್ಮ ಆರ್ಥಿಕ ಪರಿಸ್ಥಿತಿ ಕೆಟ್ಟಿದ್ದರಿಂದ, ನಿಜವಾಗಿ ನೂರಕ್ಕೆ ೨೦ರಷ್ಟು ಮುರಿದು ಕೊಡುತ್ತೇವೆ. ಒಟ್ಟು ೩೨೦ ಡಾಲರಿನಷ್ಟು ಬೀಳಬಹುದು. ನಮ್ಮ ಆರ್ಥಿಕ ಪರಿಸ್ಥಿತಿ ಸುಧಾರಿಸಿದ ಮೇಲೆ ಮೊದಲಿನಂತೆಯೇ ಕೊಡುತ್ತೇವೆ.

ಈ ವಿಷಯವಾಗಿ ನೀನು ಅವನಿಗೆ ಬರೆಯಬಹುದೆಂದು ನಾವು ಆಶಿಸುತ್ತೇವೆ. ಏ-ಇ-ಮೋ ನಮ್ಮ ಪತ್ರ ಮುಟ್ಟುವ ಮೊದಲೇ ಶಾಂಘಾಯಿಯಲ್ಲಿ ಬೇರೆ ಕೆಲಸ ದೊರಕಿಸಬಹುದೆಂದು ಅನಿಸಿದ್ದರಿಂದ, ಈ ಮೊದಲೇ ಅವನಿಗೆ ತಾರು ಮಾಡಿದ್ದೇವೆ. ನಾವು ನಮ್ಮ ಪ್ರತಿನಿಧಿಗಳನ್ನು ಅವನ ಕಡೆಗೆ ಕಳಿಸುತ್ತೇವೆ, ಮತ್ತು ಪ್ರಯಾಣದ ಖರ್ಚನ್ನೂ ಕೊಡುತ್ತೇವೆ. ತಾರಿನ ಒಂದು ಪ್ರತಿಯನ್ನು ಅವನಿಗೂ ಕಳಿಸಿದ್ದೇನೆ.

ನಿನ್ನ ಪ್ರೀತಿಯ

K....

ಏ-ಇ-ಮೋನ ಹಿರಿಯ ಅಣ್ಣ ಬಹಳ ದಿನಗಳಿಂದ 'ಶಿ....' ಪಟ್ಟಣದಲ್ಲಿ ವ್ಯಾಪಾರ ಮಾಡುತ್ತಿದ್ದ. ಮೊದಲು ಏ-ಇ-ಮೋನಿಗೆ, ಒಂದು ಒಳ್ಳೆಯ ಕೆಲಸವನ್ನು ಕೊಡಿಸಿದ್ದ. ರೆಡ್‌ಕ್ರಾಸ್ ಸಮಾಜದವರೂ, ಜಪಾನದಿಂದ ತಿರುಗಿ ಬರಲಿಕ್ಕೆ ಪ್ರಯಾಣದ ಖರ್ಚನ್ನು ಕೊಡಲು ಒಪ್ಪಿದ್ದರು. ಆ ಹಣ ಹೇಗೋ ಹಳ್ಳ ಹಿಡಿದಿತ್ತು. ಒಂದು ವರ್ಷದ ಮೇಲೆ ಅವನು ಶಾಂಘಾಯಿಯಲ್ಲಿಯೇ ಇರುತ್ತಿದ್ದ. ಅವನ ಅಣ್ಣನಿಗೆ ವಿಳಾಸ ಗೊತ್ತಾಗಿ ಕೆಲವು ಪತ್ರಗಳನ್ನು ಕಳಿಸಿದನು. ಏ-ಇ-ಮೋ ಉತ್ತರವನ್ನೇ ಕೊಡಲಿಲ್ಲ. ಅವನ ಅಣ್ಣ ಮತ್ತು ತಂದೆ ತಾಯಿಗಳು ಅವನನ್ನು ಬಹಳ ಪ್ರೀತಿಸುತ್ತಿದ್ದರು.

ಮತ್ತು ಬೇಗನೆ ಅವನು ತಿರುಗಬೇಕೆಂದು ಬಯಸುತ್ತಿದ್ದರು. ಅವನಿಗೆ ತಿರುಗಿ ಬರಲಿಕ್ಕೆ ಏಕೆ ಆಸೆ ಇಲ್ಲವೋ ಅವರಿಗೆ ತಿಳಿಯಲಿಲ್ಲ.

ಹನ್ನೊಂದು ವರ್ಷಗಳ ಹಿಂದೆ ಮನೆಯಲ್ಲಿ ಅವನಿಗೆ ಮದುವೆಯಾಗಿತ್ತು. ಮದುವೆಯಾದ ಹೊಸದರಲ್ಲಿಯೆ ಮದುವೆ ಇಲ್ಲದೆ ಇರಬೇಕೆಂದು ಬಯಸಿದ. ಆದರೆ ನಿರುಪಾಯನಾಗಿದ್ದ. ತನ್ನ ಮುದಿ ತಂದೆ-ತಾಯಿಗಳಿಗೆ ನೋವನ್ನುಂಟುಮಾಡಲು ಅವನಿಗೆ ಮನಸ್ಸಾಗಲಿಲ್ಲ. ಹೆಂಡತಿಯನ್ನು ಬಿಟ್ಟುಬಿಡಲೂ ಧೈರ್ಯವಾಗಲಿಲ್ಲ. ಅವಳೊ, ಹಳೆಯ ಸಂಪ್ರದಾಯದವಳು. ಬಿಟ್ಟಿದ್ದರೆ ಅವಳು ಆತ್ಮಹತ್ಯೆಯನ್ನೇ ಮಾಡಿಕೊಳ್ಳಬಹುದಾಗಿತ್ತು; ತಂದೆ-ತಾಯಿಗಳೂ ದುಃಖದಿಂದ ಸಾಯಬಹುದಾಗಿತ್ತು. ಅದಕ್ಕೆ ಬದಲಾಗಿ ಹೆಂಡತಿ ಮನೆಯಿಂದ ಓಡಿಹೋದಳು.

ಒಂಬತ್ತು ವರ್ಷಗಳ ಹಿಂದೆ ಅವಳ ತಂಗಿಯ ನಿಶ್ಚಯವಾದಾಗ ಅದನ್ನು ತಡೆಹಿಡಿಯಲು ಒಂದು ಪತ್ರ ಬರೆದಿದ್ದ. "ಅವಳನ್ನು ಒಂದು ಕೋಳಿಗೋ ನಾಯಿಗೋ ಲಗ್ನ ಮಾಡಿದರೆ ಅವುಗಳ ಜೊತೆಗೇ ಅವಳು ಇರಬೇಕಾಗುತ್ತದೆ. ಯಾರಿಗಾದರೂ ಅವಳನ್ನು ಮದುವೆ ಮಾಡಿಕೊಟ್ಟರೆ ಅವಳು ಅವರ ಮಾತನ್ನೇ ಕೇಳಬೇಕಾಗುವದು." ತಂದೆ-ತಾಯಿಗಳು ಅವನ ಕಟುವಾದ ಟೀಕೆಗೆ ಬಹಳ ದುಃಖಪಟ್ಟಿದ್ದರು ಮತ್ತು ಅವನ ಅವಿಚಾರಕ್ಕೆ ಬಹಳ ಸಿಟ್ಟಿಗೆದ್ದಿದ್ದರು. ಅವನ ಹೆಂಡತಿಯೋ ಅವನ ನಿರ್ಲಕ್ಷತೆಗಾಗಿ, ಎಷ್ಟೋ ಸಾರೆ ಕೊಂದುಕೊಳ್ಳಲು ಪ್ರಯತ್ನಿಸಿದ್ದಳು.

ಆಮೇಲೆ ಅವನು ಶಿಯಾ-ಫೂಳ ಜೊತೆಗೆ ಇರಲು ಹೊರಟು ಹೋದ. ಸ್ವಲ್ಪ ಸಮಯ ಅವನ ತಂದೆ-ತಾಯಿಗಳು ಅವನ ಸಂಬಂಧವನ್ನೇ ಕಡಿದುಕೊಂಡಿದ್ದರು. ಆಮೇಲೆ ಅವರಿಗೂ ಸ್ವಲ್ಪ ಪಶ್ಚಾತ್ತಾಪವಾಗಿತ್ತು. ಎಷ್ಟಾದರೂ ತಮ್ಮ ಮಗ! ಆದರೂ ಅವನಿಗೆ ಪತ್ರ ಬರೆದಾಗ, ಅವನ ಜಪಾನೀ ಹೆಂಡತಿಗೆ 'ವೇಶ್ಯೆ' ಯೆಂದೂ ಅವನ ಮಕ್ಕಳನ್ನು ವೇಶ್ಯೆಯ ಮಕ್ಕಳೆಂದೂ ಕರೆಯುತ್ತಿದ್ದರು. ಇದರಿಂದ ಅವನಿಗೆ ನೋವಾಗಿತ್ತು. ಎಷ್ಟೋ ಸಲ ಮನೆಗೆ ಹೋಗಿ, ವಿವಾಹವಿಚ್ಛೇದ ಮಾಡಿಕೊಂಡು, ಸ್ವಾತಂತ್ರ್ಯವನ್ನು ಪಡೆಯಬೇಕೆಂದು ಬಯಸಿದ್ದ. ಆದರೆ ಅವನು

ವಿಚಾರಮಾಡಿದಾಗ, ತನ್ನ ತಂದೆ-ತಾಯಿಗಳಿಗೆ ನೋವಾಗಬಾರದೆಂದು ಸುಮ್ಮನಿದ್ದ. ಅದಲ್ಲದೆ ತನ್ನ ಅಸಂಸ್ಕೃತ ಹೆಂಡತಿಯ ಬಗ್ಗೆ ಮರುಕವೂ ಹುಟ್ಟಿತ್ತು.

ಮನೆಯವರ ಪೈಕಿ ಅವನ ತಪ್ಪನ್ನು ಮೊದಲು ಮನ್ನಿಸಿದವರು, ಅವನ ಹಿರಿಯ ಅಣ್ಣ. ಇಷ್ಟಾದರೂ, ಅವನಿಗೂ ಅವನ ಮನಸ್ಸಿನಲ್ಲಿ ನಡೆದ ತುಮುಲ ವಿಪ್ಲವ ಗೊತ್ತಾಗಿರಲಿಲ್ಲ. 'ಶಿ....' ಪಟ್ಟಣಕ್ಕೆ ಅವನನ್ನು ತಿರುಗಿ ಕರೆಸಿಕೊಳ್ಳುವದೇ ಅವನ ಉದ್ದೇಶವಾಗಿತ್ತು. ಅದೂ ತನ್ನ ಊರಿಗೆ ಹತ್ತಿರವಾಗಿತ್ತು. ಆದರೂ ಅವನು ಹೇಗೆ ಅಲ್ಲಿ ಹೋಗಬೇಕು? ತನ್ನ ಮುದಿ ತಂದೆಯನ್ನು ಆಗಾಗ ನೆನೆಸುತ್ತಿದ್ದ. ಮನೆ ಬಿಟ್ಟಾಗಿನಿಂದ ಅವನನ್ನು ನೋಡಿರಲಿಲ್ಲ. ಇದಲ್ಲದೆ ತಾಯಿ, ಅಣ್ಣ, ತಮ್ಮ, ತಂಗಿಯವರನ್ನೂ ಅವನು ನೋಡಿರಲೇ ಇಲ್ಲ. ಕೊನೆಗೆ ತನ್ನ ಊರಿನ ಬಗ್ಗೆ ಪ್ರೀತಿಯಿಂದ ವಿಚಾರ ಮಾಡುತ್ತಿದ್ದ. ಒಮ್ಮೊಮ್ಮೆ ವಿರಹದಿಂದ ತುಂಬಿ, ತನ್ನ ಯೌವನದಲ್ಲಿಯ ಕೆಲವು ಪರಿಚಯದ ದುಃಖಗಳನ್ನೂ ನೋಟಗಳನ್ನೂ ನೆನೆಸುತ್ತಿದ್ದ. ಆದರೆ ತಿರುಗಿ ಹೋಗುವದು ಅವನಿಂದ ಶಕ್ಯವಾಗಲೇ ಇಲ್ಲ.

"ನನ್ನ ತಂದೆ, ತಾಯಿ! ನನ್ನ ಆಯುಷ್ಯವಾನದಲ್ಲಿಯೇ ನೀವು ನನ್ನನ್ನು ಕಾಣಲಾರಿರಿ. ನನ್ನ ನಡತೆಯ ವಿಷಯವಾಗಿ ನೀವು ಪಟ್ಟ ದುಃಖಕ್ಕೆ ನಾನೂ ಅಳುತ್ತೇನೆ. ಆದರೆ ನಿಮ್ಮನ್ನು ಸಂತೈಸುವದಕ್ಕಾಗಿ ನಾನು ಏನನ್ನೂ ಮಾಡಲಾರೆ. ಇಳಿಮುಖವಾದ ನಿಮ್ಮ ಬಾಳಿಗೆ ದುಃಖವನ್ನಲ್ಲದೆ ನಾನೇನ್ನೂ ಬಿಟ್ಟಿಲ್ಲ. ನನ್ನ ಅಣ್ಣ-ತಂಗಿಯರೇ! ನಾನು ನಿಮ್ಮ ಕರುಣೆಗಾಗಿ ಚಿರಋಣಿ. ಆದರೂ ನಾವು ಇನ್ನು ಕೂಡುವಂತಿಲ್ಲ. ನನ್ನ ತಂದೆಯ ಜೊತೆಗಿದ್ದು ವಿಚಿತ್ರ ರೀತಿಯಲ್ಲಿ ನನಗೆ ಹೆಂಡತಿಯಾದ ಹೆಣ್ಣೆ! ಹಿಂದಿನ ಗೊಡ್ಡು ಸಂಪ್ರದಾಯಗಳಿಗೆ ನಾವು ಬಲಿಯಾಗಿದ್ದೇವೆ. ನಾನು ನಿನ್ನನ್ನು ತಿರಸ್ಕರಿಸುವದಿಲ್ಲ, ನೀನೂ ನನ್ನನ್ನು ತಿರಸ್ಕರಿಸಬೇಡ. ನನಗೆ ನಿನ್ನಲ್ಲಿ ಪೂರ್ಣ ಸಹಾನುಭೂತಿ ಇದೆ. ನೀನು ತಂದೆ-ತಾಯಿಗಳ ಜೊತೆಗೆ ಕೇವಲ ಅತಿಥಿಯಂತೆ ಇದ್ದ ಕರುಣಾಜನಕ ಸ್ಥಿತಿಗಾಗಿ ಮರುಗುತ್ತೇನೆ. ಆದರೂ ನಿನ್ನನ್ನು ಆ ನೊಗದಿಂದ ಬಿಡಿಸಲು ಅಸಮರ್ಥನಾಗಿದ್ದೇನೆ."

ಮನೆಯ ನೆನಪು ಬಂದೊಡನೆಯೆ ಅವನಿಗೆ ಅಳುವನ್ನು ತಡೆಯು ವದು ಅಸಾಧ್ಯವಾಗುತ್ತಿತ್ತು. ಆದರೆ ಅವನಿಗಲ್ಲದೆ ಮತ್ತಾರಿಗೂ ಆ ದುಃಖದ ಆಳ ಗೊತ್ತಿರಲಿಲ್ಲ.

" ನಮ್ಮ ಅಧ್ಯಕ್ಷನ ಬಿನ್ನಹದ ಮೇರೆಗೆ ನಾವು ನಿಮ್ಮನ್ನು ನೋಡಲು ಬಂದೆವು. ಇದು ಅಧ್ಯಕ್ಷನ ಪತ್ರ ಮತ್ತು ಇದು ನಿಮ್ಮಣ್ಣನದು. ಬ್ಯಾಂಕಿನ ಚೆಕ್ಕನ್ನೂ ತಂದಿದ್ದೇನೆ. ಅದು ಒಳ ಕಿಸೆಯಲ್ಲಿದೆ. ಸುತ್ತಲೂ ಕಿಸೆ ಕತ್ತರಿಸುವವರಿದ್ದಾರೆ. "

ಬಂದವರಲ್ಲೊಬ್ಬನು ಪತ್ರಗಳನ್ನು ಕೊಟ್ಟು ಒಳಕಿಸೆಯಿಂದ ಸಾವಿರ ರೂಪಾಯಿಗಳಿಗೆ ಒಂದು ಚೆಕ್ಕನ್ನು ತೆಗೆದನು. ಪತ್ರದಲ್ಲಿ ವಿಶೇಷವೇನೂ ಇರಲಿಲ್ಲ. ಕೇವಲ ಬಂದವರ ಪರಿಚಯವಿತ್ತು. ಪತ್ರವನ್ನೋದಿದ ಮೇಲೆ, ಏ-ಇ-ವೋ, ಆ ಕೆಲಸವನ್ನು ಸ್ವೀಕರಿಸಲಾಗುವದಿಲ್ಲನೆಂದು ಹೇಳಿದ. ಅದರ ಕಾರಣವನ್ನೂ ಅವರಿಗೆ ತಿಳಿಸಿ ಹೇಳಿ ಚೆಕ್ಕನ್ನು ತಿರುಗಿ ಕೊಟ್ಟು, ಸುಚೌನಕ್ಕೆ ಮರಳಿ ಒಯ್ಯಬಹುದೆಂದು ತಿಳಿಸಿದ.

" ಆದರೆ ನಮಗೆ ರೆಡ್‌ಕ್ರಾಸ್‌ದವರಿಂದ, ಚೆಕ್ಕನ್ನು ನಿಮಗೇ ಕೊಡಲು ಆಜ್ಞೆಯಾಗಿದೆ. ನೀವದನ್ನು ಸ್ವೀಕರಿಸಿದರೆ ನಮ್ಮ ಕಾರ್ಯವಾದಂತಾಯಿತು. ಇಲ್ಲದಿದ್ದರೆ ಅಧ್ಯಕ್ಷರು ನಮ್ಮನ್ನು ಟೀಕೆಮಾಡಬಹುದು. ಅವರು ನೀವು ಬರಬೇಕೆಂದು ಅಪೇಕ್ಷಿಸುತ್ತಾರೆ. "

" ಈಗಾಗಲೇ ಇಬ್ಬರು ಜರ್ಮನ್ ಡಾಕ್ಟರರಿಲ್ಲವೇ ? "

" ಹೌದು ಇಬ್ಬರಿದ್ದಾರೆ. ಇದಲ್ಲದೆ ಮೂವತ್ತರ ಮೇಲೆ ಚೀನಿ ಡಾಕ್ಟರರೂ ಇದ್ದಾರೆ. "

" ಆದರೇನು ? ಅಧಿಕಾರಿವರ್ಗ ಪೂರ್ಣವಾಗಬೇಕಲ್ಲ. ನಾನು ಹೋಗುವ ಅವಶ್ಯಕತೆ ಏನಿಲ್ಲ ! "

" ಆದರೆ ಅದಕ್ಕೆ ವಿರುದ್ಧವಾಗಿ ಅಧಿಕಾರಿವರ್ಗ ಪೂರ್ಣವಾಗಿಲ್ಲ. ಎರಡನೆಯ ಸೈನ್ಯಕ್ಕೆ ಸೋಲೊದಗಿತ್ತು. ಸಾವಿರಾರು ಜನರು ಗಾಯ ಗೊಂಡಿದ್ದರು. ಅವರನ್ನೆಲ್ಲ ಚನ್ನಾಗಿ ನೋಡಿಕೊಳ್ಳಬೇಕಾಗಿತ್ತು. ಇದಲ್ಲದೆ ಅಧಿಕಾರಿಗಳು ಒಳ್ಳೆಯದಾಗಿ ಕೆಲಸ ಮಾಡುತ್ತಿರುವದಿಲ್ಲ.

" ಹಾಗಿದ್ದರೆ ನಾನು ಬಂದರೂ ಅಷ್ಟೇ, ಬರದಿದ್ದರೂ ಅಷ್ಟೆ. ಯುದ್ಧ ನಡೆದೇ ಇದೆ. ಸುಚೌನದಲ್ಲಿರುವವರೆಲ್ಲರನ್ನೂ ಡಾಕ್ಟರರನ್ನಾಗಿ ನಿಯಮಿಸಿಕೊಂಡರೂ, ಎಲ್ಲ ಗಾಯಗೊಂಡವರನ್ನು ನೋಡಿಕೊಳ್ಳಲಾಗುವದಿಲ್ಲ."

" ಹಾ, ಹಾ, ಹಾ ! "

ಅತಿಥಿಗಳು ಚೆಕ್ಕನ್ನು ತಿರುಗಿ ತೆಗೆದುಕೊಳ್ಳಲೊಪ್ಪಲಿಲ್ಲ. ಆಗ ಏ-ಇ-ಮೊ ಅದನ್ನು ಸ್ವೀಕರಿಸಿದ. ಅದಕ್ಕಾಗಿ ಒಂದು ಪಾವತಿ ಕೊಟ್ಟ ಮೇಲೆ ಅತಿಥಿಗಳು ಹೊರಟುಹೋದರು.

* * * *

**ಸೂ**ರ್ಯನ ಬೆಳಕು ತೆರೆತೆರೆಯಾಗಿ ಕೋಣೆಯಲ್ಲಿ ಚಿಮ್ಮತೊಡಗಿತು. ಧೂಳಿ ಗಾಳಿಯಲ್ಲಿ ಮಂದವಾಗಿ ಸುಳಿಯತೊಡಗಿತು.

ಹೆಂಡತಿಗೆ ಪತ್ರ ಬರೆಯಬೇಕೆಂದು ಮಾಡಿದ ಏ-ಇ-ಮೋನ ಸಂಕಲ್ಪಕೆ ಭಂಗ ಬರಲು, ತನ್ನೆದುರಿಗಿದ್ದ ಸಾವಿರ ರೂಪಾಯಿಗಳ ಚೆಕ್ಕನ್ನು ಕುರಿತು ವಿಚಾರ ಮಾಡತೊಡಗಿದನು. ಅವನ ಜೀವನದಲ್ಲಿ ಇಷ್ಟು ಹಣವನ್ನು ಅವನು ಕಂಡಿರಲೇ ಇಲ್ಲ. ಮೇಲಾಗಿ ಅದು ಮರುಳುಗೊಳಿಸುತ್ತಿತ್ತು. ಅದನ್ನು ಕ್ಯಾಶ್ ಮಾಡಿಸಿ, ಜಪಾನಕ್ಕೆ ಹೋಗಿ ಹೆಂಡತಿ ಮಕ್ಕಳನ್ನು ಕರೆತರಬೇಕೆಂದು ಮಾಡಿದ. ಆಮೇಲೆ ಅವರೆಲ್ಲ 'ಶಿ–' ಪಟ್ಟಣಕ್ಕೆ ಕೂಡಿ ಹೋಗಬಹುದು. ಜೀವನದ ಸಲುವಾಗಿ ಅವರಿನ್ನು ಬೆದರಬೇಕಾಗಿಲ್ಲ. ತಿಂಗಳಿಗೆ ಬರುವ ಮೂರು ನೂರಾ ಇಪ್ಪತ್ತರಲ್ಲಿ, ನೂರಾಇಪ್ಪತ್ತರಷ್ಟನ್ನು ಅವನು ಬೇಕಾದಷ್ಟು ಖರ್ಚು ಮಾಡಿದರೂ, ಉಳಿಸಬಹುದು. ಮೂರು ನಾಲ್ಕು ವರ್ಷಗಳಲ್ಲಿ ದಾರಿ ಸುಗಮವಾಗುವದು. ಆಗಾಗ ಸಂಬಳ ಹೆಚ್ಚಿದರೂ ಹೆಚ್ಚಬಹುದು. ಇದಲ್ಲದೆ ಬೇರೆ ಕಮಿಶನ್ ಹಣವೂ ಇದೆ. 'ಶಿ–' ಪಟ್ಟಕ್ಕೆ ಹೋದರೂ ಅವನು ತನ್ನ ಊರಿಗೆ ಹೋಗಲಾರ. ಮನೆಯವರು ಅದರ ಬಗ್ಗೆ ಹಟ ಹಿಡಿಯಬಹುದು. ಆದರೆ ಅವನ ಮದುವೆಯ ಬಗ್ಗೆ ಮನೆಯಲ್ಲಿ ಪ್ರಳಯವೇ ಆಗಬಹುದು. ತಂದೆ-ತಾಯಿಗಳು ಎಂದೂ ರಾಜಿಯಾಗ

ಲಾರರು. ಕೇವಲ ಹಣದಾಸೆಗಾಗಿ, ತಿರುಗಿ ಹೋಗಿ, ಹಳೆಯ ಗಾಯಗಳನ್ನು ಮರುಕಳಿಸಿ, ಹೊಸ ಮನಸ್ತಾಪವನ್ನು ಹುಟ್ಟಿಸುವದು ಅವನಿಂದ ಶಕ್ಯವಾಗಲಾರದು.

" ಅಯ್ಯೋ ತಾಯಿ-ತಂದೆಗಳೇ! ನಿಮ್ಮ ಮಗನನ್ನು ಕ್ಷಮಿಸಿರಿ! ನಿಮ್ಮನ್ನು ನೋಡದೆ ಇರುವದು ವಿನಯವಲ್ಲ. ನಿಮ್ಮ ಅವಿನೀತ ಮಗ ತಿರುಗಿ ಬಂದರೆ, ಕೇವಲ ಎರಡನೆಯವರ ಬಾಳನ್ನು ಹಾಳುಗೈಯುವದಕ್ಕಾಗಿ, ನಿಮ್ಮ ಜೀವನವನ್ನೂ ವಿಘ್ನಗಳಿಗೀಡುಮಾಡುವದಕ್ಕೆ. ತಿರುಗಿ ಬರಬೇಕೆಂದು ನಾನು ಹೇಗೆ ಅಪೇಕ್ಷಿಸಲಿ ? ಈ ಜೀವನದಲ್ಲಿ ಮತ್ತೊಮ್ಮೆ ನಾನು ನಿಮ್ಮನ್ನು ಕಾಣಲಾರೆ "

ಅವನಿಗೆ ನೆನಪಾಯಿತು: ತನ್ನ ತಾಯಿ ಇಬ್ಬರು ಮಕ್ಕಳು ಕಲಿಯಲಿಕ್ಕೆಂದು ಜಪಾನಕ್ಕೆ ಹೋದಾಗ ಅದೆಷ್ಟು ದುಃಖಪಟ್ಟಿದ್ದರು! ಏ-ಇ-ಮೋ ನನ್ನು ಬಿಟ್ಟಿರುವದಿಲ್ಲೆಂದು ಹಗಲೆಲ್ಲ ಹೇಳುತ್ತಿದ್ದಳು. ಅಷ್ಟು ಕಾಲ ಮಕ್ಕಳಿಂದ ಅಗಲಿರುವದು ಅವಳ ಹೃದಯವನ್ನೇ ಒಡೆದಿತ್ತು. ಏ-ಇ-ಮೋನಿಗೆ ಲಗ್ನವಾದ ಮೇಲೆ ಒಮ್ಮೆ ಉಚ್ಚ ಶಿಕ್ಷಣಕ್ಕಾಗಿ ರಾಜಧಾನಿಗೆ ಹೋಗಗೊಡಬೇಕೆಂದು ಹಟಮಾಡಿದ್ದನು. ಅವನೊಡನೆ ಹಡಗ ನಿಲ್ಲುವ ಸ್ಥಳದ ತನಕ ಹೋಗಿದ್ದಳು: " ನನಗೆ ಗೊತ್ತಿಲ್ಲದೆ ದೂರ ಎಲ್ಲಿಯೂ ಹೋಗುವದಿಲ್ಲೆಂದು ಮಾತು ಕೊಡು. ತಿಳಿಯಿತೇ ? "

ಅಗಲುವಾಗ ಅವಳು ನುಡಿದ ಮಾತುಗಳು ಮುಗಿದವು. ಅದರ ಸಲುವಾಗಿ ಅವನಿಗೆ ದುಃಖವಾಗಿತ್ತು. ಆಮೇಲೆ ತಾಯ ಅಪ್ಪಣೆಯಿಲ್ಲದೆ ಜಪಾನಕ್ಕೆ ಹೋಗಿದ್ದ. ಅವಳಿಗೆ ಎಷ್ಟು ದೀರ್ಘವಾದ ದುಃಖವಾಗಿರಬೇಡ! ಅವಳು ಎಷ್ಟೊಂದು ಕಣ್ಣೀರು ಸುರಿಸಿರಬಹುದು! ಎಷ್ಟೊಂದು ಸಂಕಟದ ನೆನೆಪುಗಳನ್ನು ದುಃಖದಿಂದ ಸೈರಿಸಿರಬೇಕು! ತಾಯಿ ತನ್ನನ್ನು ನೋಡಬಾರದು, ನೋಡದೆ ಸತ್ತುಹೋಗಬೇಕು ಎಂದೆನಿಸಿತು. ಆಗಾಗ ಇನಿಯಳಿಗೆ ತಿರುಗಿ ಹೋಗಿ ತಾಯಿಯ ಹರಕೆಯನ್ನು ಹೊಂದಿ ಬರಬೇಕೆಂದು ಹೇಳುತ್ತಿದ್ದ. ಆದರೆ ಹೋಗಬಾರದೆಂದು ಅವನಿಗನಿಸಿತು. ಅಯ್ಯೋ! ಆದ ಆ ಮದುವೆಯಿಂದ ಎಂತಹ ದುಷ್ಪರಿಣಾಮ! ಎಷ್ಟೊಂದು ಮಕ್ಕಳು ತಂದೆ-ತಾಯಿಗಳಿಗೆ

ದೂರವಾಗಿದ್ದಾರೆ! ಎಷ್ಟು ಜನರು ಈ ಸಂಪ್ರದಾಯದಿಂದ ಪೀಡಿತ ರಾಗಿದ್ದಾರೆ! ಎಂತಹ ಅಳಿಸಲಾಗದ ವಿರಹವೇದನೆ!

"ಧನ! ನೀನು ನನ್ನನ್ನು ಹಾಳು ಮಾಡಲಾರೆ. ನಾನೇ ನಿನ್ನನ್ನು ನಾಶಮಾಡುತ್ತೇನೆ.!"

ಚೆಕ್ಕನ್ನೂ ಪತ್ರವನ್ನೂ ನೆಲದ ಮೇಲೆ ಒಗೆದು, ಸಿಟ್ಟಿನಿಂದ ತುಳಿದ. 'ಶಿ—' ಪಟ್ಟಣದ ಆಸೆಯನ್ನು ತೊರೆಯಲಿಕ್ಕೂ, ತನ್ನ ನಿರ್ಣಯವನ್ನು ರೂಪಿಸಲಿಕ್ಕೂ ಸಾಮರ್ಥ್ಯ ಈ ಕೃತಿಯಿಂದ ಹುಟ್ಟಿದಂತೆ ಕಂಡುಬಂತು. ಕುಳಿತುಕೊಂಡು ಎರಡು ಪತ್ರಗಳನ್ನು ಬರೆದ. ಒಂದು ಅಣ್ಣನಿಗೆ; ಮತ್ತೊಂದು ರೆಡ್‌ಕ್ರಾಸ್‌ದ ಅಧ್ಯಕ್ಷನಿಗೆ. ಚೆಕ್ಕನ್ನೂ ಜೊತೆಗಿಟ್ಟು ಕಳಿಸಿಬಿಟ್ಟ. ಆಮೇಲೆ ಶಿಯಾಫೂಳಿಂದ ಬಂದ ಪತ್ರವನ್ನು ತಿರುಗಿ ತಿರುಗಿ ಓದಿದ. ಆಮೇಲೆ ಕೆಳಗಿನಂತೆ ಉತ್ತರ ಬರೆದ:

ಪ್ರಿಯತಮೆ,

ನಿನ್ನ ಪತ್ರ ಕೈಸೇರಿತು. ಅದು ಬರುವ ಮೊದಲು ನಾನು ವಿಷಣ್ಣ ಮನಸ್ಥಿತಿಯಲ್ಲಿದ್ದೆ. ಬಂದ ಮೇಲೆ ಮತ್ತಷ್ಟು ದುಃಖವಾಯಿತು. ನಾನು ನಿನ್ನ ನೋವನ್ನು ಸಂಪೂರ್ಣ ಬಲ್ಲೆ. ಸಾಮಾನ್ಯ ಶಬ್ದಗಳಿಂದ ನಿನ್ನನ್ನು ಅಭಿನಂದಿಸಲಾರೆ. ಈಗ ನಾನು ಇಷ್ಟೇ ಹೇಳಬಲ್ಲೆ. ಇನ್ನು ೩—೪ ವಾರಗಳಲ್ಲಿಯೇ ನಿನ್ನ ಹತ್ತಿರ ಬರುವೆ. ಬಹುಶಃ ಇದು ನಿನಗೆ ಸಂತೋಷ ಕೊಟ್ಟೀತು.

ನನ್ನ ಹುಚ್ಚು ಆಕಾಂಕ್ಷೆಗಳಿಗಾಗಿ ಪಶ್ಚಾತ್ತಾಪವಾಗಿದೆ. ಸಾಹಿತ್ಯ ದಲ್ಲಿ ನನಗೆ ಗತಿಯಿಲ್ಲವೆಂದು ನನಗೆ ಗೊತ್ತಾಗಿದೆ. ಈ ನಿರ್ಣಯದ ವಿಷಯವಾಗಿ ಎಳ್ಳಷ್ಟೂ ಅನುಮಾನವಿಲ್ಲ. ಕೆಲವು ವಾರಗಳ ತನಕ ನಾನಿಲ್ಲಿರುತ್ತೇನೆ. ವರ್ಷದ ಪತ್ರಿಕೆ ಅಷ್ಟೊತ್ತಿಗೆ ಸಿದ್ಧವಾಗುವದು. ಏನೇ ಆದರೂ, ಗೆಳೆಯರಿಗೆ ಕೊಟ್ಟ ಮಾತು ನಡೆಸಬೇಕಾಗಿದೆ.

ಕೆಲವು ದಿನಗಳ ಹಿಂದೆ ವೂ-ಯಿಶ್‌ಗೆ ಹೋದಾಗ, ಗೆಳೆಯರು ಒಂದು ಚೆಲುವಾದ ಮನೆಯ ಬಗ್ಗೆ ಹೇಳಿದ್ದು ನೆನಪಿದೆಯೇ? ಮೊನ್ನೆ

ಪ್ರವಾಸಕ್ಕೆ ಹೋದಾಗ ಅದನ್ನು ನೋಡಿದೆ. ಮೊದಲೇ ಏಕೆ ನಾವು ಅಲ್ಲಿ ಹೋಗಲಿಲ್ಲವೋ ಎಂದು ಕೆಡಕೆನಿಸಿತು. ಆಮೇಲೆ ನೀನು ಜಪಾನಕ್ಕೆ ಹೋಗುವ ಅವಶ್ಯಕತೆಯೇ ಇದ್ದಿರಲಿಲ್ಲ. ಎನಿದ್ದರೂ ಮರೆತುಬಿಡೋಣ.

ಸದ್ಯದ ಪರಿಸ್ಥಿತಿಯ ಬಗ್ಗೆ ನನಗೇನೂ ಚಿಂತೆ ಇಲ್ಲ. ಎಲ್ಲ ತೊಡಕು ಬಿಡಿಸುವದಕ್ಕಾಗಿ ಒಂದು ಮಾರ್ಗವನ್ನು ಕಳೆದುಕೊಂಡೆ. ಆದರೆ ಜಪಾನಕ್ಕೆ ಬರುವ ತನಕ ಏನನ್ನೂ ಹೇಳುವದಿಲ್ಲ. ನನ್ನನ್ನು ಹರ್ಷಗೊಳಿಸುವ ಒಂದು ಸಂಗತಿ ಎಂದರೆ, ಇದೇ ಈಗ ಸಾವಿರ ರೂಪಾಯಿಯ ಚೆಕ್ಕನ್ನು ತುಳಿದುಬಿಟ್ಟೆ—ನಿಜವಾಗಿಯೂ ತುಳಿದು ಬಿಟ್ಟೆ! ರೊಕ್ಕ! ಅದರ ಬಗ್ಗೆ ತಲೆ ಕೆಡಿಸಿಕೊಳ್ಳಲು ನನಗೆ ಮನಸ್ಸಿಲ್ಲ. ಜಪಾನಕ್ಕೆ ಬಂದ ಮೇಲೆ, ಶರೀರವಿಜ್ಞಾನದ ಶಿಕ್ಷಕನಾಗಬೇಕೆಂದು ಮಾಡಿದ್ದೇನೆ. ಹಾಲು ಮಾರುವವನೋ, ಪತ್ರಿಕೆಯನ್ನು ಮಾರು ವವನೋ ಆದರೂ ಸಂತೋಷ. ಕೊನೆಯದಾಗಿ ಎಲ್ಲ ತೊಡಕು ಕಳೆಯಲು ಒಂದೇ ಒಂದು ಮಾರ್ಗವಿದೆ. ಅದರ ವಿಷಯವಾಗಿ ಜಪಾನಕ್ಕೆ ಬಂದ ಮೇಲೆ ಹೇಳುವೆ. ನನ್ನ ಪತಿಯಿಂದ ಮಕ್ಕಳನ್ನು ಮುದ್ದಿಸು.

ಏ-ಇ-ಮೋ ಪತ್ರವನ್ನು ಬರೆದು ಮುಗಿಸಿದಾಗ ಬೆಳಗಿನ ನಾಲ್ಕು ಗಂಟೆ ಯಾಗಿತ್ತು. ಅವನಿಗೆ ದೊಡ್ಡದೊಂದು ಭಾರಕಳೆದು ಹಗುರಾದಂತೆ ಎನಿಸಿತ್ತು. ದೇಹಕ್ಕೂ ಮನಸ್ಸಿಗೂ ಒಂದು ಶಾಂತಿ ಬಂದಿತ್ತು. ಒಂದು ಪಾತ್ರೆಯಲ್ಲಿ ತಣ್ಣೀರು ತೆಗೆದುಕೊಂಡು ಮುಖ ತೊಳೆದುಕೊಂಡ. ಪತ್ರಗಳನ್ನು ಕಿಸೆಯಲ್ಲಿ ಹಾಕಿಕೊಂಡು ಹಿಂದಿನ ಬಾಗಿಲಿನಿಂದ ಹೊರಗೆ ಹೊರಟುಹೋದ.

———

## ಪರಿಚಯ

### ಷಿ–ಮಿಂಗ್

( ೧೯೦೮ — )

'ಷಿ-ಮಿಂಗ್' ಇದು ಒಬ್ಬ ಚೀನಿ ಹೆಣ್ಣುಮಗಳ ಗುಪ್ತನಾಮ; ಈ ವರೆಗೂ ತನ್ನ ನಿಜವಾದ ಹೆಸರನ್ನು ಮರೆಯಿಸಿಕೊಂಡಿದ್ದಾಳೆ.

ಇವಳು 'ಹು-ಫೆ' ಎಂಬಲ್ಲಿ, ಒಳ್ಳೆ ಧೈವಂತರ ಮನೆತನದಲ್ಲಿ ಹುಟ್ಟಿದಳು. ಆ ಮನೆತನ ಪುರಾತನದಿಂದ ಶ್ರೀಮಂತಿಕೆಯಲ್ಲಿಯೆ ಬೆಳೆದು ಬಂದದ್ದು. ಇವಳ ತಂದೆ ಒಬ್ಬ ಮಹತ್ವದ ಜಮೀನುದಾರನಾಗಿದ್ದನಲ್ಲದೆ, ಪ್ರಾಂತೀಯ ಸರಕಾರದ ಮೇಲ್ತರಗತಿಯ ಒಬ್ಬ ಅಧಿಕಾರಿಯೂ ಆಗಿದ್ದನು.

ಇವಳ ಕತೆಗಳು ಅಷ್ಟೊಂದು ಪ್ರಸಿದ್ಧಿ ಪಡೆಯದಿದ್ದರೂ ಚೀನಾದ ತರುಣ ಮತ್ತು ಸತ್ವಯುತ ಬರೆಹಗಾರರ ಮೇಲೆ ಇವಳು ತನ್ನ ವೈಯಕ್ತಿಕ ಪ್ರಬಲ ಪ್ರಭಾವವನ್ನು ಬೀರಿದ್ದಾಳೆ. ಚೀನಿ ಸಾಹಿತ್ಯದಲ್ಲಿ ಈವರೆಗೆ ಸ್ಪೈಲಿಗೆಯಂತೆ ದೂರವಿರಿಸಿದ್ದ ಸಾಮಾಜಿಕ-ದ್ರವ್ಯವನ್ನು ಇವಳು ನಿರ್ಭಯವಾಗಿ ಬಳಸಿದ್ದನ್ನು ನೋಡಿದರೆ, ಚೀನಾಸಾಹಿತ್ಯಕ್ಕೆ ತನ್ನ ಹಳೆ ಪರಂಪರೆಯನ್ನು ಮುರಿದು, ತೀಕ್ಷ್ಣ ಕ್ರಾಂತಿಕಾರಕ ಪ್ರಗತಿಯನ್ನು ಹೊಂದುವ ಶಕ್ತಿಯೆ ಇಲ್ಲ ಎಂದು ನಂಬಿ ಕೂತಿದ್ದವರ ಕಣ್ಣಲ್ಲಿ ಅಂಜನ ಹಾಕಿದಂತಿದೆ ಇವಳ ಬರೆವಣಿಗೆ. ಈ 'ಕಳೆದ ದಿನಚರಿಯ ಒಂದು ತುಣುಕು' ಕ್ರಾಂತಿಕಾರಕ ವಾಸ್ತವವಾದದ ಬರೆವಣಿಗೆಗೆ ಒಂದು ಉತ್ತಮ ಉದಾಹರಣೆಯಾಗಿದೆ.

# ಕಳೆದ ದಿನಚರಿಯ ಒಂದು ತುಣುಕು

ಮೇ ೨೪, ಕಡುಗಾಳಿ.

ಮೇ ತಿಂಗಳೊಳಗಿನ ದೀರ್ಘವಾದ ದಿವಸದ ಭಾರವು ನನ್ನನ್ನು ಸುಮಾರು ಉಸಿರುಗಟ್ಟಿಬಿಟ್ಟಿದೆ. ಹಸಿವಿಗೆ ಕೊನೆಯಿಲ್ಲ; ಅರುಚಿಗೆ ಕೊನೆಯಿಲ್ಲ; ಸಂಶಯ ಚಿಂತೆಗಳಿಗೂ ಕೊನೆಯಿಲ್ಲ. ಒಮ್ಮೆ ಈ ಮಗ್ಗಲು, ಆಮೇಲೆ ಅಂಗಾತ, ಮತ್ತೆ ಆ ಮಗ್ಗಲು—ಈ ಮಗ್ಗಲು, ಹೇಗೆ ಮಲಗಿದರೂ ಸುಖವಿಲ್ಲ. ನನ್ನ ಮಂಚದ ಕಟ್ಟಿಗೆಯ ಹಲಿಗೆಗಳೂ ಕಲ್ಲಿಗಿಂತ ಬಿರುಸಾಗಿದ್ದವು. ಅಯ್ಯೋ, ಎಷ್ಟು ಬಿರುಸು! ವಿಶ್ರಾಂತಿಗೆ ಸಾಧ್ಯವೇ ಇಲ್ಲ. ಹೊಟ್ಟೆಯಲ್ಲಿ ಒಂದೇ ಸಮನೇ ಹೊಡಕೊಳ್ಳುತ್ತಾ ಇದೆ. ಒಂದು ಕ್ಷಣದ ವಿರಾಮವೂ ಇಲ್ಲ. ಹೇಗೆ ಹೊರಳಿದರೂ, ಉರುಳಿದರೂ ನೋವು ಇದ್ದೇ ಇದೆ. ಓದಲು ಆಗದು. ಮಾತನಾಡಲು ಯಾರೂ ಇಲ್ಲ; ಅಂತೇ ಬರೆಯುದೆ ಗತಿ ಇಲ್ಲ. ಏನೂ ಇಲ್ಲದಾಗ ಮನಸ್ಸು ತೊಡಗಿಸಲು ಏನಾದರೊಂದು ಹಾದಿ ಬೇಕಷ್ಟೆ, ವ್ಯೈಗಳ್ಳತನದ ಕೆಲಸ!

ನನ್ನ ಬೇನೆಯ ಕಾರಣ ಗೊತ್ತಾದಂದಿನಿಂದ ‘ ಚಿಂಗ್ ’ನ ಹಣೆಯ ಮೇಲೆ ಎರಡು ಗೆರೆ ಹೆಚ್ಚು ಮೂಡಿದವು. ಆಗಾಗ್ಗೆ ಅವನು ನನ್ನನ್ನು ದೊಡ್ಡ ಕಣ್ಣಿನಿಂದ ಬರಿ ದಿಟ್ಟಿಸಿ ನೋಡುತ್ತಾನೆ. ಮಾತು ಇಲ್ಲವೇ ಇಲ್ಲ. ‘ ಹೀಗೇಕೆ ಮಾಡುತ್ತೀ ? ’ ಎಂದು ನಾನು ಕೇಳಿದರೆ “ ಏನೂ ಇಲ್ಲ, ಏನೂ ಇಲ್ಲ. ಸಮಾಧಾನವಾಗಿರು. ಬೇಗನೆ ಗುಣವಾಗಲಿ, ಅಷ್ಟೆ. ತೀರಿತು. ” ಎಂದು ಏನೋ ಸಪಾರಮುಪಾರಾಗಿ ಹೇಳುವನು.

ಅವನ ಮಾತಿಗೇನರ್ಥ? ಬರಿ ಮಾತು! ನನ್ನಿಂದ ಅವನಿಗೆಷ್ಟು ಅನಾನುಕೂಲ! ನಾನು ಪೂರಾ ಬಲ್ಲೆ. ‘ ಅನಿವಾರ್ಯ-ವ್ಯವಹಾರ ! ’ ಹೊತ್ತು, ಕಾಲ ಇವನ್ನು ಈ ಹೆಣ್ಣಿನ ಗರ್ಭ ಒಂದಿಷ್ಟೂ ಲೆಕ್ಕಿಸಬಾರದೇ ?

ಅದಕ್ಕೇನು, ತಾನೇ ದೊಡ್ಡ ‘ ವ್ಯವಹಾರ,’ ತಾನೇ ದೊಡ್ಡ ‘ ಅನಿವಾರ್ಯ; ತಾನು ನಿಂತದ್ದೇ ಕಾಲ. ಅದಕ್ಕೆ ನ್ಯಾಯ, ತರ್ಕ, ಏನೂ ಇರಬಾರದೇ ? ಗರ್ಭ ನಿಲ್ಲುವ ವ್ಯವಹಾರಕ್ಕಿಂತ ಕಾರ್ಯಕಾರಣ ಶುದ್ಧವಾದ ಬೇರೆ ವ್ಯವ ಹಾರ ಯಾವುದಾದರೂ ಇದೆಯೇ ? ಬಸಿರು ಬಯಕೆ ಎಂಬುವದು ಭಾಗ್ಯ ವಂತರ ಬೇನೆ. ನಮ್ಮಂಥ ದಿಕ್ಕಿಲ್ಲದ ದರಿದ್ರರಿಗೂ ಎಂಥ ಔದಾರ್ಯದಿಂದ ಈ ಮಹಾವ್ಯಥೆಯನ್ನು ಕೊಟ್ಟಿದೆಯಲ್ಲ ಈ ಸೃಷ್ಟಿ !

ನನಗೂ ಎಷ್ಟು ಅಸಮಾಧಾನ ! ಅನಿವಾರ್ಯವಾಗಿ ಬಂದಿದ್ದನ್ನು ಧೈರ್ಯದಿಂದಾದರೂ ಸ್ವಾಗಿತಿಸೋಣವೆಂದರೆ ಜೀವಕ್ಕೆ ಹಗುರಿಲ್ಲ. ಕೆಲ ಸಕ್ಕೆ ಬಾರದವಳಾದೆ. ನನ್ನ ಭಾರ ಎಲ್ಲರ ಮೇಲೆ. ನಮ್ಮ ಸುಸಂಘಟಿತ ಸಂಘಕ್ಕೆಲ್ಲ ನನ್ನ ತೊಡಕು. ಸಂದುಕಟ್ಟಿನ ಹೊತ್ತಿನಲ್ಲಿ ದೈವವೇ ವಿಪರೀತ ವಾದಾಗ ಒಬ್ಬ ವ್ಯಕ್ತಿಯ ಕಷ್ಟವೇ ಆ ವ್ಯಕ್ತಿ ಇರುವ ಗುಂಪನ್ನೆಲ್ಲವನ್ನೂ ಕಾಡುವದು. ನಾನೊಬ್ಬಳಷ್ಟೇ ನನ್ನ ಕರ್ತವ್ಯ ಮಾಡದೆ ಬೀಳುಬಿಟ್ಟೆ ಎಂದಲ್ಲ. ನನ್ನ ಅಶಕ್ತಿಯಿಂದ ಎಲ್ಲ ಕಡೆಗೂ ತಡೆ. ಎಲ್ಲೆಲ್ಲಿಯೂ ಅಕ್ರಮ. ಅದರಲ್ಲಿಯೂ ‘ ಚಿಂಗ್ ’ನಿಗೆ ಅದೆಷ್ಟು ಕಷ್ಟ ! ಅವನು ಬೇನೆ ಬಿದ್ದವರ ಕೈಯ ಬಡಪಾಯಿಯಾಗಿದ್ದಾನೆ. ಅವನೇ ತಾಯಿ, ದಾಯಿ, ನರ್ಸು, ಅಡಿಗೆಯವಳು, ಆಳುಮಗ....ಭಿಕಾರಿ. ಅವನ ಕೆಲಸಕ್ಕೇ ಅವನ ಲಕ್ಷ್ಯ ಸಾಲದು. ಎಲ್ಲವು ಅರಗಚ್ಚು. ಯಾವ ಕೆಲಸದಲ್ಲಿದ್ದರೂ ಮನಸು ಎರಡು ಕಡೆಗೆ. ಜೀವಕ್ಕೆ ಬೇಜಾರ. ಇದರ ಪರಿಣಾಮವೆಂದರೆ ನಮ್ಮ ಸಂಘಟನೆ ಯಲ್ಲಿ ವಿಪರೀತ ಗೊಂದಲ. ಇಷ್ಟೆಲ್ಲಕ್ಕೂ ನನ್ನ ಹಾಳು ಬಸಿರು-ಬಯಕೆ ಕಾರಣ. ನಮ್ಮ ಎಲ್ಲ ಹಂಚಿಕೆಗಳೂ ಸದ್ಯಃಕಾಲಕ್ಕೆ ಎಷ್ಟು ಚೊಕ್ಕಟವಾಗಿ ಸಾಗಬೇಕಾಗಿವೆ ? ಆದರೆ ನನ್ನ ಹೊಟ್ಟೆಯಲ್ಲಿ ಮಿಸುಕಾಡುವ ಈ ಜೀವ ದಿಂದ ಎಲ್ಲವೂ ಅಡಗಾಣೆಸಿ ನಿಂತಿದೆ. ಅವೆಲ್ಲಕ್ಕಿಂತ ಇದೇ ಹೆಚ್ಚಿನದಾಗಿದೆ. ಈ ಬೇಜಾರು, ಈ ಜವಾಬ್ದಾರಿಗಳ ಬಗ್ಗೆ ‘ ಚಿಂಗ್ ’ನೆಂದೂ ಗೋಣ ಗುಟ್ಟುವದಿಲ್ಲ. ಆದರೆ ನಾನು ಬಲ್ಲೆ— ಅವನನ್ನು ಚಿಂತೆಯ ಭಾರ ಎಷ್ಟು ತಗ್ಗಿಸಿದೆ ಎಂಬುದನ್ನು.

ಮೇ ೩೦ನೇ ತಾರೀಖು ಸಮೀಪಕ್ಕೆ ಬಂದ ಹಾಗೆ ಅವನು ಎತ್ತಲೂ

ಅಲೆದಾಡಬೇಕು. ಬೆಳಕು ಆರು ಗಂಟೆಗೆ ಹೋದವನು ಮಧ್ಯರಾತ್ರಿ ಯಾದರೂ ಮನೆಗೆ ಬರಲು ಅವನಿಗೆ ಬಿಡುವಿಲ್ಲ. ಹೊತ್ತು ಇಷ್ಟು ದುರ್ಲಭ ವಾದಾಗ ಅವನು ಕೆಲ ಕಾಲ ಕದ್ದು ನನಗಾಗಿ ಕಳೆಯಬೇಕಾಗಿದೆ. ಆ ಗೆಳೆಯನ ಹತ್ತಿರ ನಾಲ್ಕು ದುಡ್ಡು ಬಿಕ್ಕೆ ಬೇಡಿ ಈ ಗೆಳೆಯನ ಹತ್ತಿರ ಒಂದಿಷ್ಟು ಬೇಡಿ, ಈ ಜೋಪಾಪಿಗಾಗಿ ಬೇಕಾಗುವ ಜೀನಸು ತರಬೇಕಾ ಗಿದೆ. ಇದು ನನಗೆ ಗೊತ್ತಿಲ್ಲವೇ? ನನ್ನನ್ನು ಬಿಟ್ಟು ಹೋಗುವದೆಂದರೂ ಅವನ ಮನಸಿಗೆ ಬಹಳ ಕಷ್ಟ; ಇದೂ ನಾನು ಬಲ್ಲೆ. ಹೀಗಿದ್ದೂ ನನ್ನ ಬೇನೆ ನನಗೆ ಅಸಹ್ಯವಾದಾಗ ಇದನ್ನೆಲ್ಲ ಮರೆತು 'ನಿನಗೇನು, ನಾನು ಬೇಡಾಗಿದ್ದೇನೆ' ಎಂದು ಮತ್ತೆ ಮತ್ತೆ ಜಗಳಾಡುತ್ತೇನೆ.

ನಮ್ಮ ಮನೆ ಎಂದರೆ 'ಕುಂಗ್-ಯು' ಜಾತಿಯ ಒಂದು ಕಗ್ಗವಿ. ಶಾ-ಟಾಂಗದ ಗುಂಟ ಅದರ ವಾಸ. ದಕ್ಷಿಣಕ್ಕೆ ಮುಖ ಮಾಡಿಕೊಂಡು ಮೂರು ಕೋಣೆ ಇವೆ. ನಡುವಿನ ಕೋಣೆಯೇ ನಮ್ಮ ಮನೆ. ಅದಕ್ಕೆ ಕಿಡಿಕಿ ಇಲ್ಲ. ನಮ್ಮ ಬಾಗಿಲು ಒಂದೇ ಬೆಳಕು-ಗಾಳಿಗಳ ದ್ವಾರ. ಅದು ಮುಚ್ಚಿತೆಂದರೆ ಬೆಳಕಿಲ್ಲ, ಗಾಳಿಯಿಲ್ಲ. ಕೋಣೆ ತೀರ ಇಕ್ಕಟ್ಟಾಗಿದೆ. ಒಂದು ಹಾಸಿಗೆ, ಒಂದು ಮೇಜು, ಒಂದು ಸಣ್ಣ ಬೆಂಚು, ಹಾಕಲಷ್ಟೇ ಸ್ಥಳ. ಹಾಸಿಗೆಯಿಂದಲೇ ಮೇಜಿಗೆ ಕೈ ನೀಡಬಹುದು. ಅದೂ ಒಂದು ಅನುಕೂಲವೇ.

ಆಳುಮಗ ಕೋಣೆಯ ಕಸ ತೆಗೆಯದೆ ಬಹಳ ದಿನಗಳಾದವು. ಬಹಳ ಮಾಡಿ ಇದಕ್ಕೆ ಕಾರಣವೆಂದರೆ ನಾವು ಮಾರ್ಚ ತಿಂಗಳಿಂದ ಮನೆಯ ಬಾಡಿಗೆಯನ್ನೇ ಕೊಟ್ಟಿಲ್ಲ. ಬಾಡಿಗೆ ತಿಂಗಳಿಗೆ ಹನ್ನೆರಡು ರೂಪಾಯಿ! ಗೋಡೆಗೆ ಅಂಟಿಸಿದ ಕಾಗದವೆಲ್ಲ ಬಿರುಕುಬಿರುಕಾಗಿದೆ. ಜಂತಿಗಳ ಕಾಗದ ಒಂದು ಮೂಲೆಯಲ್ಲಿ ಹರಿದು ಜೋತುಬಿದ್ದಿದೆ. ಅಲ್ಲಿಂದ ಹಳ್ಳು-ಮಣ್ಣು ಕಸ-ಕಡ್ಡಿ ಬಿದ್ದೇ ಬೀಳುತ್ತಿವೆ. ಮೇಲಿನ ಬಿದಿರು-ಚಟ್ಟಿನಲ್ಲಿ ಇಲಿಗಳ ಸಂಸಾರ ಸಂಗ್ರಾಮ ನಡೆದೇ ಇದೆ. ಒಮ್ಮೊಮ್ಮೆ ಅದರಲ್ಲೊಂದು ಪ್ರಾಣಿ ನಮ್ಮ ಕೋಣೆಯೊಳಗೂ ಬೀಳುವದು. 'ಚಿಂಗ್' ಬರುವ ವರೆಗೂ ಅದು ಹಾಗೇ ಬಿದ್ದಿರಬೇಕು. ಅದರ ದುರ್ಗಂಧ ಎಷ್ಟಿದ್ದರೂ, ಅದರ ನೋಟ ಅಸಹ್ಯವಾದರೂ ನನ್ನಿಂದಂತೂ ಏಳುವದೇ ಆಗುತ್ತಿರಲಿಲ್ಲ.

ಬಾಗಿಲೊಳಗಿಂದ ಗಾಳಿಯೊಡನೆ ತೂರಿ ಬಂದ ಧೂಳಿ ಒಳಗಿನ ಪದಾರ್ಥಗಳನ್ನೆಲ್ಲ ಮುತ್ತಿದೆ. ಹೌದು, ಈ ಬಾಗಿಲೊಳಗಿಂದ ಯಾವ ಧೂಳಿಯೂ ಬರಬಹುದು; ಹೊರಗಿನ ಅಂಗಳೊಳಗಿಂದ ಯಾವ ಮಂಗನೂ ಒಳಗೆ ಇಣಿಕಿ ನೋಡಬಹುದು. ಕೋಣೆ ತುಂಬೆಲ್ಲ ಜೇಡಬುಡದ ವಸಾಹತುಗಳು. ಅವುಗಳ ಅವ್ಯಾಹತ ಕೆಲಸ ನಡೆದಿರುತ್ತದೆ. ಕೆಲವು ನನ್ನ ಹಾಸಿಗೆಯ ವರೆಗೂ ಅಂಬಿಗಾಲಿಟ್ಟು ಬರುವವು. ತಮ್ಮ ಬೆಳ್ಳಿಯ ನೂಲಿನಿಂದ ಮನೆ ಕಟ್ಟುವವು. ಅವುಗಳನ್ನು ನೋಡುವದೇ ನನಗೊಂದು ವಿನೋದ. ನನ್ನ ಸಹವಾಸದ ಜೀವಂತ ಪ್ರಾಣಿಗಳೆಂದರೆ ಅವು. ಈ ಬೇಸಿಗೆಯ ಬೇಸರದ ತಾಪವನ್ನೂ ಅಸಹ್ಯ ಏಕಾಂತವನ್ನೂ ಮರೆಯಲು ಅವು ನನಗೆ ಸಹಾಯ ಮಾಡುವವು.

ನಮ್ಮ ಕೋಣೆಯ ಎಡಕ್ಕಿದ್ದವನು ' ಪೀ-ಟಾ ' ವಿಶ್ವವಿದ್ಯಾಲಯದ ಒಬ್ಬ ವಿದ್ಯಾರ್ಥಿ ಎಂದು ಕಾಣುತ್ತದೆ. ಅವನು ಈ ಮನೆಗಳ ಮಾಲಿಕನ ಯಾವದೋ ದೂರಿನ ಆಪ್ತನಿರಬೇಕು. ಅಂತೆಯೆ ಅವನೂ ಬಹಳ ತಿಂಗಳಿಂದ ಬಾಡಿಗೆ ಕೊಟ್ಟಿಲ್ಲ. ಇತ್ತೀಚೆ ಈ ಮಾಲಿಕನು ಈ ವಿದ್ಯಾರ್ಥಿಯ ಕಾಗದ-ಪತ್ರಗಳನ್ನೆಲ್ಲ—ಅವು ಹಣವುಳ್ಳ ರಜಿಸ್ಟರ ಪತ್ರಗಳೇ ಇರಲಿ—ತಡೆದು ಒಡೆದು ನೋಡುತ್ತಾ ಇದ್ದಾನೆ. ಈ ವಿದ್ಯಾರ್ಥಿಯೂ ಅದಕ್ಕಾಗಿ ಗೊಣಗುಟ್ಟುವದಿಲ್ಲ. ಅವನಿಗೆ ದುಡ್ಡೆಂದರೆ ಏನು, ಅವನ ಗಜ್ಜರೆಯಂಥ ಕೆಂಪು ತುಂಬಿದ ಮುಖ, ಶಾಂತಿ ಗಾಂಭೀರ್ಯಗಳ ಬೀಡಾಗಿದೆ. ಅವನಿಗೆ ಹಣ ಬೇಕಾದಾಗ ಆ ಮಾಲಿಕನಿಗೆ ಕೈ ಒಡ್ಡುತ್ತಾನೆ. ಹಣ ಸಿಕ್ಕಿತೊ, ಹಿಡಿದುಡ್ಡು; ಒಯ್ದು ' ಪೈ-ಕಾ-ನ್ ' ಪೇಯದ ಒಂದು ಬಾಟ್ಲಿ, ಬೇಯಿಸಿದ ಒಂದು ಕೋಳಿಮರಿ, ಕೊಂಡುಕೊಂಡು ಬರುತ್ತಾನೆ. ಆಮೇಲೆ ಕೋಣೆಯಲ್ಲಿ ಜಂಭದಿಂದ ಬಂದು ಇಡೀ ಹಗಲು ಕುಡಿಯುವದರಲ್ಲಿಯೂ ಸಿನೇಮಾ ನಟ-ನಟಿಯರನ್ನು ಅನುಕರಿಸುವ ಹವ್ಯಾಸದಲ್ಲಿ ಅಡ್ಡ-ತಿಡ್ಡ ದನಿ ತೆಗೆದು ಕೂಗಾಡುವದರಲ್ಲಿಯೂ ಕಾಲಕಳೆಯುತ್ತಾನೆ. ಬಾಟ್ಲಿಯಲ್ಲಿ ಒಂದು ಹನಿ ಕೂಡ ಪೇಯ ಉಳಿಯದಂತೆ ಕುಡಿದಾದ ಮೇಲೆ ಶೆಡ್ಡು ಹೊಡೆದು ಹಾಸಿಗೆಯ ಮೇಲೆ ಹೋಗಿ ಅಡ್ಡ ಬೀಳುತ್ತಾನೆ. ಬೀಳುವದೊಂದೇ ತಡ, ಅವನ ಕುಂಭಕರ್ಣ-ನಿದ್ರೆಯ ದುಂದುಭಿ-ಧ್ವನಿಯು ನಮ್ಮ ಕೋಣೆಯೊಳಗೂ

ನಿನದಿಸುವದು. ಎಷ್ಟು ತೃಪ್ತಿ ಅವನಿಗೆ! ಏನು ನಿದ್ರೆ! ಒಮ್ಮೊಮ್ಮೆ ಮಾಲಿಕನಿಂದ ಒಂದು ಒಡಕು ಕವಡೆ, ಕುರುಡು ಕಾಸು ಕೂಡ ದೊರಕಿಸುವದಾಗುವದಿಲ್ಲ. ಅದರ ಬದಲು ಬಿರುಸು ಟೀಕೆಯು, ಅಥವಾ ಒಣ ಉಪದೇಶದ ಒಂದೆರಡು ತುಣುಕು ಸಿಗುವದುಂಟು. ಇಂಥ ಕಾಲಕ್ಕೆ ಅವನು ಬಹಳೇ ನಿರ್ವಿಣ್ಣನಾಗಿ 'ಹುಶ್ ಎಪ್ಪಾ!' ಎಂದು ಕೋಣೆ ಸೇರುವನು. ಅವನ ನಿಟ್ಟುಸಿರಿನ ತಿದಿ ಕೇಳಿದರೆ, ಇನ್ನೇನು ಬೇಗನೆ ಇವನು ಆತ್ಮಹತ್ಯೆ ಮಾಡಿಕೊಳ್ಳಲಿರುವನೋ ಎಂದೆನಿಸುವದು. ಇವನ ಚಿಂತೆ ಯಾರಿಗೆ? ಮಾಲಿಕನಿಗೆ ಇದರ ಗಂಧವೂ ಇಲ್ಲ.

ನಮ್ಮ ಕೋಣೆಯ ಇನ್ನೊಂದು ಮಗ್ಗಲಿಗೆ ಒಬ್ಬ ನಾಟಕಕಾರ ಇದ್ದಾನೆ. ಅವನೂ 'ಪೀ-ಟಾ' ವಿಶ್ವವಿದ್ಯಾಲಯದ ವಿದ್ಯಾರ್ಥಿ. ಎಷ್ಟೋ ಸಲ ಅವನು ಇಡೀ ದಿವಸ ಕೋಣೆಯಲ್ಲಿಯೇ ಇರುವದಿಲ್ಲ; ನನ್ನ ಪುಣ್ಯ. ಅವನು ಮನೆಯಲ್ಲಿ ಇದ್ದಾಗ ತನ್ನ ಕಾಯಕದ ಕಂತ್ರಾಟ ನಡೆಸುತ್ತಾನೆ. ಅದನ್ನು ಸಹನ ಮಾಡಿಕೊಳ್ಳುವದೇ ಕಷ್ಟ. ಕಪ್ಪೆಯಂತಹ ಟರಟರ್ ಧ್ವನಿಯಿಂದ, ನಮ್ಮ ನಾಟಕಶಾಲೆಗಳೊಳಗಿನ 'ದೊಡ್ಡ ಬಣ್ಣದ ಮುಖ'ದಂತೆ ಕಿರುಚು-ಧ್ವನಿಯಲ್ಲಿ ಹಾಡುತ್ತಾನೆ. ಮತ್ತೊಮ್ಮೆ ಗಡ್ಡ-ಮುಖದವನ ಮಾತುಗಳನ್ನು ಹೇಳುವ ಪ್ರಯತ್ನದಲ್ಲಿ ಸಪ್ತಸ್ವರಗಳನ್ನೆಲ್ಲ ಕಾಟು-ಗೀಟು ಹೊಡೆದಂತೆ ಧ್ವನಿ ಎಳೆದಾಡುತ್ತಾನೆ. ಇದಿಷ್ಟನ್ನೂ ಸಹಿಸಬಹುದು. ಆದರೆ ಹೆಣ್ಣಿನ ದನಿಯನ್ನು ಅನುಕರಣ ಮಾಡುವ ಭರದಲ್ಲಿ ಸೀರದನಿ ತೆಗೆದು ತಾರಸ್ವರವನ್ನು ಮುಟ್ಟುವ ಅವನ ಹವಣಿಕೆ ನಡೆದಾಗ ಕೇಳುವವರಿಗಾಗುವ ಕಸವಿಸಿ ಅಷ್ಟಿಷ್ಟಲ್ಲ! ಹೀಗೆ ಹಾಡುತ್ತಿರುವಾಗ ಅವನು ತನ್ನ ಕಟಿಭಾಗವನ್ನು ಹಿಚುಕಾಡಿಕೊಂಡು ನಿತಂಬ ಭಾಗವನ್ನು ಹಾಡಿನ ಗತ್ತಿನಲ್ಲಿ ತಾಳ ಹಾಕುವಂತೆ ಕುಣಿಸಾಡುತ್ತಿರಬೇಕೆಂಬ ಚಿತ್ರ ನನ್ನ ಕಣ್ಣೆದಿರು ಕಟ್ಟುತ್ತದೆ. ಅವನು ಮನೆಯ ಮಾಲಿಕನಿಗೆ ಆಗೀಗ ತನ್ನಲ್ಲಿ 'ಫರಾಳ'ಕ್ಕೆ ಮತ್ತು ಹರಟೆ ಹೊಡೆಯುವದಕ್ಕೆ ಕರೆಯುತ್ತಿರುತ್ತಾನೆ. ಅಂಥ ಕಾಲಕ್ಕೆ ಆ ನೀಚ, ಈ ನೀಚ ಇಬ್ಬರೂ ಕೂಡಿ ಉಳಿದ ಬಾಡಿಗೆಯವರನ್ನು ಬಾಯಿ ತುಂಬ ಬೈಯುತ್ತಾರೆ.

" ಅಯ್ಯೋ, ನಾನು ಕೂಡ ಬಾಡಿಗೆ ಕೊಡುವ ದಿನಗಳಾದವು. ಇಂದೇ ಬೆಳಿಗ್ಗೆ ನಾನು ಬ್ಯಾಂಕಿಗೆ ಹೋಗಬೇಕೆಂದು ನೆನಪು ಮಾಡಿಕೊಂಡಿದ್ದೆ. ಆದರೆ ನನ್ನ ಈ ಹಾಳು ಸ್ಮರಣಶಕ್ತಿಯಿದೆಯಲ್ಲ, ಅದಕ್ಕೆ ಯಥಾಪ್ರಕಾರ ಮರೆವಾಯಿತು. ಇದು ನೋಡಿ, ನನ್ನ ಜೇಬಿನಲ್ಲಿ ಬ್ಯಾಂಕ್ ಪುಸ್ತಕ ಇದೆ. ಹೋಗಬೇಕೆಂದೇ ತೀರ ನಿಶ್ಚಯ ಮಾಡಿದ್ದೆ." ಎಂದು ಇವನು ಒತ್ತೊತ್ತಿ ಹೇಳುತ್ತಿದ್ದ.

ಈ ಪ್ರಾಣಿಯೆ ಮನೆಯ ಆಳಿನ ಮೇಲೆ 'ಟೀಖರೀಖು' ಮಾಡುತ್ತಿದ್ದನು. ಅವನಿಗೆ ಒಂದು ಹಿಡಿ ಬಟಗಡ್ಲೆಯ ಲಂಚ ಕೊಟ್ಟು ವಠಾರ ದೊಳಗಿನ ಹಾಳು ಹರಟೆಯನ್ನೆಲ್ಲ ಅವನಿಂದ ಇವನು ಕೇಳಿಕೊಳ್ಳುತ್ತಿದ್ದ. 'ರಿಕ್‌ಷಾ'ದವನ ಹೆಂಡತಿಯ ಹತ್ತಿರ ದುಡ್ಡೆಷ್ಟಿದೆ— ಮತ್ತೆ ಆ ಆಕೆ? ಪಡುವಲ ಪಕ್ಕದ ಮೂಲೆಯ ಮನೆಯವಳು—ಗಂಡ ಕಣ್ಮರೆಯಾದೊಡನೆ, ಅವನ ಬೆನ್ನ ಹಿಂದೆ ಆಟ ನಡೆಸುವಳು. ಆಕೆ?— ಆ ನಟಿ ಇದ್ದಾಳಲ್ಲ, ಯಾವನ ಕೂಡ ಸಂಬಂಧ ಇಟ್ಟಿದ್ದಾಳೆ? ಆಕೆ ಏನು ಉಟ್ಟಿದ್ದಳು?-- ಏನು ತೊಟ್ಟಿದ್ದಳು?........ಹೀಗೇ ಹಾಳು ಹರಟೆ. ಆಮೇಲೆ ಅವರಿಬ್ಬರಲ್ಲಿ ಒಳ್ಳೇ ಕುತೂಹಲೋದ್ದೀಪಕ ಮಾತುಕತೆ ಸಾಗುತ್ತದೆ. ಇಬ್ಬರಿಗೂ ಒಳ್ಳೇ ಹಿತ, ಒಳ್ಳೇ ತೃಪ್ತಿ! ಪಾಪ, ನೆರೆಯ ಕೋಣೆಯಲ್ಲಿ ನನ್ನಂಥ ಒಬ್ಬ ಹೆಣ್ಣುಮಗಳಿದ್ದಾಳೆ ಎಂಬುದರ ಎಚ್ಚರ ಅವರಿಗೇನು! ಆದರೆ ನಾನು ಸಂಕಟಪಟ್ಟು ಓಕರಿಸುವಾಗ ಮಾತ್ರ ಈ ಮಹಾರಾಯ ನನಗೆ ಕೇಳಿಸುವಂತೆ 'ಅಯ್ಯೋ!' ಎಂದು ನಿಟ್ಟುಸಿರು ಬಿಡುವನು. " ಪಾಪ, ಎಷ್ಟು ವೇದನೆ! ಈ ಬೇನೆಗಿಂತ ಸಾವು ಲೇಸು!" ಎನ್ನುವನು. ಇಷ್ಟಕ್ಕೇ ಅವನು ಬಿಡುತ್ತಿದ್ದಿಲ್ಲ. ಬರಿ ಸುಳ್ಳುಸುಳ್ಳು ನಿಟ್ಟುಸಿರು ಬಿಟ್ಟರೆ ಸಾಕಾದೀತೆ? ನಮ್ಮ ಅವರ ಕೋಣೆಯ ನಡುವಿರುವ ಹಲಗೆಯ ತಾಪರಿ ಗೋಡೆಯನ್ನು ಟಪಟಪ ಬಡೆಯುವನು. ಅಂಟಿಸಿದ ಕಾಗದ ಹರಿದು ಬಿರಿಕಿನ ಸಂದಿಯೊಳಗಿಂದ ಇಣಿಕಿ, ಒಳ್ಳೇ ಅಂತಃಕರಣದ ನಟನೆಯ ಧ್ವನಿಯಿಂದ " ತಂಗಿ, ಅಮ್ಮನವರೆ, ನಾನೇನಾದರೂ ತಮಗೆ ಸಹಾಯ ಮಾಡಲಾ? ಅಷ್ಟು ಮಾಡಿಸಿಕೊಡಿ. ನನಗಾದರೂ ಸಮಾಧಾನವಾದೀತು; ಅಯ್ಯೋ!

ನಾನೇ ತಡೆದುಕೊಳ್ಳಲಾರೆ, ನೀವು ಹೇಗೆ ತಡೆದುಕೊಳ್ಳುತ್ತೀರೊ........!”

ಇವನ ಈ ಮಾತು ಕೇಳಿದರೆ ನನಗೆ ತೀರ ಅಸಹ್ಯವಾಗುತ್ತಿತ್ತು. ಆದರೆ ಮಾಡುವದೇನು? ನಾನು ನಿಸ್ಸಹಾಯ. ನಾನು ಸುಮ್ಮನಿರುತ್ತಿದ್ದೆ. ಇದನ್ನು ಕಂಡು ಅವನು ಕಿಡಿಕಿಡಿಯಾಗುತ್ತಿದ್ದ, ಶಪಿಸುತ್ತಿದ್ದ, ಹೊಲೆ ಮಾತಾಡುತ್ತಿದ್ದ. “ಏನೋ ಈ ಹುಚ್ಚರಂಡಿಗೆ ಬಹಳ ದಿಮಾಕ ಬಂದಂತೆ ಕಾಣುತ್ತದೆ. ಈ ಪಿಡುಗು ಎಂದಡಗೀತೋ!” ಎನ್ನುತ್ತಿದ್ದ. ನಾವು ಗೋಡೆಯ ಬಿರುಕನ್ನು ಮುಚ್ಚಲು ಮತ್ತೆ ಕಾಗದ ಅಂಟಿಸುತ್ತಿದ್ದವು. ಅವನು ಚಾಕುವಿನಿಂದ ಮತ್ತೆ ಅದನ್ನು ಹರಿಯುತ್ತಿದ್ದ. ತನ್ನಂತೆ ಪರರಿಗೆ ಬಗೆಯುವ ಇಂಥ ಪುಣ್ಯವಂತ ನೆರೆ-ಹೊರೆಯುಳ್ಳವರು ಎಷ್ಟು ಧನ್ಯರು!

ಮನೆಯಿದಿರು ಅಂಗಳದಲ್ಲೆಲ್ಲ ಜಗಳಾಟದ ಕೀಸರು-ಬಾಸರು; ಹೆಂಗಸರು ಬೈಯುವದು, ಶಪಿಸುವದು, ಬಡಿದಾಡುವದು. ಎಲ್ಲೋ ದೂರ ಮೂಲೆಯಲ್ಲಿ ಶ್ರುತಿ ಹಿಡಿದಂತೆ ಪುರಾಣ ಕಾವ್ಯಗಳನ್ನೋದುವ ಏಕನಾದ ಧ್ವನಿ. ಎಂಟು ಬೇರೆ ಬೇರೆ ಕುಟುಂಬಗಳು, ಹನ್ನೆರಡು ಮನೆಗಳಲ್ಲಿದ್ದು ಆದಷ್ಟು ಹೆಚ್ಚು ಸಂಘರ್ಷಣ, ಸಾಧ್ಯವಾದಷ್ಟು ಭಯಂಕರ ಸದ್ದು, ಮಾಡುವದರಲ್ಲಿ ಒಂದರೊಡನೊಂದು ಸ್ಪರ್ಧೆಮಾಡುತ್ತ ಅಲ್ಲಿ ಗುದ್ದಾಡುತ್ತಿದ್ದವು. ಎಸರಿಟ್ಟ ಪಾತ್ರೆಯಂತೆ ಇಲ್ಲಿಯ ಅಂಗಳವು ರಟರಟ ಕದಕದ ಕುದಿಯುತ್ತಿತ್ತು. ಸದ್ದಿಲ್ಲದೆ ತಣ್ಣಗೆ ಏನೂ ಮಾಡದೆ ಬಿದ್ದುಕೊಂಡಿದ್ದೆಂದರೆ ನನ್ನ ಈ ಗಾಳಿಯಾಡದ ತೇವ ತುಂಬಿದ ಕಿರುಮನೆ ಮಾತ್ರ. ಎಂಥ ದಿವ್ಯ ಸಾಮರಸ್ಯ ಇದು! ಔಚಿತ್ಯ, ಆರ್ಜವ, ಪ್ರಾಮಾಣಿಕತೆ, ವಿನಯಗಳ ರಸ ಇಲ್ಲಿ ಇಳಿದಿತ್ತು. 'ಕಾನ್‌ಫ್ಯೂಸಿಯಸ್'ನ ಸಂಸ್ಕೃತಿಯೆ ಇಲ್ಲಿ ಸ್ತಂಭವಾಗಿ ನಿಂತಿತ್ತು. ನನಗೊ ಗಳಿಗೆಗೊಮ್ಮೆ ಚಳಿ, ಗಳಿಗೆಗೊಮ್ಮೆ ಜ್ವರ. ಹಗಲೆಲ್ಲ ಅರೆಹಸಿವು. ಹಸಿವೆ ಆದಷ್ಟೂ ಓಕರಿಕೆ ಹೆಚ್ಚು. ತಿಂದೇನೆಂದರೆ ಹೊರಗೆ ಕೂಳಿರಲಿಲ್ಲ; ಕಾರಿಕೊಂಡೇನೆಂದರೆ ಒಳಗಿರಲಿಲ್ಲ. ಒಣ ಕಾರಿಕೆ. ಎರಡೂ ಸಂಕಟ. ಇಷ್ಟಾಗಿ ಇಷ್ಟೆಲ್ಲ ಸಂಕಟಕ್ಕೆ ಏನರ್ಥ? ಎಲ್ಲ ವ್ಯರ್ಥ! ಇದನ್ನು ನಾನು ಎರಡು ತಿಂಗಳ ತಡೆದುಕೊಂಡದ್ದು ಹೇಗೋ! ನಾನು ಏಕ ಬದುಕಬೇಕು? ಯಾವದೊ ವೀರ್ಯಬಿಂದು ರಜೋಬಿಂದು ಒಂದಾಗಿ ನಡೆದ ಜೀವದ ರಾಸಾ

ಯಾನಿಕ ಪ್ರಯೋಗದ ಪಾತ್ರಯಾಗಿ ನಾನು ಬಾಳಲೇ? ಇದಕ್ಕೆ ನನ್ನ ಒಪ್ಪಿಗೆಯಿಲ್ಲ.

ಇವನ್ನು ಆ ರೀತಿ ಕೊನೆಗಾಣಿಸಬೇಕು ಎಂದು ಮತ್ತೆ ಮತ್ತೆ ವಿಚಾರ ಬರುತ್ತಿದೆ. ನನಗೇನು ಹುಚ್ಚು ಹಿಡಿಯಿತೋ! ಹುಚ್ಚೇನು? ಇದಲ್ಲದೆ ಏನು ಗತಿ? ಅದೇನೇ ಇರಲಿ, ಇಂದಂತೂ ಮತ್ತೆ ಆ ವಿಚಾರ ಬೇಡ.

*　　*　　*　　*

— ಮೇ ೨೫

ಚಿಂಗ್ ನಿನ್ನೆ ರಾತ್ರಿ ಮನೆಗೆ ಬಂದಾಗ ಅವನು ಮುಖವಾಡ ಹಾಕಿಕೊಂಡು ಯಾವುದೋ ಒಂದು ಸೋಗು ಬಂದಂತೆ ಬಂದ. ಅವನಿಗೆ ಮುಖದಲ್ಲಿ ಕಳೆಯೇ ಇರಲಿಲ್ಲ. ಕೋಣೆಯೊಳಗೆ ಬಂದೊಡನೆ ಅವನು ಹಾಸಿಗೆಯ ಮೇಲೆ ಬಿದ್ದುಕೊಂಡ. ಅವನು ಎಷ್ಟು ತೆಳ್ಳಗಾಗಿದ್ದ, ಬಡಕಲಾಗಿದ್ದ! ಅವನು ಆ ಕಪ್ಪು ಕಣ್ಣು ತೆರೆದೊಡನೆ ನೀರು ತಳ ಕಂಡ ಬಾವಿಯಂತೆ ಭಯಾನಕವಾಗಿತ್ತು.

ಅವನು ಶೂನ್ಯದೃಷ್ಟಿಯಿಂದ ನನ್ನತ್ತ ನೋಡಿದ. 'ಇಂದೇನುಂಡಿ?' ಎಂದು ನಾನು ಅವನನ್ನು ಕೇಳಿದೆ. ಬೀದಿಹೋಕ ಅಂಗಡಿಯವನಿಂದ ಮಧ್ಯಾಹ್ನ ಆರು ಒಣ ರೊಟ್ಟಿಗಳನ್ನು ತಂದದ್ದೇ ತಂದದ್ದು. ಆಮೇಲೆ ಒಂದು ತುಣುಕನ್ನೂ ತಾನು ತಿಂದಿರಲಿಲ್ಲ. ಎಂದು ಅವನು ಒಪ್ಪಿಕೊಂಡ.

ಸ್ವಲ್ಪ ಹೊತ್ತಾದ ಮೇಲೆ ಹಾಗೂ ಹೀಗೂ ಅವನೊಮ್ಮೆ ಹಾಸಿಗೆಯಿಂದ ಎದ್ದ. ತನ್ನೊಡನೆ ಮನೆಗೆ ತಂದ ಕಣಕದ ಲಡ್ಡಿಗೆಗಳನ್ನು ಕುಚ್ಚಬೇಕೆಂದು ಮೇಜಿನ ಮೇಲಿನ ಎಣ್ಣೆಯ ಕಕ್ಕಡವನ್ನು ಹೊತ್ತಿಸಿದ. ನೀರಿಗೆ ಎಸರು ಬಂದೊಡನೆ ಅವುಗಳನ್ನು ಬಾಣ್ಲೆಯಲ್ಲಿ ಹಾಕಿ ಆಮೇಲೆ ನನ್ನೊಡನೆ ಮಾತನಾಡಬೇಕೆಂದ. ಅಂದವನೆ ಮೊದಲು ಎರಡು ಮಗ್ಗುಲಿನ ಹಲಿಗೆ ಗೋಡೆಗಳಿಗೆ ಕಿವಿಗೊಟ್ಟು ಕೇಳಿದ. ಎರಡೂ ಕಡೆಯವರು ನಿದ್ದೆ ಹೋಗಿದ್ದರು.

"ಈ ಸ್ಥಳ ನಾವು ಬೇಗನೆ ಬಿಡಬೇಕಾದೀತು. ನಿನಗೇನೊ ಬಹಳ ಜೇನೆ. ಬಿಡುವುದು ಅಸಾಧ್ಯ. ಆದರೆ........" ಎಂದು ಅವನು ಪಿಸುಗುಟ್ಟಿದ.

ಇಷ್ಟೆಂದು ನನ್ನ ಉತ್ತರದ ಅಪೇಕ್ಷೆಯಿಂದ ನನ್ನನ್ನು ನೋಡಿದ. ' ಈ ಮಾತಿನ ಗುಟ್ಟೇನು ? ' ಎನ್ನುವವರಂತೆ ನಾನು ಬರಿ ಹುಬ್ಬು ಹಾರಿಸಿದೆ, ಸನ್ನೆ ಮಾಡಿದೆ.

" ಮತ್ತೇನು, ಮನೆಯ ಮಾಲಿಕ. ಕೊಡಬೇಕಾದ ಬಾಡಿಗೆಯ ಬಾಕಿ. ಇಂದು ಮತ್ತೆ ನನ್ನೊಡನೆ ಅವನು ಕಾಲುಕೆದರಿ ನ್ಯಾಯ ತೆಗೆದಿದ್ದ. ಒಂದು, ಬಾಡಿಗೆ ಕೊಡಬೇಕು; ಇಲ್ಲವೆ ಮನೆ ಬಿಡಬೇಕು; ಅದೂ ಇಲ್ಲದಿದ್ದರೆ ಪೋಲಿಸರಿಗೆ ತಿಳಿಸುತ್ತೇನೆಂದು ಬೆದರಿಕೆ ಹಾಕಿದ.

ನಾನೇನೂ ಉತ್ತರ ಕೊಡಲಿಲ್ಲ. ಏನು ಉತ್ತರ ಕೊಡಲಿ ? ಆದರೆ ಚಿಂಗ್ ಮಾತ್ರ ಇದ್ದ ಸಂಗತಿ ಹೇಳಿರಲಿಲ್ಲ ಎಂದು ನನಗೆ ಹೊಳೆಯಿತು. ಬಾಡಿಗೆಯ ಮಾತು ಬಿಡುಗಡೆಗೆ ಬರಲಾರದು. ಇಷ್ಟಾಗಿ ಅದು ಎಷ್ಟೋ ವಾರಗಳಿಂದ ಇದ್ದೇ ಇದೆ. ಇಷ್ಟಕ್ಕೇ ಅವನು ಹೆದರಿಕೊಂಡಿರಲಾರ. ಇದ್ದ ಸಂಗತಿ ಬೇರೆ ಇರಬೇಕು. ಏನೋ ತೆರೆಮರೆಗಿಟ್ಟು ಮಾತನಾಡುತ್ತಿದ್ದಾನೆ. ಹಾಗಿರದಿದ್ದರೆ ಇಷ್ಟು ಗಂಭೀರನಾಗಿ ಮಾತನಾಡುತ್ತಿರಲಿಲ್ಲ. ನಾನು ಅವನಿಗೆ ಒಂದು ಪ್ರಶ್ನೆ ಕೇಳಲಿಲ್ಲ; ನನಗೆ ಏನು ಹೇಳಬೇಕು, ಏನು ಹೇಳಬಾರದು, ಅದು ಅವನಿಗೆ ತಿಳಿಯದೇ !

ಆದರೂ ಮನೆ ಬಿಡಬೇಕಂತೆ. ಹೇಗೆ? ಮೊದಲು ದುಡ್ಡು ಬೇಕು, ದುಡ್ಡು. ಆಮೇಲೆ ನನಗೆ ಆ ಶಕ್ತಿ ಆರೋಗ್ಯ ಬೇಕು.

ಕೊನೆಗೊಮ್ಮೆ ನಾನು ಕೇಳಿದೆ ' ಇನ್ನೂ ಕೆಲ ದಿನ ನಾವಿಲ್ಲಿರಲಾರೆವೇ? ' ಎಂದು. " ಹೋ. ಕೆಲ ದಿವಸ ಆಗಬಹುದು. ಆದರೆ ಮೇ ೩೦ ರೊಳಗಾಗಿ ಮಾತ್ರ ಮನೆ ಬಿಡಲೇಬೇಕು. ಏನಿದ್ದರೂ ನೀನು ಚಿಂತೆ ಹಚ್ಚಿಕೊಳ್ಳಬೇಡ. ಆಹೊತ್ತು ಬಂದಾಗ ನಿನಗೆ ಆಶ್ಚರ್ಯವಾಗಬಾರದು ಎಂದು ಮೊದಲೇ ಸುಮ್ಮನೆ ಹೇಳಿಟ್ಟೆ. ಅದೇನು ಅಷ್ಟು ದೊಡ್ಡ ವಿಷಯವಲ್ಲ. ನನಗೆ ಬೇಗನೆ ದುಡ್ಡು ಬರುವದಿದೆ." ಎಂದವನು ಹೇಳುತ್ತಿರುವಾಗ ಅವನ ತುಟಿಯ ಮೇಲಿಂದ ತೆಳುವಾದ ನಗೆಯೊಂದು ತೇಲಿ ಹೋಯಿತು. ಆದರೆ ಬೆಳಕು ಮಾತ್ರ ಕಣ್ಣಲ್ಲಿ ಮೂಡಿರಲಿಲ್ಲ. ಅದನ್ನು ಕಂಡು ನನಗೆ ಭಯವಾಯಿತು. ಅವನು ಮತ್ತೆ ಕೇಳಿದ: " ಸ್ಥಳಾಂತರ ಮಾಡುವದರಿಂದ ನಿನಗೂ ಹವೆ ಬದಲಾಯಿಸಿದಂತೆ ಆಗುವದಿಲ್ಲವೆ ? "

ಇಸ್ಪೊತ್ರಿಗೆ ಲಡ್ಡಿಗೆ ಬೆಂದಿದ್ದವು. ಅವನು ಊದಿ ಉರಿ ಆರಿಸಿದನು. ಹಾಸಿಗೆ ಬಳಿ ಕುಳಿತು ನನಗೆ ಉಣಿಸಿದನು. ಅರ್ಧ ಊಟ ಆಗಿರಲಿಕ್ಕಿಲ್ಲ; ಹೊಟ್ಟೆ ಉಮ್ಮಳಿಸಿತು. ಉಂಡದ್ದು ಬಿಟ್ಟದ್ದು ಎಲ್ಲ ಹೊರಗೆ ಬಂತು. ಹೊಟ್ಟೆಯೊಳಗಿದ್ದದ್ದೆಲ್ಲ ಗಂಟಲಿಗೆ ಬರುವಂತೆನಿಸಿತು. ಒಳಗೊಂದು ಭೂಕಂಪವೇ ನಡೆದು ನನ್ನ ಜೀವವನ್ನೆಲ್ಲ ಗದಗಮುಸಿ ಬಿಡುವಂತೆ ತೋರಿತು. ಆನೆ ಡಿಕ್ಕಿ ಹೊಡೆದು ಹೆಬ್ಬಾಗಿಲನ್ನು ಮುರಿವಂತೆ ಒಳಗಿಂದೇನೋ ಬಂದು ನನ್ನ ಕಣ್ಣುಕದಗಳನ್ನು ಕಿತ್ತೊಗೆಯುವಂತಾಯಿತು. ತಲೆಯೆಲ್ಲ ಜೆಂಕಿಯಲ್ಲಿ ಟ್ಟಂತಾಯಿತು. ನನಗೆ ನನ್ನ ನಿಗ್ರಹ ಉಳಿಯಲಿಲ್ಲ. ಮೈಯೆಲ್ಲ ನಡುಗಿತು; ಬೆವರಿಟ್ಟಿತು; ಮುಳ್ಳೆಟ್ಟಿತು; ತಣ್ಣಗಾಯಿತು.

ಚಿಂಗ್‌ನಿಗೂ ಕಷ್ಟ ಕಡಿಮೆಯಾಯಿತೆಂದಲ್ಲ. ಅವನಿಗೆ ಏನು ಮಾಡಲಿ, ಏನು ಬಿಡಲಿ ಎಂದಾಯಿತು. ಹುಚ್ಚನಂತೆ ಹರಿದಾಡಿದ, ಕುಣಿದಾಡಿದ. ನನಗೇನೂ ತನ್ನಿಂದ ಸಹಾಯವಾಗುವದಿಲ್ಲವಲ್ಲ ಎಂದು ತನ್ನ ಮೈ ಮೋರೆ ಹರಿದುಕೊಂಡ. ನನ್ನ ತಬ್ಬಿ ಹಿಡಿದ. ಮುಕ್ಕಳಿಸಲು ನೀರು ಕೊಟ್ಟ. ಬಾಯಿ ಮೂಗು, ಕಣ್ಣು ತೊಳೆದ. ಟಾವೆಲ್ಲನ್ನು ಬಿಸಿ ನೀರಿನಲ್ಲದ್ದಿ ನನ್ನ ಹಣೆಯ ಮೇಲಿಟ್ಟ. ನನಗೆ ಆದಷ್ಟು ಉಪಚಾರ ಮಾಡಬೇಕು, ಎಂದು ಕೈ ಮೈಲಾದಷ್ಟು ದುಡಿದ, ದಣಿದ.

ರಾತ್ರಿಯೆಲ್ಲ ನನಗೆ ನಿದ್ದೆಯಿಲ್ಲ. ಕಣ್ಣು ಮುಚ್ಚುವದೂ ಆಗಲಿಲ್ಲ. ಇಷ್ಟೆಲ್ಲ ನಾಟಕವಾದ ಮೇಲೆ ಮತ್ತ ಆ ಯೋಚನೆ ತಲೆದೋರಿತು. ಇದರಿಂದೇ ನನ್ನ ಬಿಡುಗಡೆಯೆಂದೆನಿಸಿತು. ಸ್ವಲ್ಪ ಸನ್ನಿಯೂ ಆಗಿತ್ತೋ ಏನೊ ! ಯಾಕಂದರೆ ನನ್ನ ಹೊಟ್ಟೆಯನ್ನು ನಾನೇ ಚಿವುಟಿದೆ, ಹಿಚುಕಿದೆ, ಬಡಿದುಕೊಂಡೆ— ಈಗೇನೋ ನೆನಪಿದೆ; ಹೊಟ್ಟೆಯೊಳಗಿನ ಈ ಕ್ಷುದ್ರ ಜಂತು ಸತ್ತುಹೋಗಲಿ ಎಂದುಕೊಂಡೆ. ಆದರೆ ಏನು ಹೇಳಲಿ ! ನಾನು ಹೊಡೆದುಕೊಂಡ ಒಂದೊಂದು ಹೊಡೆತಕ್ಕೆ ಪ್ರತಿಯಾಗಿ ತನ್ನ ಇದ್ದಬಿದ್ದ ಶಕ್ತಿಯನ್ನೆಲ್ಲ ಏಕೀಕರಿಸಿ ನನ್ನ ಹೃದಯ ಒಳಗಿನಿಂದ ನನಗೆ ಛೀ ಹಾಕುತ್ತಿತ್ತು. ಎರಡು ಭಾವಗಳ ಒಳತೋಟ ನಡೆದಿತ್ತು. ಒಂದು ಸ್ವಾರ್ಥ, ಒಂದು ನಿಸ್ವಾರ್ಥ. ನನ್ನ ಮಗು ನನಗೆ ಬದುಕಿ ಉಳಿಯಲಿ ಎಂಬುದು ಸ್ವಾರ್ಥ. ನಾನು

ಬದುಕಿ ಉಳಿದು ದೇಶಸೇವೆಯಾಗಲಿ ಎಂಬುದು ನಿಃಸ್ವಾರ್ಥ. ಇಲ್ಲವೆ ಎರಡು ಮರಣ ಘಟಿಸದೆ ಬಿಡುಗಡೆಯೇ ಇಲ್ಲವೇನೋ ಎಂದೂ ತೋರಿತು. ಎಂಥ ಘಾತುಕ ವಿಚಾರ !

ನಿಜವಾಗಿ ಹೇಳುತ್ತೇನೆ, ಇನ್ನೂ ಹುಟ್ಟಲಿರುವ ಈ ಜೀವದ ಪ್ರೀತಿ ನನಗೆಷ್ಟು ! ನನಗೆ ಅದು ಇಷ್ಟು ಕಷ್ಟ ಕೊಡುತ್ತಿದ್ದರೂ ಶಿಶುಜನನದ ಅದ್ಭುತವು ಆಗಿಬಿಡಲಿ ! ನನ್ನುದರದಿಂದ ಮನುಷ್ಯಪ್ರಾಣಿಯೊಂದು ಚಿಗಿತು ಬಂದು ಧೀರ-ವೀರನಂತೆ ಈ ಜಗದಲ್ಲಿ ಬಾಳಲಿ ! ಅಮರಕೃತಿ ಯೊಂದನ್ನು ಬರೆಯುವ ಅಗತ್ಯ ನಿಜವಾದ ಕವಿಗೆ ಎಷ್ಟಿರುವದೋ ಅಷ್ಟೆ ನನಗೂ ಇದು ಇದೆ. ಇದಕ್ಕೂ ಹೆಚ್ಚಿಲ್ಲ, ಕಡಿಮೆಯಿಲ್ಲ. ನನ್ನ ಕಂದ ಪ್ರಕೃತಿಯಿಂದಲೇ ಹುಟ್ಟಿ ಪ್ರಕೃತಿಯನ್ನೆ ರೂಪಿಸುವ ಕುಶಲ ಶಿಲ್ಪಿಯಾದಾನು! ಅಹುದು. ಇದರಲ್ಲೇನೂ ಸಂಶಯವಿಲ್ಲ. ಕ್ಷಣಕ್ಷಣಕ್ಕೂ ಅವನು ನನ್ನಲ್ಲಿ ಬೆಳೆಯುತ್ತಿದ್ದಾನೆ, ನರನಾಗುತ್ತಿದ್ದಾನೆ. ಮೊದಲು ಮೊದಲು ಅಸಹಾಯ, ತೀರ ಪರಾವಲಂಬಿಯಾಗಿ ಹುಟ್ಟಿ ಬಂದ ಈ ಕೂಸು, ಕುತೂಹಲ ಕಾರುಣ್ಯ ಗಳಿಂದ ತುಂಬಿದ ಕಣ್ಣುಗಳಿಂದ ನನ್ನನ್ನು ದಿಟ್ಟಿಸಿ ನೋಡುವ ಈ ಕೂಸು ಮಗ್ಗುಲಾಗಿ ಹೊಟ್ಟೆ ಹೊಸೆದು, ಅಂಬೆಗಾಲಿಟ್ಟು, ತಪ್ಪಡಿ ಹಾಕಿ, ನೆಟ್ಟನೆ ನಿಂತು, ತನ್ನ ಶ್ರೀಮದ್ಗಾಂಭೀರ್ಯದಿಂದ ಸೃಷ್ಟಿಯ ವಿಷಯವಾಗಿಯೂ ಮಾನವನ ವಿಷಯವಾಗಿಯೂ ಮಹಾಗ್ರಂಥಕಾರರೂ ಸುರಸರೋರಗರೂ ಬೆರಗುಪಟ್ಟು, ಬಟ್ಟು ಕಚ್ಚುವಂತೆ ದಿವ್ಯಸತ್ಯಗಳನ್ನು ಸಾರಿ ಹೇಳಿ ಎಲ್ಲ ರನ್ನೂ ತನ್ನ ಇಚ್ಛೆಗೆ ತಲೆಬಾಗುವಂತೆ ಮಾಡುವನು. ನನ್ನ ಮುಟ್ಟು ನಿಂತಂದಿನಿಂದ, ಹೊಟ್ಟೆಯಲ್ಲಿ ಏನೋ ಸುಳಿದಾಡಿದಂತೆ ಅನಿಸಹತ್ತಿದಂದಿ ನಿಂದ, ನನ್ನ ಹೃದಯವು ಅನಿರ್ವಚನೀಯವಾದ ವಿಸ್ಮಯದಿಂದ ಕಂಪಿತ ವಾಗಿದೆ. ಕೊರಳ ಸೆರೆ ಬಿಗಿದು ಬಂದಿದೆ. ಯಾರಿಗೆ ಹೇಳಲಿ, ಯಾರಿಗೆ ಬಿಡಲಿ ? ಲೋಕಕ್ಕೆಲ್ಲ ಸಾರಲೇ ? ಇಂಥ ಈ ನಿರ್ಮಲ ನಿಸ್ಸೀಮ ಜೀವ ಮೊಟ್ಟಮೊದಲು ತನ್ನ ನಗೆ ಮುಗುಳನ್ನರಳಿಸುವದಲ್ಲವೆ ? ನನ್ನನ್ನೇ 'ಅವ್ವಾ' ಎಂದು ಕರೆಯುವದಲ್ಲವೆ ? ಹೌದು. ನಾನು ಹೀಗೆ ವಿಚಾರ ಮಾಡಿದಷ್ಟು, ನನಗೆ ಇದು ತಿಳಿದಷ್ಟು ನನ್ನ ಹಿಗ್ಗೇನು, ಆವೇಶವೇನು, ಉತ್ಕಂಠೆಯೇನು!

ಇಂಥ ಸವಿಗನಸುಗಳನ್ನು ತಡೆಯುವ ಸಾಮರ್ಥ್ಯವುಳ್ಳ ಹೆಂಗಸು
ಎಲ್ಲಾದರೂ ಇದ್ದಾರೆಯೇ ? ಇಲ್ಲ; ಒಬ್ಬಳೂ ಇಲ್ಲ. ನಾನಂತೂ ನಿಶ್ಚಯ
ವಾಗಿಯೂ ಇಲ್ಲ. ಒಬ್ಬರೂ ಇಲ್ಲವೆ? ಅದೇಕೆ? ನೂರಾರು, ಸಾವಿರಾರು,
ಲಕ್ಷಾವಧಿ ಜನರಿರಬಹುದು. ಹೆಣ್ಣಿನ ತಾಯಿತನದ ಸತ್ವವೇ ಮೈವೆತ್ತು,
ತನ್ನ ವೈಯಕ್ತಿಕ ಅಧಿಕಾರದ ಈ ಸಣ್ಣ ಸ್ವಾರ್ಥವನ್ನೂ ಬಿಡಲರಿಯದೆ
ಮಹಾಸೃಷ್ಟಿಯ ಮಾನವನ ಮಹದುತ್ಕ್ರಾಂತಿಯನ್ನು ಮಾಡಲು ನಮ್ಮಿ
ದಿರು ತೊಡಗಿರುವಾಗ ಹೆಣ್ಣುಗಳೆಲ್ಲ ಒಂದುಗೂಡಿ ತಮ್ಮ ಫಲಿಸುವ ಶಕ್ತಿ
ಯನ್ನೆಲ್ಲ ಕೆಲಕಾಲ ನಿಗ್ರಹಿಸಿ ಅದನ್ನು ಆ ಮಹಾತಾಯಿಗೆ ನಿವೇದಿಸ
ಲಾರರೇ ?

ಹೌದು. ನಾವು ಇದನ್ನು ಮಾಡಬಲ್ಲೆವು. ಆದರೂ ಈ ವೇದಾಂತ
ವನ್ನು ನಂಬಿ ವಿಷದಲ್ಲದ್ದ ಸೂಜಿಯನ್ನು ನನ್ನ ಹೊಟ್ಟೆಯಲ್ಲಿ ಚುಚ್ಚಿಕೊಳ್ಳು
ವುದು ಹೇಗೆ ತಾನೇ ಸಾಧ್ಯ! ಇಂಥ ಭಾವನೆಗಳ ಮಹಾಯುದ್ಧವು ಸತತ
ವಾಗಿ ನಡೆದು, ನನ್ನ ಹೃದಯವೇ ಕುರುಕ್ಷೇತ್ರವಾದಾಗ, ನನ್ನ ಮನಸ್ಸು
ಒತ್ತಟ್ಟಿಗೆ, ಮೈಯೊತ್ತಟ್ಟಿಗೆ ಸೀಳಿದಂತಾಗುವದು. ಇಷ್ಟಿದ್ದರೂ ನಾನು ನಿಶ್ಚಯ
ಮಾಡಿದ್ದೇನೆ. ಈ ಎಮ್ಮೆ-ನಿದ್ದೆ ಸಾಕಾಯಿತು. ನಾನು ಎಚ್ಚರಾಗಿದ್ದೇನೆ.
ಕ್ರಾಂತಿಸಂಘವನ್ನು ನಾನು ಸೇರಿದ ಕಾಲಕ್ಕಿಂತ ಈಗ ನನ್ನ ತಿಳಿವು ಹೆಚ್ಚು
ತಿಳಿಯಾಗಿದೆ. ಜೀವನಸ್ಪಂದನವು ಈ ತೀವ್ರತೆಗೆ ಬಂದಾಗ, ಹೀಗೆ ಉರಿ
ಗೊಂಡು ಎದ್ದಾಗ, ಸಂಕಟದ ರಣರಂಗವನ್ನು ಹೊಕ್ಕಾಗ, ಪ್ರತ್ಯಕ್ಷ ದೈವವೇ
'ಇದು ಬೇಕೋ? ಅದು ಬೇಕೋ?' ಎಂದು ನಿಕರವಾಡಿ ಕೇಳಿದಾಗ,
ಎರಡು ಸ್ವಾಭಾವಿಕ ಇಚ್ಛೆಗಳಲ್ಲಿ ಪರಸ್ಪರ ವಿಪರೀತ ವಿರೋಧ ಉಂಟಾಗಿ
ಶ್ರೇಯ-ಪ್ರೇಯಗಳ ಎಳೆದಾಟವು ಸತ್ವಪರೀಕ್ಷೆಗೆ ನಿಂತಾಗ, ಕೊನೆಗೆ ಬಂದ
ನಿರ್ಣಯದಲ್ಲಿ ಪ್ರೇಯಸ್ಸು ಹಿಂದೆ ಸರಿಸಲ್ಪಟ್ಟು ಶ್ರೇಯಸ್ಸೇ ಮೇಲಾದಾಗ–
ಆಗ ಮಾತ್ರ ಕ್ರಾಂತಿಕಾರಕ ಎಚ್ಚರ ನಮಗೆ ಹುಟ್ಟಿದೆ ಎಂದು ನಾವು
ಹೆಸರೆತ್ತಿ ಹೇಳಬಹುದು. ಅಲ್ಲಿಯವರೆಗೆ........? ಈ ಒಂದು ಉಡಾಳ
ರೇತೋಬಿಂದುವು ದುರ್ದಮ್ಯವಾದ ಅಣುಪ್ರಮಾಣ ಕಣಗಳೊಡನೆ ನನ್ನ
ಗರ್ಭದಲ್ಲಿ ಹುಟ್ಟು ಕಟ್ಟಿತಲ್ಲ! ಹೀಗೆ ನನ್ನ ಸ್ವಾರ್ಥವೊಂದು ಸತ್ವಪರೀಕ್ಷೆ
ಯನ್ನೇ ದೈವವು ಸಾಗಿಸಲಿದೆ.

ಆಗಲಿ, ಬಡತನದಲ್ಲಿ ಹುಡಿಹುಡಿಯಾಗಿ ಹೋದ ಕೋಟಿಗಟ್ಟಲೆ ಜನರುಳ್ಳ ಈ ಅವ್ಯವಸ್ಥಿತ ಸಮಾಜದಲ್ಲಿ ಮಕ್ಕಳನ್ನು ಹಡೆಯುವದೆಂದರೆ ನಿರಾಶ್ರಿತ ನಿರಾಶೆಯಲ್ಲಿ ಬಾಳುವವರ ಸಂಖ್ಯೆಯನ್ನೇ ಹೆಚ್ಚು ಮಾಡಿದಂತೆ! ಬೇನೆಕೊಳಕ ಅರಹೊಟ್ಟೆಯ ಆರೈಕೆ ಕಾಣದ ತಾಯಂದಿರ ಉದರದಿಂದ ಹೊರಟ ಒಂದೊಂದು ಕೂಸೂ ಇದ್ದವರ ಹೀನ ಸ್ಥಿತಿಯನ್ನು ಇನ್ನೊಂದಿಷ್ಟು ಕೀಳು ಮಾಡುತ್ತಲಿದೆ. ಬಡತನದಲ್ಲಿ ಹುಟ್ಟಿದ ಮಕ್ಕಳ ಪಾಲಿಗೆ ಹಸಿವು, ಅಜ್ಞಾನ, ಅಪಮಾನ, ಬೈಗಳು, ಜೀವನವೈಷಮ್ಯಗಳಲ್ಲದೆ ಅರಣ್ಯದ ಹಿಂಸ್ರಪಶುಗಳಿಗಿಂತಲೂ ಮಾನವನು ಬೇರೆಯಾಗಿರುವನು ಎಂದು ಗುರುತು ಮಾಡಿ ತೋರಿಸುವ ಆಧ್ಯಾತ್ಮಿಕ ಔನ್ನತ್ಯದ ಸೋಂಕು ಕೂಡ ಅವರಿಗೆ ತಗಲದು. ಹೊಸ ಜೀವನವೆಂದರೆ ನಾವು ಕಣ್ಮುಟ್ಟ ನೋಡುವ ನಮ್ಮ ಪಾಲಿಗೆ ಬಂದ ಇಂದಿನ ಈ ಜೀವನ! ಇದನ್ನು ಏನೂ ಅರಿಯದ ಆ ಹಸುಗೂಸುಗಳ ಹಣೆಗೇ ಕಟ್ಟಲು ನನಗೇನು ಅಧಿಕಾರ?

ಆದರೂ ಹುಚ್ಚು ಮನಸ್ಸು! ತಾಯಿತನದ ಕನಸುಗಳಲ್ಲಿ ಹೇಗೆ ಸಂತೋಷದಿಂದ ಲೀನವಾಗಿ ಹೋಗುತದು! ನನ್ನ ಜೀವದ ಗರ್ಭದೊಳಗಿಂದ ಇನ್ನೊಂದು ಜೀವದ ಸುಳಿಯನ್ನು ಈ ಜಗದಲ್ಲಿ ಮೈದೋರಿಸುವೆನೆಂದು ಆಗೀಗ ನಾನು ಕನಸು ಕಾಣುತ್ತಿದ್ದೇನೆ.

ಚಿಂಗ್‌ನು ಇಂದು ಒಬ್ಬ 'ಕೋರಿಯಾ'ದ ಗೆಳೆಯನನ್ನು ಕಾಣುವವನಿದ್ದಾನೆ. ಈ ಗೆಳೆಯನ ಸಹಾಯದಿಂದ ನಾನು ನನ್ನ ಹಂಚಿಕೆಯನ್ನು ಆಚರಣೆಗೆ ತಂದು ಕೊನೆಗಾಣಿಸಬಹುದು. ಈ ಮನುಷ್ಯನನ್ನು ಹುಡುಕಬೆಟ್ಟಿಯಾಗಬೇಕೆಂದು ಚಿಂಗ್‌ನಿಗೆ ಹೇಳಿದ್ದೇನೆ. ಇದನ್ನು ಕೇಳಿ ಚಿಂಗ್‌ನು ಭಯಚಕಿತನಾದಾನೆಂದು ನನಗೆ ಒಂದಿಷ್ಟೂ ಹೊಳೆದಿರಲಿಲ್ಲ. ಅವನು ನೋಡಿದ ವಿಚಿತ್ರದೃಷ್ಟಿ, ಅವನ ಆ ಮೌನ, ನನ್ನನ್ನೂ ನಿರಾಶೆಗೊಳಿಸಿದವು. ತನ್ನ ಜೇಬಿನಲ್ಲಿ ಎರಡೂ ಕೈಗಳನ್ನು ಸೇರಿಸಿ ಅವನು ಕೆಲಹೊತ್ತು ಸ್ತಬ್ಧನಾಗಿ ನಿಂತನು. ಆಮೇಲೆ ನನ್ನ ಕಡೆಗೆ ಮೋರೆ ತಿರುವಿ ನಿರ್ಧಾರದ ಸ್ವರದಲ್ಲಿ ಒತ್ತಿ ಹೇಳಿದ:

"ಗರ್ಭ ಕೆಡಹುವದೇ? ಅದರ ವಿಚಾರವೇ ಬೇಡ. ಅದು ಅಶಕ್ಯ"

"ಅದೇಕೆ ? ಅದಲ್ಲದೆ ಬೇರೆ ಹಾದಿಯೇ ಇಲ್ಲ. ಕೆಡಹುವದೊಂದೇ ಹಾದಿ. ಅದು ನಿಶ್ಚಿತ."

ಹೀಗೆಂದೊಡನೆ ಅವನು ನನ್ನ ಕಡೆಗೆ ಗಕ್ಕನೆ ತಿರುಗಿ ಚಮತ್ಕೃತನಾಗಿ ನೋಡಿದನು. ತೆಗೆದು ಕಪಾಳಕ್ಕೆ ಹೊಡೆದಂತೆ ಅವನ ಮುಖವಾಗಿತ್ತು. ಅವನು ಹಾಸಿಗೆಯ ಮೇಲೆ ಕುಳಿತು ನನ್ನ ಕೈಗಳನ್ನು ತನ್ನ ಕೈಗಳಲ್ಲಿ ಹಿಡಿದ. ಆಗ ಅವನ ಕಣ್ಣೇ ಮಾತನಾಡುತ್ತಿದ್ದವು; 'ಬೇಡ' ಎನ್ನು ತ್ತಿದ್ದವು; 'ಅಯ್ಯೋ' ಎಂದು ಬೇಡಿಕೊಳ್ಳುತ್ತಿದ್ದವು. ಈ ನಿರ್ಣಯಕ್ಕೆ ನಾನು ಬಂದುದು ಹೇಗೆಂಬುದನ್ನು ಅವನಿಗೆ ತಿಳಿಸಿ ಹೇಳಲಾರಂಭಿಸಿದೆ.

"ಅದು ನಮ್ಮಿಂದಾಗದು." ಹೀಗೆಂದು ಅರೆ ಅಳುವ ದನಿಯಲ್ಲಿ ಕೂಗಿದವನೆ "ಪ್ರತಿ ಏನೂ ಮಾತನಾಡಬೇಡ" ಎನ್ನುವಂತೆ ತನ್ನೆರಡೂ ಕೈಗಳಿಂದ ನನ್ನ ಬಾಯಿ ಮುಚ್ಚಿದ. ನನ್ನ ಕಿವಿಗೆ ತನ್ನ ತುಟಿ ತಂದು "ಹೌದು, ನಾನು ಬಲ್ಲೆನೇ, ನಿನ್ನ ಭಾವನೆ ನಾನೆಲ್ಲ ಬಲ್ಲೆ. ಆದರೆ ಆಮೇಲೆ ನಿನಗೆ ಪಶ್ಚಾತ್ತಾಪವಾದೀತು. ಇದು ಭಯಂಕರ ಕೆಲಸ ! ಮತ್ತು ಈ ರೀತಿಯಿಂದ........" ಎಂದು ಅವನು ತಲೆ ಕೊಡಹಿದ; ಕೆಲಹೊತ್ತು ಏನೇನೂ ಮಾತನಾಡಲಿಲ್ಲ. ನನಗೂ ಏಕೋ ಒಮ್ಮೆಲೆ ಜೀವ ಒಲ್ಲೆನಿಸಿ ಸುಮ್ಮನಾಗಿ ಹಾಗೆ ಬಿದ್ದುಕೊಂಡೆ.

ಬಹಳೊತ್ತಿನ ಮೇಲೆ ಅವನು ಮತ್ತೆ ಮೆಲುದನಿಯಲ್ಲಿ ಹೇಳಿದ:

"ಈಗಿನ ಕಷ್ಟ ಎಷ್ಟೇ ಇರಲಿ (ಎರಡು ಕಷ್ಟಗಳನ್ನೂ ನಾನು ಬಲ್ಲೆ) ಆದರೂ ನೀನು ಹಾಕಲಿರುವ ಹೆಜ್ಜೆ ಅದಕ್ಕೂ ಕಷ್ಟದ್ದು. ಅದು ಎಷ್ಟು ಭಯಂಕರ ! ನಿನಗೆ ಗೊತ್ತಿಲ್ಲ.... ಒಂದು, ಅದು ಧರ್ಮವಲ್ಲ, ಔಚಿತ್ಯವಲ್ಲ. ಅದಿರಲಿ; ನಿನ್ನ ಪ್ರಾಣವೇ ಅದಕ್ಕೆ ತುತ್ತಾದೀತು. ಅದನ್ನೂ ನೋಡು ! ಇಷ್ಟಲ್ಲದೆ ನಮಗೆ ಇದಕ್ಕೆ ಹೊತ್ತು ಎಲ್ಲಿದೆ ? ನಾವು ಇಲ್ಲಿಂದ ಕಿತ್ತಬೇಕಾ ಗಿದೆ........" ಹೀಗೆ ಹೇಳುತ್ತಿರುವಾಗಲೆ ಗದ್ಗದದಿಂದ ಅವನ ಕಂಠ ಬಿಗಿದು ಬಂದು ಮಾತೇ ಅರ್ಧಕ್ಕೆ ನಿಂತಿತು. ಅವನು ನನ್ನನ್ನು ನೋಡುತ್ತಿದ್ದ; ನಾನು ಅವನನ್ನು ನೋಡುತ್ತಿದ್ದೆ. ಇಬ್ಬರಿಗೂ ಜೀವ ಬೇಡವೋ ಬೇಡ ಎನಿಸಿತು.

ಇದೇ ಹೊತ್ತಿಗೆ ನಮ್ಮ ಪಕ್ಕದ ಗೋಡೆಗಳನ್ನು ಯಾರೋ ಕೆದರಾಡಿ ದಂತಾಯಿತು. ಚಿಂಗ್‌ನು ಗೋಡೆಯೊಳಗಿನ ಬಿರುಕು ಕಂಡ. ಎದ್ದ; ಸುಮ್ಮನೆ ನನ್ನ ಕೈಮೇಲೆ ಕೈಯಾಡಿಸಿದ.

* * * *

— ಮೇ ೨೬

ಏನು ? ಇಡೀ ರಾತ್ರಿ ಚಿಂಗ್‌ನು ಒಮ್ಮೆಯೂ ಬಂದಿರಲಾರನೇ ?! ಹೀಗೆ ಕೈ ಬಿಡುವಷ್ಟು ನಾನು ಅವನಿಗೆ ಬೇಡವಾದೆನೇ ! ನಾನು ಹೀಗೆ ಇಲ್ಲಿ ಅತಿ ಚಿಂತೆಯಲ್ಲಿ ನಿರಾಧಾರಳಾಗಿ, ಸಮಾಧಾನ ಹೇಳುವವರಿಲ್ಲದೆ, ಹಸಿದು ಏಕೆ ಬಿದ್ದುಕೊಂಡಿರಬೇಕು ! ಸುತ್ತಲಲ್ಲಿ ಭಯಾನಕವಾದ ಹಾಳು ಸುರಿಯುತ್ತಿದೆ. ಇಲ್ಲಿ ಅದೇ ಹಳೆಯ ಮುರುಕು ಅಸಿಗಲ್ಲು, ತಂಗಳ ಬಕ್ಕರಿಯ ಕಟುಕು ತುಣುಕು, ಬಾಡಿದ ಬಸಳಿಯ ತೊಪ್ಪಲು, ಜೇಡನ ಬಲೆಗಳಿಂದಲೂ ಪರಿಗಳಿಂದಲೂ ತುಂಬಿದ ಜಂತಿ, ಗೊಂತಿ— ಅಂತೂ ಬೇಡಾದ ವಸ್ತುಗಳನ್ನೆಲ್ಲ ಬೀಸಾಡಿ ಒಗೆಯಬಹುದಾದ ಈ ಕೋಣೆಯಲ್ಲಿ ಬಿದ್ದುಕೊಂಡಿರಲು ನಾನು ಮಾಡಿದ್ದು ಅಂಥದೇನು ?

ಹೀಗೆ ನಾನು ಹೆಣ ಬಿದ್ದಂತೆ ಬಿದ್ದುಕೊಂಡಿದ್ದರೂ ಕರ್ಮಪ್ರವೃತ್ತ ಜನಸಮೂಹವನ್ನು ಸೇರಿ ಕೆಲಸ ಮಾಡುತ್ತಿರುವಾಗ ನನ್ನ ಮಹತ್ವವನ್ನು ನಾನೆಷ್ಟು ಅರಿತಿದ್ದೇನೋ ಅಷ್ಟೇ ಈಗಲೂ ನನ್ನ ಬೆಲೆಯಲ್ಲಿ ನನಗೆ ವಿಶ್ವಾಸ ವಿದೆ.

ಸಾಮಾನ್ಯವಾಗಿ ಕೆಲಸದ ಅತಿ ಜಂಜಾಟದಲ್ಲಿಯೂ ಚಿಂಗ್‌ನು ರಾತ್ರಿಯಲ್ಲಿ ಒಮ್ಮೆಯಾದರೂ ಬಂದು ಬೆಟ್ಟಿಯಾಗದೆ ಇರುತ್ತಿರಲಿಲ್ಲ. ಇಂದು ಅವನಿಗೇನಾಗಿದ್ದೀತು ? ದಿನದಂತೆ ನಿನ್ನೆ ರಾತ್ರಿಯಾದರೂ ಅವನ ಬರವಿನ ಸುಳವಿಗಾಗಿ ನನ್ನ ಕಿವಿ ಕಾದಿದ್ದವು. ಮನೆಯ ಮಾಲಿಕನ ಗಡಿಯಾಳದಲ್ಲಿ ಹನ್ನೊಂದು ಹೊಡೆದಾಗ ನನ್ನ ಕಣ್ಣುಗಳು ಹಾಗೆ ಬಾಗಿಲ ಕಡೆಗೆ ನಟ್ಟು ನಿಂತಿದ್ದವು. ಹನ್ನೊಂದಾದ ಮೇಲೆ ಇನ್ನೊಂದಾಯಿತು, ಹನ್ನೆರಡಾಯಿತು, ಒರೆಯಾಯಿತು ; ಆಮೇಲೆ ಯಥಾಪ್ರಕಾರ ಕ್ರಮವಾಗಿ ಒಂದು,—ವರೆ, ಎರಡು,—ವರೆ, ಮೂರು, ಹೀಗೆ ಬೆಳಗಾಗುವ ವರೆಗೂ ಆಯಿತು. ಎಲ್ಲ

ಸಪ್ಪಳಗಳನ್ನು ಕೇಳಿದೆ. ಅಲ್ಲಿ ಗಂಟೆ ಹೊಡೆದ ಹಾಗೆ ಇಲ್ಲಿ ನನ್ನ ಚಿಂತೆ ಆಳವಾಗುತ್ತಿತ್ತು. ಮತ್ತೆ ಬಾರದ ಮುತ್ತಿನಂತೆ— ಹೊತ್ತು ಎತ್ತೋ ಹೋಗುತ್ತಿದೆಯಲ್ಲ! ಕಾಲನ ಸಂಹಾರ ನಾನು ಮಾಡುತ್ತಿದ್ದೇನೆ, ನನ್ನ ಸಂಹಾರ ಕಾಲ.... ಎಂದು ಮುಂತಾಗಿ, ಇಂಥ ಏಕಾಂತದ ಏಕಾಗ್ರತೆ ಯಲ್ಲಿ ಬರುವ ವಿಚಾರಸರಣಿಯು ಬಂದುಹೋಯಿತು.

ಚಿಂಗ್ ಎಲ್ಲಾದರೂ ಮೋಟಾರು ಹಾಯ್ದು ಬಿದ್ದಿರಬಹುದೇ? ಇಲ್ಲವೆ, ಬಳಲಿಕೆಯಿಂದ ಬಹಳ ಬಂದಿದ್ದೀತೇ? ಇಲ್ಲ, ಹುಚ್ಚನಾಯಿ ಕಡಿದಿದ್ದೀತೇ? ಎಂದು ಇದೇ ಬಗೆಯಾದ ಸಾಮಾನ್ಯನಾಹುತಗಳ ಭೀತಿಗಳಿಂದ ನನ್ನ ಮನಸ್ಸು ಅಷ್ಟು ಅಗತ್ಯವಿರದೆ ಸಂತ್ರಸ್ತವಾಯಿತು. ಹೌದು, ಹೀಗೇ ಏನೋ ಆಗಿರಬೇಕು ಎಂದು ನಾನೆಂದುಕೊಂಡೆ. ಹಾಗೆ ಆಗುವದೇನೂ ಅಸಾಧ್ಯವಲ್ಲ ಎಂದದಕ್ಕೆ ಸರಿಯಾಗಿ ಕೆಲವು ಸಂದರ್ಭಗಳನ್ನು ಕಲ್ಪಿಸಿ ಕೊಂಡೆ. ಇಷ್ಟೆಲ್ಲಾ ಆಗಿ ನಿಜವಾಗಿಯೋ ಆಗಿರಬಹುದಾದ ಒಂದೇ ಒಂದು ಭಯಂಕರವಾದ ಸಂಭವನೀಯ ಘಟನೆಯನ್ನು ಮಾತ್ರ ಕಲ್ಪಿಸಲು ಮನಸ್ಸೇ ಬರಲಿಲ್ಲ.

ಇದೀಗ ಸೈನಿಕರೋ ಗುಪ್ತ ಸಿಪಾಯಿಗಳೋ ಇಲ್ಲಿಗೆ ಬಂದರೂ ಬರ ಬಹುದು ಎಂದೂ ಅವರ ಸ್ವಾಗತಕ್ಕೆ ಸಿದ್ಧನಾದೆ. ಈ ಸಂಶಯಾಸ್ಪದ ಸ್ಥಿತಿಯನ್ನು ಸಹಿಸುವದು ಇನ್ನು ನನ್ನಿಂದ ಒಂದಿಷ್ಟೂ ಆಗದು. ಇದೇನೀ ಭಯಂಕರ ಅನಿಶ್ಚಿತತೆ! ಪೋಲಿಸರು ಅವನನ್ನು ಹಿಡಿದುಕೊಂಡು ಹೋಗಿದ್ದರೂ ಸರಿಯೆ, ಆದರೆ ಏನಾಗಿದ್ದೀತೋ ಎಂಬೀ ಬಾವುಗನ ಭಯ ಸಾಕಾಗಿದೆ. ನನ್ನ ಉಸಿರೇ ನಿಲ್ಲುತ್ತ ಬಂತು. ಇನ್ನೊಂದು ತಾಸಾದರೂ ನಾನು ಬದುಕುವೆನೋ? ಎನಿಸಿತು. ಸುಡಲಿ, ನನಗೆ ಆಗುವದಾದರೂ ಏನಿದೆಯೋ! ಸಾಕು, ಮಣ್ಣಿನ ಮುದ್ದೆಯಂತೆ ನಿರ್ಜೀವವಾಗಿ ಬಿದ್ದುಕೊಂಡಿರುವದಕ್ಕಿಂತ ಸ್ವಚ್ಛವಾಗಿ ಜೇಲಿನಲ್ಲಿದ್ದದ್ದು ಎಷ್ಟೋ ಮೇಲು ಎನಿಸಿತು....

* * * *

—ಆದಾದ ಮೇಲೆ

'ಲೀ' ಅಣ್ಣಾ ಇಲ್ಲಿಗೆ ಬಂದಿದ್ದು, ಚಿಂಗ್‌ನ ಸುದ್ದಿಯನ್ನು ಸಂಗಡ ತಂದಿದ್ದಾನೆ. ನಾನು ಹೆದರಿದಂತೆಯೇ ಆಯಿತು! ಅವನು ಈ ಸುದ್ದಿ

ಯನ್ನು ಳುವಾಗ ಅವನ ಹುಬ್ಬು ಗಂಟಿಕ್ಕಿದ್ದವು, ಹರವಾದ ಹಣೆ ಇನ್ನೂ ಹರವಾಗಿ . ಅಂತೆಯೆ ಅವನಾಡುವ ಮೊದಲೇ ಅವನು ಹೇಳುವ ಮಾತನ್ನು ನಾನು ಕೇಳದೇ ತಿಳಿದುಕೊಂಡೆ. ಅವನು ಒಳಗೆ ಬಂದು ತಲೆ ಹಾಕಿ, ಸ್ವಾಗತಿಸಿ, ಸಹಜವಾಗಿ 'ಏನು?' ಎಂದನು. "ಇದ್ದದ್ದು ಹೇಳು." ಎಂದೆ.

"ಚಿಂಗ್‌ನನ್ನು ಸೆರೆಹಿಡಿದರು" ಎಂದು ಅವನು ಹೇಳಿದನು.

* * * *

—ಮೇ ೨೭

ನಾನೇಕೆ ಸಾಯಲಿ? ಸಾಯುವದಿಲ್ಲ. ನಿನ್ನೆ ರಾತ್ರಿಯೇನೋ ಹಾಗನಿಸಿತ್ತು. 'ಕುಂಗ್-ಯೂ'ದಲ್ಲಿ ನಾನು ಬಳಲಿ ಬಿದ್ದಾಗ, ಒಂದು ಅನ್ನದ ಪಿಂಡವನ್ನು ನನ್ನನ್ನುಳಿಸಲು ನೀಡುವವರಿಲ್ಲದಾಗ ಅದೇ ಸುಖವಾದ ಸುಲಭ ಹಾದಿ ಎಂದುಕೊಂಡಿದ್ದೆ. ಈಗ ನಾನು ಸಾಯುವದಿಲ್ಲ. 'ಲೀ' ಅಣ್ಣಾ, ನನಗೆ ಸ್ವಲ್ಪ ಧೈರ್ಯ ಹೇಳಿದ್ದಾನೆ. ನಾನು ಅವನ ಮನೆಗೆ ಹೋಗಬೇಕಂತೆ. ಅಲ್ಲಿ ಅವರ ಹೆಂಡತಿ ಡಾಕ್ಟರಿತಿ, ಸಹಾಯ ಮಾಡುತ್ತಾಳೆ. ಒಳ್ಳೇ ಸುದ್ದಿ! ಚಿಂಗ್‌ನ ಸ್ವಾತಂತ್ರ್ಯವಂತೂ ಹರಣವಾಗಿರುವದರಿಂದ ನಾನು ಬದುಕುವದು ಈಗ ಬಹಳ ಅಗತ್ಯವಾಗಿದೆ.

ತನ್ನ ಮನೆಯತ್ತ ಹೋಗಲು 'ಲೀ' ನನಗೆ ನೆರವಾದ. ಅವರಿಗೆ ಇರುವದು ಎರಡೇ ಎರಡು ಕೋಣೆ. ಒಬ್ಬ ಕೋರಿಯಾದ ಮಾಲಿಕನಿಂದ ಅವನ್ನು ಬಾಡಿಗೆ ಹಿಡಿದಿದ್ದಾರೆ. ಅವುಗಳಲ್ಲೊಂದರಲ್ಲಿ ಹಾಸಿದ ಹಾಸಿಗೆಯಲ್ಲಿ ಈಗ ನಾನು ಬಿದ್ದುಕೊಂಡಿದ್ದೇನೆ. ಮಾಲಿಕ ಒಳ್ಳೆ ಅಂತಃಕರಣದ ಮನುಷ್ಯ. ಮನೆಯ ಇನ್ನೊಂದು ಭಾಗದಲ್ಲಿ ತಾನಿರುತ್ತಾನೆ. 'ಲೀ' ಅಣ್ಣನ ಕೋರಿಯಾದ ಹೆಂಡತಿಯು ಕಾಣಲಿಕ್ಕೆ ಹೇಗೋ ಹೇಗೋ ಇದ್ದಾಳೆ. ಹಳದೀ ಮುಖ. ಮೋರೆಯೆಲ್ಲ ಚಿಕ್ಕಿಚಿಕ್ಕಿ. ಕಣ್ಣು ಚಿಕ್ಕವು; ಅವುಗಳ ಬಣ್ಣ ಕಂದಿ-ನರೆ ತುಟಿ ದಪ್ಪದಪ್ಪ. ಗಂಡನೂ, ಎತ್ತರ ಆಳು. ಉದ್ದ ಮುಖ. ಉದ್ದ ಮೂಗು. ಸೀರ ತುಟಿ. ಮೈ ಹಾಳತ. ಹೆಂಡತಿ ಮಾತ್ರ ಬಹಳ ದಪ್ಪನಾಗಿದ್ದಾಳೆ. ದಂಪತಿಗಳಲ್ಲಿ ವಿಪರೀತ ಭೇದ! ಆಕೆ

ಚೀನಕ್ಕೆ ಬಂದು ಬಹಳ ದಿನಗಳಾಗಿಲ್ಲ. ತನ್ನ ಮನಸ್ಸಿನ ಮಾತುಗಳನ್ನೇ ಏನೂ ಹೇಳಬೇಕಾದರೂ ಅತ್ತಿತ್ತ ಶಬ್ದಗಳಿಗಾಗಿ ಗೆಬರಾಡಬೇಕಾಗುವದು. ಇಷ್ಟಾಗಿ ಅವು ಸಿಕ್ಕಲಿಲ್ಲೆಂದರೆ ಒಂದು ದೇಶಾವರಿ ನಗೆ ನಕ್ಕು ಆ ಕೊರತೆ ಯನ್ನು ತುಂಬಿಬಿಡುವಳು.

ನಾನು ಆಕೆಗೆ ನನಗೆ ಬೇಕಾದುದನ್ನು ಹೇಳಿದಾಗ ಆಕೆಯ ಅಂತಃ ಕರಣ ಅಲ್ಲೋಲಕಲ್ಲೋಲವಾಯಿತು. ಮೊದಲು ಆಕೆಗೆ ಮಾತೇ ಬರ ಲಿಲ್ಲ, ' ಬೇಡ, ತಾಯಿ ನನ್ನ ಧರ್ಮಕ್ಕೆ, ಹಾಗೆ ಬೇಡ ' ಎನ್ನುವವರಂತೆ ತಲೆ ಕೊಡಹೇ ಕೊಡಹಿದಳು ಆಕೆಯ ಮುಖ ಇಷ್ಟಾಗಿತ್ತು. ಅದರಲ್ಲಿ ಬೇರೆ ಕಣ್ಣೀರು ದಳದಳನೆ ತಳಿ ಹೊಡೆದಂತೆ ಸುರಿಯುತ್ತಿತ್ತು. ಆಕೆಯು ಆವೇಶ ಬಂದಂತೆ ಒಂದೇ ಹಾರಿಕೆಯಿಂದ ನನ್ನ ಹಾಸಿಗೆಗೆ ಬಂದು, ತನ್ನ ಉಬ್ಬಿದೆದೆಯ ತಕ್ಕೆಯಲ್ಲಿ ಬಿಗಿತಾಗಿ ಹಿಡಿದು ನನ್ನನ್ನೇ ಅಲ್ಲಾಡಿಸಿ ತಾನೇ ಬಿಕ್ಕಿಬಿಕ್ಕಿ ಅಳಹತ್ತಿದಳು. " ಬೇಡ, ಬೇಡ, ಬೇಡ ! ನಾನೆಂದೂ ಮಾಡಿಸಿ ಕೊಡಲಾರೆ. " ಎಂದು ಸನ್ನಿ ಕೂಡಿದವರಂತೆ ಆಕೆ ಕೂಗಿದಳು. ಆಕೆಯ ಮನಸ್ಸು ಬಹಳೆ ಭಯಗೊಂಡಿತ್ತೆಂಬುದೇನೋ ಮೇಲೆಯೆ ಕಾಣುತ್ತಿತ್ತು. ನನಗೆ ಮಾತ್ರ ಇದನ್ನು ಕಂಡು ಬಹಳ ಆಶ್ಚರ್ಯವಾಯಿತು.

ಇದನ್ನೆಲ್ಲ ಕಂಡು ' ಲೀ ' ಅಣ್ಣನು ತನ್ನ ಹೆಂಡತಿಯನ್ನು ಕೋರಿ ಯನ್ ಮಾತಿನಲ್ಲಿ ಸಮಾಧಾನಪಡಿಸಿ, ಉತ್ತೇಜನ ಕೊಟ್ಟನು. ನನ ಗೇನೊ ಅದು ತಿಳಿಯಲಿಲ್ಲ. ಆಕೆಯೇನೊ ಒಬ್ಬ ಪರದೇಶಿ ಹುಡುಗಿಯು ಅಳುವಂತೆ ಕರುಣಾಮಯವಾಗಿ ಬಿಕ್ಕೇಬಿಕ್ಕುತ್ತಿದ್ದಳು. ಕೆಲ ಹೊತ್ತಿನ ಮೇಲೆ ಗಂಡ ಮನವೊಲಿಸಿದ ಹಾಗೆ ಆಕೆಯು ಶಾಂತಳಾಗಿ ಕೊನೆಗೊಮ್ಮೆ ನನಗೆ ನೆರವಾಗಲು ಒಪ್ಪಿಕೊಂಡಳು.

ಇವರ ಕೋಣೆಗಳಲ್ಲೂ ಒಂದೇ ಒಂದು ಹಾಸಿಗೆಯಿತ್ತು. ನಿನ್ನೆ ರಾತ್ರಿ ' ಲೀ ' ಮತ್ತು ಅವನ ಹೆಂಡತಿ ಇಬ್ಬರೂ ಸ್ಟೂಲುಗಳ ಮೇಲೆ ಮಲಗಿಕೊಳ್ಳಬೇಕಾಯಿತು. ಸಾಯಂಕಾಲ ' ಲೀ 'ಯ ಹೆಂಡತಿಯು ತನ್ನ ಜೀವನದ ಬಗ್ಗೆ ಕೆಲ ಮಾತು ಹೇಳಿದಳು.

ಆಕೆಗೆ ಈಗ ೩೯ ವಯಸ್ಸು. ಆದರೆ ಮಕ್ಕಳಿಲ್ಲ. ಒಬ್ಬ ಮಗ

ಬೇಕು ಎಂದು ಆಕೆಯ ಸಂತತ ಹಂಬಲ. ಆದರೆ ಆಶೆ ಸಫಲವಾಗು ವಾಗುವ ಹೊತ್ತಿಗೆ ಕೈಗೆ ಬಂದ ಹಣ್ಣು ಬಾಯಿಗೆ ಬರುತ್ತಿರಲಿಲ್ಲ.

ಲೀಯ ಹೆಂಡತಿಯ ಮನೆತನ ಕ್ರಿಶ್ಚನ್ನರದು. ಆಕೆ ಈ ಕ್ರಾಂತಿ ಕಾರಕ ಗಂಡನನ್ನು ಮದುವೆಯಾದಾಗ ಅವರು ಬ್ರಹ್ಮಾಂಡ ಸಿಟ್ಟಿಗೆದ್ದರು. ಆಕೆ ತಮ್ಮ ಮನೆಯವಳೇ ಅಲ್ಲ ಎಂದರು. ಇಷ್ಟು ಹಣ ಖರ್ಚುಮಾಡಿ ಇಷ್ಟು ಕಷ್ಟಪಟ್ಟು ಡಾಕ್ಟರ ಪದವಿಯನ್ನು ದೊರಕಿಸಿಕೊಟ್ಟರೆ ಈ ಹುಡುಗಿ ಈ ಹಾಳು ಕೆಲಸಕ್ಕಾಗಿ ತನ್ನ ಜೀವವನ್ನೇ ಮಾರಿಕೊಂಡಳಲ್ಲ ಎಂದು ಅವರು ವಿಶೇಷವಾಗಿ ತ್ರಸ್ತರಾದರು. ಇನ್ನು ಆಕೆಗೆ ಒಂದು ಕವಡಿ ಕಾಸು ಸಹಿತ ಕೊಡುವಂತಿಲ್ಲ ಎಂದು ನಿರ್ಧರಿಸಿದರು.

ಲೀ ಅಣ್ಣನಿಗೆ ಯಾವಾಗಲೂ ಕ್ರಾಂತಿಕಾರಕ ಚಳವಳಿಯ ಕೆಲಸವೇ ಮೈತುಂಬ ಇದ್ದುದರಿಂದ ಹಣ ಅವನ ಹತ್ತಿರ ಇರುತ್ತಲೇ ಇರಲಿಲ್ಲ. ತನ್ನ ಹೆಂಡತಿಯನ್ನು ಒಬ್ಬೊಂಟಿಯಾಗಿ ಬಿಟ್ಟು ಎಷ್ಟೋ ವಾರ, ಎಷ್ಟೋ ತಿಂಗಳು ಅವನಿಗೆ ಎಲ್ಲಿಲ್ಲೋ ಗುಪ್ತನಾಗಿರಬೇಕಾಗುತ್ತಿತ್ತು. ಈಕೆ ಬಸಿರು ಇದ್ದಿದ್ದ ಹೊತ್ತಿಗೆ ಅವನು ಏನಾದರೂ ಸಂಕಟದಲ್ಲಿರುತ್ತಿದ್ದನು. ಇದರಿಂದ ಈಕೆಯ ಎದೆಗೆ ದಕ್ಕೆಯಾಗಿ ಚಿಂತೆ ಸಂತಾಪಗಳಿಂದ, ಹತ್ತಿರ ಆರೈಕೆಗೆ ಸಾಕಷ್ಟು ಹಣವಿಲ್ಲದ್ದರಿಂದ ಕಷ್ಟಪಡಬೇಕಾಗುತ್ತಿತ್ತು. ಏಳು ಸಲ ಆಕೆ ಹಡೆದಳು. ಏಳೂ ಸಲ ಕೂಸು ಮೃತವಾಗಿಯೆ ಹುಟ್ಟಿತು.

ಏಳು ಸಲ! ಇಂಥ ಈ ಭಯಂಕರ ದಿವ್ಯದೊಳಗಿಂದ ಒಬ್ಬ ಹೆಣ್ಣು ಹೆಂಗುಸು ಏಳು ಸಲ ಹಾಯ್ದು ಹೋಗುವದೆಂದರೇನು! ಸಾಧ್ಯವೇ? ಕಾಂತೆಯರು ಮತ್ತು ಕ್ರಾಂತಿ ಈ ಜಗದ ಇತಿಹಾಸದಲ್ಲಿ, ಹಾಡಿ ಹೇಳಲಾಗದೆ ಇದ್ದ ಎಂಥೆಂಥ ವೀರ ಕರುಣಾಜನಕ ಪ್ರಸಂಗಗಳ ಮಹಾಕಾವ್ಯಗಳು ಮೌನದಲ್ಲಿಯೆ ಅಡಿಗಿಹೋಗಿವೆಯಲ್ಲ!

ಲೀಯ ಹೆಂಡತಿಯು ಎಂಟನೆಯ ಸಲ ಬಸಿರಿದ್ದಾಗ ಅವನು ತಲೆ ಕೆಟ್ಟು ಹೋಗಿ ಆದದ್ದಾಗಲಿ ಎಂದು, ಅವನು ಕೆಲ ದಿನ ರಜೆ ತಕ್ಕೊಂಡು ಯಾರಲ್ಲಿಯೋ ಸ್ವಲ್ಪ ಹಣ ಕೈಗಡ ತಂದು ಸಮುದ್ರದ ದಂಡೆಯ ಒಂದು ಆರೋಗ್ಯದ ಸ್ಥಳಕ್ಕೆ ತನ್ನ ಹೆಂಡತಿಯನ್ನು ಕರೆದೊಯ್ದನು. ಆಕೆಗೆ ಬೇಕಾದ ಸಣ್ಣಪುಟ್ಟ ಸೌಕರ್ಯಗಳನ್ನೂ ಸುಖ-ಸಾಧನಗಳನ್ನೂ ಒದಗಿಸಿ

ಕೊಟ್ಟು ಅವಳ ಮನಸ್ಸಿಗೆ ಏನೂ ಧಕ್ಕೆ ತಗಲದಂತೆ ಆಕೆಯನ್ನು ನೋಡಿಕೊಂಡನು. ಇದರ ಪರಿಣಾಮವೊ ಏನೋ, ಕೊನೆಗೊಮ್ಮೆ ಆಕೆ ಗಂಡು ಮಗುವನ್ನು ಹೆತ್ತಳು. ಕೂಸು ಬಹಳ ಚೆಲುವಾಗಿತ್ತು. ಒಳ್ಳೇ ಆರೋಗ್ಯ. ಏಳೇ ತಿಂಗಳಲ್ಲಿ ಏನೋ ತೊದಲು ತೊದಲಾಡಿ, ಮುಖ ಹಾಗೆ ಹೀಗೆ ಮಾಡಿ ತನ್ನ ತಂದೆ-ತಾಯಿಗಳನ್ನು ಮೋಹಿಸಿ ಅವರಿಗೆ ಮುದ್ದಾಯಿತು. ಇಂಥ ಅಮೌಲ್ಯ ರತ್ನ ಪಡೆದ ತಂದೆ-ತಾಯಿಗೆ ಸ್ವರ್ಗ ನಾಲ್ಕು ಬಟ್ಟು ತೋರಿತು, ಎಂದು ಬೇರೆ ಹೇಳಬೇಕೆ ?

ಆದರೆ ಅದೇ ಹೊತ್ತಿಗೆ ಲೀ ಅಣ್ಣನನ್ನು ಅವನ ಹೆಂಡತಿಯನ್ನು ಸೆರೆ ಹಿಡಿದರಂತೆ. ಅವರೊಡನೆ ಅವರ ಹಸುಗೂಸೂ ಸೇರಬೇಕಾಯಿತು ! ಅಲ್ಲಿಯ ಹತ್ತು ದಿನದ ವಾಸಕ್ಕೆ ಎಂಥೆಂಥ ಆರೋಗ್ಯವಂತ ಮಕ್ಕಳೂ ಸಾಯ ಬಹುದು: ಇವರ ಕೂಸೂ ಹೋಯಿತು !

ಪಾಪ ! ಆ ಪ್ರಾಣಿ ತನ್ನ ಕಥೆಯನ್ನು ಹೇಳುವಾಗ ಒಂದೇಸವನೆ ಅತ್ತಳು. ಆಕೆಯ ಗಂಡ ಆಕೆಯ ಬದಿಗೆ ಕೂತು ಬೆನ್ನಮೇಲೆ ಕೈಯಾಡಿಸಿ, ತಲೆ ನೇವರಿಸಿ ಬಹಳ ಅಂತಃಕರಣದಿಂದ ಸಮಾಧಾನ ಪಡಿಸುತ್ತಿದ್ದ. ಇಷ್ಟು ದಿವಸ ಆಕೆಯ ಎದೆಯಲ್ಲಿ ಹುದುಗಿಸಿಟ್ಟಿದ್ದ ಹೊತ್ತುವ ಅಗ್ಗಿಷ್ಟಿಗೆಯಂಥ ಈ ದುಃಖ ಒಮ್ಮೆ ಗಾಳಿ ಕಂಡು ಉರಿದು ಆರಿಹೋಯಿತಲ್ಲ, ಅಷ್ಟೇ ಸಾಕು ಎಂದು ಆಕೆಯ ಗಂಡನಿಗೆ ಒಂದು ಬಗೆಯ ಸಮಾಧಾನವೇ ಆಯಿತು. ಇದನ್ನೆಲ್ಲ ಕೇಳುವಾಗ ಅವನ ಅಂತಃಕರಣಕ್ಕೇನೂ ಕಡಿಮೆ ಕಷ್ಟ ಆಗುತ್ತಿರ ಲಿಲ್ಲ. ಆದರೆ ಅವನು ತನ್ನ ಹೆಂಡತಿಯು ತನ್ನ ದುಃಖ ಹೇಳಿಕೊಳ್ಳುವಾಗ ಅಲ್ಲಲ್ಲಿ ಸಂದರ್ಭ ಮರೆತರೆ, ಬಾಯಿಗೆ ಚೀಸಿ ಮಾತು ಬರದಿದ್ದರೆ ಅದನ್ನು ಹೇಳಿಕೊಡುತ್ತಿದ್ದ.

ಇಂದೇ ಬೆಳಿಗ್ಗೆ ಲೀ ಡಾಕ್ಟರಿತಿಯು ಕೊಟ್ಟ ದೊಡ್ಡೊಂದು ಗುಳಿಗೆ ಯನ್ನು ನುಂಗಿದೆ. ಇಂಥ ಒಂದು ಗುಳಿಗೆ ತಕ್ಕೊಂಡರೆ ಒಂದು ತಿಂಗಳ ಗರ್ಭ ಬೇಕಾದ ಹಾಗೆ ಪಾತವಾಗಿ ಬಿಡುವದಂತೆ. ಮೂರು ತಕ್ಕೊಂಡರೆ ಮೂರು ತಿಂಗಳದ್ದನ್ನು ಹೊರನೂಡಿಬಿಡುವದು. ಈ ಔಷಧ ತಕ್ಕೊಂಡ ಮೂರು ದಿವಸದ ಮೇಲೆ ಎಲ್ಲ ಮತ್ತೆ ಸರಿಹೋಗಬಹುದಂತೆ.

* * * *

ಮಧ್ಯಾಹ್ನ

ಮೇ ತಿಂಗಳ ಈ ಸುಂಟರಗಾಳಿ, ಗೋಬಿ ಅರಣ್ಯದೊಳಗಿನ ರಾಶಿ ಗಟ್ಟಲೆ ಮಳಲನ್ನು ಹೊತ್ತು ತಂದು ಬೀಸಾಡುವಾಗ ನಿಮ್ಮ ಕಣ್ಣು ಮೂಗು ಗಂಟಲು ಎಲ್ಲ ಹುರಿದಂತಾಗುತ್ತವೆ. ಯಾರಿಗೂ ಈ ಅನುಭವ ಬಂದಾಗ ಒಂದಿಷ್ಟು ಅಸ್ವಸ್ಥವೆನಿಸುವದು. ಈಗೊ ಹೊರಗೆ ಈ ಬಿರುಗಾಳಿ ದೆವ್ವ ನಂತೆ ಕೂಗುತ್ತಿದೆ. ಹಳದೀ ಉಸುಕು-ಹುಡಿ ಬೀಸಿ ಬಂದಂತೆ ಬಂದು ಎಲ್ಲ ಪದಾರ್ಥಗಳನ್ನೂ ಮುಚ್ಚುತ್ತಿದೆ. ನನಗೂ ಇದೇ ಹೊತ್ತಿಗೆ ನನ್ನ ಭಾವನೆಗಳನ್ನು ಒಣ್ಣಿಸುವಾಗ ಒಂದು ರುದ್ರವಾದ ಆನಂದವಾಗುತ್ತಿದೆ. ಬೇಕಾದರೆ ಇದನ್ನು ಮುಂದೆ ಎಂದಾದರೂ ಓದಿಕೊಂಡರೆ ಪ್ರಯೋಜನ ವಾದೀತು............

ಅಂತು, ವೈಯ ಸಂದು ಸಂದುಗಳಲ್ಲಿ ನೂರಾರು ಹೇಸಿ ಹುಳಗಳು ಹೇದಾಡುತ್ತಿರುವ ಹಾಗೆ ಈಗ ನನಗೆ ಅನಿಸುತ್ತಿದೆ. ಈ ಹುಳಗಳೆಲ್ಲ ಹಾಗೂ ಹೀಗೂ ಹೊರಬಿದ್ದೇಬಿಟ್ಟರೆ ನನ್ನ ಜೀವರಕ್ತದ ಬಣ್ಣವನ್ನೇ ಬಸಿದುಕೊಂಡು ಬರಬಹುದಲ್ಲ ಎಂದೂ ತೋರುವದು! ಅಬ್ಬಾ! ಥೂ! ಸಾಕು!

* * * *

--ಽದಾನ ವೇಳೆ

ಚಿಂಗ್‌ನಿಗೆ ಚಿತ್ರಹಿಂಸೆ ಕೊಡುತ್ತಿರುವದನ್ನು ಇದೀಗ ನಾನು ಕಂಡೆ. ಕೆಂಡದಂಥ ಕೆಂಗಣ್ಣುಳ್ಳ ಒಬ್ಬ ಮುದುಕನು ತನ್ನ ಕಿಡಿ ಕಾರುವ ಕಣ್ಣಿನಿಂದ ಅವನನ್ನು ನೋಡುತ್ತಿದ್ದ. ಮುದುಕನ ಕೈಯಲ್ಲಿ ಒಂದು ದೊಡ್ಡ ಕೊಳಗ, ಒಂದು ಸಣ್ಣ ಸವಟು ಇತ್ತು. ಇವನು ಚಿಂಗ್‌ನ ಮೂಗಿನಲ್ಲಿ ಮೆಣಸಿನ ಕಷಾಯವನ್ನು ಸವಟಿನಿಂದ ಹಣಿಸುತ್ತಿದ್ದ. ಹೀಗೆ ಮಾಡುವಾಗ ಈ ಕೆಂಗಣ್ಣಿನ ಮುದಿಹದ್ದು ಕಾನ್‌ಫೂಸಿಯಸ್ಸನ ಸುಭಾಷಿತವನ್ನು ಬಾಯಿಂದ ಹೇಳುತ್ತಿತ್ತು. 'ಮಾನವ ಜಾತಿಯ ಉದ್ಧಾರಕ್ಕಾಗಿ ನಡೆಸಿದ ಕೃತ್ಯಗಳಲ್ಲಿ ಅತಿ ಸಾರಂಭದಿಂದ ನಡೆದವುಗಳೇ ತೀರ ಬೆಲೆ ಇಲ್ಲದವುಗಳಾಗಿರುತ್ತವೆ.' ಏನು ವಚನ!

ಚಿಂಗ್‌ನು ಬಿಡಿಸಿಕೊಳ್ಳಲು ಒದ್ದಾಡುತ್ತಿದ್ದ. ಎದೆಯ ರಕ್ತ ಅಟ್ಟಿಸಿ ಹೋಗುವಂತೆ 'ಹುಯ್ಯೋ' ಎಂದು ಕೂಗಿಕೊಳ್ಳುತ್ತಿದ್ದ. ಅವನು ತನ್ನ

ಮುಖ ಒಂದು ಕಡೆಗೆ ತಿರುಗಿಸಲು ಹವಣಿಸಿದ. ಆದರೆ ಅವನನ್ನು ಬಿಗಿದ ಹುರಿಹಗ್ಗದ ಕೋರೆತದಿಂದ ಅವನ ತುಟಿ ಮಾತ್ರ ಹರಿದುಹೋದವು. ನೀರು ಅವನ ಮೂಗಿನಿಂದ ಬಾಯಿಂದ ಕಣ್ಣಿನಿಂದ ಹರಿಯುತ್ತಿತ್ತು. ಹತ್ತು ಸಲ ಅವನಿಗೆ ಮೂರ್ಛೆ ಬಂತು. ಹಿಂಸೆ ಕೊಟ್ಟ ಸಲಕ್ಕೊಮ್ಮೆ ಅವನಿಗೆ ಎಚ್ಚರಾಗುತ್ತಿತ್ತು. ಎಚ್ಚರಾದಾದ ಕಾಲಕ್ಕೊಮ್ಮೆ ಅವನ ಮೈಯಲ್ಲಿದ್ದ ನೀರೆಲ್ಲ ಬಸಿದು ಹೋಗುತ್ತಿತ್ತು.

ಹೀಗೆ ಮೂಗಿನಲ್ಲಿ ಸುರಿದದ್ದು ಒಂದಲ್ಲ, ಎರಡಲ್ಲ ನಾಲ್ವತ್ತು ಕೊಳಗ ಮೆಣಸಿನ ಕಷಾಯ !

ಆಗಾಗ ಹಿಂಸೆ ನಿಲ್ಲಿಸಿದಾಗ ಚಿಂಗ್‌ನ ಕೂಡ ಪ್ರಶ್ನೋತ್ತರ ನಡೆಯುತ್ತಿದ್ದವು. ಇದೆಲ್ಲ ನಡೆದಾಗ ನಿಸ್ಸಹಾಯಳಾಗಿ, ಅವನ ಹಿಂಸೆಯನ್ನು ಕಣ್ಣಿಲೆ ನೋಡುತ್ತ ಅವನ ಬದಿಗೇ ನಿಂತಿದ್ದೆ. ಅದಾಗಲೆ ನನ್ನನ್ನೂ ಚಿಂಗ್‌ನಿದಿರು ದಬ್ಬಿ ಬರಿ ಬೆನ್ನಮೇಲೆ ಚಬಕದಿಂದ ಸೆಳೆದಿದ್ದರು. 'ಅವನನ್ನು ಮಾತನಾಡಿಸಿ ಅವನ ವಿಳಾಸ ಹೇಳಿಸು' ಎಂದು ನನಗೆ ಆಜ್ಞೆ ಮಾಡಿದ್ದರು. 'ಹೌದು, ಕೆಂಡದಿಂದ ಈಗಾಗಲೆ ನನ್ನ ತುಟಿಗಳನ್ನೂ ಸುಟ್ಟಿದ್ದರು ಕಾಣುತ್ತದೆ. ಯಾಕಂದರೆ ನಾನು ಮಾತನಾಡಲು ಒಪ್ಪಿರಲಿಲ್ಲ.

ಚಿಂಗ್‌ನಿಗೆ ನನ್ನ ಗುರುತು ಹತ್ತಿರಲಿಲ್ಲ; ಹೌದು, ಅವನ ಕಣ್ಣೇ ಕಾಣಿಸುತ್ತಿದ್ದಿಲ್ಲವೋ ಏನೋ! ಅವನ ಮುಖವೆಲ್ಲ ಕೆಂಪು ನೀಲಿ ಹಸಿರುಗಟ್ಟಿ ಗಂಟು ಗಂಟಾಗಿತ್ತು. ಕೂದಲಕ್ಕೆ ನೆತ್ತರ ಮೆತ್ತಿಕೊಂಡಿತ್ತು. ಅವನು ಮೂಕನಾಗಿ ನನ್ನನ್ನು ನಿಟ್ಟಿಸಿದ; ಕಣ್ಣಿನಲ್ಲಿ ಮಾತ್ರ ಅರಿವಿನ ಕಳೆಯಿರಲಿಲ್ಲ.

ನನ್ನನ್ನೂ ಇವರು ಬಂಧಿಸಿಬಿಟ್ಟಿರುವರಲ್ಲ! ಎಂದ ಮೇಲೆ ಚಿಂಗ್‌ನನ್ನು ಏತಕ್ಕಾಗಿ ಕಾಡುತ್ತಿರಬಹುದು? ಅವರಿಗೆ ಬೇಕಾದ ಇನ್ನೊಂದು ವಿಳಾಸವೇನಾದರೂ ಅವನಿಗೆ ಗೊತ್ತಿತ್ತೋ? ಅವನ ಮೋರೆ ಮೊಸಡೆಯನ್ನೆಲ್ಲ ಚಿತ್ರಹಿಂಸೆಯಿಂದ ಪಲ್ಲಟಿಸಿ ಮತ್ತೆ ಮೇಲೆ ಒಂದು ಪಶುವಿನಂತೆ ಇವನನ್ನೇಕೆ ಕಾಡುತ್ತಿರಬಹುದು? 'ಒಪ್ಪಿಕೊಂಡೆ, ನಿಮಗೆ ಶರಣಾಗತನಾದೆ' ಎಂದು ಅವನ ಬಾಯಿಂದೆನಿಸಿ ಅವನ ಜೀವನದ ಕೆಚ್ಚನ್ನೇ ಹಿಂಡಿ ಹಿಪ್ಪಿ ಮಾಡಬೇಕೆಂದು ಅವರು ಆಶಿಸಿದ್ದರೋ? ನನಗೆ ಇದೇನೂ ತಿಳಿಯ

ಲಿಲ್ಲ. ಚೀರಬೇಕು ಎನಿಸಿತು. ಹಿಂಸಕರು ನನ್ನ ಕಡೆಗೇ ಬಂದರು. ನನ್ನ ವೈ ಬಟ್ಟೆಯನ್ನು ಹರಿದರು. ನನ್ನ ಬೆನ್ನು ಎದೆಗಳ ಮೇಲೆ ಚಿಂಗ್‌ನೆದುರು ಚಬಕದಿಂದ ಸೆಳೆಯಲು ಸಿದ್ಧರಾದರು. ಆಗ ನಾನು ಚೀರಿಬಿಟ್ಟೆ.

ಕಣ್ಣು ತೆರೆದು ನೋಡಿದೆ, ಲೀ ಹೆಂಡತಿಯು ತನ್ನ ಬಾಹುಗಳಲ್ಲಿ ನನ್ನನ್ನು ಅವಚಿ ಹಿಡಿದಿದ್ದಳು. ಆಕೆ ತನ್ನ ಚಿಪ್‌ಗಣ್ಣುಗಳನ್ನು ನನ್ನ ಕಣ್ಣಿನ ಆದಷ್ಟು ಹತ್ತಿರ ತಂದು ಭಯವಿಸ್ಮಯಗಳಿಂದ ತನ್ನ ಕಣ್ಣು ಎಷ್ಟಗಲಾಗು ವದೋ ಅಷ್ಟು ಹಿಗ್ಗಿಸಿ ನನ್ನನ್ನು ನೋಡಿ " ಏನಾಯಿತು ? ಅದೇನದು ? " ಎಂದು ಕೇಳಿದಳು. ನಾನು ಕನಸಿನಲ್ಲಿ ಕಂಡ ಚಿತ್ರಹಿಂಸೆಯ ಪ್ರಕಾರವು ' ವಾಯ್....ಪಿ—' ಇವರಿಗೆ ಕೊಟ್ಟ ಹಿಂಸೆಯಂತೆಯೆ ತದ್ರೂಪವಾಗಿತ್ತು. ಅದಿರಲಿ, ಆದರೆ ಚಿಂಗ್‌ನೇಕೆ ತನ್ನ ವಿಳಾಸ ಕೊಡಲು ಒಪ್ಪಿಕೊಳ್ಳುತ್ತಿದ್ದಿಲ್ಲ? ಅದರರ್ಥವೇನು ? ಬಹಳ ಮಾಡಿ ನಾನಿನ್ನೂ ' ಕುಂಗ್-ಯೂ 'ವಿನಲ್ಲಿಯೇ ನಿಸ್ಸಹಾಯಳಾಗಿ ಇದ್ದೇನೆ; ಚಿತ್ರಹಿಂಸಕರು ಬಂದು ಚಿಂಗ್‌ನ ವಿಳಾಸ ಕೊಡಲು ನನ್ನನ್ನು ಭಯಾನಕವಾಗಿ ಪೀಡಿಸುತ್ತಿದ್ದಾರೆ. ಹೀಗೆ ಚಿಂಗ್‌ನಿಗೆ ಚಿಂತೆಯಾಗಿರಬಹುದಲ್ಲ ಎಂಬ ನನ್ನ ಚಿಂತೆಯೇ ಕನಸಿನ ಕಂತೆಯಾಗಿರ ಬೇಕು.

*     *     *     *     *

— ಮೇ ೨೮ ಕಾಲ್ಗಾಳಿ.

ಅದೆಂಥ ಗಾಳಿ !

ಗಾಳಿಯ ಭರ ಏರಿದಂತೆ ನನ್ನ ಜ್ವರ ಏರುತ್ತಿವೆ. ಗಾಳಿ ನಿಂತರೆ ಚಳಿ ಯಾಗುತ್ತಿದೆ. ಕಿಡಿಕಿಗಳ ಕಾಗದದ ಹೊದ್ದಿಕೆಗಳೆಲ್ಲ ಬಿರುಗಾಳಿಯಿಂದ ಬಿರಿತುಹೋಗಿವೆ. ಗಾಳಿಯೊ ಬೇನೆ ತಿನ್ನುತ್ತ ಸಂಕಟಪಡುವ ಹೆಣ್ಣಿನಂತೆ ಕುಯ್ಯೋ ಎಂದು ಕೂಗುತ್ತಿದೆ. ಗಾಳಿ ತನ್ನ ಹರಕು-ಪರಕು ಮುಖವನ್ನು ಕಿಡಕಿಯೊಳಗಿಂದ ಇಣಿಕುತ್ತಿದೆ; ನಾನೂ ಸನ್ನಿಯೇರಿ ಹಾಗೇ ಬಿದ್ದಿದ್ದೇನೆ.

ನನಗೆ ಜ್ವರ ಬಂದಿದ್ದರಿಂದ ಲೀ ಡಾಕ್ಟರಿತಿಯು ಇಂದು ಇನ್ನೊಂದು ಗುಳಿಗೆಯನ್ನು ಕೊಡಿವದೆಲ್ಲೆಂದಳು. ' ಅಯ್ಯೋ ಹಾಗೆ ಮಾಡಬೇಡಿ ' ಎಂದೆ. ಒತ್ತಾಯಪಡಿಸಿದೆ. ' ಪ್ರಾರಂಭವಾಗಿದ್ದು ಒಮ್ಮೆ ಬೇಗನೆ ಮುಗಿದು

ಹೋಗಲಿ ' ಎಂದೆ. ನನ್ನ ಕೆಲಸ, ಚಿಂಗ್‌ನ ಕೆಲಸ, ಚಳವಳಿಯಲ್ಲಿ ನಡಿಸಲು ನಾನು ಅತ್ಯಾತುರಳಾಗಿದ್ದೆ. ಇಷ್ಟಲ್ಲದೆ ಗರ್ಭಪಾತದ ಒಂದು ಕ್ಷುಲ್ಲಕ ಕೆಲಸಕ್ಕಾಗಿ ಅವಶ್ಯಕತ ಮೀರಿ ಲೀ ಅಣ್ಣನ ಹೆಚ್ಚು ಹಣವಾಗಲಿ ದುಡಿತ ವಾಗಲಿ ವೆಚ್ಚವಾಗಬಾರದು.

ಮೊದ್ದ ಮಾತ್ರೆಯಂಥ ಆ ಗುಳಿಗೆಗಳನ್ನು ನುಂಗಿಬಿಟ್ಟೆ.

* * * *

—ಮಧ್ಯರಾತ್ರಿ

' ಶೋ-ಫಂಗ್ 'ನು ಇದೀಗ ಉಬ್ಬಸಬಡುತ್ತ ಓಡಿ ಬಂದಿದ್ದ. ನನ್ನನ್ನು ಇಲ್ಲಿ ನೋಡಿ ಅವನ ಮುಖ ಹೀಚಿದಂತಾಯಿತು. ' ಲೀ ' ದಂಪತಿ ಗಳು ತಾತ್ಕಾಲ ತಮ್ಮ ರಾಣ್ಯ ಕಿತ್ತಲು ಎಚ್ಚರ ಕೊಡಲು ಅವನು ಬಂದಿದ್ದ. ಇದಲ್ಲದೆ ತನ್ನ ಗಾಯಗಳಿಗೆ ' ಲೀ ' ಡಾಕ್ಟರಿತಿಯಿಂದ ಉಪಚಾರ ಮಾಡಿಸಿ ಕೊಳ್ಳುವದೂ ಇತ್ತು.

ನಿನ್ನೆ ಅಲ್ಲ, ಮೊನ್ನೆ ' ಶೋ-ಫೆಂಗ್ 'ನು ಸಾಯಿಕಲ್ ಮೇಲೆ ಕುಳಿತು ಏನೋ ಸಾಮಾನು ಒಯ್ಯುತ್ತಿದ್ದ. ' ಪಿ-ಹೋ-ಏನ್ 'ದ ಗುಂಟ ಅವನು ಹೋಗತ್ತಿರುವಾಗ ಇನ್ನೊಂದು ಸಾಯಿಕಲ್ಲು ಅವನಿಗೆ ಡಿಕ್ಕಿ ಹೊಡೆಯಿತು. ಗುಪ್ತಪೋಲಿಸನೊಬ್ಬನು ಟಣ್ಣನೆ ಜಿಗಿದ, ಅವನನ್ನು ದೋಚಿಕೊಂಡ. ಪೋಲೀಸಠಾಣೆಗಾಗಿ ಒದರಿದ. ' ಶೋಫೆಂಗ್ 'ನು ' ರಿಕ್‌ಷಾದ ' ಹತ್ತಿರ ಜಾರಿ ಅವನನ್ನು ತಪ್ಪಿಸಿ ಸಣ್ಣ ಸಂದಿಗೊಂದಿಗಳೊಳಗಿಂದ ಓಡಿ ಕುಂಬಿಗೋಡೆಗಳನ್ನು ಜಿಗಿದು ಎಷ್ಟೋ ಸಣ್ಣ ಮಳಿಗೆಗಳೊಳಗಿಂದ ಹಾಯ್ದಿದ್ದ. ಅವನ ಎಡಭುಜ ಛಿನ್ನವಾಗಿತ್ತು; ರಕ್ತ ಕಪ್ಪಾಗಿ ಗಂಟುಕಟ್ಟಿ ಭುಜ ಊದಿಕೊಂಡಿತ್ತು. ' ಲೀ ' ಡಾಕ್ಟರಿತಿಯು ಅವನ ಗಾಯವನ್ನು ತೊಳೆದು ಔಷಧಿ ಹಚ್ಚಿ ಕಟ್ಟಿದಳು. ಅವನು ತಾತ್ಕಾಲ ಹೊರಟ. ಆದರೆ ಹೊರಡು ವಾಗ ' ಅಯ್ಯೊ, ಈಕೆಯ ಗತಿ ಏನು ? ' ಎನ್ನುವವನಂತೆ ನನ್ನ ಕಡೆ ತನ್ನ ದೃಷ್ಟಿ ಬೀರಿದ.

ತಾತ್ಕಾಲ ಹೊರಡುವದೇ ? ಏನು ತಮಾಷೆ ಇದು ! ನಾನು ನನ್ನ ಇಷ್ಟಮಿತ್ರರ ಜೀವವನ್ನು ಸಂಕಟಕ್ಕೀಡು ಮಾಡಿ ಕೆಲಸಕ್ಕೆ ಬಾರದ ಭಾರವಾಗಿ ಬಿದ್ದುಕೊಂಡಿರುವೆನಲ್ಲ. ನಾಳೆ ಮೇ ೩ನೇ ತಾರೀಖು ! ಇದು ಚೀನದ

'ಪ್ರಭೋಧ'ನದ ದಿನ ! ಈ ದಿನ ಜನವೆಲ್ಲೆಲ್ಲೂ ತನ್ನ ಬೆಳೆದ ಸಾಮರ್ಥ್ಯ ಒಕ್ಕಟ್ಟುಗಳ ಪ್ರದರ್ಶನ ಮಾಡುವದು ! ನಾಳೆ ರಾಷ್ಟ್ರದ ಈ ತುದಿಯಿಂದ ಆ ತುದಿಯ ವರೆಗೆ ತರುಣ ತರುಣಿಯರು ನಿರ್ಭಯರಾಗಿ ಮೆರೆದೇರಿ ಬಂದು ಉರುಬಿ ಸಾಗುವರು ! ಕೆಲವರು ಕೊಲ್ಲಲ್ಪಡಬಹುದು. ಆದರೆ ಅವರ ಸಾವಿನಿಂದಲೇ ಹೊಸ ಸಾಮರ್ಥ್ಯವು ಸಿಡಿದೆದ್ದು ಬರುವದು. ಆದರೆ ನಾನು ಈ ಗರ್ಭದ ಕಲ್ಲು ಕಟ್ಟಿಕೊಂಡು ಬಿದ್ದಿದ್ದೇನೆ. ಕಾಂತಿಯರಂತೆ ! ಕ್ರಾಂತಿಯಂತೆ ! ಏನು ಸಂಬಂಧ ?

ಇಂದು ಮೆರವಣಿಗೆ ಹೊರಡುವದರ ಮೊದಲು ನಮ್ಮೆಲ್ಲ ಜನರನ್ನೂ ಪ್ರಯತ್ನ ಪಟ್ಟು ಸೆರೆಹಿಡಿಯಲಾಗುವದು........'ಲೀ' ದಂಪತಿಗಳು ಕೋರಿಯನ್ ಭಾಷೆಯಲ್ಲಿ ಏನೇನೋ ಮಾತನಾಡುತ್ತಿದ್ದಾರೆ. ಅವರ ಸಹಾಯ ನನಗೆ ಬೇಕಾಗಿಲ್ಲ. ಅವರು ನಿಶ್ಚಿಂತರಾಗಿ ನನ್ನನ್ನು ಬಿಟ್ಟು ಬಿಟ್ಟು ಕೆಲಸಕ್ಕೆ ಹೋಗಬೇಕೆಂದು ನಾನು ಹೇಳುವವಳಿದ್ದೇನೆ. ಆದರೆ ಸಾವಿರ ಕಾದ ಸೂಜೆಗಳನ್ನು ಗರ್ಭದಲ್ಲಿ ಏಕಕಾಲಕ್ಕೆ ಚುಚ್ಚಿದಂತೆ ಸರ್ವಾಂಗ ಶೂಲೆಯೊಂದು ಸಿಡಿದು ಬರುತ್ತಿದೆಯೆಂದು ಹೇಳಲು ತುಟಿ ಹಾಗೆ ಮಿಡುಕುತ್ತಿವೆ. ಏನಿಲ್ಲ, ಹೀಗೆ ದಿನಚರಿ ಬರೆಯುತ್ತೇನೆ. ಚೀರಬೇಕೆಂದು ಮನಸ್ಸು ಹರಿಯದಿರಲಿ............ನನ್ನ ಮೈಯ ಮಾಂಸವೆಲ್ಲ ಹೇಗೆ ತಿಂಡಿಯಿಟ್ಟು ಕಚ್ಚಿದಂತಾಗಿ ಭಗಭಗ ಎನ್ನುತ್ತಿದೆ........ಮೈಗೆ ಮೈಯೆಲ್ಲ ಸಿಡಿಲು ಮಿಂಚುಗಳಿಂದ ಹೆಣೆದಂತೆ ಟಣ್ ಟಣ್ ಸುತ್ತಿದೆ.....ಸುತ್ತಲೆಲ್ಲಕ್ಕೂ ನಂಜೇರಿದೆ........ ಅಸಹ್ಯವಾಗಿದೆ........ಕಾಯ್ದ ಗುಂಡೊಂದು ಅಗೊ, ನನ್ನ ಹೊಟ್ಟೆಯೊಳಗಿಂದ ಹೊರನುಗ್ಗಿ ಬರುವಂತೆ ಕ್ಷಣಕ್ಷಣಕ್ಕೂ ಅನಿಸುತ್ತಿದೆ........ಮತ್ತೆ ಇನ್ನೊಂದು ಕಾಯ್ದ ಗುಂಡು ತಲೆಯಿಂದ ಸಿಡಿದು ಹೋಗಲು ಸಿದ್ಧವಾಗಿದೆ.

* * * * *

ಇಲ್ಲಿ ದಿನಚರಿ ಮುಗಿಯಿತು.

---

## ಪರಿಚಯ

## ಚಾಂಗ್-ಶೆಯಿನ್-ಯಿ

( ೧೯೦೭— )

ಕತೆಗಾರ ತನ್ನ ಜೀವನಚಿತ್ರವನ್ನು ತಾನೆ ಈ ರೀತಿ ಕೊಡುತ್ತಾನೆ:

"ನಾನು ೧೯೦೭ರಲ್ಲಿ ಹುಟ್ಟಿದೆ. 'ಯಾಂಗ್ಟ್ಸೆ' ನದಿಯ ಮಧ್ಯ ಭಾಗದ ಕೊಳ್ಳದಲ್ಲಿ ಹುನಾನದಲ್ಲಿದ್ದ ನನ್ನ ಮನೆಯವರು ಜಮೀನುದಾರರಾಗಿದ್ದರು. ಆದರೆ ನನ್ನ ಅಜ್ಜನ ತಲೆ ಹೋದ ಮೇಲೆ ಮನೆತನ ಇಳಿಮುಖವಾಗಹತ್ತಿತು. ನನ್ನ ತಂದೆ ಜೀವನೋಪಾಯಕ್ಕಾಗಿ ಸಂಸಾರವನ್ನೆಲ್ಲ ಕಟ್ಟಿಕೊಂಡು ತಿರುಗಾಡಬೇಕಾಯಿತು. ಆದ್ದರಿಂದ ಐದು ವರ್ಷದವನಿದ್ದಾಗಲೇ ಅವನೊಡನೆ ಎಷ್ಟೋ ಊರುಗಳನ್ನು ನೋಡಿದೆ. ಹದಿನೆಂಟು ವರ್ಷದವನಾದ ಮೇಲೆ 'ಹಾಂಗ್‌ಚಾ' (ಚೇಕಿಂಗ್)ದಲ್ಲಿ ನನ್ನ ಹಾಯಸ್ಕೂಲ ವಿದ್ಯಾಭ್ಯಾಸ ಮುಗಿಯಿತು. ನಾನು ೧೯೨೪ರಲ್ಲಿ ಪೇಕಿಂಗಕ್ಕೆ ಹೋದರೂ ಯಾವ ಶಾಲೆಗೂ ಹೋಗಲಿಲ್ಲ. ಆಮೇಲೆ ನನಗೆ ನನ್ನ ಹೊಸ ತತ್ವದಲ್ಲಿ (ಅದು ಮಾರ್ಕ್ಸವಾದ) ನಂಬಿಗೆ ಉಂಟಾಯಿತು. ಮೆಲ್ಲಗೆ ಇತಿಹಾಸದ ಸತ್ಯ ನನಗೆ ಗೋಚರವಾಯಿತು. ಆಮೇಲೆ ಕಚೇರಿಯಲ್ಲಿ, ಸೈನ್ಯದಲ್ಲಿ, ಸಂಪಾದಕನಾಗಿ, ಸುದ್ದಿಗಾರನೆಂದು ಇನ್ನೂ ಎಷ್ಟೋ ರೀತಿಯಲ್ಲಿ ದುಡಿದೆ.

"ನನ್ನ ತಂದೆ-ತಾಯಿಗಳು ಮತ್ತು ಒಬ್ಬ ತಂಗಿ ಸಾಹಿತ್ಯದ ಉಪಾಸಕರಾದ್ದರಿಂದ ನನಗೂ ಸಾಹಿತ್ಯದ ಹುಚ್ಚು ಹಿಡಿಯಿತು. ಹಾಯಸ್ಕೂಲಿನಲ್ಲಿದ್ದಾಗಲೇ ಕೆಲವು ಬಾಲಕ ಕತೆಗಳನ್ನು ಬರೆದಿದ್ದೆ. ೧೯೨೪ರಲ್ಲಿ ಸಂಕೇತವಾದವನ್ನನುಸರಿಸಿ ಬರೆದ ಕತೆಯೊಂದು ಪೇಕಿಂಗದ ಪತ್ರಿಕೆಯಲ್ಲಿ ಪ್ರಕಟವಾಯಿತು. ಆಗ ನನ್ನ ಮನಸ್ಸಿನಲ್ಲಿ ಸಾಹಿತ್ಯ ಮತ್ತು ಕೃತಿ ಬೇರೆ ಬೇರೆ ಎಂಬ ಹುಚ್ಚುಭಾವನೆಯಿತ್ತು. ಮುಂದೆ ಬರೆಯುವದನ್ನು ನಿಲ್ಲಿಸಿದೆ.

" ೧೯೩೮ರಲ್ಲಿ ವಾಸ್ತವವಾಗಿ ಬರೆಯಲು ಪ್ರಯತ್ನ ಮಾಡಿದೆ. 'ಮೂರುವರೆ ದಿನದ ಕನಸು' ಎಂಬ ಸಣ್ಣಕತೆಯನ್ನು ಬರೆದೆ. ಅದು 'ಲು-ಶೂನ್' ಸಂಪಾದಿಸಿದ 'ಉಕ್ಕುವ ಬುಗ್ಗೆ' ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ಇದರಿಂದ ಮುಂದೆ ಬರೆಯಲು ನನಗೆ ಉತ್ಸಾಹ ಉಂಟಾಯಿತು. 'ಒಂದು ವರ್ಷ' 'ಯಾಂಗ್-ಚಿಂಗ್-ಪೆಂಗ್‌ದ ಸರದಾರರು' ಎಂಬ ಕಾದಂಬರಿಗಳು, 'ತಿರುಗಾಟ' 'ಪ್ರತಿದಾಳಿ' 'ಸುತ್ತು ತಿರುಗುವದು' 'ಚಿಂಗ್-ಮಿಂಗ್-ಹಬ್ಬ' ಈ ಸಣ್ಣಕತೆಗಳ ಸಂಕಲನ ಇವು ನನ್ನ ಕೃತಿಗಳು.

" ನನ್ನ ಸಣ್ಣಕತೆಗಳಲ್ಲಿನ ಪಾತ್ರಗಳು, ನನ್ನ ಗೆಳೆಯರು, ಸಂಬಂಧಿಕರು, ಮತ್ತು ಜೊತೆಗಾರರಿಂದ ತೆಗೆದುಕೊಂಡವುಗಳು. ಮೊದಮೊದಲು ಪಾತ್ರಗಳನ್ನು ವಿಷಯದ ಬೆಳವಣಿಗೆಗಾಗಿ ತರುವ ದೋಷ ನನ್ನಲ್ಲಿತ್ತು. ಇದರಿಂದ ಸ್ವಭಾವದ ಗಹನತೆಗೆ ಭಂಗಬರುತ್ತಿತ್ತು. ಇತ್ತೀಚೆಗೆ ಈ ದೋಷವನ್ನು ತಿದ್ದಲು ಪ್ರಯತ್ನಿಸಿದ್ದೇನೆ. ಕತೆಗಳಲ್ಲಿ ವಿಶಿಷ್ಟ ಪಾತ್ರಗಳನ್ನು ಸೃಷ್ಟಿಸುವ ಅವಶ್ಯಕತೆ ನನಗೆನಿಸಿದೆ.

" ನನ್ನನ್ನು ಮುಗ್ಧಗೊಳಿಸಿದ ಬರಹಗಾರರು ಇವರು: 'ಚಾರ್ಲ್ಸ್ ಡಿಕೆನ್ಸ್', 'ಗಾಯ್‌ಡಿ ಮೌಪಸಾಂತ್', 'ಎಮಿಲ್ ಝೋಲಾ', 'ಬಾಬ್ಯೂಸ್', 'ಲಿಯೊ ಟಾಲ್‌ಸ್ಟಾಯ್', 'ಚೆಕಾವ್ಹ್', 'ಮ್ಯಾಕ್ಸಿಮ್ ಗಾರ್ಕಿ', ಮತ್ತು 'ಲು-ಶೂನ್'. ರಶಿಯಾದ ಹೊಸ ಕೃತಿಗಳು ಅದರಲ್ಲಿಯೂ 'ಫೆಡೆವ್ಹ್'ನ "ಹತ್ತೊಂಬತ್ತು" ನನ್ನನ್ನು ಸೆಳೆದಿವೆ. ಇವರನ್ನೆಲ್ಲ ಓದಿದಾಗ ನನ್ನ ಸಣ್ಣತನ ಗೊತ್ತಾಗುತ್ತಿದೆ. ಅದರ ಸಲುವಾಗಿಯೇ, ಪ್ರೊಫೆಸರರ ಕೈಯಲ್ಲಿಯ ವಿದ್ಯಾರ್ಥಿಯಂತೆ, ಹೆಚ್ಚು ಕಲಿಯಲು ಮತ್ತು ಹೆಚ್ಚು ಬರೆಯಲು ನಿಶ್ಚಯಿಸಿದ್ದೇನೆ."

---

# ವಿಕೃತಿ    

## (೧)

ಕೌಡುಕಿಚ್ಚಿನಂತೆ ಉರಿಯುತ್ತಿದ್ದ ಮುಖದಿಂದ, ಸ್ಯಾಂಗ್-ಹ್ವಾ ತೆರೆದ ಕಿಡಿಕಿಯ ಹೊರಗೆ ನೋಡಿದಳು. ಆಮೇಲೆ ಟೇಬಲ್ಲಿನತ್ತ ಸುಮ್ಮನೆ ಕಣ್ಣು ಹೊರಳಿಸಿದಳು. ಗಾಳಿಯ ಒಂದು ಸುಳಿ ಒಳಗೆ ಬೀಸಿ, ಅಲ್ಲಿಟ್ಟಿದ್ದ ದೀಪದ ತುದಿಯ ರೇಶಿಮೆಯ ಲಾಡಿಗಳನ್ನು ಅಲುಗಾಡಿಸಿತು. ಅದರ ಜೊತೆಗೆ, ಯಾವುದೊ ಒಂದು ಕರುಣ-ಗೀತದ ಕೆಲವು ಸಾಲುಗಳು ತೇಲುತ್ತ ಬಂದವು. ಅವಳು ಹುಬ್ಬುಗಂಟಿಕ್ಕಿದಳು. ನಾಲಿಗೆಗೆ ಯಾವುದೋ ಒಂದು ಕಸುಕು-ಹಣ್ಣಿನ ಸೌಳು-ರುಚಿ ಹತ್ತಿದಂತೆನಿಸಿತು. ಸರಿದು ಬಂದು, ಸ್ವಲ್ಪ ಮಿಠಾಯಿಗಳನ್ನು ತೆಗೆದು ಬಾಯಲ್ಲಿ ಮೃದುವಾಗಿ ಹಾಕಿಕೊಂಡಳು.

" ಅಕ್ಕಾ !" ಅವಳು ನುಡಿದಳು : " ಏನೋ ಹೇಳುತ್ತಿದ್ದೆಯಲ್ಲ, ಮುಂದುವರಿಸು. "

ಅನಾಸಕ್ತಿಯಿಂದ ಒಂದು ಚಿತ್ರದ ಕಡೆಗೆ ನೋಡುತ್ತ ಸಿಗರೇಟು ಸೇದುತ್ತ ಕುಳಿತ ಇನ್ನೊಬ್ಬಳು, ಮುಖ ತಿರುಗಿಸಿ " ಹುಂ ಏನದು ? " ಎಂದು ಮುಖ ಹೊರಳಿಸಿದಳು.

" ನೀನು ನನ್ನನ್ನು ನಿಂದಿಸುತ್ತಿದ್ದಿ ಎಂದು ತೋರುತ್ತದೆ. "

" ಓ, ಅದೇ...." ಏನನ್ನೊ ನೆನಪು ಮಾಡಿಕೊಳ್ಳುತ್ತ ಸಿಗರೇಟಿನ ಬೂದಿಯನ್ನು ಕೊಡವಿದಳು. " ನಿನ್ನ ಜೀವನ, ನನಗೆ ತೋರುವಂತೆ...."

ಅವಳು ಮಾತಾಡುವಾಗ ಸ್ಯಾಂಗ್-ಹ್ವಾ ನೋಡುತ್ತಿದ್ದಂತೆಯೆ ಅವಳ ದೃಷ್ಟಿ ಅಲ್ಲಿದ್ದ ಕನ್ನಡಿಯ ಕಡೆಗೆ ಹೊರಳಿತು. ಇನ್ನೂ ಚೆಲುವಾಗಿ ಕಾಣಲೆಂದು, ತಾನು ಕುಳಿತ ಠೀವಿಯನ್ನು ಇನ್ನೂ ಬದಲಿಸಿ ಅವಳ ಮಾತಿನ

ಕಡೆಗೆ ಲಕ್ಷ್ಯಗೊಟ್ಟು ಕೇಳುತ್ತ, ಮೆಲ್ಲಗೆ ಬಾಯಾಡಿಸಹತ್ತಿದಳು. ಇನ್ನೊಬ್ಬರು ತನ್ನ ಬಗ್ಗೆ ಚರ್ಚಿಸುವಾಗ ಹೀಗೆ ಮಾಡುವದು ಅವಳ ರೂಢಿ.

ಅವಳಿಗೆ ತನ್ನ ಬಗ್ಗೆ ಚರ್ಚೆ ಎಂದರೆ ಆನಂದದ ಸಂಗತಿ. ಯಾಕೆ ಇರಬಾರದು ? ಪ್ರತಿಯೊಬ್ಬರೂ ಅವಳನ್ನು ಹೊಗಳುವವರೇ. ಹತ್ತಿರ ಹಣವಿತ್ತು; ಬೇಕಾದ ಹಾಗೆ ಅದನ್ನು ಸೂರೆಮಾಡಿ ಅನುಭವಿಸುವ ಮನ ಇತ್ತು; ಅಂದ ಮೇಲೆ ಕೇಳುವದೇನು ? ಅಲ್ಲಿಯ ಆ ಸರೋವರದ ದಂಡೆಯ ಮೇಲೆ ಹಾಡುತ್ತಿದ್ದವರೆಲ್ಲ ಅವಳ ಅತಿಥಿಗಳು; ಈ ಚೆಲುವಾದ ತೋಟ ಅವಳದು; ವಿಸ್ತಾರವಾಗಿದ್ದ ಈ ಮನೆ ಅವಳ ಬೇಸಿಗೆಯ ನಿವಾಸವಾಗಿತ್ತು. ಇದಲ್ಲದೆ "ಅವಳ ನರಗಳಲ್ಲಿ ಹರಿಯುವದು ರಾಜಮನೆತನದವರ ರಕ್ತ." ಎಂದು ಜನರಾಡಿಕೊಳ್ಳುತ್ತಿದ್ದ ಬಿರುದು ಬೇರೆ ಅವಳಿಗೆ.

ಸ್ಯಾಂಗ್-ಹ್ವಾ ಮೊದಲು ತನ್ನ ತಾಯಿಯ ಸಂಗಡ ಬಡತನದಲ್ಲಿ ಕಳೆದವಳು. ಇದು ನಿಜ; ಆದರೂ ಅವಳು ಯಾವಾಗಲೂ ಸಭ್ಯಸ್ತ್ರೀಯಂತೆಯೇ ವರ್ತಿಸುತ್ತಿದ್ದಳು. ಎಷ್ಟೋ ಜನರು ಅವಳನ್ನು ಕಂಡು ಕಸಿವಿಸಿಬಡುತ್ತಿದ್ದರು. ನಿಟ್ಟುಸಿರುಗರೆದು, ಅವಳ ಸಿರಿವಂತಿಕೆಯನ್ನೂ ಅವಳ ಗಂಡನ ಲಾಭವನ್ನೂ ಲೆಕ್ಕ ಹಾಕುತ್ತಿದ್ದರು. ಅವನು ಸಕ್ಕರೆ ಮತ್ತು ರಬ್ಬರ ವ್ಯಾಪಾರದಲ್ಲಿ ದಲಾಲಿ ಕೆಲಸ ಮಾಡುತ್ತಿದ್ದ. ಇಷ್ಟಿದ್ದರೂ ಅವಳ ಅಭಿರುಚಿ ಸಂಸ್ಕೃತವಾಗಿದೆಯೆಂದೂ ಅವಳು ಹಣದ ದುರುಪಯೋಗ ಮಾಡಿರಲಿಲ್ಲವೆಂದೂ ಅವಳ ಪರಿಚಿತರು ಒಪ್ಪಿಕೊಂಡರು.

"ಸುಖವನ್ನು ಎಲ್ಲಿ ಕಾಣಬೇಕು, ಎಲ್ಲಿ ದೊರಕಿಸಬೇಕು ಎಂಬುದು ಅವಳಿಗೆ ಚೆನ್ನಾಗಿ ತಿಳಿದಿದೆ." ಎಂದು ಜನರಾಡುತ್ತಿದ್ದರು.

"ಇಂಥ ಜೀವನಕ್ಕೆ ಹೆಸರಿಡುವದೇ ಶಕ್ಯವಿಲ್ಲ."

"ಇದು ವಾಸ್ತವವಾಗಿಯೂ ಅತಿಶಯೋಕ್ತಿಯೇನು ಆಗಿರಲಿಲ್ಲ."

ಜನರು ತನ್ನ ಬಗ್ಗೆ ಮಾತನಾಡಿದಾಗ ಸ್ಯಾಂಗ್-ಹ್ವಾ ಅನಾಸಕ್ತಳಾಗಿ ಪಕ್ಷಪಾತವಿಲ್ಲದೆ ಅವರ ಅಭಿಪ್ರಾಯಗಳನ್ನು ತೂಗಿ ನೋಡುತ್ತಿದ್ದಳು. ಬಿಂಕ ಬಂದು ತನ್ನನ್ನು ಸೋಂಕದಂತೆ ಅದನ್ನು ದೂರವಿಟ್ಟಿದ್ದಳು. ಮನಸ್ಸಿಗೆ ಹೊಳೆದ ನಿರ್ಣಯವನ್ನು ಅನುಮಾನವಿಲ್ಲದೆ ಒಮ್ಮೆಲೆ ಹೇಳಿಬಿಡು

ತ್ತಿದ್ದಳು; ಶಿಕ್ಷೆಗೆ ಗುರಿಯಾದ ಸಣ್ಣ ಕೂಸಿನಂತೆ ಒಮ್ಮೊಮ್ಮೆ ಸರಳತೆಯನ್ನೂ ನಟಿಸುತ್ತಿದ್ದಳು; ಒಮ್ಮೊಮ್ಮೆ ಮಾತ್ರ ಅವಳ ಪ್ರಯತ್ನ ಮೀರಿಯೂ ತುಟಿಯ ಮೇಲೆ ತುಂಟನಗೆ ಮೂಡುತ್ತಿತ್ತು. ಆಗ ನಿರುಪಾಯಳಾಗಿ ಮತ್ತೆ ಕನ್ನಡಿಯ ಕಡೆಗೆ ತಿರುಗುತ್ತಿದ್ದಳು. ಮುಖಕ್ಕೆ ಮತ್ತೆ ಬಣ್ಣ ಬೇಕೇ ಎಂದು ನೋಡಿಕೊಳ್ಳುತ್ತಿದ್ದಳು. ಅಥವಾ, ನೋಡುವವರನ್ನು ಅದು ಮರುಳುಗೊಳಿಸಬಲ್ಲುದೇ ಎಂದು ತನ್ನ ಭಂಗಿಯನ್ನು ಪರೀಕ್ಷಿಸಿಕೊಳ್ಳುತ್ತಿದ್ದಳು.

ಪರಿಸ್ಥಿತಿ ಸುಧಾರಿಸಲಾರದೆಂದು ತಿಳಿದು ಅವಳು ಸುಮ್ಮನೆ ತನ್ನ ಅಕ್ಕನ ಚಂಚಲವಾದ ಅಧರಗಳನ್ನೂ ಬಾಯನ್ನೂ ನೋಡಿದಳು. “ನಿಜವಾಗಿ ಇಂಥ ಹೆಣ್ಣಿಗೂ ಗಂಡಿಗೂ ಏನು ಅಂತರ? ನಿಜವಾಗಿಯೂ ಇದು ಗಂಡೂ ಅಲ್ಲ ಹೆಣ್ಣೂ ಅಲ್ಲ. ಅವಳ ಮುಖಕ್ಕೆ ಬಣ್ಣವಿಲ್ಲ; ಕೂದಲಕ್ಕೆ ಸಂಸ್ಕಾರವಿಲ್ಲ. ಅವಳು ಮಾತಾಡುವದೆಂದರೆ ಅಕ್ಷರಶಃ ಗರ್ಜಿಸಿದಂತೆಯೆ ಸರಿ. ಅವಳ ಮಾತು ನಿಮ್ಮನ್ನು ಹಗ್ಗ ಹಾಕಿ ಎಳೆದಂತೆಯೇ!”

ಅಕ್ಕನಿಗೆ ಉದ್ವೇಗ ಹೆಚ್ಚಿತು. ಕೊನೆಗೆ ಅವಳು ತನ್ನ ವಿಷಯಕ್ಕೆ ಬಂದಳು: “ನಿಮ್ಮ ಸುತ್ತಮುತ್ತ ನೋಡಿಕೊ; ನಾವು ಇರುತ್ತಿರುವ ಈಗಿನ ಕಾಲಮಾನ ಎಂಥಾದ್ದು ನೋಡು” ಅವಳ ಬಾಯಿಂದ ಮದ್ದಿನ ಸ್ಫೋಟದ ನಂತರ ಹೊರಡುವಂತೆ ಹೊಗೆಯ ಮೋಡವೇ ಹೊರಗೆ ಬಂತು. “ನಿನಗಿನ್ನೂ ಅದರ ವಿಚಾರ ಬಂದೇ ಇಲ್ಲವೆ? ಎಲ್ಲಿಯ ತನಕ ನೀನು ನಿನ್ನ ಈ ದರ್ಬಾರು ನಡೆಯಿಸುವಾಕೆ? ಮತ್ತೆ ಇದಕ್ಕೇನು ಜೀವನ ಅನ್ನಬೇಕೆ? ಏನು....?”

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

“ನಿನಗಿನ್ನೂ ಈ ಖರೇ ಜಗತ್ತಿನ ಕಲ್ಪನೆಯೇ ಬಂದಿಲ್ಲ. ನೀನು ನಿನ್ನ ಈ ಕೃತಕ ಜಗತ್ತಿನಲ್ಲಿಯೆ ಇನ್ನೂ ಹುದುಗಿಕೊಂಡು, ದಿನದ ವರ್ತಮಾನಪತ್ರಿಕೆಯನ್ನೂ ಓದುವದಿಲ್ಲ. ರಬ್ಬರಿನ ಪೇಟೆ ಹಾಳಾಯಿತೆಂದು ತಿಳಿ. ಆಗ ನಿನ್ನ ಗತಿಯೇನು? ನೀನೆಲ್ಲಿರುವೆ? ಹೀಗಾದೀತೆಂಬ ವಿಚಾರವನ್ನೂ ನೀನು ನಿನ್ನೊಳಗೆ ಬರಗೊಡುವದಕ್ಕೆ ಹೆದರುತ್ತೀ! ಬರಗೊಟ್ಟರೆ ಅವು ನಿನ್ನ ಮೋಜಿನ ಜೀವನವನ್ನೆ ಕೆಡಿಸಬಹುದು ಹೌದೇ? ನಿಜವಾಗಿ ನೋಡಿದರೆ ನಿನ್ನಂಥ ಜಾಣ ಹೆಂಗಸು....”

ಒಮ್ಮೆಲೇ ಅವಳು ಸ್ಯಾಂಗ್-ಹ್ವಾನ ಕಡೆಗೆ ನೋಡಿದಳು. ಅವಳು ತನ್ನ ಮೃದುವಾಗಿ ಕೆಂಪಾಗಿದ್ದ ಉಗುರುಗಳನ್ನು ಪರೀಕ್ಷಿಸುತ್ತಿದ್ದಳು. ಅವಳು ಸುಮ್ಮನೆ ಒಂದು ತುತ್ತು ನುಂಗಿದರೂ ಅದೆಷ್ಟು ಚೆಂದ! ಎಷ್ಟು ನಯ! ನಂತರ ದುಃಖಪೂರ್ಣವಾದ ನಿಟ್ಟುಸಿರು ಬಿಡುತ್ತ ಹೇಳಿದಳು: "ಅದೆಲ್ಲದರ ಬಗ್ಗೆ ಮಾತನಾಡುವದೇ ಬೇಡ. ಇಂದು ಸುಖಪಟ್ಟುದಷ್ಟೇ ಬಂತು. ನಾಳಿಂದು ನಾಳೆ."

"ಶಾಂಘಾಯಿಯ ಕಾಳಗಕ್ಕಿಂತ ಭಯಂಕರವಾದದ್ದೊಂದು ಏನಾದರೂ ಸಂಕಟ ಇದ್ದಕಿದ್ದಂತೆ ಬಂದರೆ? ಬಂದರೂ ಅಂಥ ಸಂಕಟಗಳು ಅನಿರೀಕ್ಷಿತವಾಗಿಯೆ ಬರುತ್ತವೆ. ಹತ್ತು ವರ್ಷಗಳು ಉರುಳಿದರೂ ಏನೂ ಬರಲಿಕ್ಕಿಲ್ಲ. ಆದರೆ ನಾಳೆಯೇ ಬಂದರೂ ಬರಬಹುದು, ಏನು ಗೊತ್ತು!"

"ನಾಳೆಯೇ!" ಸ್ಯಾಂಗ್-ಹ್ವಾ ಕಣ್ಣೆತ್ತಿ ನುಡಿದಳು: "ಅಂಥವುಗಳನ್ನೆಲ್ಲ ತಲೆಯಲ್ಲಿಟ್ಟುಕೊಂಡು ಇರುವದಕ್ಕಿಂತ ಸಾಯುವದೇನು ಕೆಟ್ಟ? ತಿಳಿ, ಅಂಥದೇನಾದರೂ ಸಂಕಟ ನಾಳೆಯೆ ಬಂತೆಂದರೆ ನಾಳೇ ನನ್ನ ಮರಣ."

ಅವಳ ಅಕ್ಕ ಸ್ವಲ್ಪ ಹೊತ್ತು ಕಿಡಿಕಿಯ ಆಚೆ ಹೊರಗೆ ಏನನ್ನೊ ನಗುತ್ತ ನೋಡಿದಳು. "ಕಕ್ಕ ಮತ್ತು ಚಿಕ್ಕವ್ವ ಕೂಡಿ ನಿನಗೆ ಒಳ್ಳೆಯ ಶಿಕ್ಷಣ ಕೊಡಿಸಿದ್ದಾರೆ. ನೀನು ಅವರಿಗೆ ಒಬ್ಬಳೇ ಒಬ್ಬ ಮಗಳು. ಅವರು ನಿನ್ನನ್ನು...."

"ಏನು?" ಸ್ಯಾಂಗ್-ಹ್ವಾ ಮತ್ತೆ ಕನ್ನಡಿಯ ಕಡೆಗೆ ನೋಡಿ ಅದರಲ್ಲಿ ಕಂಡ ತನ್ನ ಮುಖ ಸರಿಯಾಗಿದ್ದುದನ್ನು ಅರಿತು ಸಮಾಧಾನ ಹೊಂದಿದಳು.

"ಏನು ಅವರು ನಿನ್ನನ್ನು ಮಧ್ಯಮ-ವರ್ಗದವನಿಗೆ ಮದುವೆ ಮಾಡಿ ಕೊಟ್ಟರೆ?"

ಸ್ಯಾಂಗ್-ಹ್ವಾ ನಕ್ಕಳು. "ಅದು ಯಾಕೆ?"

ಅವಳು ಭುಜ ಅಲುಗಾಡಿಸಿ, "ನಿನಗೆ ಸುಖವಾಗಲೆಂದು ಅವರು ನಿನಗೆ ಬೇಕಾದಷ್ಟು ಪ್ರೀತಿಸಿದ್ದು ಸುಳ್ಳೇ? ಅವರು ನೀನು ಕುಲೀನ ಸ್ತ್ರೀಯಂತೆ ವರ್ತಿಸಲು ಕಲಿಸಿದರು. ಈಗ ಅವರಿಗೆ ಯಶಸ್ಸು ಬಂದಿದೆ. ನೀನೊಬ್ಬ

ಲಕ್ಷಾಧೀಶನ ಕೈ ಹಿಡಿದಿದ್ದೀ. ನೀನು ಸುಖದಲ್ಲಿದ್ದೀ ಅಲ್ಲವೇ ? ನಿನ್ನಿಂದ ಕುಟುಂಬಕ್ಕೂ ಉಪಕಾರವಾಗಿದೆ. ”

“ ಓ, ಅದೆಲ್ಲ ಸುಳ್ಳು. ನಾನು ಅಷ್ಟೊಂದು ಹೇಳಿದಂತೆ ಕೇಳಿಕೊಂಡಿರ ತಕ್ಕವಳಲ್ಲ. ಆ ಚಿನ್‌ನ ಜೊತೆಗೆ ನನ್ನ ತಂದೆ ನನ್ನ ಮದುವೆ ನಿಶ್ಚಯ ಮಾಡಿದಾಗ ನಾನು ಹೇಗೆ ಸ್ಪಷ್ಟವಾಗಿ ಒಲ್ಲೆ ಎಂದೆ ಎಂಬದು ನೆನಪಿದೆಯೇ? ಮತ್ತೂ ಕೇಳಿದರೂ ಮತ್ತೂ ತಿರಸ್ಕರಿಸಿದೆನಲ್ಲವೇ ? ”

“ ಮತ್ತೆ ಈಗ ? ”

ಸ್ಯಾಂಗ್-ಹ್ವಾ ನಾಚಿ ಕೆಂಪಾದಳು. “ ಈ ವಿಷಯ ಇದು ಬೇರೆಯೇ ಎನ್ನಿ. ಇದು ನಾನೇ ಮಾಡಿಕೊಂಡ ಲಗ್ನ; ನನ್ನದೇ, ಕೇವಲ ನನ್ನದು.”

ಅಕ್ಕ ಮೋರೆಯ ಮೇಲಿದ್ದ ಕೂದಲನ್ನು ಸರಿಪಡಿಸಿಕೊಂಡು ಹುಂಬ ಳಂತೆ ಕಾಲು ಮುದಿಚಿಕೊಂಡು ಕುಳಿತಳು.

“ ಈ ತತ್ವಜ್ಞಾನವೆಲ್ಲ ನಿನ್ನ ಶಿಕ್ಷಣದ ಫಲ. ಆದರೂ ಈ ಹತ್ತು ವರ್ಷಗಳ ಅವಧಿಯಲ್ಲಿ ನಿನಗಾದದ್ದನ್ನು ನೋಡಿದರೆ....”

ಅವಳು ಲಕ್ಷ್ಯವಿಲ್ಲದೆ ಹೀಗೆ ಮಾತಾಡುತ್ತ ಸ್ಯಾಂಗ್-ಹ್ವಾಳನ್ನು ಪರೀಕ್ಷಿಸುತ್ತಿದ್ದಳು. ಅವರಿಬ್ಬರೂ ಹುಡುಗಿಯರಿದ್ದಾಗ ಒಬ್ಬರನ್ನೊಬ್ಬರು ಸಾಕಷ್ಟು ಅರಿತಿದ್ದರೂ ಯೌವನ ಕಾಲಿಟ್ಟ ಮೇಲೆ ಗೂರದೂರವಾಗಿದ್ದರು. ಸ್ಯಾಂಗ್-ಹ್ವಾ ಕಾಲೇಜ ಬಿಟ್ಟ ಮೇಲೆ ಎಲ್ಲಿಯೋ ನೌಕರಿ ಹಿಡಿದಿದ್ದಳೆಂದು ಅವಳು ಕೇಳಿದ್ದಳು. ಯಾವುದು, ಏನು ಆಕೆಗೆ ಗೊತ್ತಿರಲಿಲ್ಲ. ಇಷ್ಟೆ, ಈಗ ಅವಳು ಒಬ್ಬ ಶ್ರೀಮಂತನ ಹೆಂಡತಿಯ ಪಾತ್ರವನ್ನು ಧರಿಸಿ ಈ ಹತ್ತು ವರ್ಷಗಳ ಅವಧಿಯಲ್ಲಿ ಆ ಪಾತ್ರದ ಅಭ್ಯಾಸ ಚೆನ್ನಾಗಿ ಮೈಗೂಡಿಸಿ ಕೊಂಡಿದ್ದಳು.

“ ಕುಲೀನ ಸ್ತ್ರೀಯರ ಜೊತೆಯಲ್ಲಿದ್ದು, ಉಪಯೋಗವಿಲ್ಲದ ಪ್ರಣ ಯದ ಆನಂದವೊಂದನ್ನು ಬಿಟ್ಟರೆ ಮತ್ತೇನೂ ಗುರಿಯಿಲ್ಲದಿರುವದು ಸ್ವಾಭಾ ವಿಕ. ಈ ರೀತಿಯ ಇರುವಿಕೆಗೆ ಇದೇ ಹಿನ್ನೆಲೆ ಕಾರಣ. ನಿನ್ನ ಲಗ್ನವೇ ನೀನು ನಂಬಿದ ತತ್ವಕ್ಕೆ ಸರಿಹೋಗುತ್ತದೆ. ”

ಒಮ್ಮೆಲೆ ಸ್ಯಾಂಗ್-ಹ್ವಾ ತನ್ನ ನಿಶ್ಚಲತೆಯನ್ನು ಕಳೆದುಕೊಂಡು ಎದ್ದು ನಿಂತಳು. ನಡುವೆಯೇ ಹೇಳಿದಳು: "ಅಲ್ಲ ಅಲ್ಲ, ಅದೆಲ್ಲ ತಪ್ಪು."

"ತಪ್ಪೇ ? ಹಾಗಾದರೆ ನೀನು...."

"ಶುದ್ಧ ತಪ್ಪು. ಅವನನ್ನು ನಾನು ಮದುವೆಯಾಗಲು ಕಾರಣ, ನೀನು ಸೂಚಿಸಿದ್ದಕ್ಕಿಂತ ಬೇರೆಯಾಗಿದೆ. ಅವನ ಸಹವಾಸವನ್ನು ಒಪ್ಪಿದ್ದು...."

ಸ್ಯಾಂಗ್-ಹ್ವಾ ಗಂಭೀರಳಾಗಿ ಟೇಬಲ್ಲಿಗಾತು ನಿಂತುಕೊಂಡಳು. ಸಹಜವಾಗಿಯೇ ಆ ನಿಲುವು ಸುಂದರವಾಗಿತ್ತು. ನಡುವನ್ನು ಸ್ವಲ್ಪ ಮಣಿಸಿದ್ದಳು; ಒಂದು ಅಡಿಯನ್ನು ಎತ್ತಿದ್ದಳು; ಮತ್ತೊಮ್ಮೆ ಹೇಳಿದಳು: "ಅವನ ಸಹವಾಸವನ್ನು ಒಪ್ಪಿದ್ದು...."

"ಯಾಕೆ ?"

"ಕ್ರಾಂತಿಗಾಗಿ," ಎಂದು ಕೊನೆಗೆ ಮೆಲ್ಲನೆ ಹೇಳಿದಳು.

"ಕ್ರಾಂತಿಗಾಗಿ ! ನೀನೇ ?" ಅವಳ ಅಕ್ಕ ಚಕಿತಳಾಗಿ ಹಿಂದೆ ಸರಿದು ಬಾಯ ಮೇಲೆ ಕೈಯಿಟ್ಟುಕೊಂಡಳು. "ನೀನೂ ಕಮ್ಯುನಿಸ್ಟಳೇನು ?"

"ಹೌದು."

ಅಕ್ಕ ಅವಳನ್ನು ಸುಮ್ಮನೆ ಕಲ್ಲಿನಂತೆ ನೋಡುತ್ತ ನಿಂತಳು. ಮೇಜಿನ ಮೇಲೆ ಮಿಠಾಯಿಗಳು, ಒಂದು ಅಫೀಮಿನ ದೀಪ ಮತ್ತು ಮದ್ಯದಿಂದ ಅರ್ಧ ತುಂಬಿದ ಒಂದು ಪೇಲೆ ಇದ್ದವು. ಇವೆಲ್ಲ ಭೋಗಗಳಿಂದ ಸ್ಯಾಂಗ್-ಹ್ವಾ ಹೇಗೆ ದೂರವಿರಬಹುದೆಂದು ಅವಳಿಗೆ ತಿಳಿಯಲೇ ಇಲ್ಲ. ಅದು ಸಾಧ್ಯವಿರಬಹುದೇ ? ಸ್ಯಾಂಗ್-ಹ್ವಾ ದಿನಾಲು ೩-೪ ತಾಸು ಸೌಂದರ್ಯ ಸಾಧನೆಯಲ್ಲಿಯೇ ಕಳೆಯುತ್ತಿದ್ದಳು. ಹೋದಲ್ಲೆಲ್ಲ ಮನರಂಜಿಸಲು ಗೆಳತಿಯರಿರುತ್ತಿದ್ದರು; ಪರದೇಶದ ಮದ್ಯ ಅವಳಿಗೆ ಬೇಕಾಗುತ್ತಿತ್ತು. ಹಾಡು, ಕುಣಿತವಿಲ್ಲದೆ ಹೊತ್ತು ಹೋಗುತ್ತಿರಲಿಲ್ಲ. ತಿಂಗಳಿಗೆ ಸಾವಿರ, ಎರಡು ಸಾವಿರ ಡಾ:ಲರು ಅವಳಿಗೆ ಬರುತ್ತಿತ್ತು; ಬೇಕಾದಾಗ ಹೊಸ ಕಾರು ಸಿದ್ಧವಾಗಿರುತ್ತಿತ್ತು. ಇಂಥ ಸ್ಯಾಂಗ್-ಹ್ವಾ ಕ್ರಾಂತಿಕಾರಳೇ ? ಇದೇ ವಿಚಾರಕ್ಕಾಗಿ ಇವಳು ಮದುವೆ ಮಾಡಿಕೊಂಡಿದ್ದೇ ?

"ಆದರೆ ನಾನು ಅದರ ಬಗ್ಗೆ ಏನೂ ಮಾತನಾಡಲಾರೆ. ಆದದ್ದು ಆಗಿಹೋಯಿತು."

ತನ್ನ ಒಂದು ಕೈಯನ್ನು ಬೀಸುತ್ತ ಕಿಡಿಕಿಯ ಕಡೆಗೆ ನೋಡಿದಳು. ತನ್ನ ಅಕ್ಕ ತನ್ನನ್ನೇ ನೋಡುತ್ತಿದ್ದಳೆಂದೆನಿಸಿ ಆ ಕಣ್ಣು ತಪ್ಪಿಸಲು ಆಕಡೆ ನೋಡಿದಳು; ಅವಳ ದೃಷ್ಟಿ ಅಲ್ಲಿಯೂ ಎದುರಾಯಿತು. ಕೂಡಲೆ ಕಣ್ಣು ಹೊರಳಿಸಿದಳು.

"ನೀನು ಆಡಿದ್ದರ ಅರ್ಥವೇ ನನಗಾಗಲಿಲ್ಲ. ಕ್ರಾಂತಿಗಾಗಿ ನೀನು ಹೇಗೆ ಮದುವೆ ಮಾಡಿಕೊಂಡೆ? ಅಥವಾ ತಿಳಿಸಬಾರದೆಂದು ನಿನ್ನ ಅಪೇಕ್ಷೆಯೋ?"

"ಆದಲ್ಲ. ಅದರ ಬಗ್ಗೆ, ಆ ಜೀವನದ ಬಗ್ಗೆ ಯೋಚಿಸಿದಾಗಲೆಲ್ಲ, ನನ್ನ ಹೃದಯ...." ಅವಳು ಮಾತು ಮುಗಿಸಲಿಲ್ಲ. ಕಿಡಿಕಿಯ ಹತ್ತಿರ ಹೋಗಿ ಆಕಾಶವನ್ನು ನೋಡುತ್ತ ನಿಂತಳು. ಮಧ್ಯರಾತ್ರಿಯಾಗಿತ್ತು. ಕಿತ್ತಳೆ ಹಣ್ಣಿನ ತೊಳೆಯಂತೆ ನಿಸ್ತೇಜನಾದ ಚಂದ್ರ ಆಕಾಶದಲ್ಲಿ ಬೆಳಗುತ್ತಿದ್ದ.

ಇಂಥದೇ ಬೆಳುದಿಂಗಳಲ್ಲಿ ಅವಳು ಎಷ್ಟೋ ಸಲ ಲಿನ್-ವೆನ್-ಕೆನ್‌ನ ಕೈಯಲ್ಲಿ ಕೈ ಹಾಕಿಕೊಂಡು ಹೊಲಸು ತುಂಬಿದ ಬೀದಿಗಳಲ್ಲಿ ತಿರುಗಾಡಿದ್ದಳು.

ಅವನು ಅವಳಿಗಿಂತ ಒಂದು ಗೇಣು ಎತ್ತರವಾಗಿದ್ದ. ಅವನ ತೋಳೂ ಬಲವಾಗಿದ್ದವು; ಆದರೆ ಅವುಗಳಲ್ಲಿ ಕಾವಿರಲಿಲ್ಲ. ಆ ಕೈಯ ಹಿಡಿತ ಎಂದರೆ ತಣ್ಣಗೆ ಉಕ್ಕಿನಂತೆ. ಹೀಗಿದ್ದೂ ಅವಳು ಅವನ ತೀರ ಸಮೀಪ ದಲ್ಲಿರುತ್ತಿಳು; ಇಬ್ಬರ ನೆರಳೂ ಒಂದೇ ಆಗಿ ಭೂಮಿಯ ಮೇಲೆ ಬೀಳುತ್ತಿದ್ದವು.

"ನಿನ್ನ ಕಡೆಯಿಂದ ಈ ಕೆಲಸವಾಗುವದು ಗಟ್ಟಿಯೇ?" ಒಂದು ರಾತ್ರಿ ಲಿನ್-ವೆನ್-ಕೆನ್ ಕೇಳಿದ್ದ.

"ನಿಶ್ಚಯ." ಅವಳು ನಕ್ಕಳು, "ಇದೇನು ಒಂದು ಮೋಜಿನ ಕೆಲಸ ನನಗೆ."

"ಅದನ್ನು ನಾನು ಕೇಳಲಿಲ್ಲ. ಆದು ಇಲ್ಲಿ ಸಂಬಂಧವಿಲ್ಲ. ನಾನು ಕೇಳಿದ್ದೆಂದರೆ...."

ಅವರ ಮುಂದೆ ಅಷ್ಟರಲ್ಲಿ ಒಂದು ಕಪ್ಪು ಆಕೃತಿ ತೂಗಾಡಿತು. ಅವನು ಮಾತಾಡುವದನ್ನು ನಿಲ್ಲಿಸಿದ.

ಸ್ಯಾಂಗ್-ಹ್ವಾ ನಡುಗಿದಳು; ಅವಳಿಗೆ ಹೆದರಿಕೆ ಎನಿಸಿತು. ಆ ಕಪ್ಪು ಆಕೃತಿಯೊಡನೆ ಏನೋ ಭಯ ತುಂಬಿದ ಗಾಳಿಯೆ ಅವಳ ಹತ್ತಿರ ಹಾದಂತೆನಿಸಿತು. ಆದರೆ ಇಷ್ಟೆ, ಏನೂ ಆಗಲಿಲ್ಲ. ಆ ಆಕೃತಿ ಲೆನ್‌ನ ಭುಜದ ಮೇಲಿಂದ ಹಾದು ಹೋಯಿತು. ಅವಳು ತಿರುಗಿ ಆ ಮನುಷ್ಯನ ಕಡೆಗೆ ನೋಡತೊಡಗಿದಳು; ಆಮೇಲೆ ತನ್ನ ಜೊತೆಗಾರನ ಕಡೆಗೆ ನೋಡಿದಳು. ಅವನ ಮುಖ ಏನೂ ಬದಲಾಗಿರಲಿಲ್ಲ. ಅವನು ಮತ್ತೆ ಮಾತು ಮುಂದರಿಸಿದ: "ನೀನು ಅವನಿಂದ ರೊಕ್ಕ ದೊರಕಿಸುತ್ತೀ ಎಂಬುದು ನಿಜವೇ? ಯಾರವನು? ಆ ದಲಾಲ, ಅವನ ಹೆಸರೇನು?"

"ಲೀ."

"ಹಾಂ, ಲೀ. ಅಷ್ಟು ಹಣ ಅವನಿಂದ ದೊರಕಬಹುದೇ?"

"ಆಗಬಹುದು. ಆದರೂ ನಿಶ್ಚಿತವಾಗಿ ಹೇಳಲಾರೆ...." ಎಂದು ಅವಳು ನಸುನಕ್ಕಳು. "ಅದೆಲ್ಲ ಈ ಮೋಹದ ಮೇಲೆ ಅವಲಂಬಿಸಿದೆ. ವಿಲಕ್ಷಣ ಇದು ಈ ಮೋಹ! ಅದರ ಹೊರತು ಮತ್ತಾವುದೂ ಫಲಕಾರಿಯಾಗುವುದಿಲ್ಲ." ಅವನಿಂದ 'ಅಗ್ದಿ ಇಲ್ಲ, ಜೇಶ್' ಎಂಬ ಕೌತುಕದ ನಗೆ ಬರಬಹುದೆಂದು ಅಪೇಕ್ಷಿಸಿದ್ದಳು. ಬಂದಿದ್ದರೆ ಆ ವಿಷಯವನ್ನೆ ಮುಂದುವರಿಸುವವಳಿದ್ದಳು. ಅದಕ್ಕಾಗಿಯೆ ಅವನ ಹತ್ತಿರ ಇನ್ನೂ ಸರಿದಳು; ಆದರೆ ಅವನೇನು ತುಟಿ ಎರಡು ಮಾಡಲಿಲ್ಲ; ಮಿಟ್ಟಿಮಿಸುಕಲಿಲ್ಲ; ಕಣ್ಣು ನೆಲದ ಕಡೆಗೆ ಹೊರಳಿದ್ದವು. ಏನೋ ವಿಚಾರಿಸುತ್ತಿರಬೇಕು. ಇವಳು ತನ್ನ ಸಂಗಡ ಇದ್ದಾಳೆಂಬುದನ್ನೆ ಮರೆತು ಅವನು ತ್ವರಿತಗತಿಯಿಂದ ಸಾಗಿದ್ದ. ಅವನೊಡನೆ ಹೆಜ್ಜೆ ಇಡುವದೂ ಅಸಾಧ್ಯವಾಯಿತು ಅವಳಿಗೆ. ಒಂದೆರಡು ಸಾರೆ ಅವಳ ಜೋಲಿ ಕೂಡ ತಪ್ಪಿತು.

"'ಹೂ' ಮನೆಯಲ್ಲಿದ್ದಾನೆಯೇ?" ಅವಳು ಮೆಲ್ಲಗೆ ಕೇಳಿದಳು.

"ಏನು? ಹಂ, ಹೌದು; ಮನೆಯಲ್ಲಿ ಹಾಸಿಗೆಯ ಮೇಲಿದ್ದಾನೆ."

ಅವಳ ಕಣ್ಣೆದುರಿಗೆ ಅವನ ಬಾಡಿದ ಮುಖದ ಚಿತ್ರ ನಿಂತಿತು. ಆ ಕಾಫಿ ಬಣ್ಣದ ಕುರುಳುಗಳು; ಕೆಳಗೆ ಗಂಭೀರವಾದ ಕಣ್ಣುಗಳು! ಅವಳಿಗೆ ಮತ್ತೆ ಹೆದರಿಕೆ ಎನಿಸಿತು.

"ಅವನ್ನು ನೆಟ್ಟಗಾಗುವಂತೆ ಏನಾದರೂ ಮಾಡಲೇಬೇಕು."

"ಆದರೆ ಹೇಗೆ? ಯಾವುದರಿಂದ?" ಲಿನ್-ವೆನ್-ಕೆನ್ ಸೊಟ್ಟ ಮೋರೆ ಮಾಡಿದ. "ಎಷ್ಟೋ ಗೆಳೆಯರ ಗತಿಯೂ ಹೀಗೆಯೇ ಇದೆ. ಅವರನ್ನೆಲ್ಲ ವಿಶ್ರಾಂತಿಗೆ ಕಳಿಸಿದರೆ, ಕೆಲಸ ಮಾಡಲು ಯಾರು? ಮತ್ತು ಶೊಕ್ಕದ ಗತಿ ಏನು? ಕಾರ್ಯಕ್ರಮವನ್ನು ಯಾರು ಸೂಚಿಸಬೇಕು?"

ಅವಳು ಒಮ್ಮೆಲೇ ನಡುಗಿದಳು. "ಹಾಗಾದರೆ ನೀನು ಕಾಳಜಿ ತೆಗೆದುಕೊಳ್ಳಲೇಬೇಕು. ಹೌದು, ಎಚ್ಚರಿಕೆಯಿಂದಿರಬೇಕು."

ಅವಳ ಕಡೆಗೆ ನೋಡಿ ಅವನು ನಕ್ಕ. "ಅಂಥ ಎಚ್ಚರಿಕೆಗಳಿಗೆ ವೇಳೆ ಇಲ್ಲ. ಹೇಗಾದರೂ ಸಾವಿಗೆ ಸಿದ್ಧನಾಗಿದ್ದೇನೆ. ತಡವಾಗಲಿ, ಜೇಗ ಆಗಲಿ ಅದು ಬರಲೇಬೇಕು. ಇಲ್ಲದೆ ಹೋದರೆ ವೈರಿಗಳ ವಶವಾಗಬೇಕು."

ಅವಳು ಒಳಗೊಳಗೇ ನಿಟ್ಟುಸಿರು ಬಿಟ್ಟಳು. ಬಂದ ಹೆದರಿಕೆಯನ್ನು ತೋರಗೊಡಬಾರದೆಂದು ಪ್ರಯತ್ನಿಸಿದಳು. ನಾಲಿಗೆಯನ್ನು ಹಲ್ಲಿನ ನಡುವೆ, ಬಿಗಿದು ಹಿಡಿದಳು. ಗಲ್ಲಗಳು ನಡುಗುತ್ತಿದ್ದವು. 'ಹೂ' ಎಲ್ಲಿಯ ವರೆಗೆ ಬದುಕಬಹುದೆಂದು ಅವಳಿಗೆ ಚಿಂತೆ. ಇಬ್ಬರೂ ಕೂಡಿ ಅವನ ಮನೆಗೆ ಬಂದಾಗ ಅವನನ್ನು ನೋಡಿ ಅವಳಿಗೆ ಸಹಿಸುವದಾಗಲಿಲ್ಲ. ಮೈತುಂಬ ನಡುಗಿದಳು.

ರೋಗಿಗೆ ಜ್ವರ ಬಂದಿದ್ದವು; ಮುಖ ಕೆಂಪಾಗಿತ್ತು. ಅವನು ಕೆಮ್ಮಿದಾಗ, ಮುಖ ಹಿಂಡಿದಂತಾಗಿ, ಮೈಯೆಲ್ಲ ನೋವಿನಿಂದ ನಡುಗುತ್ತಿತ್ತು. ಕಡೆಗೊಮ್ಮೆ ಉಗುಳಿದಾಗ ಅವನಿಗೆ ಹಗುರೆನಿಸಿತು. ದಿಂಬಿನ ಮೇಲೊರಗಿ, ಕಣ್ಣು ಮುಚ್ಚಿ ಜೋರಾಗಿ ಉಸಿರು ಬಿಡಹತ್ತಿದ. ಸ್ವಲ್ಪ ಹೊತ್ತಿನ ಮೇಲೆ ಲಿನ್-ವೆನ್-ಕೆನ್‌ನ ಜೊತೆಗೆ ಮೆಲ್ಲಗೆ ಮಾತಾಡಹತ್ತಿದ. ಅಲ್ಲಿಯ ಗಾಳಿಯೂ ದೂಷಿತವಾಗಿತ್ತು. ಎಲ್ಲೆಲ್ಲಿಯೂ ಬೇನೆಯ ಲಕ್ಷಣಗಳೇ ಇದ್ದವು. ಲಿನ್-ವೆನ್-ಕೆನ್ ಹಾಸಿಗೆಯ ತುದಿಗೆ ಕುಳಿತು ಮಾತಾಡುತ್ತಿದ್ದ. ಆಗಾಗ ಕೆಮ್ಮಿನಿಂದ ಅವನಿಗೆ ಅಡ್ಡಿಯಾಗುತ್ತಿತ್ತು. ಈ ಸಂಕಟ ಪರಿಹರಿಸಲು ಸ್ಯಾಂಗ್-ಹ್ವಾ ದುಡ್ಡು ತರುವಳೆಂದು ಲೆನ್ ಹೇಳಿದಾಗ, ಅವನು ಪ್ರಯತ್ನಪಟ್ಟು ಅವಳಿಗೆ ಕೃತಜ್ಞತೆ ಸಲ್ಲಿಸಲು ಮುಖವೆತ್ತಿದ. ಅವಳು ಕಿಡಿಕಿಯ

ಹತ್ತಿರ ಬೆಂಚಿನ ಮೇಲೆ, ಮೂಗಿಗೆ ವಸ್ತ್ರ ಹಿಡಿದುಕೊಂಡು ಕುಳಿತಿದ್ದಳು. 'ಹೂ' ತನ್ನ ಕಡೆಗೆ ನೋಡುವನೆಂದು ತಿಳಿದೊಡನೆ ಅದನ್ನು ತೆಗೆದು, ಅವನನ್ನು ಹುರುಪುಗೊಳಿಸಲು ಇತ್ತ ತಿರುಗಿ ನಕ್ಕಳು.

"ದುಡ್ಡು ದೊರೆಯದೆ ನಾವು ಎಷ್ಟು ಕಾಲ ಹೋರಾಡಬಲ್ಲೆವು? ಆದರೂ ಈಗಲೇ ಸೋಲಬೇಕಾಗಿಲ್ಲ. ಅಲ್ಲಿ........" ಅವನಿಗೆ ತೇಕು ಹತ್ತಿತು "ಅಲ್ಲಿ ನಮ್ಮ ಹುತಾತ್ಮರಾದ ಗೆಳೆಯರಿದ್ದಾರೆ. ಅವರೂ........"

ಅವನು ಮತ್ತೆ ಭಯಂಕರವಾಗಿ ಕೆಮ್ಮಹತ್ತಿದ. ಅಲ್ಲಿಯೇ ಅವನ ಕರುಳು ಹೊರಗೆ ಬಂದು, ಸಾಯುಬಹುದೆಂವೆನಿಸಿತು. ಅವನ ಮುಖ ಕೆಂಪಾಯಿತು; ನರಗಳು ಹಗ್ಗಗಳಂತೆ ಮೇಲೆದ್ದವು. ಅವನ ದೇಹ ತೂಗಾಡುತ್ತಿದ್ದುದರಿಂದ ಮಂಚ ಕೂಡ ಚೀರುಗುಡುತ್ತಿತ್ತು. ಕಡೆಗೆ ಉಗುಳಿದ ಮತ್ತೆ ಹಿಂದೆ ಬಿದ್ದು ನಿಟ್ಟುಸಿರು ಬಿಟ್ಟು ತೇಕಹತ್ತಿದ. ಕಣ್ಣು ಅರ್ಧ ಮುಚ್ಚಿದವು. ಸ್ಯಾಂಗ್-ಹ್ವಾನ ಹೆದರಿದ ಮುಖದ ಕಡೆಗೆ ನೋಡಹತ್ತಿದ. ತಾನು ಅಷ್ಟೇನೂ ಹೆದರುವಷ್ಟು ಜೇನೆ ಬಿದ್ದಿಲ್ಲವೆಂದು ತೊರಿಸಲು ಮುಗುಳು ನಗೆ ನಕ್ಕ.

"ನಮ್ಮ ವಿಚಾರಗಳೆಲ್ಲ ಸಿದ್ಧಿಸಿದರೆ, ಹಾಂಗ್-ಕಾಂಗ್‌ದ ಚಳವಳಿಗಿಂತ ಹೆಚ್ಚಾದ ಚಳವಳಿಯನ್ನು ನಾವು ಹೂಡಬಹುದು." ಎಂದು ಅವನು ಮತ್ತೆ ತೇಕಹತ್ತಿದ. "ಆ ಲೀಯಿಂದ ನಿನಗೆಷ್ಟು ದೊರೆಯಬಹುದು? ನಿನಗೂ ಅವನಿಗೂ ಏನು ಸಂಬಂಧ?"

"ಅವನ ಹೆಸರು ಲೀ-ಸು-ಯಿ. ಅವನಿಗೂ ನನಗೂ ಏನೂ ಸಂಬಂಧವಿಲ್ಲ. ಸುಮ್ಮನೆ ಅವನನ್ನು ನಾನು ಚಿಕ್ಕಮ್ಮನ ಮನೆಯಲ್ಲಿದ್ದಾಗ ನೋಡಿದ್ದೆ. ನನ್ನ ಚಿಕ್ಕಮ್ಮ ತನ್ನ ಮಗಳನ್ನು ಅವನಿಗೆ ಕೊಡಬೇಕೆಂದಿದ್ದಾಳೆ. ನಾನು ಆಪ್ತಳೆಂದು ಮಾತ್ರ ಅವನಿಗೆ ಗೊತ್ತು. ಇದಲ್ಲದೆ ಅವನಿಗೂ ಆಸಕ್ತಿ ಇದೆ........"

ಅವಳು ನಗಹತ್ತಿದಳು. ಅವನೊಬ್ಬ ಶುಷ್ಕ ಮತ್ತು ಬೇಸರ ತರಿಸುವ ವ್ಯಕ್ತಿಯೆಂದು ವರ್ಣಿಸಿದಳು. "ಅದೆಲ್ಲ ಇರಲಿ," ಅವಳೆಂದಳು; "ದುಡ್ಡು

ಸಿಗಬೇಕಾದರೆ ಅವನನ್ನು ಯಥಾರೀತಿ ಮರುಳುಗೊಳಿಸಬೇಕು. ಅಂದರೇ ಗೆಲವು ಖಂಡಿತ. ''

ಮರುದಿನವೇ ಅವಳು ಲೀಯ ಜೊತೆಗೆ ಊಟ ಮಾಡಿದಳು. ಮದ್ಯ ಕುಡಿದು ಇಬ್ಬರೂ ಚೌ-ಫೆಂಗ್ ಪಾರ್ಕಿಗೆ ಬಂಧು ಸಂಗೀತ ಕೇಳುತ್ತ ಕುಳಿತರು. ಮುಖಕ್ಕೆ ಪೌಡರ್ ಹಚ್ಚಿಕೊಂಡಿದ್ದಳು. ಕೆನ್ನೆಗೆ ಕೆಂಪು ಬಣ್ಣ ಬಂದಿತ್ತು. ಯಾವಾಗಲೂ ನಗುತ್ತಿದ್ದಳು. ಹೂವಿನಂತೆ ಸಂತೋಷದಿಂದ ಅವಳ ಮುಖ ತುಂಬಿತ್ತು. 'ಲೀ'ಯೂ ಅಂದು ತನ್ನ ಬುದ್ಧಿಮಂತಿಕೆ, ಶ್ರೀಮಂತಿಕೆ ಮತ್ತು ರಸಿಕತೆಯ ಪ್ರದರ್ಶನ ಮಾಡಲು ಶ್ರಮ ತೆಗೆದುಕೊಂಡ. " ಎಂತಹ ಸುಂದರವಾದ ಆಲ್ಹಾದಕರವಾದ ಚಂದ್ರ ! '' ಎಂದು ನಾಟಕದಲ್ಲಿಯ ಪಾತ್ರದಂತೆ ವಿಶಿಷ್ಟವಾದ ಉಚ್ಚಾರಣೆಯೊಂದಿಗೆ ನುಡಿದ. ಬೇರೆ ಸೌಂದರ್ಯದ ಅಭಿವ್ಯಕ್ತಿಯನ್ನೂ ಮಾಡಿದ. ಪ್ರತಿಯೊಂದಕ್ಕೂ ನಿಟ್ಟುಸಿರು ಬೇರೆ. ಅದೇನೋ ಅವನಿಗೆ ಚೇಷ್ಟೆಯಂತೆ ಕಂಡಿರಬೇಕು. "ನಿನಗೆ ಸಂತೋಷವಾಗಿಲ್ಲವೇ ?'' ಹತ್ತು ಬಾರಿ ಅವಳನ್ನು ಕೇಳಿದ. ವಿನಯವಂತೂ ತುಂಬಿ ತುಳುಕುತ್ತಿತ್ತು. ಹೋದಲ್ಲೆಲ್ಲ ರಾಜಗಾಂಭೀರ್ಯದಿಂದ ತನ್ನ ತೋಳನ್ನು ಅವಳಿಗೆ ನೀಡುತ್ತಿದ್ದ.

ಲೀಗೆ ನಾಲ್ವತ್ತು ವರ್ಷಗಳಾಗಿರಬೇಕು. ತಲೆಯಲ್ಲಿ ಎಲ್ಲ ಕಡೆಗೆ ಮಿಂಚುವ ಕೂದಲಿದ್ದರೂ ನೆತ್ತಿಯ ನಡುವೆ ಬೋಳಾಗಿತ್ತು. ಯಾವಾಗಲೂ ಬಲಗೈಯ ಬೆರಳನ್ನು ಆ ಬೋಳು ಜಾಗದಲ್ಲಿ ಆಡಿಸುವದು ಅವನಿಗೊಂದು ಚಟ. ಸಕ್ಕರೆ ಮತ್ತು ರಬ್ಬರ ಪೇಟೆಗಳ ಬಗ್ಗೆ ಯಾರಾದರೂ ಮಾತಾಡಿದರೆ ಉತ್ಸಾಹದಿಂದ ತಲೆ ಎತ್ತುತ್ತಿದ್ದ. ಆದರೂ ಇಂಥ ವಿಷಯಗಳನ್ನು ಹೆಣ್ಣು ಮಕ್ಕಳೆದುರಿಗೆ ಚರ್ಚಿಸದಂತೆ ನೋಡಿಕೊಳ್ಳುತ್ತಿದ್ದ. ಕಣ್ಣುಗಳನ್ನು ಅರ್ಧ ಮುಚ್ಚುತ್ತಿದ್ದ. ಜನರು ತನ್ನನ್ನು ಅರ್ಥ ಮಾಡಿಕೊಳ್ಳಲಾರರೆಂದು ದುಃಖದಿಂದ ಹೇಳುತ್ತಿದ್ದ. ಯಾರಾವರೂ ಅವನ ದುಂಡು ಹೊಟ್ಟೆಯ ವಿಷಯವಾಗಿ ಮಾತಾಡಿದರೆ ಅವನಿಗ ಸೇರುತ್ತಿರಲಿಲ್ಲ. ಅವನಿಗೆ ತಾನು ಅಷ್ಟೊಂದು ದಪ್ಪನಾಗಿಲ್ಲವೆಂದೇ ನಂಬಿಕೆ; ಕೇವಲ ತನ್ನ ಹೊಟ್ಟೆ ಕೆಲವರಿಗಿಂತ ದೊಡ್ಡದಾಗಿತ್ತು ಅಷ್ಟೇ. ಇದಕ್ಕೆ ಕಾರಣ ತಾನು ಕುಡಿಯುವ 'ಬಿಯರ್' ಎಂದು ಅವನು ತಿಳಿಸುತ್ತಿದ್ದ.

ಸ್ಯಾಂಗ್-ಹ್ವಾ ಅವನ ಹುಚ್ಚು-ಮುಖದ ಕಡೆಗೂ, ಉಬ್ಬು-ಹಲ್ಲಿನ ಕಡೆಗೂ ತನ್ನ ದೃಷ್ಟಿ ಬೀರಿದಳು. ಒಂದಿಲ್ಲೊಂದು ದಿನ ತನ್ನ ಅಕ್ಕ ಆ ತೋಳಿನ ವಶವಾಗಬೇಕು; ಆ ಉಬ್ಬುಹಲ್ಲಿನ ಸುಖವನ್ನನುಭವಿಸಬೇಕು ಎಂಬುದು ಅವಳಿಗೆ ಗೊತ್ತಾಯಿತು. ಅದನ್ನು ನೆನೆದು ಅವಳಿಗೆ ಮೋಜು ಎನಿಸಿತು.

"ಯಾಕೆ ನಗುತ್ತೀ ?" ಎಂದು ಅವನು ಮೃದುವಾಗಿ ಕೇಳಿದನು.

"ನಾನು ಅಕ್ಕ ಪೌ-ಚೆನ್‌ಳ ವಿಷಯ ವಿಚಾರಿಸುತ್ತಿದ್ದೆ. ಅವಳು ನಮ್ಮನ್ನಿಲ್ಲಿ ನೋಡಿದರೆ, ಎಷ್ಟು ಉರಿಯಬಹುದು ?"

ಅವನು ಹುಬ್ಬುಗಂಟಿಕ್ಕಿದ; ತಲೆ ತುರಿಸಿದ. "ಅವಳು ನನಗೆ ತಕ್ಕ ಹೆಂಡತಿಯಲ್ಲ, ಸ್ವಭಾವದಲ್ಲಿ. ಅವಳ್ಲವೆ ನೀನು, ನೀನಾಗಿದ್ದರೆ — ನನ್ನ ಬಗ್ಗೆ ನಿನಗೇನೆನಿಸುತ್ತದೆ ? ನಾನು ನಿನಗೆ ಬೇಸರಾಗಿದ್ದೇನೆಯೋ ?"

ಅವಳು ನಗುತ್ತ ಅವನ ತೋಳನ್ನು ಮಿದುವಾಗಿ ಹಿಚುಕಿದಳು. ಅದು ಅವಳ ರೀತಿಗಳಲ್ಲೊಂದಾಗಿತ್ತು. ಅವಳು ಏನೂ ಹೇಳಲೇ ಇಲ್ಲ.

ಒಂದು ಬಿರುಸು ಗಾಳಿ ಬೀಸಿ, ಅವಳ ರೇಶಿಮೆಯ ಮೇಲಂಗಿಯನ್ನು ಕಾಲಿಗೆ ತೊಡಕಿಸಿತು; ಮದ್ಯವೂ ಅವಳ ಮೇಲೆ ಪರಿಣಾಮವನ್ನು ಮಾಡಿತ್ತು; ಅವಳ ದೇಹ ಹಗುರಾಗಿತ್ತು; ಮೋಡಗಳ ಮೇಲೆಯೇ ನಡೆದಂತೆ ಅವಳಿಗೆ ಭಾಸವಾಯಿತು; ಗಾಳಿಯಲ್ಲಿ ಸುಗಂಧ ತುಂಬಿದಂತೆನಿಸಿತು. ಅದೇನು ಹೂಗಳದೋ, ಅಥವಾ ಹುಲ್ಲಿನದೋ, ಅಥವಾ ಬೇರೆ ಎಲ್ಲಿಯದಾದರೋ ? ಹತ್ತಿರ ಹಾದು ಹೋಗುತ್ತಿದ್ದವರನ್ನು ನೋಡಿದಳು. ಅವರ ಮುಖ ಸಂತೋಷದಿಂದ ತುಂಬಿತ್ತು, ಜಗತ್ತಿನಲ್ಲಿ ನೋವೆಂಬುವ ವಸ್ತುವೇ ಇಲ್ಲವೇನೋ ಎನ್ನುವಂತೆ. ಅವಳು ಗಾಳಿಯಲ್ಲಿ ತೇಲಿದಳು. "ಅಂತೂ ಜಗತ್ತೂ ಸುಂದರವಾಗಿದೆ" ಎಂದಳು.

ಅವಳು ನಡೆಯುತ್ತಿರಲಿಲ್ಲ; ಜಿಗಿಯುತ್ತಿದ್ದಳು. ಅವಳ ಹೃದಯದಲ್ಲಿ ನಿಷ್ಕಾರಣವಾಗಿ ನಗುವಿನ ಗುಳ್ಳೆಗಳೇಳುತ್ತಿದ್ದವು. ಅವಳು ಆಡಿದ ಪ್ರತಿ ಮಾತಿಗೂ, ದೇಹ ತಾಳ ಹಾಕುತ್ತಿತ್ತು. ಮುಖ ತಿರುಗಿಸಿದಾಗ, ಭುಜ ಎತ್ತಿದಾಗ ಅವಳಿಗೆ ಒಂದು ಹೊಸ ಬಗೆಯ ಆನಂದವಾಗುತ್ತಿತ್ತು.

" ಶಾಂಘಾಯಿಯಲ್ಲಿ ಜೀವನ ಇದೆಯೆಂದು ಈ ಮೊದಲು ನನಗೆ ಗೊತ್ತಿರಲಿಲ್ಲ. "

ಅವರೆದುರು ಚಿಕ್ಕ ಮಕ್ಕಳು ಒದರುತ್ತ ಬಂದವು. ಅವಳಿಗೆ ತಾನೂ ಅವರಲ್ಲೊಬ್ಬಳು ಎನಿಸಿತು. ಮುಖದಿಂದ ಮುಸುಕೊಂದು ಹರಿದಂತೆನಿಸಿ, ಅವಳು ಹಾಯಾಗಿ ಉಸಿರು ಬಿಡಹತ್ತಿದ್ದಳು. ಅವಳಿಗೆ ಸ್ವಾತಂತ್ರ್ಯ ಸಿಕ್ಕಿತ್ತು. ಜೀವಿಸುವದೊಂದೇ ಆನಂದವನ್ನೀಯುತ್ತಿತ್ತು. ಜಗತ್ತೆಲ್ಲ ಕೇವಲ ತನ್ನ ಸುಖಕ್ಕಾಗಿಯೇ ಇದೆ ಎಂದೆನಿಸಿತು.

ಕತ್ತಲೆಯಾಯಿತು. ಮೋಡಗಳ ಹಿಂದೆ ಚಂದ್ರ ಮೂಡಿದ. ಗಾಳಿ ತಣ್ಣಗೆ ಬೀಸಿ ಸ್ಯಾಂಗ್-ಹ್ವಾಳ ಮೇಲಂಗಿಯನ್ನು ಅವಳ ಮೈಗೆ ಒರಗಿಸಿತು.

' ಲೀ ' ಒಮ್ಮೆಲೆ ತನ್ನ ಬಿರುಸು ಕೈಯನ್ನು ಅವಳ ಹೆಗಲ ಮೇಲೆ ಇರಿಸಿದ. ಆಗ ಅವಳಿಗೆ ತನ್ನ ದೇಹದ ಅರಿವಾಯಿತು.

" ನಾನು ನಿನ್ನನ್ನು ಶಾಲೆಗೆ ಕರೆದೊಯ್ಯಲೇ ?

ಶಾಲೆ ! ಅವನಿಗೆ ತನ್ನ ನಿಜವಾದ ವಿಳಾಸ ಗೊತ್ತಿಲ್ಲವೆಂದು ಅವಳು ಮರೆತಿದ್ದಳು. ಅವಳಿನ್ನೂ ಶಾಲೆಗೇ ಹೋಗುವಳೆಂದು ಅವನು ತಿಳಿದಿದ್ದ.

" ಬೇಡ, ನಾನು ವಿಸ್ತರಣದ ಕಡೆಗೇ ಹೋಗುತ್ತೇನೆ. " ಅವಳು ಅವಸರದಿಂದ ನುಡಿದಳು. " ನನ್ನನ್ನು ಚಿಕ್ಕಮ್ಮನ ಮನೆಗೆ ಒಯ್ಯಿರಿ. ನಾನು ಇಂದು ರಾತ್ರಿ ಅಲ್ಲಿಯೇ ಇರುತ್ತೇನೆ. "

ಇಬ್ಬರೂ ಕಾರಿನಲ್ಲಿ ಕುಳಿತರು. ಅವನ ಮುಖ ಅವಳ ಮುಖಕ್ಕೆ ಸರಿಯಿತು. " ನಿನಗೆ ನನ್ನಿಂದ ನೆರವು ಬೇಕಾದರೆ.........ನನಗೆ ಮತ್ತಿಷ್ಟು ಆನಂದ. ಈ ವ್ಯವಸ್ಥೆ ಕೆಟ್ಟದ್ದೇನೂ ಅಲ್ಲ........"

ಅವಳು ಅದರರ್ಥ ವಿಪರೀತ ತಿಳಿದುಕೊಂಡಿರಬೇಕು. ಆದರೂ ಅವಳೇನೂ ಮಾತನಾಡಲಿಲ್ಲ. " ವೆನ್-ಕೆನ್ ಬಳಿಯಲ್ಲಿದ್ದರೇನು, ವ್ಯವಸ್ಥೆ ಇನ್ನೂ ಚೆನ್ನಾಗುತ್ತಿತ್ತು. " ಎಂದು ಅವಳು ತನ್ನಷ್ಟಕ್ಕೇ ಅಂದುಕೊಂಡಳು. ಆದರೆ ಚಂದ್ರನ ಕಡೆಗೆ ನೋಡುತ್ತ ಕೂಡಲು ವೆನ್-ಕೆನ್‌ನಿಗೆ ವೇಳೆ ಇರಲಿಲ್ಲ. ಹೀಗೆಲ್ಲ ಮಾಡುವುದು ಕ್ರಾಂತಿಗಾಗಿ ಕೂಡಿಸಬೇಕಾದ ನಿಧಿಯ ಮತ್ತು ವೇಳೆಯ ಹಾನಿ ಎಂದೇ ಅವನು ತಿಳಿಯುತ್ತಿದ್ದ. ಲೀಗೆ ತನ್ನ

ಉದ್ದೇಶವನ್ನು ಕುರಿತು ಅವಳೇನೂ ಹೇಳಿರಲಿಲ್ಲ. ನಾಳೆಯೇ ನಿಶ್ಚಿತವಾಗಬೇಕು ಅದು. ನಾಳೆ ಅವನಲ್ಲಿಗೆ ಹೋಗಬೇಕೆಂದು ಸಂಕಲ್ಪಿಸಿದಳು. ಯಾವುದಾದರೂ ಸುಳ್ಳನ್ನು ಹೇಳಬೇಕೆಂದು ಯೋಚಿಸಿದಳು. ಏನಾದರೂ ತೆಗೆದುಕೊಳ್ಳಲಿಕ್ಕೆ ರೊಕ್ಕ ಬೇಕೆಂದು ತಿಳಿಸಬೇಕೇ ? ಅಥವಾ ತನಗೆ ಸಾಲಗಳಿವೆಯೆಂದು ಹೇಳಬೇಕೇ ? ಆದದ್ದಾಗಲಿ ಅವಳು ಕಣ್ಣು ಮುಚ್ಚಿಕೊಂಡಳು.

" ಇವೊತ್ತಾದರೂ ನಾನು ಸ್ವತಂತ್ರಳಾಗಿದ್ದೇನೆ. ಇಂದು ನಾನು ಬಾಳಿದೆ. "

ಆದರೆ ಈ ಸ್ವಾತಂತ್ರ್ಯವೂ ಕನಸೆಂದು ಅವಳಿಗೆ ತಿಳಿದಿತ್ತು. ಇದೂ ಕೂಡ ತನಗಿಂತ ಶಕ್ತಿಯುತನಾದ ದೈವವೊಂದು ರಚಿಸಿದ ನಾಟಕದ ಭಾಗವಾಗಿತ್ತು. ಅಂಥ ವಿಸ್ತಾರವಾದ ಶಕ್ತಿಯಲ್ಲಿ ಅವಳೊಂದು ಕಣ ಮಾತ್ರವಾಗಿದ್ದಳು. ಇಂದು ಅವಳಿಗೆ ದೊರೆತ ಆನಂದ ನಿಜವಾಗಿಯೂ ನಿರರ್ಥಕವಾಗಿತ್ತು. ಅದು ಅಮರವಾದದ್ದಲ್ಲ ಮತ್ತು ಅದರಲ್ಲಿ ತಥ್ಯವಿರಲಿಲ್ಲ. ಅವಳು ಹೋಗಬೇಕಾದ ದುಃಖಪೂರ್ಣವಾದ ಮನೆ, ಅವಳು ಆರಿಸಿಕೊಂಡ ರಹಸ್ಯವಾದ ಕಾರ್ಯ ಇವೇ ಮಾತ್ರ ಚೈತನ್ಯಪೂರ್ಣವಾಗಿದ್ದವು; ಅವೇ ನಿಜವಾದ ಜೀವನಸತ್ವ, ಅವೇ ಜೀವನದ ಸರಿಯಾದ ಅರ್ಥ..........
' ಹೋರಾಟ '

( ೩ )

ಮತ್ತೆ ಸಂಜೆಯಾಯಿತು; ಮತ್ತೆ ಅದೇ ಕಿತ್ತಳೆ ಬಣ್ಣದ ಚಂದ್ರ ಸ್ವಲ್ಪ ದೊಡ್ಡವನಾಗಿ ಬೆಳಗುತ್ತಿದ್ದ. ಎಷ್ಟೋ ಜನರು ' ಹೂ 'ನ ಮನೆಯಲ್ಲಿ ಕೂಡಿದ್ದರು. ಸ್ಯಾಂಗ್-ಹ್ವಾಳೂ ಇದ್ದಳು. ಅವಳು ಅವನ ಹಾಸಿಗೆಯಿಂದ ಬಹು ದೂರ ಕುಳಿತಿದ್ದಳು. ಅವನ ಕಡೆಗೆ ನೋಡುವ ಧೈರ್ಯವಿರಲಿಲ್ಲ. ಕೆಮ್ಮಿನಿಂದ ದೇಹ ಚೂರುಚೂರಾಗುತ್ತಿತ್ತು. ತನ್ನ ಕೈಗಳನ್ನು ನೋಡುತ್ತ ಸುಮ್ಮನೆ ಕುಳಿತಿದ್ದಳು. ಉಸಿರೇಳುತ್ತಿರಲಿಲ್ಲ.

" ಅವನ ಆಟ ಮುಗಿಯಿತು. " ಎಂದು ಯಾರೋ ಪಿಸುಗುಟ್ಟಿದರು.

ಲೆನ್-ವೆನ್-ಕೆನ್ ಯಾವುದೋ ಔಷಧವನ್ನು ನೆಲಕ್ಕೆ ಸಿಂಪಡಿಸಿದ.

' ಸ್ಟೂ ' ಆ ಒಣಗಿದ ದೇಹವನ್ನು ಒರಗಿಸಿದ. ಹಾ-ವಿ-ಸಿನ್ ಹಾಸಿಗೆಯ ಹತ್ತಿರ ಕುಳಿತು ' ಪೂ 'ನ ಗದ್ದವನ್ನು ಹಿಡಿದ. ಈಗಂತೂ ಅವನ ಕೆಮ್ಮಿಗೆ - ತಡೆಯೇ ಇರಲಿಲ್ಲ. ಕೆಮ್ಮಿದಾಗೊಮ್ಮೆ ತುಟಿಯಲ್ಲಿ ರಕ್ತ ಬೀಳುತ್ತಿತ್ತು. ಅವನ ಮೂಗು ಗದ್ದದ ಬಣ್ಣ, ಹಳೆಯ ಅರಗಿನಂತೆ ಕೆಂಪಾಗಿತ್ತು. ಮುಖ ವೆಲ್ಲ ಹಳದಿಯಾಗಿತ್ತು. ಕಣ್ಣು ಮುಚ್ಚಿದ್ದುವು. ಮುಖ ಬಲಹೀನವಾಗಿತ್ತು. ಕೆಮ್ಮಿದಾಗೊಮ್ಮೆ ಹೊಸ ಜೀವನ ಬಂದಂತಾಗುತ್ತಿತ್ತು. ನೋವವನ್ನೂ ಮರೆತು ಏನನ್ನೊ ಹೇಳಲು ಪ್ರಯತ್ನಿಸಿದ. ಏನೋ ಮಹತ್ವದ ವಿಷಯ ವೆಂದೆನಿಸಿತು. ತುಟಿ ಅಲುಗಾಡಿದವು; ಅವನು ತೊದಲಹತ್ತಿದ.

" ಮಾತಾಡಬೇಡ. ಆಯಾಸವಾಗುತ್ತದೆ. ಸ್ವಲ್ಪ ಮಲಗಿರು. "

ಒಮ್ಮೆಲೆ ಸ್ಯಾಂಗ್-ಹ್ವಾ ಚೀರಿದಳು. ಆಮೇಲೆ ಅಳಹತ್ತಿದಳು. ಎಲ್ಲರೂ ಆಶ್ಚರ್ಯದಿಂದ ತಿರುಗಿ ನೋಡಿದರು. " ನನಗೆ ಸಹಿಸದಾಗದು ! ಅವನಲ್ಲಿಯ ಜೀವ ಹೊರಹೋಗಲು ಒದ್ದಾಡುವದನ್ನು ನಾನು ನೋಡ ಲಾರೆ ! " ಎಂದು ಬಿಕ್ಕಿ ಬಿಕ್ಕಿ ಅಳಹತ್ತಿದಳು.

" ಗೆಳೆಯ ಲೆನ್, ದಯಮಾಡಿ ಅವಳನ್ನು ಮನೆಗೆ ಒಯ್ದು ಬಿಡು. " ಎಂದು ಗುಂಪಿನವರಲ್ಲೊಬ್ಬ ಹೇಳಿದ.

ಲೆನ್ ಅವಳ ತೋಳನ್ನೆತ್ತಿದಾಗ, ಅವಳಿಗೆ ನಿಲ್ಲಲಿಕ್ಕೂ ತ್ರಾಣವಿರಲಿಲ್ಲ. ಅರ್ಧ ಎಳೆಯುತ್ತ ಅರ್ಧ ಎತ್ತಿ ಅವಳನ್ನು ಹೊರಗೆ ತಂದ. ಕುತ್ತಿಗೆಯ ನರಗಳು ಉಬ್ಬಿದ್ದವು. ಅವರಿಬ್ಬರೂ ಹೊರಗೆ ಎಡವುತ್ತ ನಡೆದಾಗ ಅವ ಳಲ್ಲಿ ನಿರಾಶೆಯ ಮಬ್ಬು ತುಂಬಿತ್ತು.

" ಯಾಕೆ ? " ಎಂದು ಅವಳು ಯಾಂತ್ರಿಕವಾಗಿ ಕೇಳಿದಳು. " ನಮಗೆ ಜೀವನ ಯಾಕೆ ಹೀಗೆ ಕಾಣಿಸಬೇಕು ? ಈ ಕಟುತ್ವ, ಈ ಗಂಡಾಂತರ, ಯಾವಾಗಲೂ ಕಾಯುತ್ತ ಕುಳಿತ ಈ ಸಾವು, ಯಾಕೆ ಹೀಗೆ ? "

ಲೆನ್ ಅವಳನ್ನು ಗಟ್ಟಿಯಾಗಿ ಹಿಡಿದು ಸುಮ್ಮನಿರಲು ಹೇಳಿದ.

" ಅದು ಯಾತರ ಸಲುವಾಗಿ ? ಅದರಿಂದ ಅವನಿಗೇನು ಸಿಕ್ಕಿತು ? ಜೀವನದಲ್ಲಿಯ ಹಿಂದಿನ ಯಾವತ್ತು ಸಣ್ಣ ನೋವುಗಳೆಲ್ಲ ಕೂಡಿ ಆದ ಒಂದೇ ಒಂದು ನೋವು ಈ ಸಾವು ಎಂಬುದು. ಅಲ್ಲವೇ ? ಸಾವೆಂದರೆ

ಅದೇ ಏನು ? ಸ್ವಲ್ಪ ಹೊತ್ತು ಹಿಂದೆ ಅವನಲ್ಲಿ ಜೀವವಿತ್ತು. ಈಗ ಅವನು ಸತ್ತಿದ್ದಾನೆ. ಅಥವಾ ಆ ಕರಾಳ ಬೇನೆಯ ಕೈಯಲ್ಲಿ ಸತ್ತಂತೆಯೇ ಇದ್ದಾನೆ. ''

'' ಸುಮ್ಮನಿರು, ನಮಗೆಲ್ಲ ಹಾಗೆಯೇ ಅನಿಸುವದಿಲ್ಲವೇ ! ಸ್ವಲ್ಪ ಸುಮ್ಮನಿರು. ಸೈರಿಸಿಕೋ ''

ಮನೆ ಸೇರಿದಾಗ, ಅವಳು ಅವನಿಂದ ಕೊಸರಿಕೊಂಡು ಹಾಸಿಗೆಯ ಮೇಲೆ ಬಿದ್ದಳು. ಅವಳ ದೇಹ ನಡುಗುತ್ತಿತ್ತು. ಎದೆ ತುಂಬಿ ಬಂದಿತ್ತು. ಲೆನ್ ಸುಮ್ಮನೆ ನೋಡುತ್ತ ನಿಂತ.

'' ಇನ್ನೆಲ್ಲ ನಮ್ಮನ್ನು ಎತ್ತ ಕಡೆಗೆ ಒಯ್ಯಬಹುದು ಲೆನ್ ?'' ಎಂದು ಅವಳು ಕಣ್ಣೀರು ಸುರಿಸುತ್ತ ಕೇಳಿದಳು. '' ಮುದುಕ ' ಪೊನ್ 'ನನ್ನು ನೆನೆ. ಅವನೂ ನೋವು ತುಂಬಿದ ಬಾಳನ್ನು ಬಾಳಿದ. ಕೊನೆಗೆ ಹೀಗೆಯೇ ಸತ್ತ. ಸುಖವನ್ನು ಬಯಸುವ ಹಕ್ಕು ಮಾನವನಿಗಿಲ್ಲವೇ ? ''

ಲೆನ್ ಹಾಸಿಗೆಯ ಮೇಲೆ ಕುಳಿತ. ಆದರೆ ಅವಳ ಕಡೆಗೆ ನೋಡಲಿಲ್ಲ. ಅವಳ ಬಡಿದುಕೊಳ್ಳುವ ಹೃದಯ, ನಡುಗಿಸುವ ಬಿಕ್ಕು ಅವನಿಗೆ ಕೇಳುತ್ತಿದ್ದವು. ಅವಳು ಅವನಿಗೊರಗಿ, ತನ್ನ ತಲೆಯನ್ನು ಅವನ ಭುಜದ ಮೇಲಿರಿಸಿದಳು.

'' ಸುಖ........'' ಅವನು ಕೊನೆಗೆ ಹೇಳಿದ: '' ಸುವರ್ಣಸಂಪುಟದಲ್ಲಿ ಬೆಳೆದು ಉಳಿದ ಜಗತ್ತನ್ನು ತಿರಸ್ಕರಿಸುವದೇ ಅಲ್ಲವೇ ? ಆದರೆ ನಮಗೆ ಹಾಗಿರಲು ಸಾಧ್ಯವಿಲ್ಲ. ನಾವೇನು ವನಸ್ಪತಿಗಳೇ, ಹುಳಗಳೇ ? ನಾವು ಮನುಷ್ಯರು, ಸತ್ಯವಾದ ಸುಖವೊಂದರಲ್ಲಿ ನಮಗೆ ನಂಬಿಕೆ ಇದೆ. ''

ಅವಳು ದುಃಖವನ್ನು ತಡೆಯಲು ಯತ್ನಿಸಿದಳು. ಅವಳ ಧ್ವನಿಗೆ ಒಂದು ಕೃತ್ರಿಮತೆ ಬಂತು. '' ಮನುಷ್ಯರು ಬಹಳಾದರೆ ಹತ್ತು ವರ್ಷ ಸುಖದಿಂದಿರುತ್ತಾರೆ. ಇಷ್ಟಿದ್ದೂ ಅವನು ಬೇಕೆಂದೇ ದುಃಖವನ್ನು ಹುಡುಕುವದು ಯಾವ ನ್ಯಾಯ ? '' ಎಂದಳು.

ಲೆನ್ ಏನೋ ಹೇಳಬೇಕೆಂದ.

" ಕೇಳು " ಎಂದು ಅವಳು ನಡುವೆ ಬಾಯಿ ಹಾಕಿದಳು. " ನಾವು ಮನುಷ್ಯರೆಂದೇ ನಮಗೆ ನಮ್ಮ ಮಾರ್ಗವನ್ನು ಆರಿಸುವ ಅಧಿಕಾರವಿದೆ. ಅದು ನೋವಿನದಾಗಿರಬಾರವಲ್ಲವೇ ? ನನಗೆ, ಬೆಳಕಿಲ್ಲದೆ, ವಿಸ್ತಾರವಾದ ಆಕಾಶವಿಲ್ಲದೆ, ನಿರ್ಮಲವಾದ ಸುಖವಿಲ್ಲದೆ, ಬಾಳಲಾರೆನೆಂದೆನಿಸುತ್ತದೆ. ಮತ್ತು ನಮ್ಮ ಜೀವನ ಈ ರಹಸ್ಯವಾದ ಇರುವಿಕೆ, ನಮಗೆ ನಿರ್ಮಲವಾದ ಗಾಳಿಯನ್ನೂ, ಹೊಂಬೆಳಕನ್ನೂ ಸೇವಿಸುವ ಅಧಿಕಾರವನ್ನೂ ಕೊಡುವದಿಲ್ಲ."

ಲೆನ್ ಅವಳನ್ನು ಚುಚ್ಚುವಂತೆ ನೋಡಿದ. ಅವನ ಉತ್ತರದಲ್ಲಿ ಬೇಸರ ತುಂಬಿತ್ತು. " ಸ್ವಾತಂತ್ರ್ಯವನ್ನು ಸತ್ಯಸೃಷ್ಟಿಗಿಳಿಸಬೇಕಾದರೆ, ಹಳೆಯ ಸಂಪ್ರದಾಯಗಳನ್ನು ಬಿಟ್ಟು ಹೊಸ ಸಮಾಜವನ್ನು ನಿರ್ಮಿಸಲೇ ಬೇಕು. ಆದರೆ ಇಲ್ಲಿ ನೋಡು, ಇವೆಲ್ಲ ನಿನಗೆ ಗೊತ್ತು. ನೀನೇ ಇವೆಲ್ಲ ನೋಡಿದ್ದೀ. "

ಸ್ಯಾಂಗ್-ಹ್ವಾ ಮುಖವನ್ನೆತ್ತಿ ಅವನ ಗದ್ದಕ್ಕೆ ತುಟಿಯನ್ನೊಯ್ದಳು.

" ಹೌದು, ಅದೆಲ್ಲ ನನಗೆ ಗೊತ್ತು. ಆದರೆ ಆ ಸ್ವಾತಂತ್ರ್ಯ ನಮ್ಮ ಕಾಲದೊಳಗೇ ಸಿಗಬಹುದೇ ? "

" ನಮ್ಮ ಪೀಳಿಗೆಗಲ್ಲವಾದರೂ, ಮುಂದಿನ ಪೀಳಿಗೆಗೆ ಸಿಗಬಹುದು. ಈ ತಿಳಿವಳಿಕೆಯಿಂದಲೆ ನೋಡಿದರೆ ನಮಗೂ ಅರ್ಥವಿದೆ. " ಅವಳಿಗೊರಗಿ ಅವಳನ್ನಪ್ಪಿದ. " ಒಂದು ದಿನಕ್ಕೆಂದರೆ ಇಷ್ಟೆಲ್ಲ ನಿನಗೆ ಬಹಳವಾಯಿತು. ವಿಶ್ರಾಂತಿ ತೆಗೆದುಕೋ. ನಾಳೆ ಎಲ್ಲ ಮಾತಾಡೋಣ "

ಅವಳು ಬಟ್ಟೆ ಕಳಚಿ ಹಾಸಿಗೆಯಲ್ಲಿ ಒರಗಿದಳು. ಅವನು 'ಹೂ'ನ ಹತ್ತಿರ ತಿರುಗಿ ಹೋಗಲನುವಾದ.

ಅವಳು ಅವನ ಕೈ ಹಿಡಿದು " ನಿನ್ನದೇ ಸರಿ ಇರಬಹುದು, ನನಗೂ ಬುದ್ಧಿ ಹೋಗಿರಬಹುದು. ನನಗೆ....ಹೋಗಲಿ ಬಿಡು. ನನ್ನ ಬಗ್ಗೆ ನಿನ್ನ ಅಭಿಪ್ರಾಯವನ್ನು ನಾಳೆ ಹೇಳು. " ಎಂದು ಕೈ ಬಿಟ್ಟಳು.

ಅವನು ದೀಪ ಕಳೆದು, ಬಾಗಿಲು ಮುಚ್ಚಿ ಅಟ್ಟವಿಳಿದು ಹೋದ. ಅವನ ಹೆಜ್ಜೆಯ ಸಪ್ಪಳ ಕೇಳದಾಗಲು, ಮತ್ತೆ ಅವಳಲ್ಲಿ ಹೆದರಿಕೆ ತುಂಬಿತು. ಸ್ವಲ್ಪ ಹೊತ್ತಿನ ಮೇಲೆ ಯಾರೋ ಬಂದಂತೆನಿಸಲು ಚಟ್ಟನೆ ಎದ್ದು ದೀಪ

ಹತ್ತಿಸಿದಳು, ಕೂಗಿದಳು; ಯಾರೂ ಉತ್ತರ ಕೊಡಲಿಲ್ಲ. ಆಗ ಅವನೊಬ್ಬ ಗಸ್ತಿಯ ಪೋಲೀಸನೆಂದು ಗೊತ್ತಾಗಿ ಹಾಸಿಗೆಯ ಮೇಲೆ ಮತ್ತೆ ಬಿದ್ದಳು.

"ನನಗೆ ಇದನ್ನು ಸಹಿಸುವದಾಗದು!" ಎಂದು ಗಟ್ಟಿಯಾಗಿ ಒದರಿದಳು.

"ವಿಚಾರ ಮಾಡಿದರೆ ಎಲ್ಲವೂ ಮೂರ್ಖತನವಲ್ಲವೇ? ಕೆಲವು ವರ್ಷ ಮಾತ್ರ ನಮ್ಮ ಆಯುಷ್ಯವಿರುವಾಗ ಯಾವುದೋ ಕಾಣದ ಧ್ಯೇಯದ ಸಲುವಾಗಿ ಅವಕ್ಕೆಲ್ಲಾ ಕಳೆದುಕೊಂಡುಬಿಡಬೇಕೇ!"

ಮರುದಿನ ನಸುಕಿನಲ್ಲಿ ವೆನ್-ಕೆನ್ ಬರುವದರೊಳಗೆ, ಒಂದು ಪತ್ರವನ್ನು ಬರೆದು, ಅದರಲ್ಲಿ ತನಗೆ ಒಂದು ತಿಂಗಳು ಬಿಡುವು ಬೇಕೆಂದು ತಿಳಿಸಿ ಸಂಘಕ್ಕೆ ಕಳಿಸಿಕೊಟ್ಟಳು. ತೊಗಲಿನ ಒಂದು ಬ್ಯಾಗಿನಲ್ಲಿ ತನ್ನ ಸಾಮಾನು ಹಾಕಿಕೊಂಡು ಚಿಕ್ಕಮ್ಮನ ಬಳಿಯಲ್ಲಿರಲು ಹೊರಟುಹೋದಳು.

## (೪)

ಲೀ-ಸ್ಯು-ಯಿ ಅಷ್ಟೊಂದು ಲೋಕಪ್ರಿಯನಲ್ಲದಿದ್ದರೂ ಅವನಲ್ಲಿಯೂ ಕೆಲವು ಸದ್ಗುಣಗಳಿದ್ದವು. ಸ್ಯಾಂಗ್-ಹ್ವಾನ ಕೇಳಿದ್ದೊಂದೇ ತಡ ಅವಳ ಆ ಆಸೆಯನ್ನು ಪೂರ್ಣ ಮಾಡಲು, ಕೂಡಲೇ ಔದಾರ್ಯದಿಂದ ಒಪ್ಪಿಕೊಂಡಿದ್ದ. ಅವಳನ್ನು ಸುಖಪಡಿಸಲು ಸಾಕಷ್ಟು ಶ್ರಮಪಟ್ಟಿದ್ದ; ಅವನು ತನ್ನ ಮೇಲೆ ತೋರಿಸುವ ಪ್ರೀತಿ, ತನ್ನ ಚಿಕ್ಕಮ್ಮನ ಮನಸ್ಸಿಗೆ ಬರಲಾರದೆಂದೂ ಅವಳಿಗೆ ತಿಳಿದಿತ್ತು; ಅವಳಿಗೆ ತನ್ನ ಒಬ್ಬ ದೊಡ್ಡ ಅಳಿಯ ಕೈಬಿಡುವನೆಂದೂ ಹೆದರಿಕೆ ಇತ್ತು. ಆದರೂ ಸ್ಯಾಂಗ್-ಹ್ವಾ ಅದನ್ನು ಲಕ್ಷಿಸಲೇ ಇಲ್ಲ. ಕೆಲಸದ ಜಂಜಾಟದಿಂದ ತಪ್ಪಿ ತನ್ನ ಪಾಲಿಗೆ ಬಂದ ಕೆಲ ನಿಮಿಷಗಳನ್ನು ಆನಂದದಿಂದ ಕಳೆದರಾಯಿತು ಎಂದು ಅವಳು ನಿರ್ಧರಿಸಿಕೊಂಡಿದ್ದಳು.

ಅವಳ ಆ ಆನಂದ ನಿಜವಾದದ್ದೆ.

ಮೈಯೆಲ್ಲ ಪೌಡರ್ ಹಚ್ಚಿಕೊಂಡು ತಾಸು ತಾಸು ಬಣ್ಣ ಹಚ್ಚಿಕೊಳ್ಳುತ್ತಿದ್ದಳು. ಸುಖಕ್ಕೇ ಮೀಸಲಾದವಳಂತೆ, ದಿನನಿತ್ಯ 'ಲೀ'ನ ಜೊತೆಗೆ ರಾತ್ರಿ ಆಡ್ಡಾಡುತ್ತಿದ್ದಳು. ಬರುವಾಗ ಚನ್ನಾಗಿ ಕುಡಿದು ಬರುತ್ತಿದ್ದಳು.

ಹಗಲು ಅವನ ಕಾರಿನಲ್ಲಿ ಅಲ್ಲಿ, ಇಲ್ಲಿ ಸುಖವಾಗಿ ತಿರುಗುತ್ತಿದ್ದಳು. ಮನೋರಂಜಕ ಕತೆಗಳನ್ನೂ ಸಿನೇಮಾ ಜಾಹೀರಾತುಗಳನ್ನಲ್ಲದೆ ಬೇರೆ ಏನನ್ನೂ ಓದುತ್ತಿರಲಿಲ್ಲ.

ಎರಡು ವಾರಗಳು ಭರದಿಂದ ಕಳೆದವು. ಒಂದು ದಿನ 'ಲೀ'ನ ಜೊತೆ ಕಾರಿನಲ್ಲಿ ಮನೆಗೆ ಬಂದಾಗ, ಅವಳ ತಮ್ಮ ಏನೋ ಸುದ್ದಿಯನ್ನು ತಂದಿದ್ದನು.

"'ಲೀ'ಯು ಎಂಬ ಮನುಷ್ಯ ನಿನ್ನನ್ನು ನೋಡಲು ಬಂದಿದ್ದ." ಎಂದು ಹುಡುಗ ಹೇಳಿದ.

ಲೀಯು! ಅದು ವೆನ್-ಕೆನ್‌ನ ಇನ್ನೊಂದು ಹೆಸರು.

"ಪತ್ರವನ್ನೇನಾದರೂ ತಂದಿದ್ದನೇ?" ಎಂದು ಅವಳು ಕೇಳಿದಳು.

"ಇಲ್ಲ, ನಿನ್ನನ್ನು ನೋಡಲು ಬಂದಿದ್ದನಂತೆ. ವಿಶೇಷ ಏನೂ ಇಲ್ಲವಂತೆ."

ಸ್ಯಾಂಗ್-ಹ್ವಾ ಹುಬ್ಬುಗಂಟಿಕ್ಕಿದಳು. ಮೆಲ್ಲಗೆ ಕೋಣೆಗೆ ನಡೆದಳು. ನಾಚಿಕೆ ಬಂತು. ಅವಳ ಕಣ್ಣೆದುರು, ಎತ್ತರವಾದ ಲೆನ್‌ನ ಮೂರ್ತಿ ನಿಂತಿತು. ಅವನ ಗಂಭೀರವಾದ ಸುಂದರ ಮುಖ! ಅವಳನ್ನು ತಿರಸ್ಕರಿಸಲು ಬಂದಿದ್ದನೇ? ಏನಾದರೂ ಮಹತ್ವದ ಸುದ್ದಿ ಇರಬಹುದೇ? ಲೆನ್‌ನ ಬೆನ್ನು ಯಾರಾದರೂ ಹತ್ತಿರಬಹುದು. ಅವಳು ನಡುಗಿದಳು. ಈಗಲೂ ಅವರು ಅವನನ್ನು ನೋಡುತ್ತಿರಬೇಕು. ಸುತ್ತಲೂ ನೋಡಿದಳು. ಸುಂದರವಾದ ಕೋಣೆ, ಬೆಲೆಯುಳ್ಳ ಕಟ್ಟಿಗೆಯ 'ಫರ್ನಿಚರು', ಬೆಳಕಿನ ಹೊಳೆ. ಅವಳ ಮನಿಸ್ಸಿಗೆ ಸಮಾಧಾನವಾಯಿತು. ಇಲ್ಲೇನೂ ಅಂಥ ರೆಕಾರ್ಡುಗಳಾಗಲಿ, ನಿರ್ಬಂಧಿಸಿದ ಪುಸ್ತಕಗಳಾಗಲಿ ಇರಲಿಲ್ಲ. ಎಲ್ಲವೂ ಶುದ್ಧವಾಗಿತ್ತು, ಸುಂದರವಾಗಿತ್ತು. ಇಲ್ಲೇನೂ ಬೇನೆಯ ಕಾಟವಿರಲಿಲ್ಲ, ಅದೇಕೋ ಅವಳಿಗೆ ದುಡಿದು ದುಡಿದು ಹಣ್ಣಾದ 'ಹೂ'ನ ನೆನಪಾಯಿತು. ಸಂಘದ ಸಮ್ಮತಿ ಇಲ್ಲದೆ ಅವಳು ಹೀಗೆ ಬರಬಹುದೇ?

ಅವಳ ಚಿಕ್ಕಮ್ಮ ಕೋಣೆಯೊಳಗೆ ಬಂದಳು. ಅದು ಇದು ಮಾತಾಡುತ್ತ ತನ್ನ ಶಾಲೆಯ ಗೆಳತಿಯರ ವಿಷಯಕ್ಕೆ ಮಾತತ್ತಿದಳು. ಈಗಿನ ದಿನ

ಗಳಲ್ಲಿ ಜೊತೆಗಾರರನ್ನು ಆರಿಸುವಾಗ ವಿಚಾರಮಾಡಿ ಆರಿಸಬೇಕು. ಆದರೆ ಸ್ಯಾಂಗ್-ಹ್ವಾ, 'ಲೀ'ನನ್ನು ಮಾತ್ರ ಒಳ್ಳೆಯ ಗೆಳೆಯನೆಂದೆ ಆರಿಸಿದ್ದಳು.

"ಅವನು ನಿನ್ನ ಗೆಳೆಯನೇ ಇರಬೇಕು ಅಲ್ಲವೇ ?"

"ಹೌದು ನಾವಿಬ್ಬರೂ ಗೆಳೆಯರು."

ಮುದುಕಿ ತನ್ನ ಚಿನ್ನದ ಹಲ್ಲನ್ನು ಹೊಳೆಸುತ್ತ ಅವನ ಗುಣಗಾನ ಮಾಡಿದಳು. ನಿಜವಾಗಿಯೂ ಅವನು ಸುಂದರನಾಗಿದ್ದಾನೆ, ಅವನಲ್ಲಿ ಬುದ್ಧಿ ಮಂತಿಕೆ ಇದೆ, ಅವನ ನಡತೆ ಸಭ್ಯವಾಗಿದೆ; ಇಷ್ಟು ಜನರಲ್ಲಿ ಅವನಷ್ಟು ಆಕರ್ಷಕರು ಯಾರೂ ಇಲ್ಲ. ಇನ್ನೂ ಸೂಕ್ಷ್ಮವಾಗಿಯೇ ಏನೇನೊ ಹೇಳಬೇಕೆಂದವಳು, ನಡುವೆಯೆ ತನ್ನ ಮಗಳ ಭಾವವನ್ನು ಪರೀಕ್ಷಿಸಲು ಅತ್ತ ನೋಡಿದಳು.

ಸ್ಯಾಂಗ್-ಹ್ವಾ ಹರ್ಷಗೊಂಡವರಂತೆ ನಕ್ಕಳು. ಆದರೆ ಒಳಗೊಳಗೇ ಅಂದಳು : "ನನ್ನಿಂದ ಏನಾದರೂ ಹೊರಡಬಹುದೆಂದು ತಿಳಿಯಬೇಡ. ನಿನ್ನ 'ಲೀ'ಯನ್ನು ಹಿಡಿತದಲ್ಲಿಟ್ಟು ನಿನಗೆ ಸಿಗದಂತೆ ಮಾಡುತ್ತೇನೆ"

ಚಿಕ್ಕಮ್ಮ ಹೊರಟು ಹೋದ ಮೇಲೆ ಅವಳು ಸಿಟ್ಟಿನಿಂದ ಕಾಲು ಚೀಲಗಳನ್ನು ಕುರ್ಚಿಯ ಮೇಲೊಗೆದಳು. "ಇನ್ನು ಅವನಿಗೇ ಗಂಟು ಬೀಳುತ್ತೇನೆ." ಎಂದಳು.

ಇನ್ನು ಎರಡು ವಾರಗಳು ಮಾತ್ರವೇ ಉಳಿದಿದ್ದವು. ಆಮೇಲೆ ಅವಳು ಕ್ರಾಂತಿಯ ಕೆಲಸಕ್ಕೆ ಹೋಗಲೇಬೇಕಿತ್ತು. ಆ ಬಾಳು ಅವಳಿಗೆ ಹೇಸಿಗಿಟ್ಟಿತ್ತು. ಅವಳ ವ್ಯಕ್ತಿತ್ವವೆ ಅದರಲ್ಲಿ ಮಾಯವಾಗುತ್ತಿತ್ತು; ಆ ಚಳವಳಿಯಲ್ಲಿ ಅವಳೊಂದು ಕಣ ಮಾತ್ರವಾಗಿದ್ದಳು; ಅದರಲ್ಲಿ ಜನರ ಸಮುದಾಯಕ್ಕೇ ಮಹತ್ವ ಹೆಚ್ಚು. ವ್ಯಕ್ತಿ ಅದರಲ್ಲಿ ಕೇವಲ ವಿಚಾರ ಮಾತ್ರ. ಅವಳು ಜೊತೆಗಾರರನ್ನು ಕೂಡಿಕೊಂಡು ಎಚ್ಚರಿಕೆಯಿಂದ ಕೆಲಸ ಮಾಡಬೇಕಿತ್ತು. ಬೇನೆ ಬರಬಹುದು; ಕೈದಿಯಾಗಬಹುದು; ಕಾರಾಗೃಹ ವಾಸವನ್ನನುಭವಿಸಬಹುದು; ಅದಕ್ಕೂ ಭೀಕರವೆಂದರೆ ಅವಳ ಮೃದು ದೇಹ ಅಸಹ್ಯ ಪೀಡೆಗೊಳಗಾಗಬಹುದು.

"ನೋವಿನಲ್ಲಿ ಬಾಳು; ನೋವಿನಲ್ಲೇ ಸಾಯಿ."

ಅವಳೇಕೆ ಮತ್ತೆ ಹಿಂದಕ್ಕೆ ಹೋಗಬೇಕು? ಅವಳೇನು ಈಗ ಅನಿವಾರ್ಯವಾಗಿರಲಿಲ್ಲ; ಮೇಲಾಗಿ ಆ ಕೆಲಸದಲ್ಲಿ ಅವಳಿಗೆ ಆಸಕ್ತಿಯೂ ಕಡಿಮೆಯಾಗಿತ್ತು. ಈಗಲೇ ಬಿಟ್ಟು ಬಂದರೆ ಜನರೇನಂದಾರು? ನನ್ನನ್ನು ತಿರಸ್ಕರಿಸಿ ನೋಡಬಹುದು. "ಸ್ಯಾಂಗ್-ಹ್ವಾ, ಆ ಜೊಳ್ಳುಹೊಟ್ಟೆಯ ಸಕ್ಕರೆ ವ್ಯಾಪಾರಿಗೆ ತನ್ನನ್ನು ಮಾರಿಕೊಂಡಳು." ಎಂದು ಗುಲ್ಲೆಬ್ಬಿಸಿಬಿಡಬಹುದು. ಅವಳು ಹುಬ್ಬುಗಂಟಿಕ್ಕಿದಳು. ಇನ್ನು ಎರಡು ವಾರಗಳ ಮಟ್ಟಿಗಾದರೂ ಅದರ ಬಗ್ಗೆ ವಿಚಾರಿಸಬಾರದಾಗಿ ತನಗೆ ತಾನೆ ಹೇಳಿಕೊಂಡಳು. ಆದರೂ........

"ಅವರು ನನ್ನನ್ನು ಕ್ಷಮಿಸಬಹುದೇ?" ಎಂದು ಅವಳು ತನ್ನನ್ನೆ ಕೇಳಿಕೊಂಡಳು.

"ನಾನು ಬಿಟ್ಟರೆ? ಲಿನ್-ವೆನ್-ಕೆನ್‌ನಾದರೂ ಕ್ಷಮಿಸಬಹುದೇ?" ಅವರು ತನ್ನನ್ನಾಗಲೇ 'ಬಹಿಷ್ಕರಿಸಿರಬಹುದೆಂದು ತಿಳಿದುಕೊಂಡಳು. "ಹಾಗಾದರಂತೂ ಒಳ್ಳೆಯದೇ." ಎಂದು ನಿಶ್ಚಯದ ದನಿಯಲ್ಲಿ ತಾನು ಸತ್ಯವಂತಳೆಂದು ತಿಳಿಯುತ್ತ ನುಡಿದಳು. ಸ್ವಲ್ಪ ಹೊತ್ತು ಸುಮ್ಮನೆ ಕುಳಿತಳು; ಅವಳ ಮುಖಭಾವ ಗೊಂದಲಗೆಟ್ಟಿತ್ತು.

ಹಂಚು ಹೊದಿಸಿದ ಬಚ್ಚಲಕ್ಕೆ ಹೋಗಿ ದೊಡ್ಡ ಕನ್ನಡಿಯ ಎದುರು ನಿಂತಳು. ಮೊದಲು ತನ್ನ ಮುಖವನ್ನೂ ಆಮೇಲೆ ರೇಶಿಮೆಯಂತೆ ಮಿದುವಾದ ಅಂಗವಿನ್ಯಾಸವನ್ನೂ ನೋಡಿಕೊಂಡಳು. ತುಟಿಗಳನ್ನು ಅವಡುಗಚ್ಚಿ ಹಿಂಡಿದಳು; ಬೆಡಗಿನಿಂದ ತೋಳನ್ನೆತ್ತಿದಳು. ಕೆಲವು ನಿಮಿಷಗಳ ವರೆಗೆ ಕಲಾಕೃತಿಯನ್ನು ಪರೀಕ್ಷಿಸುವಂತೆ, ನಿರ್ವಿಕಾರಳಾಗಿ ತನ್ನ ಸುಂದರ ಆಕೃತಿಯನ್ನು ತಾನೇ ನೋಡಿಕೊಂಡಳು.

"ಇದೆಲ್ಲ ಯಾತಕ್ಕಾಗಿ?" ಎಂದು ತನ್ನನ್ನೇ ಕೇಳಿಕೊಂಡಳು.

ಮೃದುವಾದ ದುಂಡುದೋಳು, ತುಂಬಿದ ಎದೆಯ ಕರುಣ ಸೌಂದರ್ಯ ಬಾಳೆಯ ದಿಂಡಿನಂತಿದ್ದ ಅವಳ ಆ ತೊಡೆಯ ವರೆಗೆ ಇಳಿದ ಸೌಂದರ್ಯ ರೇಖೆ! ಇಂಥ ಚೆಲುವನ್ನು ಕತ್ತಲೆಯಲ್ಲಿ ಅಡಗಿಸುವದು, ದುರುಪಯೋಗ ಮಾಡಿಕೊಳ್ಳುವದು, ಅಥವಾ ಅನಾಗರಿಕ ಪೀಡೆಗೀಡುಮಾಡುವದು, ತನ

ಗಾಗಲಿ, ಸೃಷ್ಟಿಗಾಗಲಿ, ಸೌಂದರ್ಯಕ್ಕಾಗಲಿ ಅನ್ಯಾಯವೇ ಅಲ್ಲವೇ? ಅವಳ ಕಣ್ಣು ಕುಕ್ಕಿದವು; ತನ್ನ ದೇಹ ಎಷ್ಟು ಅದ್ಭುತವಾಗಿದೆಯೆಂಬುದನ್ನು ಅವಳು ಮರೆತಿದ್ದಳು. ಮುಖವನ್ನು ಕೈಗಳಿಂದ ಮುಚ್ಚಿಕೊಂಡಾಗ, ಹುಬ್ಬು ಸದ್ದುಗುತ್ತಿದ್ದವು. ಎದೆಯಿಂದ ತೊಡೆಯ ವರೆಗೆ ಹಬ್ಬಿದ್ದ ಸೌಂದರ್ಯ ರೇಖೆ ಸಂಗೀತದ ಅಲಾಪನೆಯಷ್ಟು ಸುಂದರವಾಗಿತ್ತು. ರಸಿಕನಂತೆ, ಈ ಕಲಾಕೃತಿಯ ಅಂಗಾಂಗಳನ್ನು ವಿಂಗಡಿಸಿ, ವಿಂಗಡಿಸಿ ನೋಡತೊಡಗಿದಳು.

'ಅಂಗಾಂಗಳು' ಅವಳು ಭಯದ ಪೀಡೆಗೊಳಗಾದರೆ, ಅವಳ ಈ ಸುಂದರ ದೇಹ ಎಷ್ಟು ಭಾಗಗಳಾಗಿ ತುಂಡರಿಸಲ್ಪಡಬಹುದು? ಇದನ್ನು ನೆನೆದು ಅವಳು ನಡುಗಿದಳು.

•

ಅವಳ ಮುಖ ಉರಿಯಿತು. ಮೊದಲು ಬಿಸಿ ನೀರಲ್ಲಿ ಆಮೇಲೆ ತಣ್ಣೀರಲ್ಲಿ ಮುಖ ತೊಳೆಯಲು ನಡೆದಳು. ಪೌಡರ್, ಸ್ನೋ, ತುಟಿಯ ಬಣ್ಣ ಎಲ್ಲ ತೊಳೆದು ಹೋಗಿ, ಶುದ್ಧ ಮುಖವಷ್ಟೇ ಉಳಿಯಿತು. ಸಂಘಟನೆಯ ಕಾರ್ಯಗಳಲ್ಲಿ ಹೆಣ್ಣಾಳುಗಳೊಂದಿಗೆ ತೊಡಗಿದಾಗ ಇದೇ ಈ ಶುದ್ಧ ಮುಖ ಅವಳಿಗಿದ್ದದ್ದು. ಬಣ್ಣವಿಲ್ಲ; ಬಣ್ಣ ತೆಗೆದ ಹುಬ್ಬುಗಳೂ ಹಾಗೇ ಬೋಳಾಗಿ ಇರುತ್ತಿದ್ದವು. ತನ್ನನ್ನು ಮತ್ತೆ ನೋಡಿಕೊಂಡಳು. ಮತ್ತೆ ತನ್ನ ಜೊತೆಗಾರರನ್ನೂ, ಅವರ ಬಣ್ಣದ ಕನಸುಗಳನ್ನೂ ನೆನೆದಳು. ನಾಚಿಕೆಯ ತೆರೆ ಹಾದು ಹೋಯಿತು. ಅದರಿಂದಲೇ ಅವಳು ಸಿಟ್ಟಿಗೆದ್ದದ್ದು. ಅವಳಿಗೆ ಏನಾದರೂ ಒಡೆಯಬೇಕೆಂದೆನಿಸಿತು. ಅವರನ್ನು ಬಿಟ್ಟು ಹೋಗಬಾರದೇಕೆ? ಲೆನ್‌ನ ಚಿತ್ರ ಕಣ್ಣೆದುರು ಬಂದು ಸಿಟ್ಟಿನಿಂದ ಒದರಿದಳು: "ಒಳ್ಳೆಯದಾಗಲಿ, ಕೆಟ್ಟದಾಗಲಿ ನನಗಿದ್ದುದು ಒಂದೇ ಜನ್ಮ. ನಾನು ಆರಿಸಬೇಕಾದ ಮಾರ್ಗ ಒಂದೇ. ನೀನು ತಿರಸ್ಕರಿಸಿದರೂ ಅಡ್ಡಿಯಿಲ್ಲ. ನಾನು ದೇಹವನ್ನು ಪೀಡೆಗೀಡುಮಾಡಲಾರೆ. ಅದನ್ನು ಸಹಿಸಲಾರೆ."

ಪ್ರತಿಯೊಬ್ಬನಿಗೂ ತನಗೆ ತಿಳಿದಂತೆ ಮಾಡಲು ಒಂದು ಸ್ವತಂತ್ರ ಸಂಕಲ್ಪವಿದೆ. ಅವಳಿಗೂ ಏಕಿರಬಾರದು.?

ಸ್ನಾನಗೃಹದಿಂದ ನಡುಮನೆಗೆ ಬಂದಳು. ಹಾಸಿಗೆಯ ಮೇಲೆ ದಣಿವಿನಿಂದ ಮಲಗಿದಳು. ಹೃದಯ ಪುಡಿಪುಡಿಯಾಗುತ್ತಿತ್ತು. ಹುಬ್ಬು ಚಿಮ್ಮಿ

ಹೋಗುವಂತೆ ಹಾರುತ್ತಿದ್ದುವು. ತಣ್ಣನ್ನ ಕೈಯನ್ನು ಉರಿಮೋರೆಗೆ ಹಚ್ಚಿದಳು. ಏನನ್ನೂ ನಿರ್ಣಯಿಸುವದಾಗಲಿಲ್ಲ; ಪ್ರತಿಯೊಂದು ಮಾತಿನ ತುದಿಯೂ ಇನ್ನೊಂದು ತೊಡಕನ್ನು ತರುತ್ತಿತ್ತು. ಕಡೆಗೆ ಲೆನ್‌ನೊಬ್ಬನ ಮೇಲೆ ವ್ಯಕ್ತಿಶಃ ಸಿಟ್ಟಿಗೆದ್ದಳು.

ಮಗ್ಗಲು ಕೋಣೆಯಲ್ಲಿ ಅವಳ ಚಿಕ್ಕಮ್ಮನ ದನಿ ಕೇಳಿತು. ಅವಳು ತನ್ನ ಮಗಳು ಪೊಟೆನ್‌ನೊಡನೆ ಮಾತಾಡುತ್ತಿದ್ದಳು. ಅವಳು ' ಲೀ ಸ್ಯಾಂಗ್-ಹ್ವಾ 'ನೊಡನೆ ಬೆಳೆಸಿದ ಗೆಳೆತನವನ್ನು ನಿಂದಿಸುತ್ತಿದ್ದಳು. " ಹಾಗಾದರೆ ಪೌ-ಚೆನ್ ಇನ್ನೂ 'ಲೀ'ಗೇ ಮಾರಿಕೊಳ್ಳಬೇಕೆನ್ನುತ್ತಾಳೆ," "ನನಗೇನು ಹಾಗೆನಿಸುವದಿಲ್ಲ. ತರುಣಿಯರು ಮುದುಕರಿಗೆ ಮಾರಿಕೊಳ್ಳುವದು ಕೆಟ್ಟದ್ದು. ಹುಂ, ನಾನು ಅವನನ್ನು ಬಿಡಲಾರೆ."

ಆದರೆ ಅವಳೇನು ಮಾಡುವವಳು ? ಅವನನ್ನೇ ಒಪ್ಪಿ ಮದುವೆಯಾಗಬೇಕೇ ? ತನ್ನೆದುರು ಉಬ್ಬುಹಲ್ಲು, ಡೊಳ್ಳುಹೊಟ್ಟೆಗಳ ಸಮೂಹವೇ ನಿಂತಂತೆನಿಸಿತು. ' ಲೀ ' ತಲೆ ಕೆದರಿಕೊಳ್ಳುತ್ತ, ಜಡವಾದ ದನಿಯಲ್ಲಿ ಮಾತಾಡುವಂತೆ ಕಂಡಿತು. ಅವನನ್ನು ಪೂರ್ಣ ನೆನೆಯುವದೆಂದರೆ ಔಡಲ ಎಣ್ಣೆಯನ್ನು ಕುಡಿದಂತೆ. ಆ ಗಿಡ್ಡ ತೋಳಿಗೆ ಒಲಿಯುವದು, ಆ ಡೊಳ್ಳು ಹೊಟ್ಟೆಗೆ ಅಪ್ಪಿ ನಿಲ್ಲುವದು ! ಥೂ ! ಔಡಲ ಎಣ್ಣೆ! ವೆನ್-ಕೆನ್‌ನ ವಿಷಯವಾಗಿ, ಆತ್ಮಸಾಕ್ಷಿಯನ್ನು ತೃಪ್ತಿಗೊಳಿಸದೆ ಇದ್ದದ್ದಕ್ಕೆ ಅವಳು ನಿರಾಶಳಾಗಿಯೇ ಇದ್ದಳು. ಅವರು ತನ್ನ ಚೇಷ್ಟೆ ಮಾಡುತ್ತಿರಬಹುದು. ಈ ಭಾವನಾಪ್ರೇರಿತ, ಧನಿಕ ಕತ್ತೆಗೆ ಒಲಿದದ್ದನ್ನು ನೋಡಿ ನಗುತ್ತಿರಬಹುದು. ಅವರು ಅವಳ ಅಂತಃಸತ್ವವನ್ನು ತಿಳಿಯುತ್ತಿರಲಿಲ್ಲ. ವೆನ್-ಕೆನ್ನನ ಕುತ್ಸಿತ ನಗೆ ಬಂದಾಗಲೆಲ್ಲ ಈ ಮಾತನ್ನು ಹೇಳುತ್ತಿದ್ದಳು. ಇದೇ ರೀತಿ ಉದ್ಗರಿಸುತ್ತಿದ್ದ 'ಲೀ'ಯ ವಿಷಯವಾಗಿ ಅವಳಿಗೆ ಸಹಾನುಭೂತಿ ಹುಟ್ಟಿತು. ಅವನನ್ನು ತಿಳಿದವರು ಕೇವಲ ಕೆಲವು ಜನ ಇರಬಹುದು.

ಕಡೆಗೆ ಲೆನ್‌ನ ಜೊತೆ ಚನ್ನಾಗಿ ಚರ್ಚೆ ಮಾಡಬೇಕೆಂದು ನಿಶ್ಚಯಿಸಿದಳು.

ಮನೆ ಮುಟ್ಟಿದಾಗ ಅವಳ ಉದ್ವೇಗ ಹೆಚ್ಚಾಗಿತ್ತು. ಅಟ್ಟವೇರುವಾಗ

ಒಂದು ಕ್ಷಣ ಆ ಉದ್ವೇಗವನ್ನು ತಡೆದು ಹಿಡಿಯಲು ನಿಂತಳು. ಏನು ಮಾತನಾಡಬೇಕೆಂಬುದನ್ನು ವಿಚಾರಿಸಹತ್ತಿದಳು. ಪರಿಚಿತವಾದ ಬಾಗಿಲಿನಿಂದ ಒಂದು ಸಂಶಯಯುಕ್ತ ಅಪರಿಚಿತ ಮುಖ ಹಣಿಕಿ ಹಾಕಿತು

" ನಿಮಗೆ ಯಾರು ಬೇಕು ? "

" ಮಿ. 'ಲಿಯು' ಅವರಿಲ್ಲವೇ ? "

" ಇಲ್ಲ. ಇಲ್ಲಿ 'ಲಿಯು' ಯಾರೂ ಇಲ್ಲ. "

ಅವಳು ಕೆಳಗಿಳಿದು ಅವಸರದಿಂದ ಹೊರಟಳು. ತನ್ನನ್ನು ಯಾರೊ ನೋಡುತ್ತಿದ್ದಾರೆಂಬ ಭಾವನೆ ಅವಳಿಗೆ ಬಂದಿತ್ತು.

ಆದರೆ ಅವಳು ಹುಡುಕುವದನ್ನು ಮಾತ್ರ ಬಿಡಲಿಲ್ಲ. ಅಲ್ಲಿ ಇಲ್ಲಿ ಹಳೆಯ ಜೊತೆಗಾರರನ್ನು ಹುಡುಕತೊಡಗಿದಳು. ಅವರೆಲ್ಲ ಬಿಟ್ಟು ಹೋಗಿದ್ದರು. ಸಂಶಯದ ಕಣ್ಣುಗಳು ಮಾತ್ರ ಅವಳ ಬೆನ್ನು ಹತ್ತಿದ್ದವು. ಕಡೆಗೆ ಅವಳಿಗೆ ಹಳೆಯ ಗೆಳೆಯ ವಾಂಗ್-ಚಾ-ಟ ಭೆಟ್ಟಿಯಾದ. ಅವಳನ್ನು ನೋಡಿ ಅವನಿಗೇನೂ ಆನಂದವೆನಿಸಲಿಲ್ಲ. ಅವಳು ಹೇಳಿದ್ದನ್ನೆಲ್ಲ ತಣ್ಣಗೆ ಕೇಳಿದ. ಅವಳ ಪ್ರಶ್ನೆಗಳನ್ನು ಸಂಕ್ಷಿಪ್ತವಾಗಿ ಉತ್ತರಿಸಿದ. ತಡೆಯದಾಗಿ ಅವನ ಭುಜ ಹಿಡಿದು ಅಲುಗಿಸಿದಳು. ಅವನ ಮುಖದ ಹತ್ತಿರ ಮುಖವೊಯ್ದು ನಡುಗುವ ದನಿಯಿಂದ ಕೇಳಿದಳು :

" ಚಾ-ಟೇ, ನಾನು ವಿಷವೇ ? ವೆನ್-ಕೆನ್ ಎಲ್ಲಿದ್ದಾನೆ ? ನೀನೇಕೆ ಹೇಳುವದಿಲ್ಲ ? ನನ್ನಿಂದ ನಿನಗೇನೂ ಆಗಲಾರದು ಅವನೊಡನೆ ನಾನು ಕೆಲವು ಮಹತ್ವದ ಮಾತುಗಳನ್ನಾಡಬೇಕಾಗಿದೆ. "

ಅವನು ಮುಗುಳು ನಕ್ಕು ಅವಳೆಡೆಗೆ ದರ್ಪದಿಂದ ನೋಡಿದ.

" ನನಗೇನೂ ಗೊತ್ತಿಲ್ಲ. "

ಅವಳಿಗೆ ಅವನನ್ನು ಚನ್ನಾಗಿ ಥಳಿಸಿಬಿಡಬೇಕೆಂದೆನಿಸಿತು, ಆಮೇಲೆ ಸಂಗತಿಗಳನ್ನು ತಿಳಿಯಬೇಕೆನ್ನಿಸಿತು, ಅವನನ್ನು ಅಪ್ಪಿಕೊಂಡು, ಅಳುತ್ತ ಬಿನ್ನವಿಸಬೇಕೆನ್ನಿಸಿತು. ಆದರೆ ಸುಮ್ಮನೆ ಅವನನ್ನು ಸಿಟ್ಟಿನಿಂದ ನೋಡುತ್ತ, ಕಣ್ಣೀರಿನಿಂದ ಬೀಳ್ಕೊಟ್ಟಳು.

“ ನನ್ನನ್ನೇನೂ ಇದರಲ್ಲಿ ದೂಷಿಸುವಂತಿಲ್ಲ. ಅವರೇ ನನ್ನನ್ನು ಬಿಟ್ಟರು. ” ಎಂದು ಅವಳು ತನ್ನೊಳಗೇ ಅನ್ನುತ್ತಿದ್ದಳು.

ಮೂರು ದಿನಗಳಾದ ಮೇಲೆ ಮತ್ತೆ ಚಾ-ಟಿಯು ಹತ್ತಿರ ಬಂದ ಮೂರುಸಾವಿರ ಅಕ್ಷರಗಳುಳ್ಳ ಪತ್ರವೊಂದನ್ನು ವೆನ್-ಕೆನ್‌ನಿಗೆ ಮುಟ್ಟಿಸಲು ಹೇಳಿದಳು. ಪಾಕೀಟು ಗಟ್ಟಿಯಾಗಿ ಮುದ್ರೆಯೊತ್ತಲ್ಪಟ್ಟಿತ್ತು. ಅದರ ಮೇಲೆ ‘S. H.’ ಎಂದು ಬರೆದಿತ್ತು.

ಇದನ್ನು ಬರೆಯಲು ಅವಳಿಗೆ ಎರಡು ದಿನ ಬೇಕಾಗಿತ್ತು.

ಮೊದಲು ಅದರಲ್ಲಿ ತನ್ನ ಅದ್ವಿತೀಯ ಸ್ವಭಾವವನ್ನು ವಿಂಗಡಿಸಿದ್ದಳು. ಉಳಿದ ಹೆಣ್ಣುಗಳಿಗಿಂತ ಅವಳು ಬೇರೆಯಾಗಿದ್ದಳು. ತನ್ನ ಸ್ವಭಾವ ಕ್ರಾಂತಿಜೀವನಕ್ಕೆ ಒಗ್ಗದೆಂದೂ, ತನ್ನ ಜೀವನತತ್ವ ಆ ರೀತಿಯ ವಾತಾವರಣಕ್ಕಿಂತ ಭಿನ್ನವಾದದ್ದೆಂದೂ ವಾದಿಸಿದ್ದಳು. ಅದೇನೆಂದು ಅವಳು ವಿವರಿಸಿದ್ದಳು. ಸ್ವಾತಂತ್ರ್ಯದಿಂದ ಜೀವನವನ್ನು ಅನುಭವಿಸಬೇಕು. ಜನರಿಗೆ ಸಿಗುವದು ಒಂದೇ ಜೀವನ; ಅವಳು ಯಾವ ರೀತಿ ಅದನ್ನು ಕಳೆದಳೆಂಬುದರ ಸಲುವಾಗಿ ಉಳಿದವರೇಕೆ ಚಿಂತೆ ಮಾಡಬೇಕು ? ತನ್ನ ತತ್ವಕ್ಕೂ ಕ್ರಾಂತಿಗೂ ವಿರೋಧ ಬಂದಿರಲಿ; ಅವರೇ ಅಲ್ಲವೇ ತನ್ನನ್ನು ಮೊದಲು ತ್ಯಜಿಸಿದವರು ? ತಾನು ಓಡಿಹೋದೆನೆಂದೂ, ಅಥವಾ ಅವಳು ರಹಸ್ಯ ಹೊರಗೆಡವಬಹುದೆಂದೂ ಅವಳೇನೂ ಸೂಚಿಸಿರಲಿಲ್ಲ. ಅವರು ತನ್ನ ಜೀವನತತ್ವವನ್ನು ತಿಳಿಯಬೇಕೆಂದೇ ಅವಳ ಉದ್ದೇಶ. ಅವಳು ಸಾವಿಗೆ ಹೆದರಲಿಲ್ಲ; ಆದರೆ ಅವಳಿಗೆ ಸುಖಜೀವನ ಬೇಕಾಗಿತ್ತು. ಕೊನೆಗೆ ವೆನ್-ಕೆನ್ ಎಚ್ಚರಿಕೆಯಿಂದ ಇರಬೇಕೆಂದೂ, ಅವನನ್ನು ಕೊನೆಯ ವರೆಗೆ ನೆನೆಯುವೆನೆಂದೂ ಹೇಳಿದ್ದಳು. ಅವನು ಒಪ್ಪಿದರೆ ಅವರಿಬ್ಬರ ಗೆಳೆತನ ಉಳಿಸಬಹುದೆಂದೂ ಹೇಳಿದ್ದಳು.

ಸ್ಯಾಂಗ್-ಹ್ವಾಗೆ ಸುಖವಿರಲಿಲ್ಲ. ಪತ್ರ ಬರೆದ ಮೇಲೂ ವೆನ್-ಕೆನ್‌ನ ನೆನಪು ಮಾಸಿರಲಿಲ್ಲ. “ ಅವನನ್ನು ನೋಡಲಾರೆನೇ ? ಎಂದಿಗೂ ನೋಡಲಾರೆನೇ ? ”

ಅವಳ ಜೀವನದ ತೊಡಕುಗಳು ಎಂದಿಗೂ ಬಿಡಿಸಲ್ಪಡಲಿಲ್ಲ. ಚಿಕ

ಮ್ಮನ ಮನೆಯಲ್ಲಿ ಬಹಳ ದಿನ ಇರಲಾಗಲಿಲ್ಲ. ಪಾ-ಚಿನ್‌ಳ ಮತ್ಸರ ಸಹಿಸದಾ!ತ್ತು. ಆದರೆ ತನ್ನ ಬಡ ಮನೆಗೆ ಹೋಗುವದೂ ಅಸಾಧ್ಯ ವಾಗಿತ್ತು. ಇನ್ನೊಂದು ತಿಂಗಳಲ್ಲಿ ಎಲ್ಲಿಯಾದರೂ ಹೋಗಲೇಬೇಕು. ಸಮುದ್ರದ ವಿಸ್ತಾರದಲ್ಲಿ ದಂಡೆಯನ್ನು ಕಾಣದೆ, ಒಬ್ಬಳೇ ತೇಲುತ್ತಿದ್ದಂತೆನಿಸಿತು. ಅವಳ ಜೀವನಕ್ಕೆ ಅರ್ಥವಿತ್ತಿದ್ದ ಒಂದು ಪ್ರಸಂಗವೂ ಗುರಿ ಇಲ್ಲದೆ ಅವಳ ಕೈ ಬಿಟ್ಟಿತ್ತು........

ಈ ವಿಚಾರದಲ್ಲಿರುವಾಗಲೇ ಅವಳು ಲೀಯನ್ನು ಕಂಡಳು.

ಬೋಳಾದ ಅವನ ತಲೆಯನ್ನು ನೋಡಿದಳು. ಅವನ ಎಣ್ಣೆಗಪ್ಪು ಮುಖ, ಆ ಗೋದಲಿಯ ಹಲ್ಲುಗಳನ್ನು ನೋಡಿದಳು. ಆದರೆ ಇವೆಲ್ಲ ಮಹತ್ವದ ಸಂಗತಿಗಳಲ್ಲ. ಪ್ರೀತಿ ಅವಕ್ಕೂ ಸೌಂದರ್ಯವನ್ನು ಕೊಡಬಹುದು. ಮತ್ತೆ ಮತ್ತೆ ನುಡಿದಳು. "ಅವನನ್ನು ನಾನು ಪ್ರೀತಿಸುತ್ತೇನೆ." ಆದರೂ ಅವನ ತೋಳುಗಳಲ್ಲಿ ಸೆರೆಯಾದಾಗ, ಅವನ ತುಟಿಗಳನ್ನು ಮುದ್ದಿಸಿದಾಗ ಅವಳಿಗನಿಸಿತು: 'ತನ್ನ ಯಾವುದೊ ಪಾಪವನ್ನು ಕಳೆದುಕೊಳ್ಳಲು ರುಚಿ ಇಲ್ಲದ ಔಷಧ ಇದು' ಎಂದು.

"ಸ್ಯಾಂಗ್-ಹ್ವಾ, ನಾನು 'ನ್ಯಾಂನ್ಯಾಂಗ್' ಬಿಡುವ ಮೊದಲೇ ಲಗ್ನವಾಗಿಬಿಡೋಣ. ಏನು ಹೇಳುತ್ತೀ?"

ಅವಳು ದೀರ್ಘವಾಗಿ ಉಸಿರೆಳೆದಳು. "ನನಗೆ ಇಲ್ಲಿ ಅಭಿಪ್ರಾಯವೇನೂ ಇಲ್ಲ."

ಅವನು ಕಾಮಾರ್ತನಾಗಿ ಮುಂದುವರಿದು, ಕೆಲಹೊತ್ತು ಅವಳ ತುಟಿಗಳನ್ನು ಮುದ್ದಿಸಿದ. ತುಟಿ ಬಿಟ್ಟು ಮುಖವೆತ್ತಿದಾಗ ಮುಖವೆಲ್ಲ ಕೆಂಪು ಕೆಂಪಾಗಿತ್ತು, ಅವಳ ತುಟಿಯ ಬಣ್ಣದಿಂದ. ಆದರೂ ಕಾಮುಕತೆಯಿಂದ ಅವಳೆಡೆಗೆ ನೋಡುತ್ತಿದ್ದ. ಸುಖ ಅವನ ಕಣ್ಣೊಳಗೆ ಹೊಳೆಯುತ್ತಿತ್ತು. ತನಗೆ ತಿಳಿಯದೇ ತನ್ನ ದಪ್ಪ ಕೈಗಳನ್ನು ಅವಳ ಕೂದಲ ಮೇಲಿರಿಸಿದ.

ಒಮ್ಮೆಲೆ ಸೋಫಾದ ಮೇಲೆ ಬಿದ್ದು ಸ್ಯಾಂಗ್-ಹ್ವಾ ಅಳತೊಡಗಿದಳು.

"ಏನು? ಏನಾಯಿತು? ಏನದು?" ಎಂದು ಅವನು ಅಚ್ಚರಿಯಿಂದ ಕೇಳಿದ.

ಆಮೇಲೆ ಅವಳು ತಲೆ ಎತ್ತಿದಳು. ಕಣ್ಣಲ್ಲಿ ನೀರು ತುಂಬಿದ್ದವು. ಆದರೂ ಮರುಳುಗೊಳಿಸುವಂತೆ ನಕ್ಕು ಅವನನ್ನು ಮುದ್ದಿಸಿದಳು. ಮತ್ತು "ಏನಿಲ್ಲ. ನಾನು ಸುಖಿಯಾಗಿದ್ದೇನೆ" ಎಂದುಬಿಟ್ಟಳು.

( ೫ )

ಮಿಸೆಸ್ 'ಲೀ'ಯ ಬೇಸಿಗೆ ಮನೆಯ ಮುಂದಿದ್ದ ಕೊಳದ ಮುಖ, ಸಂಜೆಯ ಆಗಸದಲ್ಲಿ ಸಪ್ಪಗಾಯಿತು. ಕೆಲವು ದೋಣಿಗಳು ಬೆಳುದಿಂಗಳಿನಲ್ಲಿ ತೇಲಿದವು. ಒಂದು ದುಃಖಪೂರ್ಣ ವಾತಾವರಣ ಹಬ್ಬಿತ್ತು. ಕಿಡಿಕಿಯ ಹತ್ತಿರ ನಿಂತ ಸ್ಯಾಂಗ್-ಹ್ವಾ ಬಹಳ ಹೊತ್ತು ಕದಲಲೇ ಇಲ್ಲ. ತನ್ನ ಅಕ್ಕ ಕೇಳುತ್ತಿದ್ದ ಪ್ರಶ್ನೆಗಳನ್ನು ಉತ್ತರಿಸಲೂ ಇಲ್ಲ. ಕೊಳದ ಗಾಳಿ ವೇಗದಿಂದ ಬೀಸಿತು. ಹಾಡಿನ ದನಿ ಹೆಚ್ಚಾಯಿತು. ಅವನು ಹಾಡುತ್ತಿದುದು ದುಃಖದ ನೆನಪುಗಳನ್ನು. ಅವನೇಕೆ ಮತ್ತೆ ಮತ್ತೆ ಅದನ್ನೇ ಹಾಡುತ್ತಿದ್ದ? ಅವಳಿಗೆ ವೆನ್-ಕೆನ್‌ನ ನೆನಪಾಯಿತು. ಏನಾಗಿರಬಹುದು ಅವನಿಗೆ?

"ಅವನಿಂದ ಇತ್ತೀಚೆ ಪತ್ರ ಬಂದಿದೆಯೇ?" ಅಕ್ಕ ಕೇಳಿದಳು.

"ಯಾರು?" ಸ್ಯಾಂಗ್-ಹ್ವಾ ಕೇಳಿದಳು.

"ನಿನ್ನ ಗಂಡನಿಂದ."

"ಓ, ಹೌದು ಬಂದಿದೆ." ನಾಚಿಕೆಯಿಂದ ನುಡಿದಳು.

ಒಮ್ಮೆಲೆ ತಿರುಗಿ ತಲೆಯಲ್ಲಾಡಿಸಿದಳು. ತನ್ನ ಅಕ್ಕನ ಹತ್ತಿರ ನಡೆದು ಹೋಗಿ, ಮುಖದ ಮೇಲೆ ವಿಖ್ಯಾತವಾದ ಆ ಮರಳುಗೊಳಿಸುವ ನಗೆ ತಂದು ಅವಳನ್ನು ನೋಡಿ, ಸಭ್ಯತನದಿಂದ ಮೆಲ್ಲಗೆ ಹೇಳಿದಳು: "ಅಕ್ಕ, ಈ ಬೆಳುದಿಂಗಳಲ್ಲಿ ದೋಣಿಯಲ್ಲಿ ತಿರುಗಾಡೋಣ ನಡೆ. ಎರಡು ಮದ್ಯದ ಬಾಟಲಿಗಳನ್ನು ಒಯ್ಯೋಣ. ಇಬ್ಬರಿಗೂ ಒಂದೊಂದು. ನಡೆ ಬೇಗ ನಡೆ. ಮನದಣಿಯೆ ಕುಡಿದುಬಿಡೋಣ."

## ಪರಿಚಯ

## **ಶಿಯೊ-ಚೈನ್**

(ಈ ಗ್ರಂಥಕರ್ತನ ಜೀವನದ ವಿಷಯವಾಗಿ ಏನೂ ಸಿಗಲಿಲ್ಲ.)

---

# ಧರ್ಮಾಂತರ    

" ಅಯ್ಯೊ! ಇವೆರಡು ಹಾಳು ಕಣ್ಣುಗಳು........ಇವುಗಳಿಂದಲೇ ಮೊದಲು ದೇವದೂತರ ಚಿತ್ರಗಳನ್ನು ಹೆಣೆಯುತ್ತಿದ್ದೆ....ಈಗ ಸೂಜಿಯ ತೂತೂ ಅವುಗಳಿಗೆ ಕಾಣಿಸದಾಗಿದೆ........ನನಗೂ ವಯಸ್ಸಾಗಿ ಅರುಳು-ಮರುಳಾಗಿದೆ !

ಅವಳೊಂದು ಸ್ಟೂಲಿನ ಮೇಲೆ, ಒಂದು ಕಂದುಬಣ್ಣದ ಉದ್ದ ಅಂಗಿಯನ್ನು ಹಿಡಿದು ಕುಳಿತಿದ್ದಾಳೆ. ತಲೆಯ ಹಿಂದಿನಿಂದ, ಕೋರಿಯದ ಕಾಗದ ಹಚ್ಚಿದ ಕಿಡಿಕಿಯಿಂದ ಬೆಳಕು ಒಳಗೆ ಹರಿದುಬರುತ್ತಿದೆ. ಹಳೆಯ ದಾರವೊಂದನ್ನು, ಉಕ್ಕಿನ ಸೂಜಿಯೊಂದರಲ್ಲಿ ಪೋಣಿಸಲು ಪ್ರಯತ್ನಿಸುತ್ತಿದ್ದಾಳೆ. ಬೆವರು ಸುರಿಸುತ್ತ, ಎಷ್ಟು ಗುರಿಯಿಟ್ಟು ಪೋಣಿಸಿದರೂ, ದಾರ ಒಳಗೆ ಹೋಗಲೊಲ್ಲದು. ಎಷ್ಟೋ ಸಲ ದಾರ ಹೋದಂತೆ ಕಂಡಿತು. ಆದರೆ ಕೈ ಬಿಟ್ಟಾಗ ಮಾತ್ರ ದಾರ ಒಂದೇ, ಚಳಿಗಾಲದಲ್ಲಿಯ ಒಣಗಿದ ಟೊಂಗೆಯಂತೆ ಜೋತಾಡುತ್ತಿತ್ತು.

" ಅಯ್ಯೋ, ಸುಟ್ಟ ಸೂಜಿ ! ನೀನೂ ನನ್ನನ್ನು ಮೋಸಗೊಳಿಸಬೇಕೆಂದಿರುವೆಯಾ ? " ಮತ್ತೆ ದನಿ ಏರಿಸಿ ನುಡಿಯುತ್ತಾಳೆ: " ಆಯಿತು, ಈ ಮೋಸಗಾರರನ್ನು ಆ ಮೋಸಗಾರನಿಗೆ ಥೂ ಬಿಟ್ಟರಾಯಿತು. " ಅಲ್ಲಿಂದ ಮತ್ತೆ ಒದರುತ್ತಾಳೆ: " ಅಯ್ಯೊ ದೇವರೇ ! ಈ ಮೂರ್ಖ ದಾರಕ್ಕೆ ಒಂದಿಷ್ಟು ಬುದ್ಧಿ ಹೇಳಬಾರದೇ! "

ಅದಕ್ಕೆ ಉತ್ತರವೆಂದರೆ ಮೇಜಿನ ಮೇಲಿದ್ದ ಭಾರವಾದ ಗಡಿಯಾರದ ಸಪ್ಪಳವೊಂದೇ; ಅದೂ, ಅವಳ ಮಗ, ' ಸ್ವರ್ಗದ ಸೇತುವೆಯ ' ಬಳಿಯಲ್ಲಿಯ ಮೋಡಕಾ ಬಜಾರದಿಂದ ಕೊಂಡು ತಂದಿದ್ದು.

" ನಿನೀ, ಕಿವಿ ಹೋಗಿವೆಯೇನು ? ಯಾಕೆ ಮಾತನಾಡಲೊಲ್ಲಿ ? "

ಒಂದು ಕ್ಷಣದ ಹಿಂದೆ ಅವರಿಬ್ಬರೂ ಎದುರು ಬದುರಾಗಿ ಹೊಲಿಯುತ್ತ ಕುಳಿತಿದ್ದರು. ಮುದುಕಿ ತನ್ನ ಮಗಳನ್ನು ಹುಡುಕಲು ಎದ್ದಳು. ಮಗ್ಗುಲ ಕೋಣೆಯಲ್ಲಿ ನೋಡುತ್ತಾಳೆ: ಮೇಜಿನ ಮೇಲೆ ರಾತ್ರಿಯೂಟ ಇನ್ನೂ ಸಿದ್ಧ ವಾಗಿ ಬಂದಿಲ್ಲ. ಹಂದಿಯ ಮಾಂಸದ ಒಂದು ತುಣುಕು, ಸ್ವಲ್ಪ ಕ್ಯಾಬೀಜ, ಉಪ್ಪು ಹಚ್ಚಿದ ಮೂಲಂಗೆ ಶುಂಠಿಯ ಬೇರು, ಇಷ್ಟು ಇದ್ದವು. ಒಂದು ಕಡೆಗೆ ಅಸ್ತವ್ಯಸ್ತವಾಗಿ ಬಿದ್ದ ಉಳ್ಳಿಗಡ್ಡಿಯ ಹೋಳು ಅಡಿಗೆ ಮಾಡುವವರ ಆಲಸ್ಯವನ್ನು ಒಡೆದು ತೋರುತ್ತಿತ್ತು. ಜಂತೆಯಲ್ಲಿ ಇಲಿಗಳು ಚೀರುತ್ತಿವೆ, ಒಮ್ಮೆಲೇ ಏನೋ ಸಪ್ಪಳವಾಯಿತು. ಅವುಗಳಲ್ಲೊಂದು ಬಿದ್ದಿರಬೇಕು. ಧೂಳಿ ಮಂಜಿನಂತೆ ವ್ಯಾಪಿಸಿತು. ಸಿಟ್ಟಿನಿಂದ ಜಂತೆಯ ಕಡೆಗೊಮ್ಮೆ ಮೇಜಿನ ಕಡೆಗೊಮ್ಮೆ ನೋಡಿದಳು.

"ಆ ಮೈಗಳ್ಳ ಹುಡುಗಿ ಎಲ್ಲಿ ಹೋಗಿದ್ದಾಳೆ?"

ಬಾಗಿಲಿಗೆ ಹೋಗಿ, ಮುಪ್ಪಿನ ಮೈಯ ಶಕ್ತಿಯನ್ನೆಲ್ಲ ವೆಚ್ಚಮಾಡಿ ಒದರಿದಳು. ಆ ಕರೆ ದಕ್ಷಿಣದ ಮನೆಯ ಕಡೆಗೆ ಇತ್ತು. ಅಲ್ಲಿ 'ನಿನೀ' ಲ್ಯಾನ್-ಶಿಯಾಂಗ್ ಎಂಬ ಹುಡುಗಿಯ ಕಡೆಗೆ ಹೋಗುತ್ತಿದ್ದಳು. ಲ್ಯಾನ್-ಶಿಯಾಂಗ್ ಮತ್ತು 'ನಿನೀ' ಸ್ತ್ರೀಯು ಕಡೆಗೆ ಕಾಲುಚೀಲ ಹೆಣೆಯುವದನ್ನು ಹೇಳಿಸಿಕೊಳ್ಳಲು ಹೋಗುತ್ತಿದ್ದರು. ಅವರಿಬ್ಬರೂ ತಮ್ಮ ಕೆಲಸದ ವೇಗ ವನ್ನು ಪರೀಕ್ಷಿಸಿ, ಬಿಲ್ಲಿಗಳಲ್ಲಿ ಸಿಗುತ್ತಿದ್ದ ಕೂಲಿಯನ್ನು ಹೋಲಿಸಿ ನೋಡು ತ್ತಿದ್ದರು. ನಿನೀ ಲ್ಯಾನ್-ಶಿಯಾಂಗ್‌ನ ಜೊತೆಗೆ ತನ್ನ ಕೆಲಸದ ಗುಣದ ಬಗ್ಗೆಯಾಗಲಿ, ಮುಂದಿನ ಕೆಲಸದ ಬಗ್ಗೆಯಾಗಲಿ ಹರಟೆ ಹೊಡೆಯುತ್ತಿದ್ದರೆ, ಬೇಗ ಉತ್ತರವೀಯುತ್ತಿದ್ದಳು: "ಅವ್ವಾ, ಈಗ ಮನೆಗೆ ಬರುತ್ತೇನೆ."

ಇಂದು ಮುದುಕಿ ಎರಡು ಸಲ ಒದರಿದರೂ ಉತ್ತರ ಬರಲೇ ಇಲ್ಲ. ಕೆಲವೊಂದು ಕೋಳಿಗಳು ಮಣ್ಣುಗೋಡೆಯ ಹತ್ತಿರ ಅಡ್ಡಾಡುತ್ತಿದ್ದವು ಮಾತ್ರ. ಅವು ಆಸೆಯಿಂದ ಆಹಾರಕ್ಕಾಗಿ ಒದರಿದವು. ಬಚ್ಚಲ ಹತ್ತಿರವೇ ಮಲಗಿದ್ದ ಹಳದಿಯ ನಾಯಿಗೂ ಈ ಧ್ವನಿಯಿಂದ ಎಚ್ಚರಾಯಿತು. ತಲೆ ಎತ್ತಿ ನೋಡಿ, ಏನೂ ಆಗಿಲ್ಲವೆಂದರಿತು ಆಕಳಿಸಿ ಮಲಗಿಬಿಟ್ಟಿತು.

ಚಳಿಗಾಲದ ಬೂದಿಬಣ್ಣದ ಆಕಾಶದಲ್ಲಿ, ಗಾಳಿ-ಪಟಗಳು ಕನಸಿನಲ್ಲಿ ಯಂತೆ, ಗಾಳಿಯ ಮನಸ್ಸಿಗೆ ಬಂದಂತೆ, ಹಾರುತ್ತಿದ್ದವು. ಮುದುಕಿ ಅವನ್ನು

ನೋಡಿ ಶಪಿಸಿದಳು. ಅವುಗಳಲ್ಲೊಂದು ಅವಳ ತಪ್ಪು ಮಾಡಿದ ಮಗ ಳೇನೋ !

" ಏ ಕತ್ತೆ, ನಿನಗಿನ್ನೂ ವಯಸ್ಸು ಮೀರಿಲ್ಲ. ಮೇಲಾಗಿ ಚೆಲುವೆ ಬೇರೆ. ಅದಕ್ಕೆಂದೇ ಈ ದೈವಗೇಡಿ ಮುದುಕಿಯೊಬ್ಬಳನ್ನೆ ಬಿಟ್ಟು ಹೋದೆಯಾ ?" ಎಂದು ನೆಲದ ಮೇಲೊಮ್ಮೆ ಉಗುಳಿ, ಮನೆಯೊಳಕ್ಕೆ ತಿರುಗಿದಳು :

" ಸ್ವಲ್ಪ ತಡೆ. ಮಗ ಬರಲಿ, ಅವನೆದುರಿಗೇ ಹೇಳುತ್ತೇನೆ. "

ಪರಿಯುಚ್ಚಿದ ಉರುಳೀಗಡ್ಡಿಯ ಹೋಳನ್ನು ನೋಡುತ್ತಲೆ ಅವಳ ಸಿಟ್ಟು ಇನ್ನೂ ಹೆಚ್ಚಾಯಿತು.

" ನಾನೇ ಹೇಳುತ್ತೇನೆ ಅವನಿಗೆ ' ನಿನೀ ಒಳ್ಳೆಯವಳಲ್ಲ. ಕತ್ತೆಯಂತೆ ಓಡಿ ಹೋಗುತ್ತಾಳೆ. ಏನು ಮಾಡುತ್ತಾಳೋ ಯಾರಿಗೆ ಗೊತ್ತು ? ಅವಳಿ ಗೇನಾದರೂ ಅಪಮಾನವಾದರೆ ನೀನು ಹುಂಜನಂತೆ ಕಾದಾಡಬೇಡ, ದುಷ್ಟ ಹುಡುಗಿ, ಈ ಮುದುಕಿ ಏನು ಮಾಡಬಲ್ಲದೆಂಬುದನ್ನು ತೋರಿಸು ತ್ತೇನೆ! "

ಕತ್ತಲಾಯಿತು. ಮಗ ಹಸಿವೆಯಿಂದ ಮನೆಗೆ ಬರಬಹುದೆಂದು ತಿಳಿದು, ಮುಗಿಯದಿದ್ದ ಅಂಗಿಯನ್ನು ಮಡಿಚಿದಳು. ನಿನೀಯ ಕಾಲುಚೀಲಗಳನ್ನು ರಗ್ಗಿನಲ್ಲಿ ಸುತ್ತಿದಳು. ಉರುಳೀಗಡ್ಡಿಯ ಕಡೆಗೆ ನೋಡುತ್ತ, ತುಂಬಿದ ಕಣ್ಣುಗಳಿಂದ, ಮಗಳನ್ನು ಪದ್ಧತಿಯಂತೆ ಶಪಿಸುತ್ತ ಬಾಗಿಲಲ್ಲಿ ಕುಳಿತಳು.

ಎಣ್ಣೆಯನ್ನುಳಿಸಲು ಸಣ್ಣಗೆ ಮಾಡಿದ ದೀಪ, ಮೆಲ್ಲಗೆ ಸ್ಟೋವ್ಪಿನ ಜೊತೆ ಮಾತನಾಡುತ್ತಿತ್ತು. ಒಂದು ಮೊಂಡ ಚಾಕುವಿನಿಂದ ಮುದುಕಿ ಮೂಲಂಗಿ ಯನ್ನು ಹೆಚ್ಚುತ್ತಿದ್ದಳು. ಹುರುಪಿನಿಂದ ಹರೆಯದ ಮಗಳು ಒಳಗೆ ಬರಲು ಅವಳ ಸಿಟ್ಟಿಗೆ ಹೊಸದಾಗಿ ಉಕ್ಕು ಬಂದಿತು.

" ನರಿಯಂತೆ ಯಾವನ ಜೊತೆ ಓಡಿ ಹೋಗಿದ್ದೆಯೋ ಮುದುಕಿ ನನ್ನೊಬ್ಬಳನ್ನೇ ಮನೆಯಲ್ಲಿ ಬಿಟ್ಟು ? "

" ಅವ್ವಾ, ಬೈಯ್ಯಬೇಡ ನೋಡು ! "

ನಿನೀ ತಾಯಿಯ ಮಗ್ಗುಲಿಗೆ ಹಕ್ಕಿಯಂತೆ ಓಡಿ ಬಂದು " ಅವ್ವಾ ನಾನು ಅದ್ಭುತ ಚಮತ್ಕಾರಗಳನ್ನು ನೋಡಿದೆ........"

ಮಾತಿನ ಶೈಲಿಯನ್ನು ಬದಲಿಸಬೇಕೆಂದು ತಿಳಿದು ಮಗಳು ವಿವರಿಸಿದಳು:

" ಅವ್ವಾ, ಮಧ್ಯಾಹ್ನ ಉರುಳೀಗಡ್ಡೆಯನ್ನು ಹೆಚ್ಚುವಾಗ ಬಾಗಿಲಲ್ಲಿ ಬೇರೆ ದೇಶದ ಮದ್ದಳೆಯನ್ನು ಕೇಳಿದೆ. ಈಗ ವಾರದಿಂದ, ದೂರದಲ್ಲಿ ನಾವು ಕೇಳುತ್ತಿದ್ದುದು ಅದೇ. ನೀನು ಕೇಳಿರುವೆಯಲ್ಲವೇ ? ಡಂ ! ಡಂ ! ಡಂ ! ಎಂದು. ನಿನ್ನ ಅಪ್ಪಣೆ ಕೇಳುವ ಅವಕಾಶವೂ ನನಗುಳಿಯಲಿಲ್ಲ. ನಾನೇ ಓಡಿ ಹೋದೆ. ಓ ನಾನು ನೋಡಿದ್ದು...."

ಆದರೆ ಮುದುಕಿ ಲಕ್ಷ್ಯಗೊಡದೆ ಮೂಲಂಗಿಯನ್ನು ಹೆಚ್ಚುತ್ತಿದ್ದಳು. ನಿನೀ ಅವಳ ಸೆರಗು ಜಗ್ಗಿ ಹೇಳಿದಳು :

" ಅವ್ವಾ ಇಲ್ಲಿ ಕೇಳು; ಎಷ್ಟೋ ಜನರು ಒಂದು ಧ್ವಜದ ಹಿಂದೆ ಬರುತ್ತಿದ್ದರು. ಧ್ವಜದ ಹತ್ತಿರವೇ ಒಂದು ದೊಡ್ಡ ನಗಾರಿ ಮಧುರವಾಗಿ ಧ್ವನಿ ಮಾಡುತ್ತಿತ್ತು. ಇದಲ್ಲದೆ ಗಂಟೆಕಟ್ಟಿದ ಉಳಿದೆಷ್ಟೋ ನಗಾರಿಗಳಿದ್ದವು...."

ಹುಡುಗಿ ನಗಾರಿ ಎಷ್ಟು ದೊಡ್ಡದಾಗಿದೆಯೆಂದು ಕೈಯಿಂದ ತೋರಿಸಲು ಹೋಗಿ, ಮೂಲಂಗಿಯನ್ನು ನೆಲದ ಮೇಲೆ ಕೆಡವಿದಳು.

" ಕತ್ತೇ, ಅದು ಎಷ್ಟೇ ದೊಡ್ಡದಿರಲಿ. ನನ್ನ ಮೂಲಂಗಿಯನ್ನು ಹಾಳು ಮಾಡಬೇಡ. "

" ಆದರೆ ಅವ್ವಾ, ನೀನು ಕೇಳಲೇಬೇಕು. ಮುಗಿಲುಬಣ್ಣದ ಸಮವಸ್ತ್ರ ಧರಿಸಿ, ಹೆಗಲ ಮೇಲೆ ಕೆಂಪು ಪಟ್ಟಿಯನ್ನು ಧರಿಸಿದ ಜನರಿದ್ದರು. ಆ ಎಲ್ಲ ಸೈನಿಕರು ವಿನಯಶಾಲಿಗಳಾಗಿದ್ದರು. ನಮ್ಮ ದೂರದ ಅಣ್ಣನಂತಲ್ಲ. ಅದರಲ್ಲಿ ಅದೇ ರೀತಿಯ ಸಮವಸ್ತ್ರ ಮತ್ತು ಕೆಂಪು ಪಟ್ಟಿ ಧರಿಸಿದ ಹೆಣ್ಣುಮಕ್ಕಳೂ ಇದ್ದರು. ಎಷ್ಟು ಸ್ವಚ್ಛ ಮತ್ತು ಶಿಸ್ತು ! ಅವ್ವಾ, ಅವರೆಲ್ಲರೂ ಇಂಪಾಗಿ ಹಾಡಿದರು. ಹಾಡುತ್ತ ತಮ್ಮ ಕೈಯಲ್ಲಿದ್ದ ಗೆಜ್ಜೆ ಕಟ್ಟಿದ ಮೃದಂಗಗಳನ್ನು ಬಾರಿಸುತ್ತಿದ್ದರು...."

ನಿನೀ, ಅವರ ಧ್ವನಿಯನ್ನು ಅನುಕರಿಸುತ್ತ ತಲೆ ಮತ್ತು ಟೊಂಕವನ್ನು ತೂಗಿಸಿದಳು. ಈ ಆನಂದ ತಾಯಿಗೆ ಸಿಟ್ಟಿಗೇಳಲು ಮತ್ತಷ್ಟು ಹುರುಪು ಕೊಟ್ಟಿತು.

" ಅಂತೇ ನೀನೂ, ಹುಚ್ಚು ಹಿಡಿದು ಅವರ ಬೆನ್ನು ಹತ್ತಿದೆಯಲ್ಲವೆ, ಇಲ್ಲಿ ನನ್ನೊಬ್ಬಳನ್ನೇ ಬಿಟ್ಟು? "

" ಇಲ್ಲ ಅವ್ವಾ. ನಾನು ಅವರ ಜೊತೆ ಹೋಗಲಾರೆನೆಂದು ಗೊತ್ತಿತ್ತು. ನಿನ್ನನ್ನು ಹೇಗೆ ಮರೆಯಲಿ ? ' ನಿನೀ, ಸ್ವಲ್ಪ ಆ್ಯರೊರೂಟ್ ಕುದಿಸಿ ತಾ,' ' ನಿನೀ ಪೀಕದಾನಿ ತುಂಬಿದೆ ನೋಡು' ' ನಿನೀ ಈಗ....' "

ಮಗಳು ತಾಯ ಆಜ್ಞೆಗಳನ್ನು ಅಣಕಿಸುವದರಲ್ಲಿ ಯಶಸ್ವಿಯಾದಳು. ತಾಯಿಗೂ ತಡೆಯದಾಗಿ ನಗೆ ಬಂದಿತು.

" ನಿಂದೆಲ್ಲ ನಟನೆ, ಚತುರ ಮಾತು ನನಗೆ ಗೊತ್ತಾಯಿತು. ನಾನೆಂದು ಹೋಗಿದ್ದೆ ಅಷ್ಟೊತ್ತು ? ನಾನೇನು ಮಾಡಿದೆ ನೋಡು. ಮೂಲಂಗಿ ಹೆಚ್ಚಿದೆ ಮತ್ತು ಈ...."

ಹುಡುಗಿಯಂತೆ ತನ್ನನ್ನು ತಾನೇ ಹೊಗಳುತ್ತ ಸ್ಟೊವ್ಹಿನ ಮೇಲೆ ಕುದಿಯುವ ಪಾತ್ರೆಯನ್ನು ತೋರಿಸಿದಳು.

" ಒಳ್ಳೇದು. ನಾನೇನೂ ಹೋಗುತ್ತಿದ್ದಿಲ್ಲ ಅವ್ವಾ. ಆದರೆ ಅವರೇ ನನ್ನನ್ನು ಕರೆದರು. ಮುಗಿಲುಬಣ್ಣದ ವೇಷದಲ್ಲಿದ್ದ ಒಬ್ಬ ಹುಡುಗಿ ನನ್ನನ್ನು ಕರೆದಳು. "

" ಏನು ಅವಳು ಕರೆದಳೇ ? " ಮುದುಕಿ ಬಹಳ ಹೊತ್ತು ಕುತೂಹಲವನ್ನು ತಡೆಯುವದಾಗಲಿಲ್ಲ. " ಆಕೆ ಯಾರು ?"

" ಅವಳ ತಲೆಯ ಮೇಲೆ ಮುಗಿಲು ಬಣ್ಣದ ಟೊಪ್ಪಿಗೆ ಇದ್ದದ್ದರಿಂದ ಅವಳ ಗುರುತು ಹತ್ತಲಿಲ್ಲ. ನಾನು ಅವಳನ್ನು ದಿಟ್ಟಿಸಿದಾಗ, ಕವಾಯತು ಬಿಟ್ಟು ನನ್ನನ್ನು ತೋಳು ಹಿಡಿದು ಜಗ್ಗಿದಳು. "

" ಹಾಂ, ನಿಜವೇ? "

" ಅವಳು ಹೇಳಿದಳು: ' ಬಾ ನಿನೀ ' ಎಂದು. ನಾನು ಸೂಕ್ಷ್ಮವಾಗಿ ಅವಳನ್ನು ನೋಡಿದೆ...."

" ಏನೇ ಆಗಲಿ, ಯಾರವಳು ?" ಮುದುಕಿ ಕುತೂಹಲದಿಂದ ಮತ್ತೆ ಕೇಳಿದಳು.

" ಅವಳು ಚು-ತ್ಸೆ. ನನ್ನ ಜೊತೆ ಕಾಲು-ಚೀಲಗಳನ್ನು ಹೊಲಿಯುತ್ತಿದ್ದಳಲ್ಲ. "

" ಯಾರು ? ಹೆರಳಿನ ಮೇಲೆ ಹಸಿರು ರಿಬನ್ ಬಯಸುತ್ತಿದ್ದಳಲ್ಲ ಆ ಹುಡುಗಿಯೇ ?"

" ಅವಳೇ. ಆದರೆ ಈಗವಳಿಗೆ ಹಸಿರು ರಿಬನ್ನಿಗೆ ಆಸೆ ಇಲ್ಲ. ಸುಂದರವಾದ ಉಡುಪು ಧರಿಸುತ್ತಾಳೆ. ಚಪ್ಪಲಿಗಳೂ ಬೇರೆ ದೇಶದವು. "

" ಅಲ್ಲಿ ಅವಳಪ್ಪ ಜೂಜು ಆಡುತ್ತಾನೆ " ಮುದುಕಿ ನೆನಪು ಮಾಡಿಕೊಳ್ಳಲು ತಲೆತುರಿಸಿಕೊಂಡಳು.

" ಅವನು ಹೆಂಡತಿಯನ್ನು ಹೊಡೆಯುತ್ತಿದ್ದನಲ್ಲವೇ ? "

" ಕೇಳು ಅವ್ವಾ,...." ನಿನೀ ಉಸಿರು ಬಿಡದೆ ಸಾಗಿದಳು.

" ಹೀಗೆ ನಾನು ಅವರ ಮೆರವಣಿಗೆಯಲ್ಲಿ ಕೂಡಿದೆ. ಆ ಬೇರೆ ದೇಶದ ನಗಾರಿ ನನ್ನಿಂದ ಮೂರು ಹೆಜ್ಜೆ ಮುಂದಕ್ಕೆ ಇತ್ತು. ನಾನು ತೀರ ಮುಂದೆಯೆ ಇದ್ದೆ...." ಈಗ ಎರಡು ಮುಖಗಳೂ ಹೆಮ್ಮೆಯಿಂದ ಬೆಳಗಿದವು. ಸ್ಟೋವ್ಹಿನ ಉರಿನಾಲಗೆಗಳು ಮುಂದೆ ಚಾಚಿದವು.

" ಆಗ ನಾನು ಕೇಳಿದೆ. ' ಚು-ತ್ಸೆ ನೀನು ನನ್ನನ್ನು ಎಲ್ಲಿಗೆ ಒಯ್ಯುತ್ತಿರುವಿ ?' ಆಗ ಅವಳು ಗಂಭೀರಳಾಗಿ ನನ್ನ ಕಿವಿಯಲ್ಲಿ ಹೇಳಿದಳು: ' ನನ್ನನ್ನು ಚು-ತ್ಸೆ ಎಂದು ಕರೆಯಬೇಡ. ನನ್ನ ಹೆಸರು ರಿಬೆಕ್ಕಾ. ನಾವು ಭುವನಕ್ಕೆ ತಿರುಗಿ ಹೊರಟಿದ್ದೇವೆ ' ಅವ್ವಾ ನಿನ್ನ ವಿಷಯಕ್ಕೆ ಬಹಳ ಚಿಂತೆಯಾಗಿತ್ತು. ನಿಜವಾಗಿಯೂ ನಿನ್ನ ಹತ್ತಿರ ಬರಬೇಕೆಂದಿದ್ದೆ. ಆದರೆ ಅವಳು ಗಟ್ಟಿಯಾಗಿ ಹಿಡಿದೇ ಬಿಟ್ಟಳು. ಮತ್ತು ಅವರು ಎಷ್ಟು ಇಂಪಾಗಿ ಹಾಡುತ್ತಿದ್ದರು ! ಅವ್ವಾ ಕೇಳು.....' ಯೇಸುವು ನಮ್ಮನ್ನು ಪ್ರೀತಿಸುವ.... ಸ್ವರ್ಗದ ಒಡೆಯ ' ನೋಡು, ನಾನು ತಿರುಗಿ ಬರುವಾಗ ನನಗೆ ಇದನ್ನು ಕೊಟ್ಟರು....."

ಹುಡುಗಿ ಮೇಜಿನ ಬಳಿಗೆ ಹೋಗಿ ದೀಪವನ್ನು ದೊಡ್ಡದು ಮಾಡಿದಳು. ಉರಿ ಹರ್ಷದಿಂದ ನಾಲಿಗೆಯನ್ನು ಚಾಚಿತು. ಉಗಿ, ಉರಿ, ಬೆಳಕಿನಿಂದ ತುಂಬಿದ ಕೋಣೆಯಲ್ಲಿ ಅವಳ ಮುಖ ಬೆಳಗಿತು. ತಾಯಿ ಮಗಳಿಬ್ಬರೂ

ಹೆಮ್ಮೆಯಿಂದ ಹಸ್ತಪತ್ರಿಕೆಯ ಕಡೆಗೆ ನೋಡಿದರು. ಹೊದಿಕೆಯ ಮೇಲೆ ಬಣ್ಣದ ಚಿತ್ರವಿತ್ತು. ಇಬ್ಬರಿಗೂ ಓದಲು ಬರುತ್ತಿರಲಿಲ್ಲ. ಮುದುಕಿ ದಿಟ್ಟಿಸಿ ನೋಡಿದಳು; ಆದರೆ ಶೂನ್ಯವಾಗಿ ಅಸ್ಪಷ್ಟವಾಗಿ ಕಂಡಿತು. ಬತ್ತಲೆ ಮೈಯಲ್ಲಿ, ಗಡ್ಡ ಇಳಿಬಿಟ್ಟು ಎರಡು ಕಟ್ಟಿಗೆಯ ತುಂಡಿನ ಹತ್ತಿರ ಒಬ್ಬ ಮನುಷ್ಯ ನಿಂತಿದ್ದಾನೆ.

"ಬಹುಶಃ ಇವನೊಬ್ಬ ಅನಾಗರಿಕನಿರಬಹುದು. ಎಷ್ಟು ಚೂಪಾದ ಬಿರುಸು ಹಣೆ!" ಅವಳು ಉಸಿರು ಬಿಟ್ಟಳು.

"ಅಲ್ಲ, ಅವನು ಅನಾಗರಿಕನಲ್ಲ. ಅವನು ಯೇಸು."

ಒಮ್ಮೆಲೇ ಮುದುಕಿಗೆ ನೆನಪಾಯಿತು, ಯೇಸುವಿನ ಅನುಯಾಯಿಗಳು ಕೊಲ್ಲಲ್ಪಟ್ಟ ದೃಶ್ಯ. ರುಂಡಗಳು ಕಳಚಿ ರಸ್ತೆಯ ಪಕ್ಕದಲ್ಲಿಗೆ ಬಿದ್ದದ್ದನ್ನು ಅವಳು ನೋಡಿದ್ದಳು....

ನಿಸೀ ಹುರುಪಿನಿಂದ ಮಾತನಾಡಿದಳು: "ನಾವೆಲ್ಲ ಪಾಪಿಗಳೆಂದು ಅವರು ಹೇಳುತ್ತಾರೆ. ಯೇಸುವು ನಮ್ಮ ಸಲುವಾಗಿ ಮರಣ ಹೊಂದಿದ ಅಂತೇ ನಾವೆಲ್ಲ ಬದುಕಿದ್ದೇವೆ. ಅಮ್ಮಾ, ಆ ಸುಂದರ ಚಿತ್ರವನ್ನು ನೋಡು. ಇಲ್ಲಿಯೇ ಅವನು ನಮ್ಮ ಸಲುವಾಗಿ ಶಿಲುಬೆಯ ಮೇಲೆ ಪ್ರಾಣ ಬಿಟ್ಟ. ನಾವು ಈ ಧರ್ಮವನ್ನು ನಂಬಬೇಕೆಂದು ಅವರು ಹೇಳುತ್ತಾರೆ...."

ಹುಡುಗಿ ತಾನು ತಂದಿದ್ದ ಎಲ್ಲ ಮರುಳುಗೊಳಿಸುವ ವಿಚಾರಗಳನ್ನು ಹೇಳಲು ಪ್ರಯತ್ನಿಸಿದಳು. ಅದರಿಂದ ತಾಯಿಯ ಮನಸ್ಸಿನಲ್ಲಿ ಉಂಟಾದ ಬಿರುಗಾಳಿಯ ಕಲ್ಪನೆ ಅವಳಿಗಿರಲಿಲ್ಲ.

"ನನಗೆ ಅದರಲ್ಲಿ ನಂಬಿಕೆಯೇ ಇಲ್ಲ. ನಾನೇಕೆ ಆ ಅನಾಗರಿಕರಲ್ಲಿ ನಂಬಿಕೆಯಿಟ್ಟು ಪ್ರಾಣ ಕಳಕೊಳ್ಳಬೇಕು? ಆ ಅನಾಗರಿಕ ಸೈನಿಕರು ನಮ್ಮನ್ನು ದಾಳಿ ಮಾಡಿ ಬೆಲೆಯುಳ್ಳ ವಸ್ತುಗಳನ್ನು ಹಾಳುಮಾಡುವಂತೆ ಏಕೆ ಮಾಡಬೇಕು? ನನ್ನನ್ನು ನೆಲ ಅರ್ಧ ನುಂಗಿದ್ದರೂ, ಇಷ್ಟು ಸುಲಭವಾಗಿ ನನ್ನ ಗತಜೀವನವನ್ನು ನಾನು ಬಿಡಲಾರೆ. ನಿಸೀ, ಇಂದಿನಿಂದ ನೀನು ಅಲ್ಲಿಗೆ ಹೋಗಬೇಡ. ಹೇಳಿದ್ದು ಕೇಳಿಸಿತೋ ಇಲ್ಲವೋ? ನೀನು ಅಲ್ಲಿಗೆ

ಹೋದರೆ ಆಮೇಲೆ ಯಾರೂ ನಿನ್ನನ್ನು ಸೊಸೆಯೆಂದು ತೆಗೆದುಕೊಳ್ಳಲಿಕ್ಕಿಲ್ಲ'' ಆ ಹಸ್ತಪ್ರತಿಗಾಗಿ ಕೈ ಚಾಚಿದಳು.

ನಿನೀಗೆ ತಾನು ನೋಡಿದ ಕೇಳಿದ ಸಂಗತಿಗಳ ಬಗ್ಗೆ ಅತೀವ ಹೆಮ್ಮೆಯುಂಟಾಗಿತ್ತು. ತಾಯಿಯ ಅವಿವೇಕದ ಈ ವರ್ತನೆಯನ್ನು ಕಂಡು ಅವಳಿಗೆ ಸಿಡಿಲುಬಡಿದಂತಾಯಿತು. ಅವಳಿಗೆ ನೋವು ಅಪಮಾನ ಸಹಿಸದಾಯಿತು. ಆ ಮುಗಿಲುಬಣ್ಣದ ಉಡುಪು ಧರಿಸಿದ ಆ ಜನರು ತನ್ನೊಡನೆ ಎಷ್ಟು ವಿನಯದಿಂದ ವರ್ತಿಸಿದರು! ತಾಯಿ ಆ ಗೌರವವನ್ನು ಅಪಮಾನಿಸುತ್ತಿರುವಳಲ್ಲ ಎಂದು ಅವಳ ಬಗ್ಗೆ ದ್ವೇಷ ಉಂಟಾಯಿತು. ಕೈಯಲ್ಲಿ ಆ ಹಸ್ತಪ್ರತಿಯನ್ನು ಬಿಗಿಯಾಗಿ ಹಿಡಿದು, ಕೋಣೆಯಿಂದ ಜಾರಿದಳು.

ತನ್ನ ಮಗಳು ಅದೃಶ್ಯಳಾಗುತ್ತಿರುವದನ್ನು ನೋಡಿ ಮುದುಕಿ ತಲೆಯಲ್ಲಾಡಿಸಿದಳು. ಅವಳು ಹೇಳುತ್ತಿದ್ದಳೇನೋ '' ನಿನಗೆ ನನ್ನಷ್ಟು ಅನುಭವವಿದೆಯೇ ? ನಾನು ನಿನಗಿಂತ ಹೆಚ್ಚು ಉಪ್ಪು ತಿಂದಿದ್ದೇನೆ'' ಕೆಳಗೆ ಬಾಗಿ, ಉಗಿ ಹಾಯುತ್ತಿರುವ ಪಾತ್ರೆಯ ಕಡೆಗೆ ನೋಡಿದಳು. ಸಂಜೆ-ಗಾಳಿಯಲ್ಲಿ ಬಿದಿರು ಸಪ್ಪಳ ಮಾಡುವಂತೆ ಅದು ಧ್ವನಿಮಾಡುತ್ತಿತ್ತು. ಅದರ ಮುಚ್ಚಳವನ್ನು ಸುತ್ತಲೂ ಪರೀಕ್ಷಿಸಿದಳು. ಅದನ್ನು ಹಳೆಯ ವರ್ತಮಾನ ಪತ್ರದಿಂದ ಮುಚ್ಚಿದ್ದರು. ಒಳಗಿನ ಬೆಲೆಯುಳ್ಳ ಉಗಿ, ಕಡುಬನ್ನು ಬೇಯಿಸಬೇಕಾಗಿತ್ತು. ಅವುಗಳ ಸ್ಥಿತಿ ಏನಾಗಿರಬಹುದೆಂದು ಊಹಿಸಿದಳು. ಬೆರಳುಗಳಿಂದ ಎಣಿಸಿದಳು. ಪಾತ್ರೆ ಕುದಿಯುತ್ತಿದ್ದಾಗ, ಇದ್ದಲಿ ಮಾರುವವ ಬಾಗಿಲ ಮೇಲಿಂದ ಹಾದು ಹೋದ. ಮುಗಿಲಲ್ಲಿ ಚಿಕ್ಕೆಗಳು ಬೆಳಗುತ್ತಿದ್ದವು. ಹೊತ್ತೇನೊ ಮೀರಿ ಹೋಗಿತ್ತು. ಆದರೆ ತಾಯಿ ಮಗಳಿಬ್ಬರೂ ಆ ಕಡಬು ಬೆಂದವೊ ಇಲ್ಲವೊ ನೋಡಬೇಕಾಗಿತ್ತು. ಇನ್ನೊಬ್ಬಳು ತಲೆಯಲ್ಲಾಡಿಸಿ ಹೇಳಬೇಕು: "ಇನ್ನು ತೆಗೆ, ಇನ್ನೂ ಗಂಡು ಉಳಿದಿರಲಿಕ್ಕಿಲ್ಲ" ಅಲ್ಲಿಯ ವರೆಗೆ ಆ ಮುಚ್ಚಳವನ್ನು ತೆಗೆಯುವದು ಅಸಾಧ್ಯ. ಏಳೆಂಟು ಸಲ ಹೀಗೆ ಆದ ಮೇಲೆ ೮–೧೦ ಬೆಂದ ಕಡುಬುಗಳು ಹೊರಗೆ ಬೀಳುತ್ತಿದ್ದವು. ಮುಚ್ಚಳವನ್ನು ಬೇಗ ತೆರೆದು, ಕಡುಬುಗಳು ಬೆಂದಿರದಿದ್ದರೆ ಯಾರೂ ತಕ

ರಾರು ಮಾಡುವಂತಿರಲಿಲ್ಲ. ಶಾಲೆಯಲ್ಲಿ ಪ್ಯೂನನ ಕೆಲಸ ಮಾಡುವ ಹುಡುಗ ಮನೆಗೆ ಬಂದಾಗ, ಅವನ ಹಲ್ಲಿಗೆ ನೋವಾಗುತ್ತಿತ್ತು. ಅವನು ಸಿಟ್ಟಿಗೆದ್ದು ಒದರಾಡಿದರೆ, ಇಬ್ಬರೂ ತಲೆ ತಗ್ಗಿಸಿ, ಉಸಿರು ಬಿಗಿ ಹಿಡಿದು ಅವನ ಮಾತು ಕೇಳುತ್ತಿದ್ದರು. ಈಗ ಮುದುಕಿ ಮಗಳನ್ನು ಬೇಡಿ ಕೊಂಡಳು:

"ನಿನೀ, ಸ್ವಲ್ಪ ಕಡುಬುಗಳನ್ನು ನೋಡುಬಾ. ಅವು ಸಿದ್ಧವಾಗಿ ವೆಯೋ ಇಲ್ಲವೋ ನೋಡೋಣ."

ಒಳಗಿನ ಕೋಣೆಯಿಂದ ಕೆಮ್ಮು ಮಾತ್ರ ಕೇಳಿಬಂತು.

ಪೂರ್ವದ ನಗರದಿಂದ ಗಂಟೆಯ ಸಪ್ಪಳ ಕೇಳಿಬರುತ್ತಿರಲು, ಒಂದು ಕಪ್ಪು ನೆರಳು ಮನೆಯಲ್ಲಿ ಬಂತು. ದಿನವೆಲ್ಲ ದುಡಿದು ಬರುತ್ತಿರುವವನ ಎದುರು ಪಲ್ಲೆಯ ತಟ್ಟೆ ಇಡಲ್ಪಟ್ಟಿತು. ಮೂರು ನೀಲಿಯ ತಟ್ಟೆಗಳಲ್ಲಿ ಮುದುಕಿ ಸಾರನ್ನು ಬಡಿಸಿದಳು. ಉಗಿ ಮೇಲಕ್ಕೆ ಹಾಯುತ್ತಿತ್ತು. ವಾಡಿಕೆ ಯಾಗಿ ನಿನೀ ಅವನ್ನು ಎಚ್ಚರದಿಂದ ಮೇಜಿನ ಮೇಲೆ ಇಡುತ್ತಿದ್ದಳು. ಆಮೇಲೆ ಆ ಹುಡುಗ ಸುದ್ದಿಗಳನ್ನು ಹೇಳುತ್ತಿದ್ದ. ಟಾಯೆನ್-ಎನ್-ಮೆನ್‌ದ ಮೀಟಿಂಗಿನಲ್ಲಿ ತನ್ನ ಶಾಲೆ ಭಾಗವಹಿಸಿದ್ದು, ತಾನು ಧ್ವಜಗಳ ಮೇಲೆ ಬರೆಯಲು ಹುಡುಗರಿಗೆ ನೆರವು ನೀಡಿದ್ದು, ಅಥವಾ ಕಾರ್ಯದರ್ಶಿ ಶಾಲೆಗೆ ಕಸಬರಿಗೆ ತೆಗೆದುಕೊಳ್ಳುವಾಗ ರೊಕ್ಕ ಎತ್ತಿಹಾಕಿದ್ದು, ಅಥವಾ ಹುಡುಗರಿಗೆ ಸಮವಸ್ತ್ರ ಹೊಲಿಸುವಾಗ ಉಳಿದ ಬಟ್ಟೆಯಿಂದ ತಾನು ಕೋಟು ಹೊಲಿಸಿಕೊಂಡದ್ದು. ಇವೆಲ್ಲ ಸುದ್ದಿಗಳನ್ನು ಮುಗಿಸಿ ತಾಯಿ ಯನ್ನು ಕೇಳಿದ:

"ಅವ್ವಾ, ಆ ಲೀಯ ಅಂಗಿ ಏನಾಯಿತು? ನಾನು ನಿನಗೆ ಮೂರು ದಿನಗಳ ಹಿಂದೆ ಹೊಲಿಯಲು ತಂದು ಕೊಟ್ಟಿದ್ದೆನಲ್ಲ. ಇವೊತ್ತು ಅವನು ನನ್ನನ್ನು ಕೇಳಿದ."

ಚಿಂಗ್-ಲುಂಗ್ ಕೆಲ ಸಲ ತಾಯಿಗೆ ಹೊಲಿಗೆ ಕೆಲಸಗಳನ್ನು ತಂದು ಕೊಡುತ್ತಿದ್ದ. ಇದರಿಂದ ಗಳಿಕೆ ಸ್ವಲ್ಪಾದರೂ ಹೆಚ್ಚುತ್ತಿತ್ತು.

"ಇನ್ನೂ ಏನೂ ಆಗಿಲ್ಲ" ತಟ್ಟೆಯನ್ನು ಕೆಳಗಿಡುತ್ತ ಹೇಳಿದಳು.

" ಇಡೀ ಮಧ್ಯಾಹ್ನ ನಿನೀ ಮನೆಯಲ್ಲಿ ಇಲ್ಲ. ಸೂಜಿಯಲ್ಲಿ ದಾರ ವನ್ನು ಪೋಣಿಸಲು ಬರದಾಗ ನನ್ನ ಕಣ್ಣುಗಳಿಗೆ ಬಿಡುವು ದೊರೆಯಬೇಕು."

ಚೆಂಗ್-ಲುಂಗ್ ತನ್ನ ತಂಗಿಯ ಕಡೆಗೆ ನೋಡಿ ಅವಳ ವಿಚಿತ್ರ ಮುಖಭಾವವನ್ನು ಪರೀಕ್ಷಿಸಿದ. ದಿನವೂ ಅವಳು ಅವನ ಕಡೆಗೆ ಹರ್ಷ ದಿಂದ ನೋಡುತ್ತ, ಹುಡುಗರಿಂದ ಕಲಿತುಕೊಂಡ ಕ್ರಾಂತಿಗೀತವನ್ನು ಹಾಡಲು ಬೇಡುತ್ತಿದ್ದಳು. ಇಂದು ಸಂಜೆ ಅವಳು ಸುಮ್ಮನೆ ಕುಳಿತಿದ್ದಾಳೆ. ಗಂಟಲಲ್ಲಿ ಇಳಿಯುವ ಅನ್ನದ ಅರಿವೂ ಅವಳಿಗಿಲ್ಲ. ಕಡುಬನ್ನು ಅರ್ಧ ಕೂಡ ಮುಗಿಸಿಲ್ಲ. ಪ್ರಶ್ನೆಗಳಿಲ್ಲ, ನಗೆಯಿಲ್ಲ. ಮುಂಗುರುಳಿನ ಕೆಳಗೆ ಅತ್ತು ಅತ್ತು ಕೆಂಪಾದ ಕಣ್ಣುಗಳು.

ಚೆಂಗ್-ಲುಂಗ್‌ನಿಗೆ ತಂಗಿಯ ಮೇಲೆ ಪ್ರೀತಿ ಬಹಳ. ಅವಳನ್ನು ಅಪಮಾನಪಡಿಸಿದರೆ ಅವನಿಂದ ಸಹಿಸದಾಗದು. ಯಾವಾಗಲಾದರೂ ವಚನವೀಯುತ್ತಾನೆ: " ನಿನೀ, ನನಗೆ ಪ್ರಮೋಶನ್ ಸಿಕ್ಕರೆ ಮೊದಲು ನಿನ್ನನ್ನು ಶಾಲೆಗೆ ಕಳಿಸುತ್ತೇನೆ. ಸ್ವಲ್ಪ ದಿನ ಸುಮ್ಮನಿರು; ಕಾಲ್-ಚೀಲ ಹೊಲಿ, ಕೆಲವು ದಿನಗಳಾದ ಮೇಲೆ ನೀನು ಸಿಲ್ಕ ಬಟ್ಟೆಗಳನ್ನೇ ಉಡುವೆ ಯಂತೆ. ನಿನ್ನ ಬೆನ್ನೆಲುಬು ನೆಟ್ಟಗಿರಲಿ. ಬಡವರಿಗೂ ಒಂದು ಕಾಲ ಬಂದೀತು. ವಿದ್ಯಾರ್ಥಿಗಳು ತಮ್ಮ ಭಾಷಣಗಳಲ್ಲಿ ಹೇಳುತ್ತಾರೆ: " ಭವಿ ಷ್ಯತ್ಕಾಲ ನಮಗೇ ಬಡವರಿಗೇ ಸೇರಿದ್ದು." ಎಂದು. ಒಮ್ಮೆ ಅವಳನ್ನು ಕೆಲ ವರು ಅಪಮಾನಗೊಳಿಸಿದ್ದರು. ಆಗ ಚೆಂಗ್-ಲುಂಗ್ ಶಾಲೆಯಲ್ಲಿ ಬೋರ್ಡನ್ನು ಬರೆಸುತ್ತಿದ್ದ. ಕೂಡಲೇ ಓಡಿ ಹೋಗಿ ಆ ಮನುಷ್ಯನ ಜೊತೆಗೆ ನಾಯಿಯಂತೆ ಬಡಿದಾಡಿದ. ಇಂದು ಅವಳನ್ನು ಮತ್ತಾರೋ ಅಪಮಾನಗೊಳಿಸಿರುವರೆಂದು ತಿಳಿದುಕೊಂಡ.

" ನಿನೀ, ನಿನಗೆ ಬಂದ ತೊಂದರೆ ಏನು ? "

ಹುಡುಗಿ ತಲೆ ತಗ್ಗಿಸಿದಳೇ ಹೊರತು ಏನೂ ಹೇಳಲಿಲ್ಲ. ಅವಳ ರೆಪ್ಪೆಯ ಮೇಲೆ ಎರಡು ಹನಿಗಳು, ಕೊಂಬೆಯ ಮೇಲಿನ ಹಕ್ಕಿಗಳಂತೆ ನಡು ಗಿದವು. ಸ್ವಲ್ಪ ಹೊತ್ತು ತಡೆದರೆ ಅವೆರಡೂ ಬೀಳುವವು.

"ಹೇಳು ನಿನೀ" ಗಂಡಿನ ಶಕ್ತಿಯ ಅವಶ್ಯಕತೆ ಇದೆಯೆಂದು ಅವನಿಗೆ ಗೊತ್ತಾಯಿತು. ಕಡ್ಡಿಗಳನ್ನು ಕೆಳಗಿಟ್ಟು ತೋಳೇರಿಸಿದ.

"ನಾವು ಬಡವರು, ಆದರೆ ಅನ್ಯಾಯವನ್ನು ತಡೆಯುವವರಲ್ಲ ಹೇಳು, ನಾನು ಅವನ ಎಲುಬುಗಳನ್ನು ಮುರಿಯುತ್ತೇನೆ"

ಮುದುಕಿ ನಡುವೆ ಬಾಯಿ ಹಾಕಿದಳು. ತಂಗಿಯ ವಿಷಯವಾಗಿ ತಿಳಿಯದೆ ಸಿಟ್ಟಿಗೆದ್ದದ್ದು ಅವಳಿಗೆ ತಡೆಯದಾಯಿತು.

"ತಡೆ, ತಡೆ. ಕೇಳು ಸುಮ್ಮನೆ. ನಾನೇನೂ ಅವಳಿಗೆ ಸಿಟ್ಟು ಮಾಡಲಿಲ್ಲ. ಸೂರ್ಯ ನೆತ್ತಿಯ ಮೇಲಿದ್ದಾಗ ಅವಳು ಹೊರಗೆ ಹೋಗಿದ್ದಳು. ಕತ್ತಲಾದ ಮೇಲೆ ಮನೆಗೆ ಬರುತ್ತಾಳೆ. ಏನೋ ಸ್ವಲ್ಪ ಸಿಟ್ಟು ಮಾಡಿದೆ, ಅದಕ್ಕೇ ಇಷ್ಟು ಗೊಂದಲ."

ಮನೆಯ ಒಳಗೆ ಏನಾಗಿರಬಹುದೆಂದು ಚಿಂಗ್-ಲುಂಗ್‌ನಿಗೆ ಗೊತ್ತಾಯಿತು. ಸುಮ್ಮನೆ ಕಡ್ಡಿಗಳನ್ನು ಕೈಗೆ ತೆಗೆದುಕೊಂಡ. ಸಿಟ್ಟಿನಿಂದ ತಂಗಿಯನ್ನು ಕೇಳಿದ:

"ಇಡೀ ದಿನ ಎಲ್ಲಿ ಹೋಗಿದ್ದೆ?"

ಇದರಿಂದ ಮುದುಕಿಗೆ ಸಮಾಧಾನವಾಯಿತು.

"ನಾನು-ನಾನು ಜಗದೊದ್ಧಾರ ದಲಕ್ಕೆ ಹೋಗಿದ್ದೆ." ನಿನೀ ಅನುಮಾನಿಸುತ್ತ ಹೇಳಿದಳು.

"ಏನು ಮಾಡಲು ಹೋಗಿದ್ದೆ? ಆ ಅನಾಗರಿಕರು ಹುಚ್ಚರಂತೆ ನಗಾರಿ ಬಡಿಯುವದೇನು? ಬಡ ಚೀನಿಯರನ್ನು ತಮ್ಮ ಮಂಗನಾಟಕ್ಕೆ ಗುರಿ ಮಾಡುವದೇನು? ಇತ್ತೀಚೆ ಶಾಂಘಾಯಿಯಲ್ಲಿ ಅವರು ನಮ್ಮವರನ್ನು ಕೊಂದಿದ್ದಾರೆ. ಜಗದೊದ್ಧಾರ ದಲವಂತೆ!" ಈಗ ಅವನು, ಟಾಯೆನ್-ಎನ್-ಮೆನ್‌ದಲ್ಲಿ ವಿದ್ಯಾರ್ಥಿಗಳು ನುಡಿದದ್ದನ್ನು ಹೇಳಿದ: "ಅವರು ಸಾಮ್ರಾಜ್ಯವಾದಿಗಳು. ಆ ಅನಾಗರಿಕರಿಂದ ನೀನು ಹಾಳಾಗಿ ಹೋಗುವದಕ್ಕಿಂತ ಹೀಗೇ ಕಡೆತನಕ ಕಾಲು-ಚೀಲಗಳನ್ನು ಹೊಲಿಯುತ್ತ ಇರು. ನನ್ನನ್ನು ಕೇಳು. ಇನ್ನೊಮ್ಮೆ ಅಲ್ಲಿ ಹೋಗಬೇಡ."

ಮುದುಕಿಗೆ ಮಗನ ಮಾತುಗಳಿಂದ ಆನಂದವಾಯಿತು. ತನಗೆ ಗೊತ್ತಿದ್ದ ಇತಿಹಾಸವನ್ನು ತೋರಿಸಲು ಪ್ರಯತ್ನಿಸಿದಳು. ಪಶ್ಚಿಮ ನಗರ ದಲ್ಲಿ ಅವರು ಫ್ರೆಂಚ್ ಚರ್ಚನ್ನು ಸುಟ್ಟ ಭೀಕರ ದೃಶ್ಯ; ಎಂಟು ಮಿತ್ರ ರಾಷ್ಟ್ರಗಳ ಸೈನ್ಯ ಪೇಕಿಂಗ್ ನಗರವನ್ನು ಹಾಳು ಮಾಡಿದ್ದು ಇತ್ಯಾದಿ.

"ನಾನು ಹದಿನೆಂಟು ವರ್ಷದವಳಿದ್ದಾಗ........"

ಹೀಗೆ ಅವಳು, ತನ್ನ ಮನೆತನದವರು ನಿರಾಶ್ರಿತರಾಗಿ ಹೋದ ಕತೆ ಯನ್ನು ನೂರನೆಯ ಸಲ ಹೇಳತೊಡಗಲು ಮಗನು ಬೇಸರದಿಂದ ಆಕಳಿಸ ತೊಡಗಿದ. ದೀಪವಾರಿಸಿದರು. ಮೂವರೂ ಅಲ್ಲಿಯೇ ರಾತ್ರಿಯನ್ನು ಕಳೆ ಯಲು ಒರಗಿದರು.

ರಗ್ಗು ಹೊದ್ದುಕೊಂಡು ಮಲಗಿದ ನಿನೀಗೆ ಇದರಿಂದ ತೃಪ್ತಿಯಾಗಲಿಲ್ಲ. ಇತಿಹಾಸದ ಆ ಭೀಕರ ಸಂಗತಿಗಳು, ಸ್ವರ್ಣಸ್ವಪ್ನವನ್ನು ಹಾಳು ಮಾಡಲಿಲ್ಲ. ವಿಚಾರಿಸುತ್ತ ಅವಳಿಗೆ, ತನ್ನ ಅಣ್ಣನ ಗೊರಕೆ ನಗಾರಿಯ ಧ್ವನಿಯಂತೆ ಕೇಳಿಸಿತು. ಅವಳ ತಾಯಿಯ ಕೆಮ್ಮು ಗೆಜ್ಜೆ ಕಟ್ಟಿದ ಹಲಗೆಯ ಧನಿಯಂತೆ ಇತ್ತು. ನಿನೀ ತಾನು ಎಲ್ಲರೆದುರಿಗೆ ಕವಾಯತು ಮಾಡುತ್ತ ನಡೆದಂತೆ ಭಾವಿಸಿಕೊಂಡಳು.

ತನ್ನ ತಾಯಿ ಮತ್ತು ಅಣ್ಣ ಅವರು ಆ ಪರದೇಶದವರಿಗೆ ಅನ್ಯಾಯ ಮಾಡುತ್ತಿರುವರೆಂದು ಅವಳಿಗೆ ಕಂಡಿತು. ಅಲ್ಲಿದ್ದ ಮಾಸ್ತರತಿ, ಅವಳ ಕೈಗಳು ಎಷ್ಟು ಮೃದುವಾಗಿದ್ದವು! ನಮ್ಮ ಜನರಂತೆಯೇ ನಮ್ಮ ಭಾಷೆ ಯನ್ನು ಎಷ್ಟು ಮಧುರವಾಗಿ ಮಾತಾಡುತ್ತಿದ್ದಳು! ಕವಾಯತು ಮಾಡು ತ್ತಿದ್ದವರ ಜೊತೆಗೆ ಆ ವಿಲಾಸಭವನದಲ್ಲಿ ನಡೆದಾಗ, ನವವಧುವಿನಂತೆ ನಿನೀಗೆ ಹೆದರಿಕೆ ಹೆಮ್ಮೆ ಎರಡೂ ಉಂಟಾಗಿದ್ದವು. ಆ ಭವನ ನಿಜವಾಗಿಯೂ ಸುಂದರವಾಗಿತ್ತು. ಕಿಡಿಕಿಗಳಿದ್ದ ಹಸಿರು ಕೆಂಪು ಬಣ್ಣದ ಕಾಜುಗಳೊಳ ಗಿಂದ ಹಾಯ್ದು ಬರುವ ಆ ಬಣ್ಣ, ಅದರಲ್ಲಿಯ ಆ ಸಪ್ತರಂಗ,.... ಒಳಗೆ ಕಾಲಿಟ್ಟರೆ ಯಕ್ಷಲೋಕವನ್ನೆ ಹೊಕ್ಕಂತೆನಿಸುತ್ತಿತ್ತು. ಮೇಲುಗಡೆ ಎಲ್ಲ ದೇಶದ ಸಣ್ಣ ಸಣ್ಣ ಧ್ವಜಗಳೂ ಹಾರುತ್ತಿದ್ದವು. ಕಂದು ಒಣ್ಣದ ಸಮ

ವಸ್ತ್ರ ಧರಿಸಿದ ಆ ಮನುಷ್ಯನ ದನಿ ಎಷ್ಟು ಅಮೃತವಾಗಿತ್ತು! ಆ ವಿಲಾಸ ಭವನದಪಕ್ಷಿಯ ಸಂಗೀತವನ್ನು ಅವನೇ ನಡಿಸುತ್ತಿದ್ದ.

ಸಿಸೀ ನಿದ್ದೆಯಿಲ್ಲದೆ ಹಾಗೇ ಅತ್ತ ಇತ್ತ ಹೊರಳಾಡಿದಳು. ಗಂಟೆ ಮೂರಾಯಿತು. ಹಂದಿಯ ಮಾಂಸವನ್ನು ಮಾರುವವನ ದನಿ, ಜೂಜು ಗಾರರಿಗೆ ವಿಶ್ರಾಂತಿಯ ವೇಳೆಯನ್ನು ಸೂಚಿಸಿತು. ಕತ್ತಲೆಯಲ್ಲಿಯೇ ಅವಳು ತುಟಿ ಕಚ್ಚಿದಳು. ಆ ಮಾಸ್ತರಿತಿಯನ್ನು ತಿರುಗಿ ಕಾಣುವದಾಗದಿದ್ದರೆ! ಅವಳೇ ಆ ಸುಂದರವಾದ ಹಸ್ತಪ್ರತಿಯನ್ನು ಅವಳ ಕಿಸೆಯಲ್ಲಿಟ್ಟು ಮೃದು ವಾಗಿ ಹೇಳಿದ್ದಳು: "ನಾಳೆ ಬಾ, ಮತ್ತೊಂದನ್ನು ಕೊಡುತ್ತೇನೆ." ಅವಳ ನಗೆ ಮೋಹಕವಾಗಿತ್ತು. ಹೊರಡುವಾಗ ಅವಳ ಕಿವಿಯಲ್ಲಿ ಗಂಭೀರವಾಗಿ ಹೇಳಿದ್ದಳು:

"ನೀನು ದೇವರಿಗೆ ಸೇರಿದವಳೆಂಬುದನ್ನು ಮರೆಯಬೇಡ."

ದೇವರು.... ಯೇಸುವಿನ ಹತ್ತಿರ ಬಾ.... ಮೃದುವಾದ ಕೈಗಳು.... ಕಂದು ಬಣ್ಣದ ವೇಷ ಧರಿಸಿದವನ ಅಮೃತವಾದ ದನಿ....

* * * *

ವಾಡಿಕೆಯಾಗಿ, ಸ್ಟೋವನ್ನು ಹೊತ್ತಿಸಿ ಅಣ್ಣನಿಗೆ ನೀರು ಕಾಯಿಸಲು ಸಿಸೀ ಬೇಗ ಏಳುತ್ತಿದ್ದಳು. ಆಮೇಲೆ ಅವನ ಬೆಳಗಿನೂಟಕ್ಕೆ ಗೋದಿಯ ರೊಟ್ಟಿಯನ್ನು ಪೇಟೆಯಿಂದ ತರುತ್ತಿದ್ದಳು. ಇಡೀ ಬೆಳಗು ತಾಯಿಯ ಎದುರು ಹೊಲಿಯುತ್ತ ಕೂಡುತ್ತಿದ್ದಳು. ಹೊಲಿಯುವಾಗ ತಾಯಿಯ ಕಣ್ಣು ಕಾಣಿಸದಾಗಲು ಅವಳು ಸಹಾಯಕ್ಕೆ ಬರುತ್ತಿದ್ದಳು. ಒಮ್ಮೊಮ್ಮೆ ಹುಡುಗಿ ಯಾವುದಾದರೂ ಲಾವಣಿಯನ್ನು ಮಧುರ ಸ್ವರದಲ್ಲಿ ಹಾಡು ತ್ತಿದ್ದಳು. ಒಮ್ಮೊಮ್ಮೆ ಕಣ್ಣು ಕಾಣದ ಆ ಮುದುಕಿಯನ್ನು ಕಾಡಿಸುತ್ತಿದ್ದಳು.

"ಅವ್ವಾ, ನಾನೂ ನೀನೂ ಕೆಲಸ ಬದಲಿಸೋಣ. ನೀನು ನನ್ನ ಕಾಲುಚೀಲಗಳನ್ನು ಹೊಲಿ. ನಾನು ಬಿರಡಿಗಳನ್ನು ನೋಡಿಕೊಳ್ಳುತ್ತೇನೆ."

ಆಗ ಮುದುಕಿ ಗಪ್ಪನೆ ತನ್ನ ಕೈಯಲ್ಲಿಯ ಕೆಲಸವನ್ನು ಎದೆಗಪ್ಪಿ ಕೊಂಡು "ನನಗೆ ನಿನ್ನ ಯಂತ್ರದ ಕೆಲಸ ಸರಿಬೀಳುವದಿಲ್ಲ. ನನ್ನ ಹಳೆಯ ಪದ್ಧತಿ ನನಗೇ ಇರಲಿ." ಎಂದು ಹೇಳುತ್ತಿದ್ದಳು.

ಕುರುಡ ಜೋಯಿಸನೊಬ್ಬ ಮನೆಯ ಮುಂದೆ ತನ್ನ ಗಂಟೆ ಬಾರಿಸುತ್ತ ನಡೆದನೆಂದರೆ ನಿನೀಗೆ ಹನ್ನೊಂದು ಹೊಡೆಯಿತೆಂದು ಗೊತ್ತು. ತನ್ನ ಕಾಲುಚೀಲಗಳನ್ನು ತೆಗೆದಿಟ್ಟು ತಾಯಿಗೆ ಹೇಳುತ್ತಿದ್ದಳು: “ಅಪ್ಪಾ, ನನ್ನ ಸಾಮಾನುಗಳನ್ನು ಹಿಡಿಯಬೇಡ. ಒಂದು ದಾರವನ್ನು ಕಳೆದೆಯೆಂದರೆ ದಂಡ ಕೊಡಬೇಕಾದೀತು.” ಹೀಗೆ ಹೇಳಿ ಮಧ್ಯಾಹ್ನದ ಅಡಿಗೆಗಾಗಿ ಒಳಗೆ ಹೋಗುತ್ತಿದ್ದಳು.

ಆದರೆ ಇಂದು ನಿನೀ ತನ್ನ ವಾಡಿಕೆಯ ಕೆಲಸವನ್ನು ಮುಂದರಿಸಲಿಲ್ಲ. ಅವಳಿಗೆ ಸ್ಟೋವ್ ಹೊತ್ತಿಸಲು ಆಯಾಸ. ಅಣ್ಣ ಹಾಗೇ ಕಡುಬುಗಳನ್ನು ಒಂದು ಬಟ್ಟಲು ಬಿಸಿನೀರೂ ಇಲ್ಲದೆ ತಿನ್ನಬೇಕಾಯಿತು. ಕಾಲುಚೀಲಗಳನ್ನು ತೆಗೆದುಕೊಂಡು ಕೆಲಸಕ್ಕೆ ಕುಳಿತಾಗ ಮತ್ತೆ ವಿಚಾರದಲ್ಲಿ ಮುಳುಗಿದಳು. ಚು-ಸ್ಸೆ ಹೇಳಿದ್ದು ಅವಳಿಗೆ ನೆನಪಾಯಿತು:

“ಹುಂ, ಹನ್ನೆರಡು ಕಾಲುಚೀಲಗಳಿಗೆ ನಿನಗೆ ಸಿಗುವದು ಕೇವಲ ಎಂಟಾಣೆ. ಕೈ ಮುರಿಯುವಂತೆ ದುಡಿದರೂ ನಿನಗೇನು ತಿಂಗಳಿಗೆ ಆರು ರೂಪಾಯಿಗಿಂತ ಹೆಚ್ಚಿಗೆ ಸಿಗಲಾರದು. ನಮ್ಮನ್ನು ನೋಡು. ತಿಂಗಳಿಗೆ ೨ ಸಮವಸ್ತ್ರ, ಮತ್ತು ೧೮ ರೂಪಾಯಿ ಸಂಬಳ ನಮಗೆ ಸಿಗುತ್ತದೆ. ಇದಲ್ಲದೆ ಆ ಭವನದಲ್ಲಿ ಕೆಲಸ ಮಾಡಿದರೆ, ಬೇರೆ ಸದಸ್ಯರನ್ನು ತಂದುಕೊಟ್ಟರೆ ಪ್ರಮೋಶನ್ ದೊರಕುವದು. ಪ್ರತಿಯೊಂದು ದಿನವೂ ರೋಮಾಂಚಕಾರಿಯಾಗಿರುತ್ತದೆ. ನನಗೆ ರೊಕ್ಕ ಸಿಗದಿದ್ದರೂ ಚಿಂತೆ ಇಲ್ಲ. ಆ ಕಾಲುಚೀಲಗಳನ್ನು ಮುಟ್ಟಲಾರೆ. ನನ್ನ ಕೈಗಳು ದೇವರಿಗೆ ಮೀಸಲು.... ನಗಾರಿಯನ್ನು ಬಡಿದು ಅವನ ಸಂದೇಶವನ್ನು ಸಾರುವದು....”

ಈ ಮಾತುಗಳ ಸವಿನೆನಪು, ಚೈತನ್ಯದಿಂದ ಕೆಲಸ ಮಾಡುತ್ತಿದ್ದ ನಿನೀಯ ಬೆರಳುಗಳನ್ನು ದಣಿಸುವದು. ಸ್ಟೂಲಿನ ಮೇಲೆ ಕುಳಿತು ಹೊರಗೆ ಆಗಾಗ ಹಣಿಕಿ ಹಾಕುತ್ತಿದ್ದಳು. ಆ ಅದ್ಭುತ ದೃಶ್ಯ ಆಗಾಗ ಅವಳ ಕಣ್ಣ ಮುಂದೆ ಹೊಳೆಯುವದು. ಅವಳಿಗೆ ತನ್ನ ಅಣ್ಣನ ಬಗ್ಗೆ ದ್ವೇಷ ಹುಟ್ಟಿತು. ಅದಕ್ಕೂ ಹೆಚ್ಚು ದ್ವೇಷ ಪ್ರತ್ಯಕ್ಷ ಎದುರಿಗೆ ಕುಳಿತ ತನ್ನ ತಾಯಿಯ ಬಗ್ಗೆ ಹುಟ್ಟಿತು.

ಮಧ್ಯಾಹ್ನ ಆ ನಗಾರಿಯ ಧ್ವನಿ ಮತ್ತೆ ಕೇಳತೊಡಗಿತು. ಮಾಳಿಗೆಯ ಮೇಲೆ ಸುರಿಯುವ ಮಳೆ-ಹನಿಯಂತೆ ಕೇಳಿತು. ನಿನೀಯ ಹೃದಯ ಸ್ಪಂದಿಸತೊಡಗಿತು. ಮುಖ ಉರಿಯತೊಡಗಿತು; ಬೆರಳು ನಡುಗಿದವು. ಅದೇ ನಗಾರಿಯ ಸಪ್ಪಳ! ಡಂ! ಡಂ!.... ಶಿಸ್ತಿನಿಂದ ನಡೆಯುವ ಡ್ರಿಲ್ಲು ಡಂ ಡಂ.... ಮಧುರ ಗೀತಗಳು.... ಮೃದುವಾದ ಕೈಗಳು,.... ಕರುಣೆಯ ಶಬ್ದಗಳು.... ಡಂ! ಡಂ! ಡಂ!.... ತೀರ ಹತ್ತಿರ ಕೇಳಿಸಿತು. ನಿನೀಗೆ ಅದೆಲ್ಲ ಅದ್ಭುತವೆನಿಸಿತು. ಏರಿದ ದನಿ ಚು-ಕ್ಕೆಳದೇ ಇರಬೇಕು. ಉರಿ ಸಾಲಗೆಯ ಹಾವು ಅವಳ ಹೃದಯದಲ್ಲಿ ಹೊಕ್ಕು ಬಂದಂತಾಯಿತು.

ದಾರಕ್ಕೊಂದು ಗಂಟು ಬಿತ್ತು. ಅವಳ ಮಿದುಳು ತೀರ ಹದಗೆಟ್ಟಿತ್ತು. ದಾರವನ್ನು ಹಲ್ಲಿನಿಂದ ಕಡಿದಳು. ತಲೆಯೆತ್ತಿದಾಗ ಮುದುಕಿಯ ಹದ್ದಿನ ಕಣ್ಣು ಅವಳನ್ನು ನೋಡುತ್ತಿತ್ತು. ಆ ದೃಷ್ಟಿ ಅವಳನ್ನು ಪಂಜರದಲ್ಲಿಯ ಸಿಂಹಕ್ಕೆ ಕಬ್ಬಿಣದ ಬಾರು ಅಡ್ಡಬಂದು ನಿಂತಂತೆ ನಿಂತು ಸಿಟ್ಟಿಗೆಬ್ಬಿಸಿತು. ನಗಾರಿಯ ಸಪ್ಪಳ ಹತ್ತಿರ ಹತ್ತಿರ ಬಂದಂತೆ ಅವಳಿಗೆ ಹರ್ಷವೆನಿಸಿತು. ಸೂಜಿ, ಹೊಟ್ಟೆಕಿಚ್ಚಿನಿಂದ ಅವಳ ಬೆರಳನ್ನು ಚುಚ್ಚಿತು. ಬಂದ ರಕ್ತವನ್ನು ಬಾಯಿಂದ ಚೀಪಿದಳು. ಡಂ! ಡಂ! ಡಂ! ನಗಾರಿ ಹತ್ತಿರಹತ್ತಿರ ವಾಯಿತು. ಹೆಮ್ಮೆಯಿಂದೆಂಬಂತೆ ಧನಿ ದೊಡ್ಡದಾಯಿತು. ಅಂಗಳದಲ್ಲಿಯ ನಾಯಿ ಬೊಗಳಿತು.

ನಿನೀಗೆ ತಡೆಯುವದಾಗಲಿಲ್ಲ. ಚಾಪೆಯ ಕೆಳಗಿನಿಂದ ಅವಳು ಕೊಟ್ಟಿದ್ದ ಪ್ರಕಟನೆಯನ್ನು ಎಳೆದು ಹೊರತೆಗೆದು ಅಂದಳು:

"ಅವ್ವಾ ನಾನು ಹೋಗಬೇಕು, ಅವ್ವಾ...."

ಅವಳು ನುಗ್ಗಿ ಹೊರಗೆ ಹೋಗಬೇಕೆಂದು ಪ್ರಯತ್ನಿಸಿದಳು. ಆದರೆ ಮುದಕಿ ಅವಳ ಅಂಗಿಯನ್ನು ಹಿಡಿದು ಎಳೆದು ಹೇಳಿದಳು:

"ಎಂಥ ಧೈರ್ಯ ನಿನ್ನದು ನಿನೀ! ನಿನ್ನಣ್ಣ ಹೋಗಬೇಡೆಂದು ಹೇಳಿ ಹ್ದಾನೆ. ನಿಮ್ಮ ಅಜ್ಜಂದಿರಾರೂ ಇಂಥ ಪಾಪವನ್ನು ಮಾಡಿರಲಿಲ್ಲ. ನೀನೇಕೆ ಕಲಂಕ ಹಚ್ಚಬೇಕು?" ಹಣ್ಣಾದ ಅವಳ ದನಿ ಕಣ್ಣೀರಿನಿಂದ ತೊಯ್ದಿತ್ತು.

ನಗಾರಿಯ ಸಪ್ಪಳ, ಹಾಡಿನ ದನಿ, ಮನೆಯನ್ನು ಮುತ್ತಿಗೆ ಹಾಕಿದವು.

ಗಾಳಿಯು ತಂದ ಅವರ ಬಟ್ಟೆಯ ಸಪ್ಪಳದಿಂದ ಬಹಳ ಜನರು ಕೂಡಿರುವರೆಂದೆನಿಸಿತು. ನಿನೀಯ ಕಿವಿ ನೆಟ್ಟಗಾದವು.... "ತಿಂಗಳಿಗೆ ಹದಿನೆಂಟು ರೂಪಾಯಿಗಳು!" ಇದಲ್ಲದೆ ಮಾಸ್ತರಿತಿಯ ವಿಚಿತ್ರವಾದ ಉತ್ಸಾಹದ, ಜ್ಞಾನದ ಮಾತು: "ನೀನು ದೇವರಿಗೆ ಸೇರಿದವಳೆಂಬುದನ್ನು ಮರೆಯಬೇಡ."

ನಿನೀ ತಾಯಿಯ ಕೈಯನ್ನು ಕೊಸರಿಕೊಂಡಳು. ಹುಚ್ಚಳಂತೆ ಬೀದಿಯ ಕಡೆಗೆ ಓಡಿದಳು.

"ನಿನೀ.... ನಿನೀ....! ಹುಚ್ಚು ಹುಡಿಗಿ!.... ಕಾಡು ಹುಡುಗಿ.... ಅಂತಃಕರಣಗೇಡಿ........"

*　　*　　*　　*

ಆ ಸಂಜೆ, ಕಪ್ಪುನೆರಳು ಮನೆಯಲ್ಲಿ ಪ್ರಸಿದ್ಧವಾದ ಕ್ರಾಂತಿಗೀತವೊಂದನ್ನು ಹಾಡುತ್ತ ಬಂದಿತು. ಮುದುಕಿ ಗೇಟಿನ ಮೇಲೆ ಕೈಯಿಟ್ಟು ನಿಂತದ್ದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು.

"ಅವ್ವಾ, ಇಂಥ ಚಳಿಯಲ್ಲಿ ಏನು ಮಾಡುತ್ತಿರುವೆ?" ಅವಳ ನಡುಗುವ ದೇಹವನ್ನು ಒಳಗೊಯ್ಯಲು ಯತ್ನಿಸಿದ.

"ಚಳಿ! ನಾನು ಹೆಪ್ಪುಗಟ್ಟಿಹೋದರೂ ಆ ಹುಡುಗಿಗೆ ಆನಂದವೇ!" ಎಂದು ಮುದುಕಿ ಅಲುಗಾಡಲೇ ಇಲ್ಲ.

"ಮತ್ತೆ ನಿನೀಯ ಜೊತೆಗೆ ಜಗಳವಾಯಿತೇನು? ನೀನು ಈಗ ಎಚ್ಚರಿಕೆಯಿಂದಿರಬೇಕು. ಮುದುಕರಿಗೆ ಚಳಿಗಾಲ ಯಾವಾಗಲೂ ಕೆಟ್ಟ ಕಾಲ."

"ಆ ಹುಡುಗಿಯ ಪಕ್ಕ ಬಲಿತಿವೆಯಪ್ಪಾ! ಅವಳು ಆ ಅನಾಗರಿಕರೊಡನೆ ಓಡಿಯೇಹೋಗುತ್ತಾಳೆ. ನನ್ನನ್ನು ಇಲ್ಲಿಯೇ ಒಬ್ಬಳನ್ನೇ ಬಿಟ್ಟಿದ್ದಾಳೆ!"

"ಏನು ಅವಳು ಮತ್ತೆ ಅಲ್ಲಿಗೆ ಹೋದಳೇ? ಅವ್ವಾ, ನೀನು ಒಳಗೆ ಹೋಗು. ನಾನು ಅವಳನ್ನು ಹುಡುಕಿಕೊಂಡು ಬರುತ್ತೇನೆ." ಆ ಮುದುಕಿ

ನೋಡುತ್ತಿದ್ದಹಾಗೆಯೇ ಆ ಕಪ್ಪು ನೆರಳು ಕತ್ತಲೆಯಲ್ಲಿ ಕರಗಿಹೋಯಿತು. ಮನೆಯೊಳಗೆ ಹೋಗುತ್ತ ಮುದುಕಿ ನುಡಿದಳು: "ಆಯಿತು; ಅವನೂ ಹೋದ. ದೈವಗೇಡಿ ಈ ಮುದುಕಿ ಒಂದೇ ಉಳಿದಂತಾಯಿತು!"

ಹಸಿದ ಕಣ್ಣುಗಳಿಂದ ಹುಡುಕುತ್ತ ಆ ಶಾಲೆಯ ಸಿಪಾಯಿ, ಅಲಂಕೃತವಾದ ಚರ್ಚಿಗೆ ಬಂದ. ಸಂಜೆಯ ಪ್ರಾರ್ಥನೆ ಅದೇ ಮುಗಿದಿತ್ತು. ಶಾಲೆಯಲ್ಲಿಯಂತೆ ಅಲ್ಲಿಯೂ ಗೋಡೆಗೆ ನಾನಾಬಣ್ಣದ ಚಿತ್ರಗಳಿದ್ದವು. ಒಬ್ಬ ಆಳು ಆ ಚಿತ್ರಗಳಲ್ಲಿ ಒಂದನ್ನು ತೆಗೆದಿಡುತ್ತಿದ್ದ. ಅದರಲ್ಲಿ ಭಯಂಕರವಾದ ಹಾವಿನಿಂದ ಸುತ್ತುಗಟ್ಟಲ್ಪಟ್ಟ ಒಬ್ಬ ಮನುಷ್ಯನಿದ್ದ. ಆದರೆ ಚಿಂಗ್-ಲುಂಗ್‌ನಿಗೆ ಅದನ್ನು ನೋಡಲು ಮನಸ್ಸಿರಲಿಲ್ಲ. ಸುಮ್ಮನೆ ಚರ್ಚಿನ ಹೊರಗಡೆ ನಿಂತು, ಚಿತ್ರವನ್ನು ಸುತ್ತುವ ಆಳಿಗೆ ಒದರಾಡಹತ್ತಿದ:

"ಏ ಮುದುಕ, ನನ್ನ ತಂಗಿ ಎಲ್ಲಿದ್ದಾಳೆ ಹೇಳು?"

ಈ ರೀತಿಯ ಸಂಬೋಧನೆ ತೀರ ಸಲಿಗೆಯದಾಗಿತ್ತೇನೋ! ಚರ್ಚಿನ ಆಳು ಅವನನ್ನು ಚನ್ನಾಗಿ ನೋಡಲಿಲ್ಲ ಕೂಡ. ಸುಮ್ಮನೆ ನುಡಿದ:

"ಇಲ್ಲಿಂದ ಹೊರಟು ಹೋಗು. ಆ ಕೋಣೆಯಲ್ಲಿ ಜನರು ತಮ್ಮ ಪಾಪಗಳನ್ನು ಒಪ್ಪಿಕೊಳ್ಳುತ್ತಿದ್ದಾರೆ."

"ನನಗೆ ಗೊತ್ತಿರಲಿಲ್ಲ; ಕ್ಷಮಿಸಬೇಕು."

ಸಿಪಾಯಿಗೆ ತಾನು ವಿನಯದಿಂದಿರಬೇಕೆನಿಸಿರಬೇಕು.

"ನನ್ನ ತಂಗಿಯನ್ನು ನೋಡಲು ಬಂದೆ."

"ಆದರೆ ನಿನ್ನ ತಂಗಿ ಇಲ್ಲಿ ಇಲ್ಲ. ಇದು ಪವಿತ್ರ ಭವನ. ಹೊರಟು ಹೋಗು. ಯಾರೋ ಪಾಪವೊಪ್ಪಿಕೊಳ್ಳುತ್ತಿದ್ದಾರೆ; ಆಗ ಯಾರೂ ಗದ್ದಲ ಹಾಕುವ ಹಾಗಿಲ್ಲ."

"ನನ್ನ ತಂಗಿ ಇಲ್ಲವೆಂದು ನಿನಗೆ ಹೇಗೆ ಗೊತ್ತು? ಅವಳನ್ನು ನಾನು ನೋಡಲೇಬೇಕು."

ಗದ್ದಲ ಹಾಕುತ್ತ ಅವನು ಒಳಗೆ ಹೋದ. ಇದರಿಂದ ಆಳಿಗೆ ಅಪಮಾನವಾದಂತಾಯಿತು. ಸಿಪಾಯಿಗೆ ಅದರ ಲಕ್ಷ್ಯವೇ ಇಲ್ಲ. ಎದೆ

ಉಬ್ಬಿಸಿಕೊಂಡು ಹತ್ತಿರವಿದ್ದ ಹಸಿರು ಬಾಗಿಲಿನ ಕಡೆಗೆ ನಡೆದ. ಆಳಿನ ಸಿಟ್ಟು ಹೆದರಿಕೆಗೆ ತಿರುಗಿತು. ಅವನ ಈ ದಿಟ್ಟ ನಡತೆಯಿಂದ ತನ್ನ ಪಿಂಡಕ್ಕೇ ಭಂಗ ಬಂದೀತೆಂದು. ಆಳು ಆ ಹಸಿರು ಬಾಗಿಲಿಗೆ ಬೇಟೆಯ ನಾಯಿಯಂತೆ ಜಿಗಿದು ನಿಂತ.

" ಮೂರ್ಖ! ಹೊರಟುಹೋಗು. ಇದು ಪವಿತ್ರ ಭವನ ಒಳಗೆ ಜನರು ತಮ್ಮ ಪಾಪಗಳನ್ನು ತೊಳೆಯುತಿದ್ದಾರೆ. "

" ಪವಿತ್ರ ಭವನವೇ ? ನನ್ನ ತಂಗಿಯನ್ನು ಇವರು ಮರುಳುಗೊಳಿಸಿದ್ದಾರೆ. ಅವಳೀಗ ಮನೆಗೂ ಬರುವದಿಲ್ಲವೆನ್ನುತ್ತಿದ್ದಾಳೆ. "

ಚರ್ಚಿನ ಆಳು ಬಾಗಿಲ ಕಾಯುವದನ್ನು ನೋಡಿ, ಅವನಿಗೆ ತನ್ನ ತಂಗಿ ಅಲ್ಲಿಯೆ ಇದ್ದಾಳೆಂದು ಅನಿಸಿತು. ಅವನು ಬಾಗಿಲನ್ನು ಒದ್ದ. ಕಂದು ಬಣ್ಣದ ವೇಷಧರಿಸಿದವನೊಬ್ಬ, ಬಂಗಾರದಂಚಿನ ಹೊಳೆಯುವ ಪುಸ್ತಕವೊಂದನ್ನು ಹಿಡಿದು ಹೊರಗೆ ಬಂದ. ಜಗಳಾಡುತ್ತಿರುವ ಈ ಇಬ್ಬರ ಮುಂದೆ ತನ್ನ ಚಿನ್ನದ ಕನ್ನಡಕವನ್ನು ಸರಿಮಾಡುತ್ತ ನಿಂತ. ಚರ್ಚಿನ ಆಳಿಗೆ ನಯವಾಗಿ ಬಯ್ಯಹತ್ತಿದ:

" ಏನಾಯಿತು ಶೂ ? "

ಶೂ ಹೆದರಿಕೆಯಿಂದ ಚೀರಿದ. ಸುಮ್ಮನೆ ಚಿಂಗ್-ಲುಂಗ್‌ನನ್ನು ತೋರಿಸಿದ.

" ಜೇಮ್ಸ್, ಇವನೊಬ್ಬ ಯಾವನೋ ಒಬ್ಬ ಬೀದಿಯ ಗುಂಡಾ...."

ಚಿಂಗ್-ಲುಂಗ್‌ನಿಗೆ ಬಹಳ ಸಿಟ್ಟು ಬಂದಿತು. ಆ ಆವೇಗದಲ್ಲಿ ಆಳಿನ ಕಾಲರನ್ನು ಹಿಡಿದು ಜಗ್ಗಿ:

" ಏನಂತಿಯೋ.... ನಿನ್ನಪ್ಪನ.... ಯಾರು ಗುಂಡಾ....? ಉತ್ತರ ಕೊಡು. " ಎಂದ.

" ಬೇಡ, ತಮ್ಮಾ ಬೇಡ. " ಒಂದು ಮೃದುಸ್ವರ ಅವನ ಕೈಯನ್ನು ತಡೆಯಿತು.

ಮೂವರೂ ಆಶ್ಚರ್ಯದಿಂದ ತಿರುಗಿ, ಹಸಿರು ಬಾಗಿಲಿನ ಕೋಣೆಯೊಳಗೆ ನೋಡಿದರು. ತನ್ನ ತಂಗಿ ಇನ್ನೂ ಕೆಲವರ ಜೊತೆಗೆ ವೇದಿಕೆಯ ಎದುರು ಮೊಣಕಾಲೂರಿ ಭಕ್ತಿಯಿಂದ ಪ್ರಾರ್ಥಿಸುತ್ತಿದ್ದದ್ದನ್ನು ಚಿಂಗ್-ಲುಂಗ್ ನೋಡಿದ:

ಜನರಲ್ ಜೇಮ್ಸನಿಗೆ ಈ ಸಂಬಂಧ ಗೊತ್ತಾಗಿ, ತನ್ನ ಕೈಯನ್ನು ಅವನ ಹೆಗಲಮೇಲಿಟ್ಟು ಮೃದುವಾಗಿ ನುಡಿದ:

"ತಮ್ಮಾ, ಈ ಒಳ್ಳೆಯ ಹುಡುಗಿ ನಿನ್ನ ತಂಗಿಯಾದ್ದರಿಂದ ನೀನೂ ನಮ್ಮ ಗೆಳೆಯನಾದೆ. ನಿನಗೆ ಸ್ವಾಗತವಿದೆ."

ಅವನ ಕೈಯ ಸ್ಪರ್ಶವಾದೊಡನೆ ಚಿಂಗ್-ಲುಂಗ್ ತನ್ನ ತಂಗಿಯ ಕಡೆಗೂ, ಜೇಮ್ಸನ ಕಡೆಗೂ ನೋಡಿದ.

"ಯಾರು ಗೆಳೆಯರಾಬೇಕು? ನೀವು, ಬಡ ಚೀನಿಯರನ್ನು ಮರುಳುಗೊಳಿಸುತ್ತ, ಅವರು ತಾಯಿಂದಿರನ್ನೂ ಪ್ರಾಮಾಣಿಕವಾದ ಕರ್ತವ್ಯ ವನ್ನೂ ಮರೆಯುವಂತೆ ಮಾಡಿದರೂ ನಿಮ್ಮ ಆಸೆ ತೀರಿಲ್ಲ" ಎಂದು ಅವನು ಜನರಲ್ಲನ ನೇರವಾದ ಮೂಗನ್ನು ತೋರಿಸಿ ಒಮ್ಮೆಲೆ ಕೋಣೆಯೊಳಗೆ ಓಡಿ ಹೋಗಿ, ತನ್ನ ತಂಗಿಯ ಅಶಕ್ತವಾದ ತೋಳನ್ನು ಹಿಡಿದು ಜಗ್ಗಿ, "ನಾಚಿಕೆ ಗೆಟ್ಟವಳೇ, ಹೊರಡು. ಹುಂ, ಹೊರಡಿಲ್ಲಿಂದ! ಅವ್ವ ಗೇಟಿನಲ್ಲಿ ನಮ್ಮ ದಾರಿ ಕಾಯುತ್ತಾ ಇದ್ದಾಳೆ.' ಎಂದು ಒದರಿದ.

"ತಡೆ ತಮ್ಮಾ, ಅವಳೀಗ ನಮಗೆ ಸೇರಿದವಳು." ಎಂದು ಜೇಮ್ಸ ಆ ಹುಡುಗಿಯ ಹತ್ತಿರ ಹೋಗಿ, ತನ್ನ ಕೈಯನ್ನು ಅವಳ ಹೆಗಲ ಮೇಲೆ ಇರಿಸಿದ. ಅಲ್ಲಿಂದ ಅವಳ ಅಣ್ಣನ ಕಡೆಗ ಗಂಭೀರವಾಗಿ ನೋಡುತ್ತ ಹೇಳಿದ: "ಅವಳು ತನ್ನ ಪ್ರಾಯಶ್ಚಿತ್ತ ಪ್ರಾರ್ಥನೆಯನ್ನು ಮುಗಿಸಿದೊಡನೆ ನೀನವ ಳನ್ನು ಕರೆದೊಯ್ಯಬಹುದು. ಅಲ್ಲಿಯ ವರೆಗೆ ಸ್ವಲ್ಪ ಹೊರಗೆ ಇರು."

ಚಿಂಗ್-ಲುಂಗ್‌ನಿಗೆ ಏನೂ ತಿಳಿಯಲಿಲ್ಲ. ಪರದೇಶದ ಈ ದೆವ್ವ.... ಪರಿಸ್ಥಿತಿ ಸಾಮಾನ್ಯವಿಲ್ಲವೆಂದು ಸಹಜವಾಗಿಯೇ ಅವನಿಗೆ ಗೊತ್ತಾಯಿತು. ಶಾಲೆಗಳಲ್ಲಿ ವಿದ್ಯಾರ್ಥಿಗಳು ತಮ್ಮ ಭಾಷಣಗಳಲ್ಲಿ "ಸಾಮ್ರಾಜ್ಯವಾದಿ ಗಳನ್ನು ತುಳಿಯಿರಿ! ಪರದೇಶದವರು ಹೊರಗೆ ಹೋಗಲಿ!" ಎಂದು ಸಟೆ

ಸೆಟೆದು ಗುದ್ದಿಗುದ್ದಿ ಹೇಳುತ್ತಿದ್ದ ಮಾತುಗಳು ಅವನಿಗೆ ನೆನಪಾದವು. ಅವನ ಕಣ್ಣಿನಲ್ಲಿ ಜ್ವಾಲೆ ಬೆಳಗಿತು. ತಂಗಿಯ ತೋಳಮೇಲೆ ಕಾಣುವ ಎರಡು ಕೈಗಳು, ತನ್ನ ವಂಶದ ಕುತ್ತಿಗೆ ಹಿಚುಕುವ ಅಸಹ್ಯ ಶಕ್ತಿಯ ಚಿಹ್ನವೆಂದೆನಿಸಿತು ಅವನಿಗೆ. ಅವಳಿಂದ ಅವರನ್ನು ದೂರವಿರಿಸಿ, ಹಿಂದೆ ನಿಂತು, ಅವನ ಎದೆಯೊಡೆಯಲು ಮುಷ್ಟಿ ಎತ್ತಿದ.

ಜನರಲ್ ಜೇಮ್ಸ್ ನಿಃಸಹಾಯಕನಾಗಿ ಕೆಳಗೆ ಬಿದ್ದ. ಕೆದರಿದ ಕೂದಲಿನ ತಲೆಯನ್ನೆತ್ತಿ ಪಿಳಿಪಿಳಿ ಕಣ್ಣುಬಿಟ್ಟ. ತನ್ನ ಆರು ವರ್ಷದ ಮಿಶನರಿ ಕೆಲಸದಲ್ಲಿಯೇ ಇದೊಂದು ಅಪೂರ್ವ ಅನುಭವ ಅವನಿಗೆ.

"ಏನು, ಇವನು ಚೀನಿಯರಂತೆ ಇಲ್ಲವಲ್ಲ!" ಎಂದು ಅವನು ನಡುಗಿದ.

ತನ್ನ ಅಣ್ಣ ತನ್ನನ್ನು ಎಳೆದೊಯ್ಯುತ್ತಿರಲು, ಸಿಸೀ ಜನರಲ್ಲನ ಕಡೆಗೆ ಕರುಣೆಯ ನೋಟವನ್ನು ಬೀರಿದಳು. ಒಂದು ಕ್ಷಣದ ಹಿಂದಿನ ಅವನ ಪ್ರಾರ್ಥನೆಯ ನಾಟಕೀಯ ಸ್ವರ ಅವಳ ಕಿವಿಯಲ್ಲಿ ಇನ್ನೂ ನಿನದಿಸುತ್ತಿತ್ತು. ಆ ನೆನಪು ಇಷ್ಟು ಬೇಗ ಅಳಿಯುವದೇ?

---

## ಪರಿಚಯ

### ಶಾ-ಟಿಂಗ್

(೧೯೦೪—)

ಕತೆಗಾರ ತನ್ನ ಜೀವನಚಿತ್ರವನ್ನು ಈ ರೀತಿ ಕೊಡುತ್ತಾನೆ:

" ನಾನು ಶು-ಚಾನದ ಒಂದು ಗುಡ್ಡಗಾಡು ಹಳ್ಳಿಯಲ್ಲಿ ಹುಟ್ಟಿದೆ. ಪಂಡಿತನಾದ ನನ್ನ ತಂದೆ ಬೇಗನೆ ತೀರಿಕೊಂಡ. ನನ್ನ ತಾಯಿಗೆ ಗಂಡಸಿನ ಧೈರ್ಯವಿತ್ತು. ಹೀನಸ್ಥಿತಿಯಲ್ಲಿದ್ದಾಗ, ನನ್ನ ಕುಟುಂಬದ ಹೊಣೆಯೆಲ್ಲ ಅವಳ ಮೇಲೆಯೇ.

ನನ್ನ ಸೋದರಮಾವ ಕೊಲೋ ಸೊಸೈಟಿಯ ಮುಂದಾಳುವಾಗಿದ್ದ. ಮುಂದೆ ಸೈನ್ಯದಲ್ಲಿ ಸೇರಿದ. ಆದ್ದರಿಂದಲೆ ನಾನು ಸಣ್ಣವನಿದ್ದಾಗ, ಜೂಜುಗಾರರು, ಸೈನಿಕರು, ಅಫೀಮು ವ್ಯಾಪಾರಿಗಳು, ಮತ್ತು ಕಳ್ಳರ ಪರಿಚಯವಾಯಿತು. ನಾನು ಅಭ್ಯಾಸ ಸುರುವುಮಾಡಿದಾಗ ಎಷ್ಟು ವೇಳೆಯನ್ನು ಹಾಳು ಮಾಡಿದೆನಲ್ಲ ಎಂದು ಸಂಕಟವಾಯಿತು. ಆದರೆ ಈಗ ಅವುಗಳ ಬೆಲೆ ನನಗೆ ಗೊತ್ತಾಗಿ, ಆ ದಿನಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನ ಸಾಹಿತ್ಯಜೀವನ ೧೯೩೨ರಲ್ಲಿ ಸುರುವಾಯಿತು. ಅಲ್ಲಿಂದ ಇಲ್ಲಿಯ ವರೆಗೆ ಕೇವಲ ೩೦ ಸಣ್ಣಕತೆಗಳನ್ನು ಬರೆದಿದ್ದೇನೆ."

# " ನಿಯಮಬಾಹ್ಯ ಪಯಣ "

 

ಹಡಗದಿಂದ ದಟ್ಟವಾದ ಹೊಗೆ ಮೇಲೆ ಸುಳಿಯತೊಡಗಿತು. ಉಕ್ಕುತ್ತಿರುವ ನೀರ ಮೇಲೆ ಅದರ ನರಗಳು ಹಾರುತ್ತಿರಲು, ಅದು ಮುಂದೆ ನಡೆಯಿತು. ಕೆಳಗೆ ಶಿ:ಮೆನ್-ಶೋೀಲ್ ಮತ್ತು ಚ-ದಾಯಿಕದ ಹತ್ತಿರ ಪ್ರವಾಹಗಳು ಹರಿಯುತ್ತಿದ್ದವು. ಮೇಲೆ ತಲೆಯೆತ್ತಿಕೊಂಡು ದೆವ್ವನಂತೆ ನಿಂತ ಬೆಟ್ಟಗಳು, ಕೆಳಗೆ ನಡೆದ ಪ್ರವಾಸಿಕರ ಮೇಲೆ ಕಣ್ಣಿಟ್ಟು ಜಪ್ಪಿಸಿ ಕುಳಿತ ಅದ್ಭುತಪ್ರಾಣಿಗಳಂತೆ ಕಂಡವು. ಪ್ರವಾಸಿಕರು ಮೇಲೆ ನೋಡಿ ಚಕಿತರಾದರು.

ಬೆಟ್ಟಗಳ ಮೇಲೆ, ಚಿಂದಿಬಟ್ಟೆ ಧರಿಸಿದ ಮನುಷ್ಯರು ಸಾಲುಗೊಂಡು ನಡೆದಿದ್ದರು. ಅವರೂ ಗಟ್ಟಿಯಾಗಿ ಒದರಿದರು. ಅವರು ಮೇಲಿನಿಂದ ಒಮ್ಮೆಲೇ ಜಿಗಿದಿದ್ದರೂ ಯಾರಿಗೂ ಆಶ್ಚರ್ಯವಾಗುತ್ತಿರಲಿಲ್ಲ. ಆದರೆ ಸ್ವಲ್ಪ ಕಣ್ಣು ತೆರೆದು ನೋಡಿದ್ದರೆ, ಅವರೂ ನಮ್ಮ ಹಾಗೆಯೇ ಮನುಷ್ಯರೆಂಬುದು ಗೊತ್ತಾಗುತ್ತಿತ್ತು. ಹಡಗದಲ್ಲಿದ್ದವರು ಏನೂ ಹೆದರಿಕೆ ತೋರಿಸಲಿಲ್ಲ.

ಕೆಳಗಿನ ಪ್ರವಾಹಗಳು ಕುದಿಯುತ್ತಿದ್ದವು. ಬಂಡೆಗಲ್ಲುಗಳು ಬಾಗಿಲುಗಳಂತಿದ್ದವು. ಮೇಲಿನ ಜನರು ಈಗ ಕಾಣುತ್ತಿರಲಿಲ್ಲ. ನದಿ ಅಗಲವಾಯಿತು; ಮೇಲೆ ಆಕಾಶವೂ ಅಗಲವಾಯಿತು. ಹೊಲ, ಬೈಲು, ಹಳ್ಳಿಗಳ ಮೇಲೆ ಒಂದು ಬೂದಿ-ಬೆಳಕು ಹಬ್ಬಿತ್ತು. ಚೀನದ ಒಳದೇಶದ ದೃಶ್ಯ ಯಾವಾಗಲೂ ಹೀಗೆಯೇ. ಅದೇ ಅರ್ಧ–ಜೀವನದ ದೃಶ್ಯ; ಅದೇ ಒಣಗಾಳಿ; ಅದೇ ತೀರದ ದುಃಖ. ಸೂರ್ಯನ ಹೊಂಬೆಳಕಿನಲ್ಲಿಯೂ ತೊಳೆದು ಹೋಗದಂತಹುದು.

ಪ್ರವಾಸಿಕರು, ಹಳದಿ ಬಣ್ಣದ ಪಡೆಯ ಕಡೆಗೆ ಕುತೂಹಲದಿಂದ ನೋಡಿದರು. ಅವರ ದಣಿದ ಕಣ್ಣುಗಳಲ್ಲಿ ಬೆಳಕು ಕುಣಿಯಿತು. ಆ ಶುಷ್ಕ ನೋಟದಲ್ಲಿಯೂ ಎಷ್ಟಿಯೋ ಆಸರಿಗೆ ಬಾಳು ಕಂಪಿರಬೇಕು. ಉಸಿರು ಬಿಗಿ ಹಿಡಿದು, ಕೂಡಲೆ ಬಿಡುತ್ತಿದ್ದರು. ಇನ್ನೊಂದು ಕ್ಷಣಕ್ಕೆ, ತಾಸಿಗೆ, ಏನು ಕಾಣುವದೋ ಬಲ್ಲವರಾರು ? ಅನಕ್ಷರಸ್ಥರಾದ ನಿರಾಶ್ರಿತರಿಗೂ ಅಷ್ಟೇ ಕುತೂಹಲ ಉಂಟಾಗಿತ್ತು.

" ಅದು ನೋಡು ಅಲ್ಲಿ ! "

" ಸುಮ್ಮನಿರು. ಇಲ್ಲಿ ನೋಡು. ಲಕ್ಷ್ಯವಿಟ್ಟು ನೋಡು ! " ಅವರೆಲ್ಲರೂ ತಮ್ಮತಮ್ಮೊಳಗೆ ಮಾತಾಡುತ್ತಿದ್ದರು. ಅವರೆಲ್ಲರೂ ವಿಚಿತ್ರ ಭಾವನೆಗಳಿಗೊಳಗಾಗಿದ್ದರು. ಒಬ್ಬ ' ಹುಪೆಯ ' ಒಕ್ಕಲಿಗ, ಹುಬ್ಬುಗಳನ್ನೇರಿಸಿ ಎಲ್ಲರಕ್ಕಿಂತ ಹೆಚ್ಚು ದನಿಯೇರಿಸಿ ಮಾತನಾಡಿದ:

" ಅದನ್ನು ಸೀನೆಲ್ಲಿ ಕೇಳಿಪೆ ? ಅದೆಲ್ಲ ಸುಳ್ಳು. ಅವರು ನಿಜವಾಗಿಯೂ ಒಳದೇಶದ ಹುಂಬರಿಗಿಂತ ಹೆಚ್ಚು ಗಟ್ಟಿ. ಈ ಕೆಂಪು ಜನರಿಗೆ ನಂಬಿಕೆಯಿದೆ. ಅದೇ ಇಬ್ಬರಲ್ಲಿಯೂ ಇರುವ ಅಂತರ."

"..........ಹಡಗಗಳ್ಳರು...."

" ಹಡಗಗಳ್ಳರು ? ಇರಬಹುದು. ಮೊನ್ನೆ ಇದೇ ಕೆಂಪು ಜನರು ಹಡಗದಲ್ಲಿಯ ಬಂದೂಕು ಕಳವು ಮಾಡಲಿಲ್ಲವೇ ? ಅವರ ಸಲುವಾಗಿ ಮೂರು ದಿನ ಜಗಳಾಡಬೇಕಾಯಿತು. ಶಾಂಘಾಯಿಯಲ್ಲಿ ಅವರ ಕೆಲವು ಗೆಳೆಯರು ಮೊದಲೇ ಸುದ್ದಿಯನ್ನು ಕಳಿಸಿದ್ದರಂತೆ."

ಹೊರೆಯನ್ನು ಹೊತ್ತ ಒಬ್ಬ ಮನುಷ್ಯ ನಿಂತುಕೊಂಡು ಏನೋ ಚೇಷ್ಟೆ ಮಾಡಿ ಹೋದ. ಒಬ್ಬ ವಿದ್ಯಾರ್ಥಿಯೊಂದಿಗೆ ಏನೋ ಮಾತಾಡುತ್ತಿದ್ದ. ಕೂಡಲೇ ತಿರುಗಿ ನಿಂತು ಒದರಿದ:

" ಇಲ್ಲಿ ಕೇಳಿರಿ ! ಅದು ಏನೂ ಕೆಲಸ ಮಾಡಲಾರದು. ನೆಲವನ್ನು ಪಾಲು ಮಾಡಿದ್ದಾರೆ. ಆದರೂ ಈ ಕೆಂಪು ಜನರಿದ್ದರೆ ಹೊಟ್ಟೆಗೆ ಏನೂ ಸಿಗದು."

“ ಅದೇನಿಲ್ಲ. ನಾನು ಉಪ್ಪಿನ ವಿಷಯ ಹೇಳುತ್ತಿದ್ದೆ. ಅಕ್ಕಿಗೆ ಈಗ ಏನೂ ಕೊರತೆ ಇಲ್ಲ. ಬೆಲೆಯನ್ನು ನಿಯಂತ್ರಣಗೊಳಿಸಿದ್ದಾರೆ. ಆದರೆ ಉಪ್ಪು ಮಾತ್ರ ಹೆಚ್ಚು ತುಟ್ಟಿಯಾಗಿದೆ. ಯಾಕೆ ಗೊತ್ತೇ? ಸರಕಾರದವರು ಅದನ್ನು ಕೆಂಪು ಜಿಲ್ಲೆಗಳಿಗೆ ಕಳಿಸುವದಿಲ್ಲ. ಆದರೂ ಕಾಯುವವರನ್ನು ತಪ್ಪಿಸಿ ಎಷ್ಟೋ ಜನರು ಕಳ್ಳಪೇಟೆ ಮಾಡಿ ಲಾಭ ಹೊಡೆಯುತ್ತಾರೆ. ”

“ ಅದರಿಂದೇನಾದರೂ ದೊರೆಯುವದೇ? ನಾನೇ ಯತ್ನ ಮಾಡಬೇಕೆಂದಿದ್ದೇನೆ.

“ ಒಬ್ಬನು ಬಹಳಷ್ಟು ಒಯ್ಯಲಾರ. ”

“ ಈ ರೀತಿ ನಡೆದರೆ ಸುಧಾರಣೆಯಾಗಲಾರದು. ” ಒಬ್ಬ ಮುದುಕ ಹೇಳಿದ. “ ಯಾರೂ ಜಗತ್ತನ್ನು ಸುಧಾರಿಸಲಾರರು. ಈ ಕೆಂಪು ಜನರಾದರೂ ಏನು ಬದಲಿಸುತ್ತಾರೆ? ಇನ್ನೂ ಎಷ್ಟೋ ಜನರನ್ನು ಕೊಂದಿಲ್ಲ ಕೂಡ. ” ಅವನು ತನ್ನ ಚಿಲುಮೆಯನ್ನು ತುಂಬಿಕೊಂಡು ನಡೆದು ಹೋದ.

ಒಬ್ಬ ಚೀನೀ ಸೈನಿಕ, ಮೇಲಿನ ಡೆಕ್ಕಿಗೆ ಬಂದು ಸುತ್ತಲೂ ನೋಡಿದ.

“ ಹಾಳಾಗಲಿ. ಅವರ ವೇಷ ನಮ್ಮ ಕರ್ನಲನಿಗಿಂತ ಚೆನ್ನಾಗಿವೆ. ”

ಅವನು ಹಡಗದ ಒಂದು ಕಡೆಗೆ ಹೋಗಿ ಕುಳಿತ. ಕಾಲು ಚಾಚಿ, ಕೈಗಳನ್ನು ಕಾಲಮೇಲಿಟ್ಟು ಗುಂಪಿನ ಕಡೆಗೆ ನೋಡಿ ತನ್ನೊಳಗೇ ಮಾತನಾಡಿದ: “ ನೋಡಲಿಕ್ಕೆ ಅಷ್ಟೇನೂ ಕೆಟ್ಟವಾಗಿಲ್ಲ. ಇವರೆ ಯುದ್ಧದಲ್ಲಿ ನೋಡೋಣ. ”

ಎಷ್ಟೋ ಜನರು ಅವನ ಕಡೆಗೆ ತಿರುಗಿ ನೋಡಿದರು. ಅವನು ಮತ್ತೆ ಮಾತನಾಡಿದ:

“ ಹತ್ತು ವರ್ಷಗಳಾಯಿತು ನಾನು ಯುದ್ಧ ಮಾಡಹತ್ತಿ. ಆದರೆ ಈ ಕೆಂಪು ಜನರಂತಲ್ಲ. ಗೊತ್ತಾಯಿತೇ? ಅವರ ಹೆಂಗಸರು ಅವರನ್ನು ಕಟ್ಟಿಕೊಂಡು ಈಸುತ್ತಾರೆ. ನಮ್ಮಲ್ಲಿ ಬಂದು, ನಮ್ಮನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಯತ್ನಿಸುತ್ತಾರೆ.” “ಏ ಮುದುಕ, ಯಾಕೆ ನಗುತ್ತೀ? ಅವರೇನು ಸುಲಭವಾಗಿ ಒಲಿಯುವವರಲ್ಲ. ಅವರಿಗೆ ನೂರೆಂಟು ರೀತಿಗಳು ಗೊತ್ತು. ನಮ್ಮಲ್ಲಿ ಎಷ್ಟೋ ಜನರು ಅವರ ಬಲೆಗೆ ಬಿದ್ದಿದ್ದಾರೆ. ”

ಒಬ್ಬ ಹೆಣ್ಣುಮಗಳು ಕೂಸಿಗೆ ಮೊಲೆಗೊಡುತ್ತಿದ್ದಳು. ಒಬ್ಬ ಹಿರಿಮನುಷ್ಯ, ತೊಡೆಬಡಿದುಕೊಳ್ಳುತ್ತ ಓಡಾಡುತ್ತಿದ್ದ. "ಏನು ಕಾಲ ಬಂತು. ಶು-ಝಾನ ದಲ್ಲಿ ಪರಿಸ್ಥಿತಿ ಹೀಗಾದರೆ, ನಾವೆಲ್ಲ ಓಡಿಹೋಗಬೇಕಾಗುತ್ತದೇನೋ!" ಅವನು ನುಡಿದ.

"ಯಾರೂ ಓಡಿ ಹೋಗುವದಿಲ್ಲ. ಆದರೆ ಸರಕಾರದವರು ಎಲ್ಲ ವನ್ನೂ ತೆಗೆದುಕೊಂಡರೆ ಮಾಡಬೇಕೇನು? ಅಂತೂ ಇದು ಕೆಟ್ಟ ಕಾಲ! ಹಿಂದೆ ಎಂದೂ ಹೀಗಾದದ್ದಿಲ್ಲ." ಮುದುಕ ಹೇಳಿದ.

"ಅಂತೂ ಕ್ರಾಂತಿಯಾಗಬೇಕೆಂದು ಹೇಳು" ಸೈನಿಕ ಅಣಕಿಸುತ್ತ ಹೇಳಿದ.

"ಅದೇನೂ ಇಲ್ಲ. ಅದೆಲ್ಲ ಸುಳ್ಳು"

ಸೈನಿಕ ಹೊಟ್ಟೆ ತುಂಬ ನಕ್ಕ. ಯಾರೋ ಮೆಲ್ಲಗೆ ನುಡಿದರು: "ಈ ದಿನಗಳಲ್ಲಿ ಅಷ್ಟು ಮಾತಾಡಬೇಡ" ಅವನು ನಗುವದನ್ನು ನಿಲ್ಲಿಸಿ ಹೇಳಿದ: "ಚಿಂತೆ ಬೇಡ. ಏನು ಬೇಕಾದರೂ ಕೇಳಿರಿ. ಸ್ವಲ್ಪ ಕಣ್ಣು ತೆರೆದು ನೋಡಿರಿ. ಏನೋ ಬರುತ್ತಿದೆ."

"ನಾವು ತಿನ್ನಬೇಕೋ ಬೇಡವೋ?" ಯಾರೋ ಹೇಳಿದರು. ಈಗ ಎಲ್ಲರಿಗೂ ಊಟದ ಅರಿವಾಯಿತು. ಅನ್ನದ ವಿಷಯವಾಗಿ ಮಾತನಾಡ ಹತ್ತಿದರು. ಅಡಿಗೆಮನೆಗೆ ಹೋಗಿ ಕೆಲವರು ಸುಳಿದಾಡಿ ಬಂದರು. ಆದರೆ ಅಡಿಗೆಯವರು ಮಾತ್ರ ಅಲಿಪ್ತರಾಗಿದ್ದರು. ಅವನು ಸುಮ್ಮನೆ ತನ್ನ ಕೆಲಸದಲ್ಲಿ ತೊಡಗಿದ್ದ. "ಅಯ್ಯಾ, ನಾವು ಉಪವಾಸ ಸಾಯುತ್ತೇವೆ" ಒಬ್ಬರು ಹೇಳಿದರು.

ಅಡಿಗೆಯವ ಸಿಟ್ಟಿಗೆದ್ದು ಹೇಳಿದ: "ಎಲ್ಲ ತಯಾರಾಗಿದೆ. ಸ್ವಲ್ಪ ಸಮಾಧಾನ ತಾಳು"

"ಆಯಿತು, ಆಯಿತು." ಹತ್ತಿರ ಕುಳಿತ ಒಬ್ಬನು ಹೇಳಿದ: "ಇನ್ನೂ ಉರಿ ಹತ್ತಿಲ್ಲ. ಆಯಿತು."

"ಅವನನ್ನು ಗಡಿಬಿಡಿ ಮಾಡಬೇಡಿರಿ. ಮುಸುರೆ-ನೀರನ್ನೇ ಕುಡಿಯಲು

ಕೊಟ್ಟಾನು " ಯಾರೋ ಹೇಳಿದರು.

ಗಾಳಿ ಹೊಗೆಯನ್ನು ಚದರಿಸಿತು. ದೂರದಲ್ಲಿ ಕೆಲವು ಗುಡಿಸಲುಗಳು ಕಾಣುತ್ತಿದ್ದವು. ಅಲ್ಲಿ ಕೆಲವು ಜನರು ಕೆಂಪು ಧ್ವಜಗಳ ಕೆಳಗೆ ಕುಳಿತಿದ್ದರು. ಮುಂದಕ್ಕೆ ಕೆಲವರು ಅಡ್ಡಾಡುತ್ತಿದ್ದರು. ಹಡಗ ಒಮ್ಮೆಲೇ ಮುಂದೆ ಸರಿಯಿತು.

" ಅಲ್ಲಿ ನೋಡು. ಏನದು ? " ಯಾರೋ ದಂಡೆಗೆ ತೋರಿಸಿದರು.

" ಏನು ಒಂದು ಸಭೆ ಮಾತ್ರ. ಅದಕ್ಕೇನು ಚಿಂತೆ ಮಾಡುವ ಕಾರಣ ವಿಲ್ಲ. "

" ಟಿಕೆಟ್ಟು! ನಿಮ್ಮ ಟಿಕೆಟ್ಟು ತಯಾರಾಗಿರಲಿ. " ಡೆಕ್ಕಿನಿಂದ ಒಂದು ದನಿ ಕೇಳಿಬಂತು. ಎಲ್ಲರೂ ಮಾತಾಡುವದನ್ನು ಬಿಟ್ಟರು.

ಹೊಟ್ಟೆಯಲ್ಲಿ ಅನ್ನವಿಲ್ಲದಿದ್ದರೂ, ಬಾಯಲ್ಲಿ ಮಾತು ತುಂಬಿಕೊಂಡು, ಪ್ರವಾಸಿಕರು ಡೆಕ್ಕಿನೊಳಗೆ ಕೂಡಿದರು. ಅಡಿಗೆಮನೆಯಿಂದ 'ಫ್ಯಾಟೀ' ಹೊರಗೆ ಮೋರೆ ಹಾಕಿ ನಕ್ಕ. ಟೇಬಲ್ಲಿನ ಮೇಲೆ, ಬಡಿಸುವವನು ಮಣ್ಣಿನ ತಟ್ಟೆಗಳನ್ನಿಟ್ಟು ಒಳಗೆ ಹೋಗಿ, ಹೊರಗೆ ಬಂದು ಹೇಳಿದ:

" ಸ್ವಲ್ಪ ಸೈರಿಸಬೇಕು. -ಟಿಕೆಟ್ಟುಗಳ ಪರೀಕ್ಷೆಯಾದ ಮೇಲೆ ನಿಮಗೆ ಊಟ. "

ಯಾರೂ ಉತ್ತರಿಸಲಿಲ್ಲ. ಹೊಗೆ ಹೆಚ್ಚಾಗಿ ಎಲ್ಲರು ಕೆಮ್ಮುತ್ತಿದ್ದರು. ಕಿಡಿಕಿಯೊಳಗಿಂದ ನೀರ ಹನಿಗಳು ತೂರಿದವು.

ಕಾಲ ಸಪ್ಪಳ ಕೇಳಿಬಂತು.

" ಇನ್ನೊಂದು ಪರೀಕ್ಷೆ ಮಾಡಲು ಬರುತ್ತಿದ್ದಾರೆ. "

ಅಡಿಗೆಯವನು ಮೋರೆ ತಿರುಗಿಸಿ ನೋಡಿ ಕೈ ಚೆಲ್ಲಿದ. ಅವನಿಗೇನು ಮಾಡಬೇಕೆಂಬುದು ತಿಳಿಯದಾಯಿತು. ಪರೀಕ್ಷಕ ಕ್ಯಾಪ್ಟನ್ನನ ಜೊತೆಗೆ ಇಂಗ್ಲೀಷಿನಲ್ಲಿ ಮಾತನಾಡುತ್ತಿದ್ದ. ಆದರೆ ಅವನು ಇಬ್ಬರು ಸೇವಕರನ್ನು ಒಳಗೆ ಒಯ್ಯಲು, ಅಡಿಗೆಯವ ನಕ್ಕ.

" ಒಂದು ಬಟ್ಟಲು ಸೆರೆ; ಅಷ್ಟೇ. "

ಎರಡು ಹಳದಿ ಮೀನಗಳನ್ನು ಹೊರಗೆ ತೆಗೆಯಲಾಯಿತು.

" ತೆಗೆದುಕೊಳ್ಳಿರಿ " ಅಡಿಗೆಯವ ಹೇಳಿದ.

" ನನಗೇನೂ ತಿಳಿಯದಂತಾಗಿದೆ " ಪರೀಕ್ಷಕ ಚೀನಿ ಭಾಷೆಯಲ್ಲಿ ಪರದೇಶದವರನ್ನು ತೋರಿಸಿ ಹೇಳಿ, ಉಳಿದವರೊಡನೆ ಮೇಲೆ ಹೋದ.

"ಆ ನನಗಾಗದವರು, ಇದನ್ನೆಲ್ಲ ನಡೆಸಿದ್ದಾರೆ. ನನ್ನನ್ನು ಹಾಳು ಮಾಡಬೇಕೆಂದೇ ಮಾಡಿದ್ದು " ಅಡಿಗೆಯವ ಚೀರಿದ.

ಯಾರೂ ಅವನಿಗೆ ಉತ್ತರ ಕೊಡಲಿಲ್ಲ. ಮುದುಕ ದಣಿದವರಂತೆ ಮುಂದೆ ಹೋದ. ಅವನ ಆಶೆಗಳೆಲ್ಲ ಹಾಳಾಗಬಹುದೆ? ಅವನ ಕೆಲಸ ಅದೂ ಕೈಬಿಟ್ಟು ಹೋಗುವದೇ? ಮುಂದೆ ತನಗೆ ಒಳ್ಳೆಯದಾಗಬಹುದೆಂಬ ಆಸೆಯಿಂದ, ಅವನು ಈ ತೊಂದರೆಯನ್ನು ಸಹಿಸಿದ್ದ. ಈ ಸಲದ ಪ್ರವಾಸ ಕಡೆಯದಾಗಬಹುದೆಂದು ಆಶಿಸಿದ್ದ.

" ಮನಸ್ಸಿಗೆ ಹಚ್ಚಿಕೊಳ್ಳಬೇಡ. ಸುಮ್ಮನಿರು. " 'ಫ್ಯಾಟೀ' ಹೇಳಿದ.

ಯಾರೋ ಅವನನ್ನು ಕರೆದರು. ಆ ತನ್ನ ವೇಷ ಬಿಚ್ಚಿ ಹೇಳಿದ: " ಬಂದೆ ಈಗ ಬಂದೆ. "

" ಕ್ಯಾಪ್ಟನ್ನನ ಕಡೆಗೇ ಹೋಗಬೇಕಂತೆ. " ಬಂದವನು ಹೇಳಿದ.

" ನಾನೇನು ಮಾಡಿದ್ದೇನೆ. ಯಾರೋ ನನ್ನ ವಿರುದ್ಧ ಹೊಂಚು ಹಾಕಿದ್ದಾರೆ. "

ಹಡಗ ಸಿಳ್ಳು ಹಾಕಿತು. ಈಗ ಅದರ ಗತಿ ಮಂದವಾಯಿತು. ನಿಯಮಬಾಹ್ಯ ಪಯಣ ಮುಗಿಯಿತೆಂದು ಅದಕ್ಕೂ ಹರ್ಷವೋ ಏನೋ. ದಂಡೆಯಲ್ಲಿ ಗುಡಿಸಲುಗಳ ಗುಂಪು ಕಾಣಹತ್ತಿದವು.

ಪ್ರವಾಸಿಕರು ಹಸಿವನ್ನು ಮರೆತು, ಪರೀಕ್ಷಕನ ಕೇಬನ್ನಿನ ಹತ್ತಿರ ಗುಂಪಾಗಿ ನಿಂತರು. ಒಳಗಿನಿಂದ ದನಿ ಕೇಳುತ್ತಿತ್ತು:

" ಪರದೇಶದವರ ಜೊತೆಗೆ ಚರ್ಚಿಸುವದು ಬಹಳ ಬಿಗಿ. ಅವರು ತಮ್ಮ ಕರಾರುಗಳನ್ನು ಮುದ್ರಿಸಿರುತ್ತಾರೆ. "

" ನನಗೆ ಅವೆಲ್ಲ ಗೊತ್ತಿಲ್ಲ" ಯಾವನೋ ಒಬ್ಬ ಒದರಿದ. "ನಾನು ಇದೇ ಮೊದಲ ಸಲ ಮನೆ ಬಿಟ್ಟು ಬಂದಿದ್ದು. ನನಗೇನು ಗೊತ್ತು?"

ಪರೀಕ್ಷಕ ಒದರಿದ. " ನಿಮ್ಮ ಸಾಮಾನು ಕಟ್ಟಿಕೊಂಡು ಹೆಚ್ಚು ಮಾತನಾಡದೆ ಹೊರಡಿರಿ. ನಿಮಗೆ ದಂಡೆಗೆ ಹೋಗಲು ಹೇಳಿದೆ. ನೀವು ಅಲ್ಲಿ ಹೋಗಲೇ ಬೇಕು."

" ನಾನು ಯಾರಿಗೂ ತೊಂದರೆ ಕೊಟ್ಟಿಲ್ಲ. ಸತ್ಯ ಹೇಳುತ್ತೇನೆ." ಅಡಿಗೆಯವ ಕರುಣಸ್ವರದಿಂದ ಕೂಗಿದ.

ಪ್ರವಾಸಿಕರು ಹಿಂತಿರುಗಿ ತಮ್ಮತಮ್ಮೊಳಗೇ ಮಾತನಾಡಿಕೊಂಡರು. ಯಾರೋ ಒಬ್ಬರು ಗಟ್ಟಿಯಾಗಿ ಕೂಗಿಕೊಂಡರು:

" ನಾವೆಲ್ಲ ಚೀನಿಯರು. ಅವರಿಗೆ ನೆರವಾಗಲೇಬೇಕು."

" ಅದು ಸರಿ ! ಸರಿ" ಉಳಿದವರು ಮಾರ್ದನಿಗೊಟ್ಟರು.

ಅವರು ಹಡಗದಿಂದ ಹೋಗಬಾರದೆಂದು ನಿರ್ಣಯವಾಯಿತು. ಅಡಿಗೆಯವನು ನಿಯಮ ಮೀರಿ ತೆಗೆದುಕೊಂಡ ಹಣವನ್ನು ತಿರುಗಿ ಕೊಡಬೇಕೆಂದು ತೀರ್ಮಾನವಾಯಿತು.

ಆದರೆ ಅಧಿಕಾರಿಗೆ ಅದು ಸರಿಬರಲಿಲ್ಲ. " ಅದು ನನ್ನ ಜವಾಬ್ದಾರಿಯಲ್ಲ. ನಾನೇನೂ ಮಾಡಲಾರೆ"

ಒಂದು ಸಣ್ಣ ದೋಣಿಯನ್ನು ತರಲಾಯಿತು. ನಾವಿಕರು ಮೆಲ್ಲಗೆ ಹಗ್ಗ ಬಿಡುತ್ತ ನಿಂತರು. ಗಿಡ ಹತ್ತುವವರಂತೆ ತಮ್ಮ ಕಾಲುಗಳನ್ನು ಬಾಗಿಸುತ್ತಿದ್ದರು.

" ಅವರಿಗೆ ನಾನು ರೊಕ್ಕ ಕೊಡಲು ಸಿದ್ಧನಿದ್ದೇನೆ." ಅಡಿಗೆಯವ ಡೆಕ್ಕಿನ ತುಂಬ ಉಗುಳು ಸಿಡಿಸುತ್ತ ಮಾತನಾಡಿದ.

" ನಿಮಗೆ ಇನ್ನೇನು ಬೇಕು ? ಅವರ ಜೀವವೂ ಬೇಕೇನು ? " ಗುಂಪು ಕೇಳಿತು.

ಸಿಟ್ಟಿಗೆದ್ದ ದೇವತೆಯಂತೆ ಹಡಗ ಸಿಳ್ಳುಹಾಕಿತು. ಎಲ್ಲರೂ ಹೆದರಿ ಕೇಬಿನ್ನಿನ ಹೊರಗೆ ಬಂದರು. ಡೆಕ್ಕಿನ ತುಂಬ ಜನರೇ ಜನರು. ದೋಣಿಯ ಹತ್ತಿರ ಜನರು ಗುಂಪು ಕಟ್ಟಿಕೊಂಡು ನಿಂತಿದ್ದರು.

ಕೂಡಲೇ ದಂಡೆಯ ಮೇಲೆ, ಕೈಗಳಲ್ಲಿ ಕಟ್ಟಿಗೆಯ ಬೋರ್ಡುಗಳನ್ನು ಹಿಡಿದ ಜನರು ತುಂಬಿದರು. ಅವರ ಕೈಗಳಲ್ಲಿ ಕೆಂಪು ಧ್ವಜ ಹಾರಾಡುತ್ತಿತ್ತು.

" ಚಿಂತೆ ಬೇಡ. ಅವರೇನೂ ನಮ್ಮ ಮೇಲೆ ದಾಳಿ ಮಾಡಲಾರರು " ಯಾರೋ ಹೇಳಿದರು. ಆದರೂ ಜನರಲ್ಲಿ, ಆ ಕೆಂಪು ಧ್ವಜ ವಿಚಿತ್ರ ಭೀತಿಯನ್ನು ಹುಟ್ಟಿಸಿತ್ತು. ನಿರಾಶ್ರಿತರು ಕ್ಯಾಪ್ಟನ್ನನ ಕೋಣೆಯ ಹತ್ತಿರ ಗುಂಪಾಗಿ ನಿಂತುಬಿಟ್ಟಿದ್ದರು. "

" ಏನು ? ಅವರನ್ನು ಸಾವಿನ ಬಾಯಿಗೆ ಕಳಿಸುವದೇ ಸರಿ. "

" ಎಂಥ ಸ್ಥಳದಲ್ಲಿ ಅವರನ್ನಿಳಿಸುವದು. ಅವರು ಸಾಯುತ್ತಾರೆ. "

ಈ ರೀತಿಯ ಅನ್ಯಾಯಕ್ಕೆ ಎಲ್ಲರೂ ಸಿಟ್ಟಿಗೆದ್ದರು. ಕೆಲವರು, ಚೀನೀಯರನ್ನು ಈ ರೀತಿ ನಡೆಸಿಕೊಂಡದ್ದಕ್ಕೆ ಕ್ಯಾಪ್ಟನ್ನನ ಮೇಲೆ ಸಿಟ್ಟಿಗೆದ್ದರು. ಬಲಿಯಾದ ಆ ಮೂರು ಜನರೂ, ಸಿಟ್ಟಿಗೆದ್ದಿದ್ದರು. " ದುಡ್ಡುಗಳಿಸಲು ಬಂದರೆ ಎಂಥ ದೈವ ನಮ್ಮದು "!

ಸುಪರಿಂಟೆಂಡೆಂಟನಿಗೆ ಕಾಪ್ಟನ್ನನ ಹೃದಯ ಗೊತ್ತಿತ್ತು. ನಾಯಿಗೆ ಒಡೆಯನ ಹೃದಯ ತಿಳಿದಿರುವದಿಲ್ಲವೇ ? ಆದರೆ ದಯೆ ಕೇಳಬೇಕೆಂದು ನಿಶ್ಚಯ ಮಾಡಿದ.

" ಆಗಲಿ, ನಾನು ಕಾಪ್ಟನರನ್ನು ಕಾಣುತ್ತೇನೆ. "

" ನಿನಗೆ ಅವನು ಸಿಗುವದಿಲ್ಲ. ಅಡಗಿಕೊಳ್ಳುತ್ತಾನೆ. " ಯಾರೋ ಒದರಿದರು.

" ಬೇಡ, ಬೇಡ ಹೋಗು. ಹಡಗದಲ್ಲಿ ಅವನು ಎಲ್ಲಿ ಅಡಗಬೇಕು ?"

ಸುಪರಿಂಟೆಂಡೆಂಟ ತಿರುಗಿ ಬಂದಾಗ ಅವನ ಜೊತೆಗೆ ನಾಲ್ಕು ಆಳುಗಳಿದ್ದರು.

ಯಾರೋ ಅಂದರು: " ನಾನು ಏನು ಹೇಳಿದ್ದೆ ? ಉಪಯೋಗವಿಲ್ಲ. " ನಿರಾಶ್ರಿತರ ದಿಟ್ಟತನವೆಲ್ಲ ಅಡಗಿ ಹೋಯಿತು. ಭೀತಿಯಿಂದಲ್ಲ. ಆದರೆ ತಮ್ಮ ನಿಯಮ ಬಾಹ್ಯ ಆಚರಣೆಗೆ ಅವರು ಅಳುಕಿ ಹಿಂಜರಿದರು. ಸುಮ್ಮನೆ ಹುಬ್ಬು ಏರಿಸಿ ಏರಿಸಿ ತಮ್ಮತಮ್ಮೊಳಗೇ ಮಾತನಾಡಿದರು.

ಸಶಸ್ತ್ರ ಸೈನಿಕರು,ಆರೋಪಿಗಳನ್ನು ಹೆದರಿಸಿ ದೋಣಿಯೊಳಗೆ ಕೂಡಲು ಹೇಳಿದರು.

" ಅಯ್ಯೋ, ದುಡ್ಡು ಗಳಿಸಲು ಬಂದರೆ ಇದೇ ದೈವ " ಮೂವರೂ ಅತ್ತರು. ಕೈಯೆತ್ತಿ, ಕಾಲು ಬಡಿದು ಆಜ್ಞೆಯನ್ನು ನಿರಾಕರಿಸಿದರು.

" ಅವರನ್ನು ದೂಡು. ನಿಮಗೆ ತಿನ್ನಲಿಕ್ಕಷ್ಟೇ ಗೊತ್ತು. ಸರಿಸು ಅವರನ್ನ " ಅಧಿಕಾರಿ ಕೂಗಿದ.

ಎಷ್ಟೋ ಜನ ಆಫೀಸರರು ಬಂದು ಅಲ್ಲಿದ್ದ ಗಂಟು ಗದಡಿಗಳನ್ನೆಲ್ಲ ಅಡಿಗೆಯವನ ಕಡೆಗೆ ಒಗೆದರು. ಅವರು ಅವನನ್ನೆತ್ತಿಕೊಂಡು ತಪ್ಪಿತಸ್ಥರಂತೆ ದೋಣಿಯಲ್ಲಿ ನಡೆದರು.

ಕೂಡಲೇ ಇಷ್ಟು ಹೊತ್ತು ಸುಮ್ಮನಿದ್ದ ಚೀನೀ ಸೈನಿಕ ಜೋರಿನಿಂದ ಹೇಳಿದ: " ನಾವೆಲ್ಲ ಯಾಕೆ ಅವರ ಜೊತೆಗೆ ಹೋಗಬಾರದು ? ಅವರ ಜೀವನವೇನೂ ಹೀನವಲ್ಲ. ದಂಡೆಯಲ್ಲಿದ್ದವರು ನಮ್ಮನ್ನೇನೂ ತಿನ್ನುವದಿಲ್ಲ. ಯಾಕೆ ಹೋಗಬಾರದು ? "

ಜನರು ಆ ಕೆಂಪು ಹಳ್ಳಿಯ ಕಡೆಗೆ ನೋಡಿದರು. ಯಾರೋ ಆಜ್ಞೆ ಮಾಡಲು ಅಲ್ಲಿದ್ದ ಜನರು ಗಿಡಗಳ ಹಿಂದೆ ಅಡಗಿಕೊಂಡರು.

ಇಬ್ಬರು ಮೂವರು ಪ್ರವಾಸಿಕರು ಸೈನಿಕನ ಸೂಚನೆಯಂತೆ ನಡೆಯಲು ಸಿದ್ಧರಾದರು. ಅವರು ಸಿಟ್ಟಿಗೆದ್ದಿದ್ದರೊ ಅಥವಾ ಹೆದರಿದ್ದರೋ ತಿಳಿಯಲಿಲ್ಲ. ಕೂಡಲೇ ಹಿಂದಿರುಗಿ ಗುಂಪಿನಲ್ಲಿ ಅಡಗಿಕೊಂಡರು.

ದೋಣಿ ದಂಡೆಯ ಕಡೆಗೆ ನಡೆಯಿತು. ಮೂರೂ ಜನರು ಒದರುತ್ತಿದ್ದರು, ಚೀರುತ್ತಿದ್ದರು. ದೂರದಲ್ಲಿ ಒಬ್ಬ ಮನುಷ್ಯ ಎದ್ದು ನಿಂತು ಕೈ ಬೀಸಿದ. ಅವನು ತಿರುಗಿ ಹೋಗಿ ಗಿಡಗಳಲ್ಲಿ ಮರೆಯಾದ. ಅವನನ್ನು ನೋಡಿ ಹಡಗದೊಳಗಿನ ಮಶಿನ್‌ಗನ್ನುಗಳು ಚೀರಿದವು.

" ನಾನೇನು ಮಾಡಿಲ್ಲ." ಈ ಶಬ್ದಗಳು ನೀರ ಮೇಲೆ ತೇಲಿದವು.

ಸೈನಿಕ ಹೇಳಿದ. " ಅವರಿಗೆ ಸತ್ಯವನ್ನು ಹೇಳಿರಿ. ನೀವು ಕೇವಲ ಕೆಲಸಗಾರರೆಂದು ಹೇಳಿರಿ " ಅವನು ಜನರ ಕಡೆಗೆ ತಿರುಗಿ ಹೇಳಿದ. " ಏನೂ ಭಯವಿಲ್ಲ. "

ದೋಣಿ ದಡಕ್ಕೆ ಮುಟ್ಟಿತೋ ಇಲ್ಲವೋ, ಅಷ್ಟರಲ್ಲಿ ಬಂದೂಕಿನ ಸಪ್ಪಳ ಕೇಳಿಬಂತು. ಸೈನಿಕನ ಉತ್ಸಾಹ ಕಡಿಮೆಯಾಗಲಿಲ್ಲ. "ಭಯವಿಲ್ಲ. ಅವರು ಗಾಳಿಯಲ್ಲಿ ಗುಂಡು ಹಾರಿಸುತ್ತಿದ್ದಾರೆ.

ಹಡಗದಿಂದಲೂ ಗನ್ನುಗಳ ಸಪ್ಪಳ ಕೇಳಿ ಬಂತು.

ಆ ಮೂವರಲ್ಲಿ ಇಬ್ಬರು ಸತ್ತುಬಿದ್ದರು. ಎರಡೂ ಕಡೆಯಿಂದ ಬಂದೂಕು ಹಾರಿದೊಡನೆ ಹೊಗೆ ಹಬ್ಬಿಕೊಂಡಿತು. ಪ್ರವಾಸಿಕರು ಹೆದರಿದರು.

ಹೊಗೆ ತುಂಬಿದ ದಂಡೆಯಾಚೆ ಕೆಂಪುಹಳ್ಳಿಗಳು ಶಾಂತವಾಗಿದ್ದವು. ಹೊಲಗಳು ಹಳದೀ ಬಣ್ಣದಿಂದ ಮಿರುಗುತ್ತಿದ್ದವು.

ಸಿಳ್ಳು ಹೊಡೆಯುತ್ತ ಹಡಗು ಮುಂದರಿಯಿತು. ಹಳದಿಯ ತೆರೆಗಳು ಸತ್ತವರ ಮೇಲೆ ನೀರ ಹೂಗಳನ್ನು ಚೆಲ್ಲಿದವು.

ಪ್ರವಾಸಿಕರು ಕಡಿಮೆಯಾಗುತ್ತಿದ್ದ ಬಂದೂಕಿನ ಸಪ್ಪಳಕ್ಕೆ ಕಿವಿ ಗೊಟ್ಟಿದ್ದರು.

"ನೋಡಿದೆಯಾ" ಒಬ್ಬ ಹೇಳಿದ "ನಾವಲ್ಲ ಅವರನ್ನು ಕೊಂದವರು. ಈ ಬೇರೆ ದೇಶದವರು."

"ಅವರೂ ಮತ್ತು ನಮ್ಮ ಅಧಿಕಾರಿಗಳು."

"ಒಳ್ಳೇಗು" ಮುದುಕ ಹೇಳಿದ: "ಜನ ಸತ್ತಷ್ಟು ಒಳ್ಳೆಯದೇ. ಇವಲ್ಲದೆ ಜಗತ್ತನ್ನು ಯಾರು ಸುಧಾರಿಸಬಲ್ಲರು? ನಾವು ಬಹಳ ಜನರಾಗಿದ್ದೇವೆ.

---

# ಆಧುನಿಕ ಚೀನೀ ಸಾಹಿತ್ಯದ ಆಂದೋಲನ

ರಾಜಕೀಯ ಕ್ರಾಂತಿಕಾರಕ ಚಳವಳಿಗನುಗುಣವಾಗಿ, ಚೀನೀ ಸಾಹಿತ್ಯದ ಆಂದೋಲನವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ೧೯೧೭ರಿಂದ ೧೯೨೭ರ ವರೆಗಾದ ಸಾಹಿತ್ಯದ ಪುನರ್ಜನ್ಮದಿಂದ ಇದು ಪ್ರಾರಂಭವಾಗುತ್ತದೆ. ಪಾಶ್ಚಾತ್ಯ ಲೇಖಕರ ಅನುವಾದದಿಂದ ಹುರುಪುಗೊಂಡು, ಮೇ ನಾಲ್ಕರ ಚಳುವಳಿಯಲ್ಲಿ ಅದರ ಸುಗ್ಗಿಕಾಲ ಪ್ರಾರಂಭವಾಯಿತು. "ಸಾಹಿತ್ಯದ ಕ್ರಾಂತಿಯಿಂದ, ಕ್ರಾಂತಿಕಾರಕ ಸಾಹಿತ್ಯದ ವರೆಗೆ" ಎಂದು ಕರೆಯಿಸಿಕೊಳ್ಳುವ ಈ ದಶಕ, ಚೀನದ ನಾಗರಿಕರ ಸ್ವಾತಂತ್ರ್ಯ, ಸಮಾನತೆ, ಬಾಂಧವ್ಯದ ಸಲುವಾಗಿ ಇದ್ದ ಅಸ್ಪಷ್ಟ ಕನಸುಗಳನ್ನೂ ಮತ್ತು ಹಳೆಯ ಸಮಾಜರಚನೆಯನ್ನು ಕಿತ್ತೊಗೆಯಲು ನಡೆದ ಹೋರಾಟವನ್ನೂ ಚಿತ್ರಿಸುತ್ತಿದೆ. ೧೯೨೭ರಲ್ಲಿ ನಾಗರಿಕರ ಸಿದ್ಧವಾಗದ ಚಳವಳಿಯನ್ನೂ ಮತ್ತು ಒಕ್ಕಲಿಗರ ಕೂಲಿಕಾರರ ಚಳವಳಿಯನ್ನೂ ಹಾಳು ಮಾಡಿದ ರಾಯಿಟ್ ಕೋಮಿಂಟಾಂಗ್ ಸಂಸ್ಥೆ ಬಂದೊಡನೆ ಈ ದಶಕ ಕೂಡಲೆ ಮುಗಿಯುತ್ತದೆ. ಮಿಲಟರಿ ತತ್ವಗಳಿಗನುಸಾರವಾಗಿ, ಸಾಹಿತ್ಯದ ದೇಹ, ಚೈತನ್ಯದಿಂದ ತುಂಬಿ, ಎಡಪಕ್ಷಕ್ಕೆ ವಿರುದ್ಧ ದೆಸೆಗೆ ತಿರುಗಿತು; ಚಳವಳಿಯ ನಿರಾಶೆಯನ್ನೂ, ದೌರ್ಬಲ್ಯವನ್ನೂ ಪ್ರಕಟಿಸಿ, ಸಾಮಾನ್ಯ ಜನತೆಯ ಕ್ರಾಂತಿಯಲ್ಲಿದ್ದ ತನ್ನ ನಂಬಿಕೆಯನ್ನು ತಿಳಿಸಿತು. ೧೯೨೮ರಿಂದ ಸಾಹಿತ್ಯದಲ್ಲಿ ಎಡಪಕ್ಷದ ಕ್ರಾಂತಿಯೇ ಮೇಲುಗೈಯಾಯಿತು.

ಸಾಹಿತ್ಯದ ಪುನರ್ಜನ್ಮದ ಭಾಗ ಕೇವಲ ಅದರ ಸಾಂಸ್ಕೃತಿಕ ಕ್ರಾಂತಿಗಾಗಿಯೇ ಮಹತ್ವದ್ದಲ್ಲದೆ ಅದರ ಸೃಷ್ಟಿಗಲ್ಲ. ಅದರ ಸಾಹಿತ್ಯ ಅಪಕ್ವ, ಕೃತ್ರಿಮ ಮತ್ತು ಅನುಕರಣೆಯಾಗಿ—ಬಹಳ ಭಾಗ ನಿಷ್ಫಲವಾಗಿ—ಉಳಿಯಿತು. ವಿಚಾರದಲ್ಲಿಯೂ ಭಾಷೆಯಲ್ಲಿಯೂ ಒಂದು ಕ್ರಾಂತಿಯುಂಟಾಯಿತು. ಚೀನದಲ್ಲಿಯ ಬಾಷೆಯ ತೊಡಕು ಗೊತ್ತಿದ್ದವರಿಗೆ ಮಾತ್ರ ಆ ಕ್ರಾಂತಿ ಎಷ್ಟು ಮಹತ್ವದ್ದೆಂಬುದು ಗೊತ್ತಾಗುವದು.

೧೯೧೭ರ ತನಕ ಚೀನದ ಸಾಹಿತ್ಯದಲ್ಲಿ ಮೂರು ಸ್ಪಷ್ಟವಾದ ಭಾಗಗಳಿವೆ.. (೧) ಪ್ರಾಚೀನ ' ವೆನ್-ಯೆನ್ ' ಭಾಷೆಯಲ್ಲಿ ಬರೆಯುತ್ತಿದ್ದ ಸಾಹಿತ್ಯ, ಮತ್ತು ಸಾಹಿತ್ಯದಲ್ಲಿಯೇ 'ಸುಂಗ್' ವಂಶದಿಂದ ಹಿಡಿದು ಬಂದ ಕೃತ್ರಿಮವಾದ ಬರವಣಿಗೆ. ಇದೇ ಶಿಕ್ಷಣಕ್ಕೂ ತಳಹದಿಯಾಗಿದ್ದು 'ವೆನ್-ಯೆನ್' ಒಂದೇ ಸಮ್ಮತವಾದ ಶೈಲಿಯಾಗಿತ್ತು. (೨) ಆರೋಗ್ಯಕರವಾದ 'ಪೈ-ಹೂ' ಅಥವಾ ಸರಳ ಭಾಷೆಯಲ್ಲಿ ಹಳೆಯ ಜನರು ಬರೆಯುತ್ತಿದ್ದ ಒಂದು ಸಹಜ ಸಾಹಿತ್ಯ. 'ವೆನ್-ಯೆನ್' ಶೈಲಿಯ ಉಪಾಸಕರು ಇದನ್ನು ಬಹಿಷ್ಕರಿಸಿದರು. (೩) ಹೋಮರನ ಕಾಲಗಳಲ್ಲಿಯಂತೆ ಬರೆಯದೆ ಇದ್ದ, ಕತೆಗಾರರ ಸಾಹಿತ್ಯ.

ಪುನರ್ಜನ್ಮದ ಸಾಹಿತ್ಯ ಮೂರು ಕೃತಿಗಳನ್ನು ಸಾಧಿಸಿತು. ಅದರ ಮೊದಲನೆಯ ಕೆಲಸವೆಂದರೆ, ' ವೆನ್-ಯೆನ್ ' ಸಾಹಿತ್ಯವನ್ನು ತೆಗೆದುಹಾಕಿ ಅದನ್ನು ಬರಿಯ ಲೈಬ್ರರಿಯ ಆಸ್ತಿಯನ್ನಾಗಿ ಮಾಡುವದು; ಎರಡನೆಯದಾಗಿ, ಬಹಿಷ್ಕೃತವಾದ ' ಪೈ-ಹೂ ' ಬಳಕೆಯ ಭಾಷೆಯನ್ನು ' ವೆನ್-ಯೆನ್ 'ದ ಪಟ್ಟಕ್ಕೇರಿಸುವದು. ಅದು ಹೀನವೆಂದು ತಿಳಿದ, 'ಪೈ-ಹೂ' ಕಾದಂಬರಿ, ಕತೆ ನಾಟಕಗಳಲ್ಲಿ ಸೌಂದರ್ಯವನ್ನು ಹುಡುಕಿದರು. 'ಪರ್ಲ್ ಬಕ್' “ ಎಲ್ಲರೂ ಬಾಂಧವರು ” ಇದನ್ನು ಭಾಷಾಂತರಿಸಿದರು. ಹೂಶಿ: ಮೊದಲಾದವರು ಈ ಭಾಷೆಯೇ ಮುಂದಿನ ಸಾಹಿತ್ಯಕ್ಕೆ ತಳಹದಿಯೆಂದು ಸಾರಿದರು. ಮೂರನೆಯದಾಗಿ, ೧೯೧೯ರ ಮೇ ನಾಲ್ಕರ ಚಳುವಳಿಯಿಂದ ಪಾಶ್ಚಾತ್ಯ ಸಾಹಿತ್ಯದ ವಿವಿಧ ರೂಪಗಳನ್ನು ಬಳಕೆಯಲ್ಲಿ ತಂದದ್ದು.

ಈ ಪುನರ್ಜನ್ಮದ ಚಳವಳಿಯೆಲ್ಲ, ಒಂದು ಆಧುನಿಕ ವಿದ್ಯಾರ್ಥಿಗಳ ಗುಂಪಿನಲ್ಲಿಯೇ ಸುರುವಾದದ್ದು.

ಅಂದಿನಿಂದ ಸಾಹಿತ್ಯದಲ್ಲಿ ಹೊಸದೊಂದು ಮಾರ್ಗ ಉಂಟಾಯಿತು. ಆದರೆ ಅನಕ್ಷರಸ್ಥರಿಗೂ ಬೇಕಾದ ಸಾಹಿತ್ಯವನ್ನು ನಿರ್ಮಿಸುವದು ಅವರಿಂದ ಸಾಧ್ಯವಾಗಲಿಲ್ಲ. ಸಾಹಿತ್ಯದ ಹೊಸ ರೂಪ, ಹಳೆಯ ಪೈ-ಹೂ ಸಾಹಿತ್ಯದ ದೊಡ್ಡ ವೃಕ್ಷದಲ್ಲಿ ಒಂದು ಕೊಂಬೆ ಮಾತ್ರ. ಈ ಅಪೂರ್ವ ಶಾಖೆ, ಪರ

ದೇಶದ್ದಾಗಿ, ಕೃತ್ರಿಮವಾಗಿ, ಇದ್ದದ್ದರಿಂದ ಸ್ವಲ್ಪ ಕಾಲದಲ್ಲಿಯೇ ಬಾಡಿ ಹೋಯಿತು. ಆಗ ಬೇರಿನಿಂದಲೇ ಬೆಳೆದ ಮತ್ತೊಂದು ಟೊಂಗೆ ಅದರ ಚೈತನ್ಯವನ್ನೆಲ್ಲ ಹೀರಿಬಿಟ್ಟಿತು. ಕ್ರಾಂತಿಕಾರಕ ಸಾಹಿತ್ಯವೇ ಈ ಹೊಸ ಕೊಂಬೆ. ಈ ದಶಕದ ಅತ್ಯಂತ ಬೆಲೆಯುಳ್ಳ ಕಾರ್ಯವೆಂದರೆ ಅನುವಾದ ಗಳು. ಇದರಿಂದ ಚೀನಕ್ಕೆ ಜಗತ್ತಿನ ಸಾಹಿತ್ಯದಲ್ಲಿ ಒಂದು ಸ್ಥಾನ ದೊರೆ ಯಿತು.

'ಹೂ-ಶಿ' ಮತ್ತು ಚೆನ್-ಟು-ಶಿಯು ಇವರಿಬ್ಬರೂ ೧೯೧೭ರಲ್ಲಿ 'ವೆನ್-ಯೆನ್' ಸಾಹಿತ್ಯದ ವಿರುದ್ಧ ಹೋರಾಟವನ್ನೆಬ್ಬಿಸಿ ೧೯೨೦ರಲ್ಲಿ ವಿಜಯಶಾಲಿಗಳಾದರು. ಕೂಡಲೆ ಎಲ್ಲ ಶಿಕ್ಷಣದ ಪದ್ಧತಿಯೇ ಬದಲಿಸಿತು. ೧೯೩೪ರಲ್ಲಿ ಮತ್ತೆ 'ವೆನ್-ಯೆನ್'ದ ಪರವಾಗಿ ಚಳವಳಿ ಸುರುವಾದರೂ, ಭಾಷೆಯ ಸರಳತೆ ಮತ್ತಷ್ಟು ಹೆಚ್ಚಾಯಿತು. 'ಪೈ-ಹೂ' ಭಾಷೆಯ ಸರಳತೆ ಯನ್ನು ತೋರಿಸಿಕೊಡಲು ೧೯೧೭ರಿಂದ ಹಿಡಿದು ನಾಲ್ಕು ವರ್ಷಗಳಲ್ಲಿಯೇ ಸುಮಾರು ಮೂರುನೂರು, ವಿದ್ಯಾರ್ಥಿಗಳ ಮಾಸಿಕಗಳು ಹೊರಡಲಾರಂಭಿಸಿ ದವು. ಇದಲ್ಲದೆ ಇನ್ನೂ ಎಷ್ಟೋ ಸಾಹಿತ್ಯಿಕ ಪತ್ರಿಕೆಗಳೂ ಆರಂಭ ವಾದವು.

೧೯೧೯ರ ಮೇ ನಾಲ್ಕರ ಚಳವಳಿಗಿಂತ ಮೊದಲು ಯಾವ ಕಲಾ ಕೃತಿಯೂ ಪ್ರಕಟವಾಗಿರಲಿಲ್ಲ. ಲು-ಶೂನ್ ತಮ್ಮ "ಹುಚ್ಚನ ದಿನಚರಿ ಯನ್ನು" ಬರೆದು ಹೊಸ ಸಾಹಿತ್ಯದ ಜನಕರಾದರು. ಚೆನ್-ಟು-ಶಿಯುರ ಪ್ರಸಿದ್ಧ 'ನ್ಯೂ ಯುಥ್' ಪತ್ರಿಕೆಯಲ್ಲಿ ಇದೂ ಮತ್ತು, ಕುಂಗ್-ಇ-ಚಿ, 'ಔಷಧ' ಪ್ರಕಟವಾದವು. ೧೯೨೩ರಲ್ಲಿ 'ಹಾ-ಕ್ಯೂನ ಕತೆ' ಕೂಡಿ ಕೊಂಡ 'ನಾಹನ್' ಎಂಬ ಸಂಗ್ರಹ ಬೆಳಕಿಗೆ ಬಂದು ಇಡೀ ದೇಶವನ್ನೇ ಮರುಳುಗೊಳಿಸಿತು. ಈಗಲೂ ಅದು ಅತ್ಯುತ್ತಮ ಕಥಾಸಂಗ್ರಹವೆಂದು ಪರಿಗಣಿತವಾಗಿದೆ. ಅವರನ್ನು ಚೀನದ ಗಾರ್ಕಿಯೆಂದೋ, ಚೆಕಾವ್ಹ್ ಎಂದೋ ಹೊಗಳಿದರು.

೧೯೧೯ರಲ್ಲಿ ಪೇಕಿಂಗದ ವಿದ್ಯಾರ್ಥಿಗಳು ಸಾಮ್ರಾಜ್ಯವಾದದ ವಿರುದ್ಧ, ಮೇ ನಾಲ್ಕರ ಚಳವಳಿಯನ್ನು ಆರಂಭಿಸಿದರು. ಸಾಹಿತ್ಯ ಇದಕ್ಕೆ ಹುರುಪು

ಕೊಟ್ಟಿತು. ಮೂಲದಲ್ಲಿ, ಅದು ಪರಂಪರಾಗತವಾದ ಬಂಧನಗಳಿಂದ ಬಿಡುಗಡೆಯಾಗಲು ವ್ಯಕ್ತಿ ನಡೆಸಿದ ಹೋರಾಟವಾಗಿತ್ತು.

ಸಾಹಿತ್ಯದಲ್ಲಿ ಆಗ ಎರಡು ಭಿನ್ನವಾದ ಮಾರ್ಗಗಳುಂಟಾದವು. ಎರಡು ವಿರುದ್ಧ ಗುಂಪುಗಳು 'ಅದ್ಭುತವಾದ'ವನ್ನೂ 'ವಾಸ್ತವವಾದ'ವನ್ನೂ ಸಾರಿದವು. 'ಕ್ರಿಯೇಶನಿಸ್ಟ್ ಸೊಸಾಯಿಟಿ'ಯವರು 'ಅದ್ಭುತವಾದ'ವನ್ನು ಎತ್ತಿ ಹಿಡಿದರು. ಸೃಷ್ಟಿ ಸೃಷ್ಟಿಗಾಗಿಯೇ ಎಂಬುದು ಇವರ ಮತ. ಚೀನೀ ಶಬ್ದಕೋಶದಲ್ಲಿಯೇ ಈ ಶಬ್ದ ಹೊಸದು. ಪ್ರಣಯವಿಚಾರದಲ್ಲಿಯೂ, ಸ್ತ್ರೀಸ್ವಾತಂತ್ರ್ಯದಲ್ಲಿಯೂ ಇವರು ತಮ್ಮ ದನಿಗೂಡಿಸಿದರು. ಹಳೆಯ ನೀತಿವಾದ ಮತ್ತು ಹೊಸ ವಾಸ್ತವವಾದದ ವಿರುದ್ಧ ಇವರು 'ಕಲೆಗಾಗಿ ಕಲೆ' ಎಂಬುದನ್ನು ಎತ್ತಿ ಹಿಡಿದರು. ವಾಸ್ತವವಾದದವರು ಮಾನವತೆಯನ್ನು ಎತ್ತಿ ಹಿಡಿದರು. ಕೌ-ಮೊ-ಜೋ ಮೊದಲಾದವರು ಅದ್ಭುತವಾದದ ಒಂದು ಪಕ್ಷವನ್ನು ಸಾರಿದರು. ಕೌ-ಮೊ-ಜೋ ಗಯಟೆಯ ಅನುವಾದಕ ಮತ್ತು ಉಪಾಸಕ. ಕ್ರಿಯೇಶನಿಸ್ಟರಿಂದಲೇ ೧೯೨೭ರಲ್ಲಿ ಹೊಸದಾದ 'ಲೆಫ್ಟ್ ಪ್ರೊಲಿಟೇರಿಯನ್' ಸಾಹಿತ್ಯ ಜನ್ಮ ತಾಳಿತು. ಯು-ಟಾ-ಫೂನ ಇನ್ನೊಂದು ಪಕ್ಷದ ಸಾಹಿತ್ಯದಲ್ಲಿ, ನಿರಾಶಾವಾದ, ಶೂನ್ಯತೆಗಳಿಂದ ತುಂಬಿ ಬರಬರುತ್ತ ಇಳಿಮುಖವಾಯಿತು. ಈ ಸಂಘ ೧೯೨೦ರಲ್ಲಿ ಜಪಾನದಿಂದ ತಿರುಗಿ ಬಂದ ವಿದ್ಯಾರ್ಥಿಗಳಿಂದ ಸ್ಥಾಪಿತವಾಗಿತ್ತು. ೧೯೨೩ರಲ್ಲಿ 'ಕ್ರಿಯೇಶನ್ ಮಂಥ್ಲೀ' ಪ್ರಾರಂಭವಾಯಿತು. ಕೌ-ಮೊ-ಜೊ, ಯು-ಟಾ-ಫೂ, ಟಿನ್-ಹನ್, ಮು-ಮೌ-ಟಿನ್, ಚಾಂಗ್-ತ್ಸು-ಪಿಂಗ್, ಚೆಂಗ್-ಪೊ-ಚಿ, ಆಮೇಲೆ ಚೆಂಗ್-ಫಂಗ್-ವು, ಲೀ-ಚುಲೀ, ಫೆಂಗ್-ನೈ-ಚೌ, ವ್ಯಾಂಗ್-ಟು-ಚಿಂಗ್ ಮತ್ತು ಚೌ-ಚೌನ್-ಪಿಂಗ್ ಇವರು ಪ್ರಮುಖ ವ್ಯಕ್ತಿಗಳಾಗಿದ್ದರು. ಜಪಾನದಲ್ಲಿದ್ದಾಗಲೇ, ೧೯೨೧ರಲ್ಲಿ ಕೌ-ಮೊ-ಜೊ ತನ್ನ 'ದೇವಿಯವರು' ಎಂಬ ಕವನಸಂಗ್ರಹವನ್ನು ಪ್ರಕಟಿಸಿದ. ಆಗಲೇ ಯು-ಟಾ-ಫೂ 'ಸಿನ್-ಕಿಂಗ್' ಎಂಬ ಕಾದಂಬರಿಯನ್ನು ಪ್ರಕಟಿಸಿದರು. ಆಮೇಲೆ ಇವರಿಬ್ಬರ ಹೊಸ ಪೀಳಿಗೆಯ ಮೇಲೆ ತುಂಬ ಪರಿಣಾಮವನ್ನುಂಟುಮಾಡಿತು.

ಇದಕ್ಕೆ ವಿರುದ್ಧವಾಗಿ, ವಾಸ್ತವವಾದಿಗಳ 'ಸಾಹಿತ್ಯ ಸಂಶೋಧನ ಸಂಸ್ಥೆ' ೧೯೨೦ರಲ್ಲಿ ಸ್ಥಾಪಿತವಾಯಿತು. ವನ-ಟುನ್, ವ್ಯಾಂಗ್-ಟುಂಗ್-ಚೌ, ಚೆಂಗ್-ಚೆನ್-ಟು, ಲೊ-ಹ್ವಾ-ಸೆಂಗ್, ಮಿಸ್ ಯು-ಲಿನ್, ಚೆನ್-ಶುನ್-ಟುಂಗ್, ಯು-ಪಿಂಗ್-ಪ್ಪೋ ಮೊದಲಾದವರು ಇವರಲ್ಲಿದ್ದರು. ಮೇ ನಾಲ್ಕರ ಚಳವಳಿಯ ಕಾಲದಲ್ಲಿ, ಈ ಗುಂಪಿನ ಮುಖ್ಯ ಲೇಖಕರೆಂದರೆ, ಲು-ಶೂನ್ ಮತ್ತು ಅವರ ತಮ್ಮ ಚೌ-ತ್ಸೊ-ಜೆನ್, ಯೇ-ಶೌ-ಟುನ್ ಮತ್ತು ಪಿಂಗ್-ಶಿನ್. ಅವರು 'ಸಣ್ಣ ಕತೆ' ಮತ್ತು 'ಸಾಹಿತ್ಯ' ಎಂಬ ಮಾಸಿಕಗಳನ್ನು ಹೊರಡಿಸಿದರು. ಇವರ ಗುಂಪಿನಲ್ಲಿ "ಯೂ" ಸಂಘಟನೆಯಿರಲಿಲ್ಲ. ಕೇವಲ ಪ್ರಕಟನೆಗಾಗಿ ಕೆಲವರು ಭಿನ್ನ ಪ್ರಕೃತಿಯ ಜನರು ಕೂಡಿದ್ದರು. ಸಾಧಾರಣವಾಗಿ ಇವರು ವಾಸ್ತವತೆಗೆ ಹೆಚ್ಚು ಮಹತ್ವ ಕೊಟ್ಟರು. "ಸಾಹಿತ್ಯ, ಸಮಾಜರಚನೆಯ ಒಳಿತು ಕೆಡಕುಗಳನ್ನು ತೋರಿಸಿ ಚರ್ಚಿಸಬೇಕು. ಮನುಷ್ಯ-ಜೀವನದ ತೊಡಕಗಳನ್ನು ತೋರಿಸಬೇಕು" ಇವೇ ಇವರ ಉದ್ದೇಶವಾಗಿತ್ತು.

ಎರಡೂ ಗುಂಪುಗಳೂ ಅನುವಾದಕ್ಕೇ ಹೆಚ್ಚು ಮಹತ್ವ ಕೊಟ್ಟವು. 'ಸಾಹಿತ್ಯ ಸಂಶೋಧನೆ'ಯವರು ಮುಖ್ಯವಾಗಿ ಜಪಾನ, ರಶಿಯಾ, ಮತ್ತು ಯುರೋಪದ ಸಾಹಿತ್ಯವನ್ನೇ ಗುರಿಯಾಗಿಟ್ಟುಕೊಂಡರು. ಚೌ-ತ್ಸೊ-ಜೆನ್ ಜಪಾನಿ, ಪೋಲಿಶ್, ಯೀಡಿಶ್ ಮತ್ತು ಹಂಗೇರಿಯನ್ ಭಾಷೆಗಳ ಸಾಹಿತ್ಯವನ್ನು ಅನುವಾದಿಸಿದರು. ಲು-ಶೂನರು ರಶಿಯನ್ ಮತ್ತು ಜಪಾನೀ ಭಾಷೆಗಳಿಂದ; ಚೆಂಗ್-ಚೆನ್-ಟು ಜರ್ಮನ್ ರಶಿಯನ್ ಭಾಷೆಗಳಿಂದ ಮತ್ತು ಭಾರತೀಯ ಭಾಷೆಗಳಿಂದಲೂ ಅನುವಾದಿಸಿದರು. ಟಾಗೋರರ ಕೆಲವು ಕೃತಿಗಳು ಇವರಿಂದಲೇ ಬಂದವು. ಮಾ-ಟುನ್ ಸ್ಪ್ಯಾನಿಶ್ ಮತ್ತು ಯೀಡಿಶ್ ಭಾಷೆಗಳಿಂದ ಸಾಹಿತ್ಯವನ್ನು ತಂದರು. ಕ್ರಿಯೇಶನಿಸ್ಟರಲ್ಲಿ, ಭಾಷಾಂತರ ಕ್ಷಾಲದಲ್ಲಿ ಅದ್ವಿತೀಯರೆಂದು ಹೆಸರಾದ ಕೌ-ಮೊ-ಜೊ ಇವರು ಶೆಲ್ಲಿ, ಗಾಲ್ಸವರ್ದಿ, ಅಪ್ಟನ್ ಸಿಂಕ್ಲೇರ್, ಇದಲ್ಲದೆ ಕೆಲವು ಜರ್ಮನ್ ಮತ್ತು ರಶಿಯನ್ ಬರಹಗಾರರ ಕೃತಿಗಳನ್ನು ಭಾಷಾಂತರಿಸಿದರು. ಕೌ-ಮೊ-ಜೊರ ನಂತರ ಅಗ್ರಗಣ್ಯರಾದ ಮು-ಮಾ-ಟಿಯಿನ್‌ರು ರಶಿಯನ್ ಸಾಹಿತ್ಯಕ್ಕೇ ಹೆಚ್ಚು ಪ್ರಾಶಸ್ತ್ಯ ಕೊಟ್ಟರು. ನಾಟಕಕಾರರಾದ ಟೆನ್-

ಹನ್‌ರು ಶೇಕ್ಸ್‌ಪಿಯರ, ಮೆಟರಲಿಂಕ್ ಮತ್ತು ಆಸ್ಕರ ವಾಯಿಲ್ಡರ ನಾಟಕ ಗಳನ್ನೂ ಮತ್ತು ಆಧುನಿಕ ಜಪಾನೀ ನಾಟಕಗಳನ್ನು ಪರಿವರ್ತಿಸಿದರು ಇವರೆಲ್ಲ ರಶಿಯನ್ ಸಾಹಿತ್ಯಕ್ಕೆ ಮಾರುವೋಗಿದ್ದರು.

ಈ ಕಾಲದ ಎಲ್ಲ ವ್ಯಕ್ತಿಗಳಲ್ಲಿ ಅಮರವಾದ ಹೆಸರುಗಳೆಂದರೆ ಎರಡೇ. ಲು-ಶೂನ್ ಮತ್ತು ಕೌ ಮೊ-ಜೋ. ಇವರ ಜೀವನಗಳು, ಚೀನದ ಸಾಹಿತ್ಯದ ಚಳವಳಿಯಲ್ಲಿ ಮಹಾಕಾವ್ಯಗಳಾಗಿ ಪರಿಣಮಿಸಿವೆ. ಯು-ಟಃ-ಫೂ ತನ್ನ ಕಾಲದ ಪ್ರತಿನಿಧಿ ಮಾತ್ರ. ಮತ್ತು ಚೌ-ತ್ಸೊ-ಜೆನ್ ಪ್ರಬಂಧ ಮತ್ತು ವಿಮರ್ಶೆಯಲ್ಲಿ ಅಗ್ರಗಣ್ಯರು. ಈ ಕಾಲ ಯಾರಿಗೆ ಬೆಳವಣಿಗೆಯ ಕಾಲ ವೆನಿಸಿತ್ತೊ ಮತ್ತು ಯಾರು ಆಮೇಲೆ ಎಡಪಕ್ಷದ ಚಳವಳಿಗೆ ಬಂದರೋ, ಅವರನ್ನುಳಿದು ಉಳಿದವರೆಲ್ಲರೂ ಹಿನ್ನೆಲೆಯಲ್ಲಿಯೇ ಬಾಡಿಹೋಗಿದ್ದಾರೆ. "ಕ್ರೀಸೆಂಟ್ ಮೂನ್" ಕಾವ್ಯದ ಮುಂದಾಳುವಾದ ಶೂ-ಚಿ-ಮೋರವರು ಮಾತ್ರ ಕಡೆತನಕ ಉಳಿಯುತ್ತಾರೆ. ಪ್ರಣಯ ಮತ್ತು ಕೋಮಲ ಭಾವನೆ ಗಳನ್ನು ಸುಂದರವಾಗಿ 'ಪೈ ಹೂ' ಭಾಷೆಯಲ್ಲಿ ಬರೆಯಬಲ್ಲ ಕವಿಯಾದ ಶೂ, ಈ ಕ್ರಾಂತಿಯಲ್ಲಿ ಮನಸ್ಸು ಹಾಕಲಿಲ್ಲ. ಅವನು ವಿಮಾನ ಅಪಘಾತ ದಲ್ಲಿಯೇ ಸಿಕ್ಕ ಮರಣ ಹೊಂದಿದ. ಲಿನ್-ಯು-ಟಾಂಗ್ ಮತ್ತು ಚೆಂಗ್-ಚೆನ್-ಟು ಈ ಇಬ್ಬರು, ಪ್ರಬಂಧಕಾರರೂ ಮತ್ತು ವಿಮರ್ಶಕರೂ ಆಗಿದ್ದರು. ಇವರಿಬ್ಬರೂ ಸ್ವತಂತ್ರವಾಗಿಯೇ ಮುಂದೆ ಹೋದರು. ಲಿನ್ ೧೯೨೭ರಲ್ಲಿ ಎಡಪಕ್ಷದ ಪತ್ರಿಕೆಯ ಸಂಪಾದಕರಾಗಿದ್ದು, ಅದರಿಂದ ಸಮಾಧಾನ ಹೊಂದದೆ, ನಿಬಂಧ ಮತ್ತು ಪತ್ರಿಕಾಸಾಹಿತ್ಯದಲ್ಲಿ ನಗೆಯನ್ನು ಮುಖ್ಯವಾಗಿ ತಂದರು. ಚೆಂಗ್-ಚೆನ್-ಟು ಅದ್ವಿತೀಯ ವಿಮರ್ಶಕರಾಗಿಯೂ, ಪಂಡಿತ ರಾಗಿಯೂ ಉಳಿದರು.

ಯು-ಟಾ-ಫೂ, ಚಾಂಗ್‌ತ್ಸು-ಪಿಂಗ, ಚೌ-ತ್ಸೊ-ಜೆನ್, ಮಿಸ್ ಪಿಂಗ-ಶಿನ್, ಚೈನ್-ಶುನ್-ಟುಂಗ್, ಮತ್ತು ಹೂ-ಶಿ ಇವರು ಹಿಂದಿನ ಪೀಳಿಗೆಯ ಪ್ರಮುಖ ಲೇಖಕರು. ಉಳಿದವರು, ಕತೆಗಾರ ಹ್ವಾ-ಶೆಂಗ್, ಕಾದಂಬರಿ ಗಳನ್ನು ಬರೆದ ಮಿಸ್ ಲೂಯಿನ್, ಮತ್ತು ಕವಿ ಯು-ಪಿಂಗ್-ಪೋ.

ಇವರೆಲ್ಲ ಈಗ ಎಲ್ಲಿದ್ದಾರೆ? ಸಣ್ಣ ಕತೆಗಳಿಗಿಂತ ಕವನಗಳಲ್ಲಿ ಶ್ರೇಷ್ಠ ಳಾದ ಮಿಸ್ ಪಿಂಗ್-ಶಿನ್ ಪೇಕಿಂಗದಲ್ಲಿ ಸುಖಜೀವನ ನಡೆಸುತ್ತಾಳೆ.

ಇವಳ ಕೃತಿಗಳಲ್ಲಿ ಬರಿಯ ಭಾವನಾವಶತೆ ಹೆಚ್ಚು. ಆದರೂ ಭಾಷೆಯ ಮಾಧುರ್ಯಕ್ಕಾಗಿ ಜನ ಇನ್ನೂ ಓದುತ್ತಾರೆ. ಯು-ಟಾ-ಫೂರನ್ನು ಬಿಟ್ಟು ಉಳಿದವರೆಲ್ಲ ವಿಶ್ವವಿದ್ಯಾಲಯದ ಅಧ್ಯಾಪಕರಾಗಿದ್ದಾರೆ. ಚೌ-ತ್ಸೊ-ಜೆನ್‌ರು ವಿಮರ್ಶಕರೂ, ಕವಿಗಳೂ, ಹರಟೆಗಾರರೂ ಆಗಿದ್ದರು. ಚೆನ್-ಶುನ್-ಟುಂಗ್‌ರು ಪಂಡಿತರಾಗಿದ್ದರು. ಚಾಂಗ್ ತ್ಸು-ಪಿಂಗ್‌ರು ಮೂವತ್ತರ ಮೇಲೆ ಕಾದಂಬರಿಗಳನ್ನು ಬರೆದರು. 'ಪುಟ-ಸಾರ್ವಭೌಮ'ರಲ್ಲಿ ಇವರೂ ಒಬ್ಬರು. ಇವರ ಖ್ಯಾತಿ ಇವರ ಕೃತಿಗಳಲ್ಲಿಯ ಪ್ರೇಮದ ಮತ್ತು ಪ್ರೇಮಕಲಹಗಳ ಮೋಹಕತೆಗಾಗಿ. ಎಲ್ಲ ಕೃತಿಗಳಲ್ಲಿಯೂ ಇದೇ ಮತ್ತೆ ಮತ್ತೆ ಬಂದಿದೆ. ೧೯೨೫ರ ಮೇ ೩೦ನೇ ತಾರೀಖಿಗೆ ಆದ ಸಂಗತಿಯಿಂದ ಹೂ-ಶಿ ಮತ್ತು ಅವರ ಶಿಷ್ಯರು 'ಸನ್ಯಾಸಿಗಳಾದರು'. ಮುಂದೆ ಇವರು ಪ್ರಾಚೀನ ಸಾಹಿತ್ಯದ ಸಂಶೋಧನೆಗೆ ತೊಡಗಿದರು. ವಿಶ್ವವಿದ್ಯಾಲಯಗಳಲ್ಲಿ ಇವರು ದೊಡ್ಡ ಹುದ್ದೆಗಳಲ್ಲಿದ್ದರೂ, ತರುಣರ ಮುಂದೆ ಇವರ ಆಟ ನಡೆಯಲಿಲ್ಲ. ಮುಂದೆ ೧೯೩೫ರ ಎಡಪಕ್ಷದ ಚಳವಳಿಯಲ್ಲಿ ಇವರು ಹೇಳಹೆಸರಿಲ್ಲದಾದರು.

ಮುಂದಿನ ಸಾಹಿತ್ಯಕ್ಕೆ ಎಡಪಕ್ಷದ ಚಳವಳಿಯಲ್ಲಿ ಕೌ-ಮೊ-ಜೊ ಮತ್ತು ಲು-ಶೂನರಂಥ ಉತ್ಕೃಷ್ಟ ಮುಂದಾಳುಗಳು ದೊರಕಿದರು. ಟಿನ್-ಹನ್, ಮು-ಮಾ-ಟಿನ್, ಚೆಂಗ-ಫ್ರೇ-ಚಿ, ಚೆಂಗ್-ಫಾಗ್-ವು, ಲಿ-ಚು-ಲೀ, ಫೆಂಗ್-ನೈ-ಜೋ, ವ್ಯಾಂಗ್-ಟು-ಚಿಂಗ, ಮತ್ತು ಚೌ-ಚಾನ್-ಪಿಂಗ್ ಮುಂತಾದ ಕ್ರಿಯೇಶನಿಸ್ಟರೂ, ಮತ್ತು ವಾಸ್ತವಾದದ ಫೂ-ಮನ್, ಯೆ-ಶಾ-ಚುನ್, ವ್ಯಾಂಗ್-ಟುಂಗ-ಚೋರವರೂ ಇವರನ್ನು ಕೂಡಿದರು. ಮಾ-ಟುನ್, ಟಿಯಿನ್-ಹನ್, ವ್ಯಾಂಗ್-ಟುಂಗ್ ಚೋ, ಮತ್ತು ಹುಯೆ-ಪಿಂಗ, ಇವರು ಉತ್ತಮ ಕೆಲಸ ಮಾಡಿದರು. ಕೌ-ಮೊ-ಜೊ-ರವರು ಜಪಾನಕ್ಕೆ ಓಡಿಹೋಗಿ, ಭೂಗರ್ಭಶಾಸ್ತ್ರವನ್ನು ಅಭ್ಯಾಸ ಮಾಡುತ್ತಿದ್ದಾರೆ. ಟಿಯಿನ್-ಹನ್‌ರಂಥ ಅತ್ಯುತ್ತಮ ನಾಟಕಕಾರರನ್ನು ೧೯೩೫ರಲ್ಲಿ ಸೆರೆ ಹಿಡಿಯಲಾಯಿತು. ಬಿಡುಗಡೆಯಾದ ಮೇಲೆ ಅವರು ನ್ಯಾನ್‌ಕಿಂಗದಲ್ಲಿರುತ್ತಾರೆ. ೧೯೩೧ರಲ್ಲಿ ಸೆರೆಯಾದ ಲೀ-ಚುಲೀಯವರು ಇನ್ನೂ ಸೆರೆಯಲ್ಲಿಯೇ ಇದ್ದಾರೆ. ಫೆಗ್-ನೈ-ಚಾಓ, ವಿಲಕ್ಷಣವಾಗಿ ಅದೃಶ್ಯರಾದರು. ತನ್ನೆರಡು

ಮಕ್ಕಳನ್ನು ಬಲಿಗೊಟ್ಟು ಪ್ರಬಂಧಕಾರರಾದ ಜೆನ್-ಟು-ಶಿಯುರವರು ಕಮ್ಯುನಿಸ್ಟ ಪಕ್ಷದ ನೇತಾರರಾಗಿ ಸೆರೆ ಹಿಡಿಯಲ್ಪಟ್ಟರು. ಯು-ಟಾ-ಫೂ ಮತ್ತು ಚೆಂಗ್-ತ್ಸು-ಪಿಂಗ್‌ರು ಎಡ ಪಕ್ಷವನ್ನು ಸೇರಬೇಕೆಂದು ಪ್ರಯತ್ನಿಸಿದರು. ಆದರೆ ಅವರಿಗೆ ಯಶ ದೊರೆಯಲಿಲ್ಲ.

೧೯೨೫ರ ಮೇ ೩೦ನೆಯ ತಾರೀಖಿಗೆ ನಡೆದ ಸಂಗತಿಯಿಂದ, ಎಡ ಪಕ್ಷದ ಚಳವಳಿ ಪ್ರಾರಂಭವಾಯಿತು. ರಶಿಯಾದ ಉಪದೇಶದ ಮೇರೆಗೆ ಸಾಮಾನ್ಯ ಜನರಿಗೆ ಬಂಡು ಹೂಡಲು ಸೂಚನೆ ಸಿಕ್ಕಂತಾಯಿತು. ಎಡ ಪಕ್ಷದ ವಿದ್ಯೆಯ ರಂಗದಲ್ಲಿ, ಜಪಾನೀ ಕೃತಿಗಳು ಮತ್ತು ಮಾರ್ಕ್ಸನ ಅಭ್ಯಾಸದಿಂದ ಈ ವಿಚಾರ ಬಂದಿದ್ದರೂ, ರಶಿಯಾದ ಉಪದೇಶದ ಪರಿಣಾಮ ಸಾಕಷ್ಟಾಯಿತು. ಕೆಳವರ್ಗದ ಜನರೆಲ್ಲ ಮೇಲೆ ಬರಲು ಭಯಂಕರವಾಗಿ ಹೋರಾಡಿದರು. ಇದರಿಂದ ವಿದ್ಯಾವಂತರಲ್ಲಿ ಕೆಲವರು ಸಂತೋಷಪಟ್ಟರು; ಮತ್ತೆ ಕೆಲವರಿಗೆ ಭಯವಾಯಿತು. ಈ ಕ್ರಾಂತಿಯಲ್ಲಿ ಎಷ್ಟೋ ಲೇಖಕರು ಪ್ರಚಾರಕರಾಗಿ ತಿರುಗಾಡಿದರು. ೧೯೨೭ರಲ್ಲಿ ಕಮ್ಯುನಿಸ್ಟರು ಯುದ್ಧದಲ್ಲಿ ಎಷ್ಟೋ ವಿದ್ಯಾರ್ಥಿಗಳನ್ನೂ, ಸಂಪಾದಕರನ್ನೂ, ಬರೆಹಗಾರರನ್ನೂ ಕೊಂದರು; ಗಲ್ಲಿಗೇರಿಸಿದರು.

೧೯೨೭ರ ನಂತರ ಪೇಕಿಂಗ್‌ದ ಬದಲು ಶಾಂಘಾಯಿ ಸಾಹಿತ್ಯದ ಕೇಂದ್ರವಾಯಿತು. ಕ್ರಿಯೇಶನಿಸ್ಟರು ಕ್ರಾಂತಿಯಿಂದ ಮತ್ತಿಷ್ಟು ಹುರುಪುಗೊಂಡರು. ಕೌ-ಮೊ-ಜೊ (ಮಾ-ಟುನ್‌ನಂತೆ ಇವರೂ ಸೈನ್ಯದಲ್ಲಿ ಸೇರಿದ್ದರು) ಇದರ ನಾಯಕತ್ವವನ್ನು ವಹಿಸಿದರು. "ಸಾಮಾನ್ಯ ಜನತೆಯ ಕ್ರಾಂತಿಸಾಹಿತ್ಯ" ಈ ಲೇಖನವನ್ನು ತಮ್ಮ ಧ್ವಜಗಳ ಮೇಲೆ ಬರೆದು ಮೂರು ಗುಂಪುಗಳು ಮುಂದೆ ಹೊರಟವು. ಸಾಹಿತ್ಯದ ರೂಪರೇಷೆಗಳ ಬಗ್ಗೆ ಬಡಿದಾಟ ಪ್ರಾರಂಭವಾಯಿತು. ಬರಿಯ ನಿರೀಕ್ಷಕರಾಗಿ ಉಳಿದ ಲು-ಶೂನ್‌ರನ್ನೂ ಇವರು ಮುತ್ತಿದರು. ಈ ಮೂರು ಗುಂಪುಗಳು ಮೂರು ಮಾಸಪತ್ರಿಕೆಗಳನ್ನು ಹೊರಡಿಸಿದವು. 'ಸೃಷ್ಟಿ' (೧೯೨೨ ೧೯೨೯) 'ಸಂಸ್ಕೃತಿ ವಿಮರ್ಶಕ' (೧೯೨೯–) ಮತ್ತು 'ಸೂರ್ಯ' (೧೯೨೮–೩೨) ಈ ಕ್ರಾಂತಿಸಾಹಿತ್ಯದ ಪ್ರತಿನಿಧಿಯಾಗಿ ಚಿಯಾಂಗ್-ಕ್ವಾಂಗ್‌ತ್ಸುರವರು

ನಿಂತರು. ಉಳಿದವರು ಹಂಗ್-ಲಿಂಗ್-ಫೀ, (೧೯೩೪ರಲ್ಲಿ ಗಲ್ಲಿಗೇರಿಸಲ್ಪಟ್ಟರು) ಯಾಂಗ್-ಟುನ್-ಜೆನ್, ಚಿಯಾಂಗ್-ಶಿನ್-ತ್ಸನ್, ಕುಂಗ್-ಪಿನ್-ಲು, ಮತ್ತು ಫೆಂಗ್-ನೈ-ಚೊ (ಅದೃಶ್ಯರಾದವರು). ಕೌ-ಮೊ-ಜೊ ಈ ಸಮಯದಲ್ಲಿ ಕೂಲಿಕಾರರನ್ನು ಉದಾತ್ತಗೊಳಿಸಿ ಕತೆಗಳನ್ನು ಬರೆದರು. ಇವರ "ಒಂದೇ ಒಂದು ತೋಳು," ಎಂಬ ಕತೆಯಲ್ಲಿ, ಯಂತ್ರದಲ್ಲಿ ಒಂದು ಕೈಯನ್ನು ಕಳೆದುಕೊಂಡು, ಕ್ರಾಂತಿಗಾಗಿ ಇನ್ನೊಂದು ಕೈಯನ್ನು ಮೀಸಲಾಗಿಟ್ಟ ಕೂಲಿಕಾರನ ಜೀವನಚಿತ್ರವಿದೆ. ಕ್ರಾಂತಿಕಾರ ಸಾಹಿತಿಗಳ ಕೈ ಮೇಲಾಗುತ್ತಿದ್ದಂತೆ, ಉಳಿದ ಗುಂಪಿನವರು ಕೇವಲ ನಿರೀಕ್ಷಕರಾಗಿದ್ದರು. ನಾಗರಿಕರ ಸಾಹಿತ್ಯವನ್ನು ನಿರ್ಮಿಸುವವರು, 'ಬಿದಿಗೆ ಚಂದ್ರ' ಎಂಬ ಮಾಸಪತ್ರಿಕೆಯ ಮೊರೆಹೊಕ್ಕರು. ಕಲೆ, ಮತ್ತು ಸಂಸ್ಕೃತಿ ವಿಚಾರಗಳಿಗೇ ಈ ಪತ್ರಿಕೆ ಮೀಸಲಾಗಿತ್ತು. ಲಲಿತಸಾಹಿತ್ಯವನ್ನೇನೂ ಪ್ರಕಟಿಸದಿದ್ದರೂ, ಶೂ-ಜಿ-ಮೋರ ಕೆಲವೊಂದು ಸುಂದರವಾದ ಕವಿತೆಗಳು ಇದರಲ್ಲಿ ಬೆಳಕು ಕಂಡವು. ೧೯೨೪ರಲ್ಲಿ ಸ್ಥಾಪಿತವಾದ 'ವಿಮರ್ಶಕ' ಪತ್ರಿಕೆ ೧೯೩೬ರಲ್ಲಿ ನಿಂತುಹೋಯಿತು. ಹು-ಶಿ, ಯು ಟಾ-ಫೂ, ಚಾಂಗ್ ತ್ಸ-ಪಿಂಗ್, ಹು-ಯೆ-ಪಿಂಗ್, ಮತ್ತು ಶು-ಟಿ-ಮೊ ಇವರೆಲ್ಲ ಇದಕ್ಕೆ ಬರೆಯುತ್ತಿದ್ದರು. ವಾರಕ್ಕೆ ೧೦ ಸಾವಿರ ಪ್ರತಿಗಳಷ್ಟು ಮಾರಾಟವಾಗುವ ಇನ್ನೊಂದು ಪತ್ರಿಕೆ 'ಯು-ತ್ಸು' (ಮಾತಿನೆಳೆಗಳು) ೧೯೨೪ರಲ್ಲಿಯೇ ಪ್ರಾರಂಭವಾಯಿತು. ಲು-ಶೂನ್, ಚೌ-ತ್ಸು-ಜೆನ್, ಚೈನ್-ಶುನ್-ಟುಂಗ್, ಮತ್ತು ಲಿನ್-ಯು-ಟಾಂಗ್‌ರು ಇದಕ್ಕೆ ಬರೆಯುತ್ತಿದ್ದರು. ಆದರೆ ಲು-ಶೂನ್‌ರು ತಮ್ಮ ಸ್ಥಾನವನ್ನು ಬದಲಿಸಿದೊಡನೆ ೧೯೨೮ರಲ್ಲಿ ನಿಂತುಹೋಯಿತು. ಮಾ-ಟುನ್, ಚೆಂಗ್-ಚೆನ್-ಟು, ಮತ್ತು ಕೆಂಗ್-ಚಿ-ಚಿ ಇವರ ಸಂಪಾದಕತ್ವದಲ್ಲಿ ನಡೆದ 'ಸಣ್ಣ ಕತೆ' ಒಂದು ಒಲವನ್ನೇ ಅನುಸರಿಸುತ್ತ ಲೋಕಪ್ರಿಯ ಕೃತಿಗಳನ್ನಷ್ಟೇ ಪ್ರಕಟಿಸುತ್ತಿತ್ತು. ಇದಾದ ಮೇಲೆ ಹೇಳಿಕೊಳ್ಳುವಂತಹ ಪತ್ರಿಕೆಗಳಾವೂ ಮುಂದೆ ಬರಲಿಲ್ಲ. ೧೯೩೩ರಲ್ಲಿ 'ಸಾಹಿತ್ಯ' ಪತ್ರಿಕೆ ಮುಂದೆ ಬಂದಿತು. 'ತೃತೀಯ ಪಂಥದ' ಬರೆಹಗಳಿಗೆ ಮೀಸಲಾದ ಲೆಸ್ ಕಂಟೆಂಪೊರೇನ್ಸ್ ಪತ್ರಿಕೆ, ಲೆಫ್ಟಿಸ್ಟರು ಬಹಿಷ್ಕರಿಸುವ ಮೊದಲೇ

ನಿಂತುಬಿಟ್ಟಿತು. ಆಗಾಗ ಕೆಲವು ತ್ರೈಮಾಸಿಕಗಳು ಕಾಣುತ್ತಿದ್ದವು.

೧೯೨೯ರ ನಂತರ ಟಿನ್-ಹನ್ ಮತ್ತು ಹಂಗ್-ಶೆನ್ ಇವರಿಬ್ಬರೂ ಆಧುನಿಕ ನಾಟಕವನ್ನು ಬೆಳೆಸಿದರು. ಇವರಿಬ್ಬರೂ ಮುಂದೆ ಎಡಪಕ್ಷವನ್ನು ಸೇರಿದರು. ತ್ಸಾ-ಓ-ಯು ಮತ್ತು ಲೀ.ಚೆನ್-ಯು ಇವರೂ ಮಹತ್ವದ ನಾಟಕಕಾರರು. ಟಿನ್-ಹನ್ ಇಬ್ಸೆನ್ ಮತ್ತು ರೋಮಾರೊಲಾರನ್ನು ಲೋಕಪ್ರಿಯರನ್ನಾಗಿ ಮಾಡಿದರು.

೧೯೨೭ರಿಂದ ೧೯೩೭ರ ವರೆಗೆ ಎಡಪಕ್ಷದ ಸಾಹಿತ್ಯ ಬೇರೆಂತಲೇ ಕಲೆಯನ್ನು ನಿರ್ಲಕ್ಷಿಸಿ' ಪ್ರಚಾರ, ಶಾಸ್ತ್ರಚಿಕಿತ್ಸೆ ಮತ್ತು ಪತ್ರಿಕಾ ವ್ಯವಸಾಯಕ್ಕೇ ನಿಂತುಬಿಟ್ಟಿತು. ಅದರ ಕಲೆಯ ಭಾಗ ಕ್ಷಣಿಕವಿದ್ದರೂ, ಅದು ಒಳ್ಳೆಯ ಪರಿಣಾಮವನ್ನುಂಟುಮಾಡಿತು. ೧೯೨೭ರ ನಂತರ, ಕ್ರಾಂತಿಕಾರಕ ಸಾಹಿತಿಗಳು ಮಧ್ಯಮ ವರ್ಗದ ಸಾಹಿತಿಗಳ ತಮ್ಮ ಸಿಟ್ಟನ್ನೆಲ್ಲ ಕಾರಿದರು. ಒಕ್ಕಲಿಗರನ್ನೂ ಕೂಲಿಕಾರರನ್ನೂ ಆದರ್ಶಸ್ಥಾನಕ್ಕೇರಿಸಿ, ಕ್ರಾಂತಿಕಾರಕ ವಿದ್ಯಾರ್ಥಿಗಳ ಮತ್ತು ಬುದ್ಧಿವಂತರ ಮನೋವಿಶ್ಲೇಷಣೆಯಲ್ಲಿ ಈ ಸಾಹಿತ್ಯ ತೊಡಗಿತು.

ಎಡಪಕ್ಷದ ಲೇಖಕರ ಸಂಘ, ತನ್ನ ಮೂವತ್ತು ಸದಸ್ಯರನ್ನು ಕೂಡಿಕೊಂಡು, ಲು-ಶೂನರನ್ನು ಮುಖ್ಯ ವ್ಯಕ್ತಿಯಾಗಿಟ್ಟುಕೊಂಡು, ಶಾಂಘಾಯಿಯಲ್ಲಿ ೧೯೩೦ರ ಮಾರ್ಚ ೨ನೆಯ ದಿನಾಂಕ ಕೂಡಿದಾಗ, ಎಡಪಕ್ಷದವರ ಆಂದೋಲನಕ್ಕೆ ಒಂದು ರೂಪ ಬಂತು. ಹೊಸ ಕ್ರಾಂತಿ ಲು-ಶೂನ್‌ರ ದೃಷ್ಟಿಗೆ ಹೊಂದಲಿಲ್ಲ. ಕೊನೆಗೆ ೧೯೩೦ರಲ್ಲಿ, ಅದೂ ಒಂದು ಐತಿಹಾಸಿಕ ಅವಶ್ಯಕತೆಯೆಂಬ ತರ್ಕದ ಮೇಲೆ, ಅದರ ಸತ್ಯವನ್ನು ಮನಗಂಡರು. ಇದೊಂದು ಎಡಪಕ್ಷದವರ ಅಪೂರ್ವ ವಿಜಯ. ದೇಶದ ಅತಿ ಪ್ರಮುಖ ಲೇಖಕನನ್ನು ತಮ್ಮವನನ್ನಾಗಿ ಮಾಡಿಕೊಂಡು, ಚೀನದ ಸಾಹಿತ್ಯರಂಗವನ್ನೇ ಆಳತೊಡಗಿದರು. ರಾಜಕೀಯ ರಂಗದಲ್ಲಿ ಕೋಮಿಂಟಾಂಗದವರ ನಿರಂಕುಶ ಪ್ರಭುತ್ವಕ್ಕೂ ಇದಕ್ಕೂ ಏನೂ ವ್ಯತ್ಯಾಸವಿಲ್ಲ. ಉಳಿದೆಲ್ಲ ಒಳಪಂಗಡಗಳೂ ಗೆಳೆತನದಲ್ಲಿ ಕೂಡಿ ಒಂದು ದೊಡ್ಡ ಸಂಸ್ಥೆಯಾಯಿತು.

ಎಷ್ಟೋ ಪತ್ರಿಕೆಗಳು ಪ್ರಾರಂಭವಾದವು. ಲು-ಶೂನ್‌ರ ' ಚಿಗುರು ' ಟಿಂಗ್-ಲಿಂಗ್‌ರ ' ಗ್ರೇಟ್ ರಿವರ್ ' ಸರಕಾರದವರ ಕಣ್ಣು ಬಿದ್ದೊಡನೆ ಕೆಲವು ದಿವಸ ಇವು ಮರೆಯಾಗುತ್ತಿದ್ದವು. ಸೆನ್ಸಾರದವರನ್ನು ಮೋಸ ಗೊಳಿಸಲು ಲೇಖಕರು ಎಷ್ಟೋ ಕಾವ್ಯನಾಮಗಳನ್ನಿಟ್ಟುಕೊಂಡರು.

೧೯೩೧-೩೨ರಲ್ಲಿ ಎಡಪಕ್ಷದವರ ಚಳವಳಿ ವಿದ್ಯಾರ್ಥಿ ವೃಂದದಲ್ಲಿಯೂ ಮತ್ತು ಪಂಡಿತ ವರ್ಗದಲ್ಲಿಯೂ ತನ್ನ ಪ್ರಭಾವವನ್ನು ಬೀರಿತು. ಕೋಮಿಂಗ ಟಾಂಗದವರಿಗೆ ಇದರ ಅದ್ಭುತ ಪರಿಣಾಮದ ಅರಿವು ಬರಲು, ಅವರು ಕೂಡಲೆ ಹತ್ತಿಕ್ಕಲಾರಂಭಿಸಿದರು. ಸೈನ್ಯಖಾತೆಯವರು ಯುದ್ಧದಲ್ಲಿ ತೊಡಗಿದ್ದರಿಂದ, ಸಂಸ್ಕೃತಿಯ ಕ್ಷೇತ್ರದಲ್ಲಿ ನಡೆದ ಕ್ರಾಂತಿ ಅವರ ಲಕ್ಷ್ಯಕ್ಕೆ ಬರಲಿಲ್ಲ. ಮೇಲಾಗಿ, ದೇಶದ ವಿಲಕ್ಷಣ ಪ್ರತಿಭಾಶಾಲಿಗಳನ್ನು ಒಮ್ಮೆಲೆ ಹತ್ತಿಕ್ಕುವ ಧೈರ್ಯ ಕೋಮಿಂಟಾಂಗದವರಿಗಾಗಲಿಲ್ಲ. ೧೯೩೧ರಲ್ಲಿ ೨೬ ವರ್ಷದ ಒಬ್ಬ ತರುಣ ಹುಯೇ-ಪಿಂಗ್ (ಟಿಂಗ್‌ಲಿಂಗ್‌ಳ ಗಂಡ) ಇವನನ್ನು ಶಾಂಘಾಯಿಯಲ್ಲಿ ಗಲ್ಲಿಗೇರಿಸಿದರು. ಇದಲ್ಲದೆ ಫೆಂಗ್-ಕೆಂಗ್ (ಕಾದಂಬರಿ ಕಾರಳಾದ ಹುಡುಗಿ), ೨೧ ವರ್ಷದ ತ್ಸುಂಗ್-ಹುಯ್, ೨೨ ವರ್ಷದ ಯಿನ್-ಫೂ, ೨೮ ವರ್ಷದ ಲೀ-ವೇ- ಕೆಂಕ್, ಮತ್ತು ೩೧ ವರ್ಷದ ಜಾಶಿ: ಇವರನ್ನೂ ಗಲ್ಲಿಗೇರಿಸಲಾಯಿತು. ೧೯೩೪ರಲ್ಲಿ ಫ್ಯಾಸಿಸ್ಟರು, ಸಂಸ್ಕೃತಿಯ ಕ್ರಾಂತಿಯನ್ನು ಹತ್ತಿಕ್ಕಲು, ವಿಶಿಷ್ಟ ಸೈನ್ಯಖಾತೆಯವರನ್ನೂ ಗೂಢಚಾರರನ್ನೂ ನಿಯಮಿಸಿದರು.

ಈ ಬೆದರಿಕೆ ಬಿದ್ದೊಡನೆ, ಎಡಪಕ್ಷದವರು, ' ನ್ಯೂ ರಿಯಾಲಿಜಮ್ ' ಚಳವಳಿಯನ್ನು ಹೂಡಿದರು. ಜೀವನವನ್ನು ಕೂಲಂಕಷವಾಗಿ ವಿಮರ್ಶಿ ಸುವದು. ಪ್ರಚಾರವಿಲ್ಲದೆ ಇರುವದು ಇವು ಇದರ ಗುರಿಗಳಾದವು. ಆದರೂ ಇದರಲ್ಲಿ ಕ್ರಾಂತಿಯ ಅವಶ್ಯಕತೆಯನ್ನು ಕುರಿತು ಸೂಚನೆಗಳಿದ್ದವು. ಆಧು ನಿಕ ಚೀನದ ಸಾಹಿತ್ಯದಲ್ಲಿ ಈ ಚಳವಳಿ ಅತ್ಯಂತ ಆಶಾದಾಯಕವಾದ ದ್ದೆಂದು ವಿಮರ್ಶಕರೆಲ್ಲರೂ ಒಪ್ಪಿದ್ದಾರೆ. ವಾಕ್ ಸ್ವಾತಂತ್ರ್ಯವನ್ನು ಕಳೆದು ಕೊಂಡರೂ, ಮೋಹಕವಾದ ತಂತ್ರ ಮತ್ತು ಉತ್ಕಟತೆಯಲ್ಲಿ ಈ ಹಾನಿ ಯನ್ನು ತುಂಬಿಕೊಂಡರು. ಮಾ : ಟುನ್ ಮತ್ತು ಮಿಸ್ ಟಿಂಗ್-ಲಿಂಗ್‌ರು

ಈ ಅವಧಿಯಲ್ಲಿ ನಕ್ಷತ್ರಗಳಂತೆ ಉದಯವಾದರು. ಸಣ್ಣಕತೆ ಮತ್ತು ಕಾದಂಬರಿಗಳನ್ನು ಬರೆದ ಚಾಂಗ್-ಟಿನ್-ಯಿ, ಮತ್ತು ಕಾದಂಬರಿಕಾರರಾದ, ಲಾ : ಸಿ, ವಂಗ್-ಟುಂಗ್-ಚಾ, ಮತ್ತು ಸು-ಶಿ-ಚೆನ್‌ರೂ ಇದರಲ್ಲಿ ಇದ್ದರು. ತರುಣ ಬರಹಗಾರರಲ್ಲಿ ಅದ್ವಿತೀಯರಾದವರೆಂದರೆ, ಶಾಟಿಂಗ್, ಟಿಯಿನ್-ಚುನ್, ಮತ್ತು ಅವರ ಹೆಂಪತಿ ಶಿಯೊ-ಹುಂಗ್, ಮತ್ತು ಶಿಯಾಂಗ್, ಯೆಟ್ಸು, ಅಯ್-ವು, ಚೌ-ವೆನ್, ಟುಂಗ್-ಪಿಂಗ್, ಓಯಾ-ಶಾನ್, ಟೈ-ಚೆಂಗ್-ನುಂಗ್, ವೈ-ಚಿ : ಲಿ :, ಮತ್ತು ಇನ್ನಿತರರಾದ, ಮಿಸ್ ಶಿಂಗ್-ಮಿಂಗ್. ಟಿಯಿನ್.ಹನ್, ಹಂಗ್-ಶೆನ್, ಮತ್ತು ತ್ಸಾಯು ಇವರು ನಾಟಕಕಾರರು. ಫೂ-ಕೆಂಗ್ ಎಡಪಕ್ಷದ ಅತ್ಯುತ್ತಮ ಕವಿ ಎಂದು ಹೇಳಬಹುದು.

ಎಡಪಕ್ಷದವರೊಂದಿಗೆ ಸಹಾನುಭೂತಿಯುಳ್ಳ ರೋಮ್ಯಾಂಟಿಕ್‌ರಲ್ಲಿ, ಪಾ-ಚಿನ್, ಮಿಸ್ ಪೈ-ವೇ, ಮಿಸ್ ಶೈ-ಪಿಂಗ್-ಪಿಂಗ್, ಟೈ-ಪಿಂಗ್-ವ್ಯಾನ್ ಲಿಯು ಎನ್, ಪೆಂಗ್-ತ್ಸು ಮುಂತಾದವರಿದ್ದಾರೆ.

೧೯೩೭ರ ಬಿಕ್ಕಟ್ಟಿನ ಪ್ರಸಂಗದಲ್ಲಿ, ಲು-ಶೂನ್ ಹತ್ತಿಕ್ಕಿದ 'ತೃತೀಯ ಪಂಥ'ದ ಬರೆಹಗಾರರಿದ್ದರು. ಟೂ-ಹೆಂಗ್ ಮುಂತಾದವರು, ಸಾಹಿತ್ಯದಲ್ಲಿ ಪೂರ್ಣ ಸ್ವಾತಂತ್ರ್ಯವನ್ನು ಇವರು ಬೇಡಿದರು. ಶಿ-ಚೆ-ತ್ಸುನ್‌ರು ಫ್ರಾಯಿಡನ ಮನೋವಿಶ್ಲೇಷಣವನ್ನು ತರಬೇಕೆಂದು ಪ್ರಯತ್ನಿಸಿದ್ದಾರೆ. ವಿಚಿತ್ರವಾದ ಒಂದು ರೀತಿಯ ಫ್ಯಾಸಿಸ್ಟ ಸಾಹಿತ್ಯವೂ ಹುಟ್ಟಿಕೊಂಡಿದೆ. ಕೆಲವು ಎಡಪಕ್ಷದವರು ಜೀವನೋಪಾಯಕ್ಕಾಗಿ, ಕೋಮಿಂಟಾಂಗ್ ಮತ್ತು ಫ್ಯಾಸಿಸ್ಟ್ ಪತ್ರಿಕೆಗಳಿಗೆ ಬರೆದರು. ಆಗಲೇ ಒಂದು ರೀತಿಯ 'ಇಂದ್ರಿಯ ಆಕರ್ಷಣ' ಹುಟ್ಟಿಕೊಂಡಿತು ಆಧುನಿಕ ನಗರಗಳ ಜೀವನವನ್ನು ಓದುಗರ ಮನರಂಜನೆಗಾಗಿ ವರ್ಣಿಸುವದು. ಮು-ಶಿ-ಯಿಂಗ್ ಕ್ರಾಂತಿಯಲ್ಲಿ ನಂಬಿಕೆಯನ್ನು ಕಳೆದುಕೊಂಡು, ಇದನ್ನು ಅವಲಂಬಿಸಿದರು. ಲಿ-ಯು-ನಾ-ಓ ಮತ್ತು ಹೇ-ಯಿಂಗ್ ಇವರು ಅವರ ಅನುಯಾಯಿಗಳು. ಮೊದಲೇ ಹೇಳಿದಂತೆ, ಪತ್ರಿಕಾ ಸಾಹಿತ್ಯ ಮತ್ತು ಹರಟೆಗಳಲ್ಲಿ ವಿನೋದವಿರಬೇಕೆಂಬ ಲಿನ್-ಯು-ಟಾಂಗರ ಚಳವಳಿ ಎರಡು ವರ್ಷಗಳ ಕಾಲ ಭರದಲ್ಲಿತ್ತು.

ರಾಜಕೀಯ ಸಂಕಟಗಳು ಹೆಚ್ಚಾಗುತ್ತಿರಲು, ವಿನೋದ ತನ್ನ ಸವಿಯನ್ನು ಕಳೆದುಕೊಂಡಿತು.

ಎಡಪಕ್ಷದ ಸಾಹಿತಿಗಳನ್ನು ಬಿಟ್ಟರೆ ಚೀನದಲ್ಲಿ ರಾಜಕೀಯವಲ್ಲದ ಕೆಲವು ಸಂಸ್ಥೆಗಳು ಸ್ವಲ್ಪಾದರೂ ಇವೆ. ಶುದ್ಧ ಕಲಾವಿದರೂ, ಕಲೆಗಾಗಿ ಕಲೆ ಎಂದು ಸಾಧಿಸುವವರೂ, ಈ ಕ್ರಾಂತಿಯ ಪ್ರಳಯದಲ್ಲಿ ಅಡಗಿ ಹೋಗಿದ್ದಾರೆ. ಒಂದೇ ಒಂದು ಮುಖ್ಯ ವ್ಯಕ್ತಿ ಎಂದರೆ ಶೆನ್-ತ್ಸುಂಗ್-ವೆಂಗ್. ಇವರು ಮೂವತ್ತು ವಯಸ್ಸಿನ ಒಳಗೇ ನಾಲ್ವತ್ತು ಪುಸ್ತಕಗಳನ್ನು ಬರೆದರು. ಇವರು ಮುಖ್ಯವಾಗಿ ಕತೆಗಾರರೂ, ಶೈಲಿಯ ಉಪಾಸಕರೂ ಇದ್ದಾರೆ. ಶೀ-ಹಿಂಗ್, ಲೀ-ಜೆಸ್-ವು, ಮಿಸ್ ಲಿಂಗ್-ಶು-ಹ್ವಾ, ಮಿಸ್ ಸು-ವೈ, ಮತ್ತು ಶಿಯುಂಗ್-ಫು-ಶಿ ಇವರು ಉಳಿದವರು. ಈ ವರ್ಗದ ಕವಿಗಳು ಮಾತ್ರ ಎಡಪಕ್ಷದ ಕವಿಗಳ ಸಮಾನರಾಗಿದ್ದಾರೆ.

'ಬಿದಿಗೆ ಚಂದ್ರ' ಎಂಬ ಮಾಸಿಕದ ವರ್ಗದ ಸಾಹಿತಿಗಳು, ಪಾಶ್ಚಾತ್ಯ ಕಾವ್ಯದ ರೂಪಗಳನ್ನು ತಂದರು. ಕೌ-ಮೊ-ಜೊರವರಿಂದ ಇದಕ್ಕೆ ಲೋಕ ಪ್ರಿಯತೆ ಪ್ರಾಪ್ತವಾಯಿತು. 'ಶೂ' ಅವರ ನಂತರ ಬಂದವರೆಂದರೆ, ಜಾ-ಓ-ಮೆಂಗ್-ಕನ್, ಚೆನ್-ಮೆಂಗ್-ಜ್ಯೈ, ಪಿನ್-ಚಿನ್‌ಲಿನ್, ಮತ್ತು ಚು-ಶಿಯಾಂಗ್ ಇವರು.

ಶೈಲಿಯಲ್ಲಿ ಇವರು ಯುರೋಪದ ಲೆಸ್ ಪಾರ್ನೆಸ್ಸಿಯರನ್ನು ಅನುಕರಿಸಿದರು. ಜೆಂಗ್-ಕೆ-ಚಿಯಾನವರು, ಅಸ್ಪಷ್ಟ ಸಾಂಕೇತಿಕರ ವಿರುದ್ಧವಾಗಿ, ಸರಳತೆ ಮತ್ತು ಸ್ಪಷ್ಟತೆಗಳನ್ನು ಎತ್ತಿ ಹಿಡಿದರು. ಲಿಂಗ್-ಟಿಂಗ್-ಫಾ ಇದರ ಜನಕನಾಗಿದ್ದ. ಇವರ ಅನುಯಾಯಿಗಳಾದ ವ್ಯಾಂಗ್-ಶು ಮತ್ತು ಟಿಂಗ್-ತ್ಸುರವರು ಆಮೇಲೆ ಎಡಪಕ್ಷಕ್ಕೆ ತಿರುಗಿದರು. ಟಿಯಿನ್ಸ್ಟಿನ್‌ದಲ್ಲಿ ೧೯೩೫ರಲ್ಲಿ ಇವರನ್ನು ಗಲ್ಲಿಗೇರಿಸಿದರು. ಎಡಪಕ್ಷದವರು, ಎಷ್ಟೋ ಕಾವ್ಯನಾಮಗಳನ್ನಿಟ್ಟುಕೊಂಡು ಬರೆದರು. ಇವರ ಸಾಹಿತ್ಯವೂ ಕ್ಲಿಷ್ಟವಾದದ್ದು. ಅವರ ಎಷ್ಟೋ ಕೃತಿಗಳು, ಸೆನ್ಸಾರದವರನ್ನು ತಪ್ಪಿಸಲು ಸಾಂಕೇತಿಕವಾಗಿವೆ.

ಮಧ್ಯಮವರ್ಗದ ಸಾಹಿತ್ಯ ತೀರ ನಿಷ್ಫಲವಾಯಿತು. ಎಡಪಕ್ಷದ ಸಾಹಿತ್ಯಕ್ಕೆ ಸರಕಾರದವರಿಂದ ತೀವ್ರ ವಿರೋಧ ಬಂದಿತು. ಇದರಿಂದ ಈ

ಎರಡು ವರ್ಷಗಳಲ್ಲಿ ಚೀನಾದ ಸಾಹಿತ್ಯದ ಪ್ರಗತಿ ಕುಂಠಿತವಾಯಿತು. ಈಗ ಚೀನದ ಸಾಹಿತ್ಯ ತಿರುಗಿ ತನ್ನ 'ನಾಗರಿಕ' ಸಾಹಿತ್ಯಕ್ಕೆ ಹೋಗಬೇಕಾಗಿದೆ. ಹೊಸದಾಗಿ ಸೃಷ್ಟಿಯಾಗುತ್ತಿರುವ ಸಾಹಿತ್ಯದ ಪ್ರಗತಿಮಾರ್ಗದಲ್ಲಿ ನೂರು ವಿಘ್ನಗಳು ಕಾಲಿಡಹತ್ತಿವೆ. ಇದರ ಪರಿಣಾಮವಾಗಿ, ಭಾಷಾಂತರಗಳೂ, ಸಂಗ್ರಹಗಳೂ, ಇತಿಹಾಸದ ಅಭ್ಯಾಸವೂ ಹೆಚ್ಚಾಗಿವೆ. ತರುಣ ಬರೆಹಗಾರರು ಪಾಶ್ಚಿಮಾತ್ಯರ ಅದ್ವಿತೀಯ ಕೃತಿಗಳ ಜೊತೆಗೆ ಸ್ಪರ್ಧಿಸಲು ಹೆಣಗುತ್ತಿದ್ದಾರೆ. ಮತ್ತು ಪಾಶ್ಚಾತ್ಯ ಕೃತಿಗಳು ಚೀನದ ಸ್ವತಂತ್ರ ಸಾಹಿತ್ಯದ ಪ್ರಗತಿಯನ್ನು ಕೆಡಿಸುತ್ತಲಿವೆ. ಕೇವಲ ಮನರಂಜನೆಗಾಗಿ ಓದುವ ರಸಿಕರು ಹೊಸ ಕೃತಿಗಳನ್ನು ಓದುವದಿಲ್ಲ.

ತೀರ ಕುತೂಹಲದಾಯಕವಾದ ಸಂಗತಿಯೆಂದರೆ, ಹೊಸದಾಗಿ ಎಡಪಕ್ಷದವರು ಪ್ರಾರಂಭಿಸಿದ, ಸಾಮಾನ್ಯಭಾಷೆಯ ಚಳವಳಿ. ಹಿಂದಿನ ವೆನ್-ಯೆನ್ ಭಾಷೆಯನ್ನೇ ಮತ್ತೆ ಬಳಕೆಗೆ ತರಲು ಯತ್ನ ನಡೆದಿದೆ. ಪಂಡಿತರು, ಅನಕ್ಷರಸ್ಥರಿಗೂ ಇದೇ ಭಾಷೆಯಲ್ಲಿ ತಿಳಿಸುವ ಯತ್ನ ಮಾಡುತ್ತಿದ್ದಾರೆ. ಮತ್ತು ಇದರಿಂದ ಕ್ರಾಂತಿಕಾರಕ ಸಾಹಿತ್ಯ ಬೆಳೆಯಬಹುದೆಂದು ಎಲ್ಲರ ಆಸೆ ಇದೆ. ಇದು ಬರಿಯ ಒಕ್ಕಲಿಗ ಕೂಲಿಕಾರರಿಗೆ ಬರೆದ ಸಾಹಿತ್ಯದಲ್ಲಷ್ಟೇ ಅಲ್ಲ, ಸ್ವತಃ ಅವರೇ ಸೃಷ್ಟಿಸಿದ ಸಾಹಿತ್ಯದಲ್ಲಿ ಕೂಡ ಇದು ಯಶಸ್ವಿಯಾಗಬಹುದೆಂದು ನಂಬಿದ್ದಾರೆ. ಈಗ ಬಳಕೆಯಲ್ಲಿದ್ದ 'ಪೈ-ಹೂ' ಭಾಷೆಯಲ್ಲಿ ಪಾಶ್ಚಾತ್ಯ ರೂಪಗಳೂ ಹೊಸ ಶಬ್ದಗಳೂ ತುಂಬಿ, ಸಾಮಾನ್ಯರಿಗೆ ಹಳೆಯ ವೆನ್-ಯೆನ್‌ದಷ್ಟೇ ಕ್ಲಿಷ್ಟವಾಗಿದೆ. ಇದು ಕೇವಲ ಆಧುನಿಕ ವಿದ್ಯಾವಂತರಿಗೆ ಮಾತ್ರ. ಪ್ರಾಂತಗಳ ದೇಶ್ಯಭಾಷೆಯನ್ನೂ ಉಪಯೋಗಿಸಬೇಕು. ಮತ್ತು ಮಾತನಾಡುವ ಭಾಷೆಯಲ್ಲಿಯೇ, ಓದಲು ಬರೆಯಲು ಬರಬೇಕೆಂದು ಈ ಚಳವಳಿ ನಡೆದಿದೆ.

ಯಾವ ದೇಶದ ಇತಿಹಾಸದಲ್ಲಿಯೂ, ಚೀನದ ಸಾಹಿತಿಗಳಷ್ಟು ಹೋರಾಡಿದವರು ಯಾರೂ ಇರಲಿಕ್ಕಿಲ್ಲ. ಎಡಪಕ್ಷದವರ ಉತ್ಸಾಹ ಅದ್ಭುತವಾದದ್ದು. ೧೯೩೫ರಲ್ಲಿ ಮಾಮನ್ ತಯಾರಿಸಿದ ಒಂದು ಯಾದಿಯ ಪ್ರಕಾರ ಕೆಳಗಿನ ಸಾಹಿತಿಗಳು ವಿವಿಧ ಕಷ್ಟಕ್ಕೀಡಾಗಿದ್ದಾರೆ. ಛಾ-ಶಿ:, ಹುಯೇ-

ಪಿಂಗ್, ಮಿಸ್ ಪೆಂಗ್-ಕೆಂಗ್, ಲೀ-ವೇ-ಶೆಂಗ್, ಮತ್ತು ಯಿನ್-ಫೂ ಇವರೆಲ್ಲರನ್ನೂ ಒಟ್ಟಿಗೇ ೧೯೩೧ರಲ್ಲಿ ಗಲ್ಲಿಗೇರಿಸಲಾಯಿತು. ಜೆನ್-ಶೌ-ಜೆನ್, ೧೯೨೮ರಲ್ಲಿ ಗಲ್ಲಿಗೇರಿಸಲ್ಪಟ್ಟ. ೧೯೩೧ರಲ್ಲಿ ಲೀ-ಚೂ-ಲೀ, ೧೯೩೩ರಲ್ಲಿ ಕುವಾನ್-ಚೌನ್, ೧೯೩೩ರಲ್ಲಿ ಪ್ಯಾನ್-ಟ್ಸಿ-ನಾಯಿನ್, ೧೯೩೪ರಲ್ಲಿ ಲೌ-ಶಿ-ಯೀ, ೩೫ರಲ್ಲಿ ಪಿಂಗ್-ಶಾನ್, ಹಾ:ಕ್-ಟಿನ್ ಮತ್ತು ೧೯೨೯ರಲ್ಲಿ ಪೆವ್-ಕೆಂಗ್‌ರವರು ಸೆರೆಹಿಡಿಯಲ್ಪಟ್ಟು, ಇನ್ನೂ ಅಲ್ಲಿಯೇ ಜೀವಿಸಿದ್ದಾರೆಂದು ವದಂತಿಯಿದೆ. ಅಯ್-ವು, ಮಿಸ್ ತ್ಸಾ-ಓ-ಮಿಂಗ್, ಮಿಸ್ ಟಿಂಗ್-ಲಿಂಗ್ ಇವರೆಲ್ಲರೂ ಸೆರೆಹಿಡಿಯಲ್ಪಟ್ಟು ಒಂದು ವರ್ಷದ ಮೇಲೆ ಬಿಡುಗಡೆ ಹೊಂದಿದರು. ಪ್ಯಾನ್-ಶುನ್‌ರನ್ನು ೧೯೩೪ರಲ್ಲಿ ಸೆರೆಹಿಡಿಯಲಾಯಿತು. ೧೯೩೫ರಲ್ಲಿ ಚಿನ್-ಸ್ಟಿನ್‌ದ ಕಾರಾಗ್ರಹದಲ್ಲಿ, ೯ ದಿವಸಗಳ ವರೆಗೆ ಉಪವಾಸ ಬಿದ್ದು ಮರಣ ಹೊಂದಿದರು. ಟಿಂಗ್-ಲಿಂಗ್‌ರ ಜೊತೆಗೆ ಸೆರೆಹಿಡಿದಿದ್ದ ಟಿಂಗ್-ಚು ತಪ್ಪಿಸಿಕೊಳ್ಳುವ ಸಾಹಸದಲ್ಲಿ ಕೊಲ್ಲಲ್ಪಟ್ಟರು.

ಪ್ಯಾನ್-ತ್ಸು-ನಿನ್‌ರವರನ್ನು ಗುಪ್ತವಾಗಿ ಗಲ್ಲಿಗೇರಿಸಲಾಯಿತೆಂದು ತಿಳಿದುಬಂತು. ಟ್ಸಿ-ಚಿಂಗ್-ನುಂಗ್‌ರನ್ನು ೧೯೩೩ರಲ್ಲಿ ಪೇಕಿಂಗ್‌ದಲ್ಲಿ ಗಲ್ಲಿಗೇರಿಸಲಾಯಿತು. ಮತ್ತು ಹಂಗ್-ಲಿಂಗ್-ಫೈಯುವರು ಟಿನ್‌ಸ್ಟಿನ್‌ದಲ್ಲಿ ಮರಣ ಹೊಂದಿದರು. ಪೆಂಗ್-ತ್ಸು-ದವರನ್ನು ಕಮ್ಯುನಿಸ್ಟರೆಂಬ ಆರೋಪದ ಮೇಲೆ ಕೊಲ್ಲಲಾಯಿತು. ೧೯೩೫ರಲ್ಲಿ, ಟಿನ್-ಹಾನ್, ಹ್ವಾ-ಹನ್, ಲಿಂಗ್-ಪೆಂಗ್-ಶು, ಶೂ-ಟಿ-ಶುಂಗ್ ಇವರನ್ನು ಸೆರೆಹಿಡಿಯಲಾಯಿತು. ಇವರಲ್ಲಿ ಟಿನ್-ಹಾನ್‌ರೊಬ್ಬರೇ ಬಿಡುಗಡೆ ಹೊಂದಿದರು. ಟಿಮಿನ್‌ರು ಟಿಂಗ್-ಲಿಂಗರಂತೆ ನಾನ್‌ಕಿಂಗ್‌ದಲ್ಲಿ ಕಾವಲಿನಲ್ಲಿದ್ದಾರೆ.

ಇಂಥ ಸುದ್ದಿಯನ್ನು ಚೀನದಲ್ಲಿ ದೊರಕಿಸುವದು ಕಠಿಣವಾದ್ದರಿಂದ ಈ ವರದಿ ಬಹಳ ವಿರಳವಾಗಿದೆ. ಪೋಲೀಸರ ಕೈಯಲ್ಲಿ ಸಿಕ್ಕ ನೂರಾರು ವಿದ್ಯಾರ್ಥಿಸಂಪಾದಕರೂ . ಬರೆಹಗಾರರೂ, ಎಷ್ಟೋ ಪಟ್ಟಣಗಳಲ್ಲಿ ಸೆರೆಹಿಡಿಯಲ್ಪಟ್ಟರು. ಮಿ. ಪಿ. ಸಿ. ರಾಬರ್ಟರು ತಮ್ಮ ಒಂದು ನಾಲ್ಕು ಪುಟಗಳ ಹಸ್ತಪ್ರತಿಯಲ್ಲಿ ಹೀಗೆ ಹೇಳುತ್ತಾರೆ: “ನ್ಯಾನ್‌ಕಿಂಗ್‌ದ ಸರಕಾರ ನಾಲ್ವತ್ತು ಲೇಖಕರನ್ನು ಗಲ್ಲಿಗೇರಿಸಿದಾಗ, ಅವರ ಬಗ್ಗೆ ದೇಶ ತನ್ನ ಸಹಾನುಭೂತಿಯನ್ನು ವ್ಯಕ್ತಮಾಡಿತು....ಆದರೂ ನ್ಯಾನ್‌ಕಿಂಗ್ ಸರಕಾರ

ಈ ಎರಡು ವರ್ಷಗಳಲ್ಲಿ ಗುಪ್ತವಾಗಿ ಲೇಖಕರನ್ನು ಸೆರೆಹಿಡಿಯುತ್ತದೆ. ಈ ಲೇಖಕರನ್ನು ಕೊಲ್ಲುವ ಕೆಲಸವೇನೂ ನಡೆದಿಲ್ಲ. ಆದರೆ ಲೇಖಕರು ಆಗಾಗ ಕಣ್ಮರೆಯಾಗುತ್ತಾರೆ."

ಎಡಪಕ್ಷದವರ ಸಂಘ, ಅಮೇರಿಕಾದ ಕ್ರಾಂತಿಕಾರಕ ಸಾಹಿತ್ಯ ಸಂಘಕ್ಕೆ ಕಳಿಸಿದ ವರದಿಯೊಂದರಲ್ಲಿ ಹೇಗಿದೆ: "ಶಾಂಘಾಯಿಯ ಎಡಪಕ್ಷದವರ ನೂರು ಸದಸ್ಯರಲ್ಲಿಯೇ ಇಪ್ಪತ್ತು ಸದಸ್ಯರೂ ಸೆರೆಹಿಡಿಯಲ್ಪಟ್ಟಿದ್ದಾರೆ."

ಒಂದು ಪರೀಕ್ಷೆಯಲ್ಲಿ ಲು-ಶೂನರು, ತನ್ನ ಆಪ್ತಮಿತ್ರರಾದ ಕೆಲವು ಉತ್ತಮ ಸಾಹಿತಿಗಳನ್ನು ಸೆರೆಹಿಡಿದಿದ್ದಾರೆಂದು ಹೇಳಿದರು. ಬೆದರಿಕೆ ಹಾಕಿದ್ದರಿಂದ ಎಡಪಕ್ಷದವರ ಸಂಘವನ್ನು ೧೯೩೩ರಲ್ಲಿ ವಿಸರ್ಜಿಸಲಾಯಿತು. ಈಗ ಒಂದು ವ್ಯವಸ್ಥಿತವಾದ ಸಂಘಟನೆ ಇಲ್ಲ. ಮಾ-ಟುನ್‌ರು ಒಂದು ಹೊಸ ಲೇಖಕರ ಸಂಘವನ್ನು ಸ್ಥಾಪಿಸಲು ಯತ್ನಿಸಿದರು. ಎಡಪಕ್ಷ ವಿಸರ್ಜಿಸಿದ ಮೊದಲೇ. ಅದು ತನ್ನ ಕೊಂಬೆಗಳನ್ನು ಚಿಗುರಿಸಿತು.

"ಚೀನದ ಎಲ್ಲ ಮಹತ್ವದ ಪಟ್ಟಣಗಳಲ್ಲಿಯೂ ಮತ್ತು ಟೋಕಿಯೋದಲ್ಲಿಯೂ ಕೂಡ ಎಡಪಕ್ಷ ವರ್ಧಿಸುತ್ತಿದೆ."

ಇಡೀ ಚೀನದಲ್ಲಿಯೇ ನಿಃಸಂಶಯವಾಗಿ ಲು-ಶೂನ್‌ರೇ ಅತ್ಯುತ್ತಮ ಬರೆಹಗಾರರು. ಅವರು ಬರಿಯ ಕಾದಂಬರಿಕಾರರೆಂದಾಗಲಿ, ಅಥವಾ ಸಣ್ಣ ಕತೆಗಾರರೆಂದಾಗಲಿ ಪ್ರಸಿದ್ಧರಾಗಿಲ್ಲ. ಸಾಹಿತ್ಯದ ಶ್ರೇಷ್ಠ ಮುಂದಾಳುಗಳೂ, ಉತ್ತಮ ಹರಟೆಗಾರರೂ ವಿಮರ್ಶಕರೂ ಆಗಿದ್ದಾರೆ. ವಿಮರ್ಶೆಯಲ್ಲಿ ಅವರಿಗಿದ್ದ ಸ್ಥಾನ ಹಿರಿದಾದ್ದರಿಂದ, ಅವರು ಎಡ್ಗರ ಸ್ನೋರವರ ಜೊತೆಗೆ ಮಾಡಿದ ಒಂದು ಚರ್ಚೆಯಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಕೆಳಗಿನಂತೆ ಇವೆ:

"ಮಾ-ಟುನ್, ವಿಂಗ್ ಟಿಂಗ-ಲಿಂಗ್, ಕೌ-ಮೊ-ಜೊ, ಚಾಂಗ್-ಟಿನ್-ಯಿ, ಯು-ಟಾ ಫೂ, ಶೆನ್-ತ್ಸುಂಗ್-ವೆನ್, ಟಿನ್-ಚುನ್, ಇವರು, ಆಧುನಿಕ ಸಾಹಿತ್ಯ ಸುರುವಾದಂದಿನಿಂದ ಉತ್ತಮ ಬರೆಹಗಾರರು. ಇವರಲ್ಲಿ ಉತ್ಕೃಷ್ಟ ಕಾದಂಬರಿಕಾರರೂ, ಕತೆಗಾರರೂ ಇದ್ದಾರೆ. ಮಹತ್ವದ ಕಾದಂಬರಿಕಾರ ಇನ್ನೂ ಹುಟ್ಟಿಯೇ ಇಲ್ಲ. ಶೆನ್-ತ್ಸುಂಗ್-ವೆನ್, ಯು-ಟಾ-ಫೂ, ಲಾ-ಓ-ಶೇ ಇವರ ಕಾದಂಬರಿಗಳು

ರೂಪವಲ್ಲಿ ಸೀಳ್ಗತೆಗಳು. ಲೇಖಕರು ಸಣ್ಣಕತೆಗೇ ಹೆಚ್ಚು ಮಾರುಹೋಗಿದ್ದಾರೆ ಮತ್ತು ಅವರಿಂದಲೇ ಸ್ಫೂರ್ತಿ ಪಡೆದಿದ್ದಾರೆ.

ಚೀನದಲ್ಲಿ ಸಣ್ಣಕತೆಗಿದ್ದ ಮಹತ್ವ ಮತ್ತಾವುದಕ್ಕೂ ಇಲ್ಲ. ತಂತ್ರ, ಶೈಲಿ, ವಿಚಾರ ಮತ್ತು ಇನ್ನಾವ ವಿಷಯದಲ್ಲಿ ನೋಡಿದರೂ ಸಣ್ಣಕತೆ ಚೀನದ ಸಂಪ್ರದಾಯಕ್ಕೇ ಹೊಸದೆನಿಸಿತು. ನಾಟಕ ಮಾತ್ರ ತನ್ನ ತಂತ್ರವನ್ನು ಪ್ರಾಚೀನ ಸಂಪ್ರದಾಯದಿಂದ ಕಡ ತೆಗೆದುಕೊಂಡಿತು. ಕೌ-ಮೊ-ಜೊ ಟಿಯೆನ್-ಹನ್, ಹಂಗ್-ಶೆನ್ ಇವರು ನಾಟಕಕಾರರಲ್ಲಿ ಶ್ರೇಷ್ಠರಾದವರು.

ಕಾವ್ಯದಲ್ಲಿ ಪಿಂಗ್-ಶಿನ್, ಕೌ-ಮೊ-ಜೊ, ಮತ್ತು ಹು-ಶಿ ಇವರು ಉತ್ತಮರು. ಅವರೂ ಚೀನದ ಆಧುನಿಕ ಕಾವ್ಯದಲ್ಲಿ ಪ್ರಾಯೋಗಿಕ ಮಹತ್ವವೇನೂ ಇಲ್ಲ. ಇಷ್ಟರ ಮಟ್ಟಿಗೆ ಆಧುನಿಕ ಕಾವ್ಯ ಯಶಸ್ವಿಯಾಗಿಲ್ಲ. ಪ್ರಬಂಧದಲ್ಲಿ ಮಾತ್ರ ನಾವು ಮುಂದರಿದಿದ್ದೇವೆ. ಚಾ-ತ್ಸೊ-ಜೆನ್, ಲಿನ್-ಯು-ಟಾಂಗ್, ಚೆನ್-ಟು-ಶಿ, ಮತ್ತು ಲಿಯಾಂಗ್-ಚಿ-ಚಾ-ಓ. ಇವರು ಒಳ್ಳೆಯ ಹರಟೆಗಾರರು.

ನಮ್ಮ ಉತ್ತಮ ಬರಹಗಾರರೆಲ್ಲ ನಿಸ್ಸಂಶಯವಾಗಿ ಎಡಪಕ್ಷದವರೇ. ಬುದ್ಧಿಶಕ್ತಿಯನ್ನು ಅರಳಿಸಿ ಚೇತನವೀಯಬಲ್ಲ ಶಕ್ತಿ ಅವರ ಸಾಹಿತ್ಯಕೃಷ್ಟೀ ಇದೆ. ಮಾ: ಟುನ್, ಪಿಂಗ್-ಲಿಂಗ್, ಶಾ-ಟಿಂಗ್, ಚಾ-ಲಿ, ಕೌ-ಮೊ-ಜೊ, ಚಾಂಗ್-ಟಿನ್-ಯಿ, ಟಿನ್-ಚುನ್, ಯೇ-ತ್ಸು, ಲಿಯನ್-ವು ಮತ್ತು ಚಾ-ವೆನ್ ಇವರು ಎಡಪಕ್ಷದ ಉತ್ತಮ ಸಾಹಿತಿಗಳು. ಟಿನ-ಚುನ್ನರ ಹೆಂಡತಿಯಾದ, ಶಿಯೊ-ಹುಂಗ್, ಟಿಂಗ್-ಲಿಂಗರ ಜೊತೆಗೆ ಬರಬಲ್ಲ ಸ್ತ್ರೀಸಾಹಿತಿ ಎಂದು ಹೇಳಬಹುದು.

ಚೀನದಲ್ಲಿ, ಮಧ್ಯಮ ವರ್ಗದ ರಾಜಕೀಯ ಸ್ವಾತಂತ್ರ್ಯ ಎಷ್ಟು ಅಸಾಧ್ಯವೋ ಅಷ್ಟೆ ಮಧ್ಯಮ ವರ್ಗದವರ ಸಾಹಿತ್ಯವೂ ಅಸಾಧ್ಯ. ಅದಕ್ಕೆ ವೇಳೆಯಾಗಲಿ, ಅರಿಸಿಕೊಳ್ಳುವ ವಿಷಯವಾಗಲಿ ಇಲ್ಲ. ನಮಗೆ ಸಾಧ್ಯವಾದ ಸಂಸ್ಕೃತಿ ಎಂದರೆ, ಎಡಪಕ್ಷದವರ ಕ್ರಾಂತಿಕಾರಕ ಸಂಸ್ಕೃತಿಯೇ. ಇಲ್ಲವೇ ಸಾಮ್ರಾಜ್ಯಸತ್ತೆಗೆ ನಾವು ಮತ್ತೆ ತಲೆಯೊಡ್ಡಬೇಕಾದೀತು. ಆದರೆ ಅದು ನಮ್ಮ ರಾಷ್ಟ್ರೀಯ ಸಂಸ್ಕೃತಿಯಾಗಲಾರದು. “ಉಳಿದ ದೇಶಗಳಲ್ಲಿ ವಿಮಾನಗಳನ್ನು ಉಪಯೋಗಿಸುತ್ತಿದ್ದಾರೆ. ಚೀನದಲ್ಲಿ ಉಗಿ ಬಂಡಿಗಳನ್ನು ಕೂಡ, ಸಾಹಿತ್ಯದಲ್ಲಿಯೇ ಆಗಲಿ ಜೀವನದಲ್ಲಿಯೇ ಆಗಲಿ ಉಪಯೋಗಿಸಲು ಸಾಧ್ಯವಿಲ್ಲ. ಜಗತ್ತಿನ ನಾಟಕದಲ್ಲಿ ತೀರ ಮಹತ್ವದ ಸಂಗತಿಗೇ ನಾವು ಜಿಗಿಯಬೇಕಾಗಿದೆ.”

ಮೊದಲಿನ ಸಾಮ್ರಾಜ್ಯವಾದದ ವಿಚಾರಗಳನ್ನು ಬಿಟ್ಟು ಚೀನವು ಒಮ್ಮೆಲೇ ಕೆಳಗಿನ ವರ್ಗದ ಉದ್ಧಾರದ ವಿಚಾರಕ್ಕೆ ಒಮ್ಮೆಲೇ ಜಿಗಿದದ್ದರಿಂದಲೇ ಸಾಹಿತ್ಯದ ತಳಹದಿ ಭದ್ರವಾಗಿಲ್ಲ. ಈ ದೃಷ್ಟಿಯಲ್ಲಿ ಚೀನೀ ಸಾಹಿತ್ಯ ಅದ್ವಿತೀಯವಾಗಿದೆ. ಸಾಹಿತ್ಯದ ಪ್ರಾರಂಭವಾದಾಗಲೆ ಎಡಪಕ್ಷಕ್ಕೆ ಪುನರ್ಜನ್ಮದ ಒಲವು ತೋರುತ್ತಿತ್ತು. ಮಧ್ಯಮ

ವರ್ಗದವರಲ್ಲಿ ಯಾರೂ ಉತ್ತಮ ಲೇಖಕರಿಲ್ಲ. ಲಿನ್-ಯು-ಟಾಂಗ್ ಕೂಡ ಆ ವರ್ಗಕ್ಕೆ ಸೇರಿದವರಲ್ಲ. ಅವರು, ಪ್ರಾಚೀನ ವೈಭವಯುಗದ ವಿಚಾರದ ಹಿನ್ನೆಲೆಯಲ್ಲಿಯೇ ಬೆಳದು ಬಂದವರು. ಮಧ್ಯಮ ವರ್ಗದ ವಿಚಾರಗಳನ್ನು ಅವರು ಟೀಕಿಸುತ್ತಾರೆ. ಪಿಂಗ್ ಶಿನ್ ಕೂಡ ಆ ಜಾತಿಗೆ ಸೇರಿದವರಲ್ಲ.

ಅದೇ ಹೊತ್ತಿಗೆ, ಕೆಳವರ್ಗದವರಲ್ಲಿಯೂ ಯಾವ ಬೆಲೆಯುಳ್ಳ ಬರೆಹಗಾರ ಇನ್ನೂ ಹುಟ್ಟಿಲ್ಲ. ಎಡಪಕ್ಷದವರ ಸಾಹಿತ್ಯವೂ ಕೂಡ ಕ್ರಾಂತಿಕಾರಕ ವಿದ್ವಾಂಸರಿಗೆ ಮಾತ್ರ ಮೀಸಲು ”

ಆದರೆ ಲು-ಶೂನರನ್ನು ಬಿಟ್ಟರೆ ಬೇರೆ ವಿಮರ್ಶಕರು ಹೇಳುವ ಆಧುನಿಕ ಲೇಖಕರು ಇನ್ನೂ ಇದ್ದಾರೆ. ಲಾ-ಓ-ಶೇ, ಪಾ-ಚಿನ್, ವ್ಯಾಂಗ್-ಟುಂಗ್-ಚಾ, ಮತ್ತು ಕವಿ ಶೂ-ಟಿ-ಮೋ, ಮಾ-ಟುನ್, ಮತ್ತು ಶೆನ್-ತ್ಸುಂಗ್-ವೆನ್ ಇವರು ಚೀನದ ಶ್ರೇಷ್ಠ ಕಾದಂಬರಿಕಾರರೆಂದು ಗಣ್ಯರಾಗಿದ್ದಾರೆ. ನಾಟಕ ಕೆಲವು ದಿನಗಳ ವರೆಗೆ ಏಳಿಗೆಯಲ್ಲಿದ್ದು, ಈಗ ಸೆನ್ಸಾರದ ಕೈಯಲ್ಲಿ ಸಿಕ್ಕು ದಿನೇದಿನೆ ಗತಿಗೆಡುತ್ತಲಿದೆ. ಟಿನ್-ಹನ್- ಮೊದಲಾದ ಎಡಪಕ್ಷದ ನಾಟಕಕಾರರು, ಉತ್ಕೃಷ್ಟವಾದ ದೃಶ್ಯಕಾವ್ಯಗಳನ್ನು ಬರೆದು ಆಡಿದರು. ಆದರೆ ಅಧಿಕಾರಿಗಳು ಅದರ ವಿರುದ್ಧ ಕ್ರಮ ತೆಗೆದುಕೊಂಡರು. ಅವರಿಂದ ಚೀನೀ ನಾಟಕರಂಗವೆಲ್ಲ ಸೌಂದರ್ಯವನ್ನು ಕೆಲಮಟ್ಟಿಗಾದರೂ ಕಳೆದುಕೊಂಡಿತು.

“ ಚೀನದ ಬಾಳು—ಬದುಕು ” ಇದು ಚೀನದ ಸಣ್ಣ ಕತೆಗಳ ಮೊದಲನೆಯ ಒಳ್ಳೆಯ ಸಂಗ್ರಹ. ಲು-ಶೂನ್ ಮಾ-ಟುನ್, ಟಿಂಗ್-ಲಿಂಗ್, ಶೆನ್-ತ್ಸುಂಗ್-ವೆನ್, ಯು-ಟಾ-ಫೂ ಕೌ-ಮೊ-ಜೊ, ಚಾಂಗ್-ಟಿಯಿನ್-ಯೀ, ಜೌ-ಶಿ:, ಪಾ-ಚಿನ್, ಮು-ಶಿ:ಯಿಂಗ್, ಇದಲ್ಲದೆ ತೀರ ಇತ್ತೀಚಿನ ಬರೆಹಗಾರರಾದ ಮಿಸ್ ಶಿ:ಮಿಂಗ್, ಶಾ-ಟಿಂಗ್, ಟೇನ್-ಚುನ್. ಸುನ್-ಚಿನ್ ಮತ್ತು ಶಿಯೊ-ಚಿನ್, ಇವರೆಲ್ಲರೂ ಚೀನದ ಸಣ್ಣಕತೆಗೆ ರೂಪಕೊಟ್ಟು ಅದನ್ನು ಬೆಳೆಸಿದವರು. ಇವರೆಲ್ಲರ ಕತೆಗಳು ಈ ಸಂಗ್ರಹದಲ್ಲಿ ಬಂದಿವೆ. ಸ್ಥಳಾಭಾವದ ಮೂಲಕ ಕತೆ ಕಳಿಸಿದವರೆಲ್ಲರ ಕತೆಗಳನ್ನೂ ಹಾಕುವದಾಗಲಿಲ್ಲ. ಆದ್ದರಿಂದಲೇ, ಲಾ-ಓ-ಶೇ, ವ್ಯಾಂಗ್-ಟುಂಗ್-ಚಾ, ಮತ್ತು ಚಾಂಗ್-ತ್ಸು-ಪಿಂಗ್, ಇವರ ಉತ್ತಮಕತೆಗಳು ದೀರ್ಘವಾದ್ದರಿಂದ ಹಾಕುವದಾಗಲಿಲ್ಲ.

ಚೀನದ ಎಲ್ಲ ಸಾಹಿತಿಗಳು, ಎಲ್ಲ ರೂಪಗಳನ್ನೂ ಪ್ರಯತ್ನಿಸುತ್ತಾರೆ. ಇದು ಅವರಿಗೆ ಬಹುಮುಖ ಪ್ರತಿಭೆ ಇರುತ್ತದೆಂದಲ್ಲ; ಒಮ್ಮೊಮ್ಮೆ ಯಶ ದೊರಕದ್ದರಿಂದ, ಹಣದ ಕೊರತೆಯ ಮೂಲಕ ಅವರಿಗೆ ಒಂದೇ ರೂಪದ ತಂತ್ರವನ್ನು ಅಭ್ಯಾಸ ಮಾಡಿ ಬರೆಯಲಾಗುವದಿಲ್ಲ. ಯಾವ ಒಂದು ಗೊತ್ತುಗುರಿಯಿಲ್ಲದ್ದರಿಂದ ಸಾಹಿತ್ಯ ಬಹುವಾಗಿ ಕುಂದುತ್ತಲಿದೆ. ಸಣ್ಣ ಕತೆ, ಕಾವ್ಯ, ಕಾದಂಬರಿ ಇವುಗಳಲ್ಲಷ್ಟೇ ಅಲ್ಲದೆ, ಪತ್ರಿಕಾಸಾಹಿತ್ಯ, ಭಾಷಾಂತರ, ಹರಟೆ ಇವುಗಳಲ್ಲಿಯೂ ಅವರು ತಮ್ಮ ಬುದ್ಧಿಯನ್ನು ಓಡಿಸುತ್ತಾರೆ. ರಶಿಯಾದ ದೀರ್ಘ ಕಾದಂಬರಿಗಳಂತೆ ಚೀನದಲ್ಲಿ, ಯಾವ ಚಿರಸ್ಥಾಯಿಯಾದ ಕೃತಿಯೂ ಆಗಿಲ್ಲವೆಂಬುದಕ್ಕೆ ಇದೂ ಒಂದು ಕಾರಣ. ರಶಿಯಾದ ಶ್ರೇಷ್ಠ ಕೃತಿಗಳನ್ನು ಸ್ಫೂರ್ತಿಗೊಳಿಸಿದ ವಾತಾವರಣ ಚೀನದಲ್ಲಿಯೂ ಇದೆ.

ಇಂದಿಗೂ ಚೀನೀ ಭಾಷೆಯಲ್ಲಿ 'ಕಾದಂಬರಿಗೆ' ಶಬ್ದವಿಲ್ಲ. "ಶಿಯೊ-ಶುವೊ" ಎಂದರೆ ನಿಜವಾಗಿಯೂ, ಸಂವಾದ. ಇದನ್ನೇ ಕಾದಂಬರಿಗೂ, ಸಣ್ಣಕತೆಗೂ, ನೀಳ್ಗತೆಗೂ ಉಪಯೋಗಿಸುತ್ತಾರೆ. ಅವುಗಳಲ್ಲಿ ಸ್ಪಷ್ಟವಾದ ಭೇದವಿಲ್ಲವೆಂದು ಈ ಶಬ್ದದ ಉಪಯೋಗವೇ ತೋರಿಸುತ್ತದೆ. "ಚಾಂಗ್. ಪೈನ್-ಶಿಯೊ-ಶುವೊ," ಇದನ್ನು ನೀಳ್ಗತೆಗೋ ಕಾದಂಬರಿಗೋ, ಮತ್ತು "ಟುವನ್-ಪೈನ್ ಶಿಯೊ-ಶುವೊ" ಇದನ್ನು ಸಣ್ಣಕತೆಗೂ ಇತ್ತೀಚಿಗೆ ಉಪಯೋಗಿಸುತ್ತಾರೆ. ಆದರೆ ಇವೂ ಅಸ್ಪಷ್ಟವಾಗಿವೆ. ಕಾದಂಬರಿಯಾಗಲಿ, ಸಣ್ಣಕತೆಯಾಗಲಿ, ಚೀನದಲ್ಲಿ ವಿಶಿಷ್ಟ ಕಲೆಯೆಂದು ತಿಳಿಯಲ್ಪಡುವದಿಲ್ಲ. ಚೀನಿ ಲೇಖಕರ ಕೃತಿಗಳಿಗೆ ರೂಪವಿರುವದಿಲ್ಲ. ಸಣ್ಣಕತೆಯಲ್ಲಿಯೂ, ಕಾದಂಬರಿಯಲ್ಲಿಯೂ ಕಥಾಸಂವಿಧಾನದ ಕಡೆಗೆ ಲಕ್ಷ್ಯವನ್ನೇ ಕೊಡುವದಿಲ್ಲ. ಎಷ್ಟೊ "ಶಿಯೊ-ಶುವೊಗಳು" ಹರಟೆಯಾಗಲಿ, ಸಂವಾದಗಳಾಗಲಿ ಆಗಿ ಉಳಿದಿವೆ. ಮತ್ತು ಎಷ್ಟೋ ಹರಟೆಗಳಲ್ಲಿ, ಕಥಾಭಾಗವೂ ಇರುತ್ತದೆ. ಲು-ಶೂನ್ನರ ಕೆಲವು ಹರಟೆಗಳು ಹೀಗಿವೆ: ಸಂಭಾಷಣೆಯನ್ನು ಕೆಲವು ಕಡೆಗೆ ಎಳೆದು ತಂದಾದರೂ ಹಾಕುತ್ತಾರೆ.

ಆಧುನಿಕ ಸಣ್ಣಕತೆ ಚೀನಕ್ಕೇ ಹೊಸದು. ಅದು ರಶಿಯಾದಿಂದ

ಬಂದದ್ದು. ಫ್ರೆಂಚ ಸಾಹಿತ್ಯದ ಪರಿಣಾಮವೂ ಸಾಕಷ್ಟಾಗಿದೆ. ಇಂಗ್ಲಿಷ ಸಾಹಿತ್ಯವನ್ನು ಕುತೂಹಲಕ್ಕಾಗಿ ಓದುತ್ತಾರೆ. ಆದರೆ ಆ ಸಾಹಿತ್ಯ, ಚೀನೀ ಮನಸ್ಥಿತಿಗೆ, ರೀತಿಗೆ ಹೊಸದು. ರಾಜಕೀಯ ಕಾರಣಗಳ ಮೂಲಕ ಎಷ್ಟೇ ವಿಘ್ನಗಳು ಬಂದಿದ್ದರೂ, ಚೀನ-ಜಪಾನಗಳ ಮೇಲೆ ರಶಿಯಾದ ಪ್ರಭಾವ ಆಳವಾಗಿದೆ. ಇದಕ್ಕೆ ಕೆಲವು ಕಾರಣಗಳಿದ್ದರೂ, ಮುಖ್ಯವಾದದ್ದೆಂದರೆ, ಎರಡು ದೇಶಗಳಲ್ಲಿಯೂ ನಡೆದ ಒಂದೇ ರೀತಿಯ ಕ್ರಾಂತಿ, ಹೊಸ ಸಾಹಿತ್ಯದ ಆರಂಭದೊಡನೆಯೇ, ರಶಿಯಾ, ಚೀನದ ಹೃದಯವನ್ನು ತನ್ನೆಡೆಗೆ ಸೆಳೆದುಕೊಂಡಿದೆ.

ಚೀನೀ ಸಾಹಿತ್ಯದ ಮೇಲೆ, ರಶಿಯಾದ ಪ್ರಭಾವ ಜಪಾನೀ ಭಾಷಾಂತರಗಳ ಮೂಲಕ ಬಂದಿದೆ. ಆಧುನಿಕ ಕಲೆ ಅದೇ ಕಾಲುವೆಯಿಂದ ಚೀನಕ್ಕೆ ಹರಿದು ಬಂದದ್ದು. ರಶಿಯಾದ ಸಾಹಿತಿಗಳೂ ಮತ್ತು ಕಮ್ಯುನಿಸ್ಟ್ ಪದ್ಧತಿಯೂ ಇದೇ ಮಾರ್ಗವಾಗಿ ಬಂದಿದೆ. ಕ್ರಾಂತಿಪೂರ್ವದ ರಶಿಯನ್ ಸಾಹಿತ್ಯ ಮಾತ್ರ ಇಂಗ್ಲೀಷಿನಿಂದ ಬಂದಿದೆ. ಮೊದಲಿನ ಕ್ರಿಯೇಶನಿಸ್ಟರೂ ಮತ್ತು ಆಧುನಿಕ ಜಪಾನೀ ಕಾವ್ಯವನ್ನು ಬಳಕೆಗೆ ತಂದ ಚೌ-ತ್ಸೊ-ಜೆನ್ ಇವರೂ ಜಪಾನವನ್ನೇ ಪಾಶ್ಚಾತ್ಯ ವಿದ್ಯಾಭ್ಯಾಸಕ್ಕೆ ಶಾಲೆಯನ್ನಾಗಿ ಮಾಡಿಕೊಂಡರು. ಪ್ರತ್ಯಕ್ಷ ಅಭ್ಯಾಸಕ್ಕೆ ಇದ್ದ ತೊಂದರೆಯೂ, ಮತ್ತು ಜಪಾನೀಯಿಂದ ಚೀನಿ ಭಾಷೆಗೆ ಪರಿವರ್ತನೆಯ ಸೌಲಭ್ಯವೂ ಇದಕ್ಕೆ ಕಾರಣಗಳು. ರಶಿಯನ್ ಭಾಷೆಯಿಂದಲೆ ಅನುವಾದಿಸಿದವರು ತೀರ ವಿರಳ. ಹಾಗೆ ಮಾಡಿದವರಲ್ಲಿ ಕೆಲವರು ಮರಣದಂಡನೆಗೂ ಗುರಿಯಾಗಿದ್ದಾರೆ. ಚಿಯಾಂಗ್-ಕುಂತಾಂಗ್-ಟ್ಸು, ಉತ್ಕೃಷ್ಟ ಅನುವಾದಕನಾಗಿದ್ದ. ಕಮ್ಯುನಿಸ್ಟ ಪಾರ್ಟಿಯವರು ಇವನನ್ನು ಬಹಿಷ್ಕರಿಸಿದ್ದರಿಂದ ಶಾಂಘಾಯಿಯಲ್ಲಿ ಎದೆಯೊಡೆದು ತೀರಿಕೊಂಡ. ಚೀನದ ಡೆಮಿಯನ್ ಬೆಡ್ನಿ ಮತ್ತು ಮಾಯಕೊವ್ಸ್ಕಿ ಎಂದು ತನ್ನನ್ನು ಕರೆದುಕೊಂಡ. ಇವನಿಗೆ ರಸಿಯಾದ 'ಭವಿಷ್ಯವಾದ' ಬಹಳ ಹಿಡಿದಿತ್ತು. ೧೯೨೭-೨೮ರ ಕ್ರಾಂತಿ ಕಾಲವಲ್ಲಿ ಇವನೇ ಎಲ್ಲರ ಕಣ್ಣಮಣಿಯಾಗಿದ್ದಾಗ, ಚೀನಕ್ಕೆ ರಶಿಯದ ಹುಚ್ಚು ಹಿಡಿದಿತ್ತು. ಕೆಲವು ಲೇಖಕರು ತಮ್ಮ ಖ್ಯಾತಿಯನ್ನುಳಿಸಿಕೊಳ್ಳಲು,

ರಶಿಯನ್ ಕಾವ್ಯನಾಮಗಳನ್ನಿಟ್ಟುಕೊಂಡರು. ‘ ಸಣ್ಣಕತೆ ’ಯ ಸಂಪಾದಕನಾದ ಕೆಂಗ್-ಚಿ ಇನ್ನೊಬ್ಬ ರಶಿಯನ್ ಅನುವಾದಕ.

‘ ಪೈ-ಹುವಾ ’ ಸಾಹಿತ್ಯಕ್ರಾಂತಿ ಪ್ರಾರಂಭವಾಗುವ ಮುನ್ನ ವೆನ್-ಯೆನ್ ಭಾಷೆಯಲ್ಲಿಯೇ, ಯು-ಟಾ-ಫು ಮೊದಲಾದವರು, ೧೯ನೆಯ ಶತಮಾನದ ಪಾಶ್ಚಾತ್ಯ ತತ್ವಜ್ಞಾನ ಮತ್ತು ವಿಜ್ಞಾನದ ಲೇಖಕರ ಕೃತಿಗಳು ಚೀನಕ್ಕೆ ಬಂದವು. ಆಡ್ಯಾಮ್‌ಸ್ಮಿಥ್, ಮಿಲ್, ಮತ್ತು ಹಕ್ಸ್ಲಿ ಇವರು ಬಂದರು. ಇಂಗ್ಲಿಷ ಭಾಷೆಯ ಗಂಧವನ್ನೂ ಅರಿಯದ ಲಿನ್-ಶುರವರು, ವೆನ್-ಯೆನ್ ಭಾಷೆಯಲ್ಲಿ ೧೩೨ ಇಂಗ್ಲಿಷ್ ಪುಸ್ತಕಗಳನ್ನು ಭಾಷಾಂತರಿಸಿದರು ! ಅವರಿಗೆ ನೆರವಾದ ಲೆಯ್-ಯೀ ಇಂಗ್ಲೀಷ ಗ್ರಂಥಗಳನ್ನು ಅವರಿಗೆ ಪೈ-ಹುವಾ ಭಾಷೆಯಲ್ಲಿ ತರುತ್ತಿದ್ದರು. ಇವರಿಬ್ಬರೂ, ಟಾಲ್-ಸ್ಟಾಯ್ ಸ್ಕಾಟ್, ಕಾನನ್‌ಡಾಯಿಲ್, ಡೂಮಾ, ಡಿಕೆನ್ಸ್, ರಾಯ್‌ಡರ್ ಹ್ಯಾಗರ್ಡ್, ಶೇಕ್ಸಪಿಯರ್, ಕ್ಯಾರ್ವಂಟೀಸ್, ಡೀಫೋ, ಸ್ವಿಫ್ಟ್ ಮತ್ತು ಲ್ಯಾಮರ ಕೃತಿಗಳನ್ನು ಅನುವಾದಿಸಿದರು. ಅಮೇರಿಕಾದಿಂದ ಮಾತ್ರ, ಕೇವಲ ‘Uncle Tom’s Cabin’ಒಂದನ್ನೇ ಆರಿಸಿದರು.

ಮೇ ನಾಲ್ಕರ ಚಳುವಳಿಯ ನಂತರ, ರಶಿಯನ್ ಸಾಹಿತ್ಯದ ಅನುವಾದ ರಭಸದಿಂದ ನಡೆಯಿತು. ಲೋಕಪ್ರಿಯ ರಶಿಯನ್ ಸಾಹಿತಿಗಳೆಲ್ಲ ಚೀನಕ್ಕೆ ಬಂದರು. ಎಲ್ಲರಿಗಿಂತ ಹೆಚ್ಚಾಗಿ,ಟಾಲ್‌ಸ್ಟಾಯ್ ಚೀನೀ ಸಾಹಿತ್ಯದ ಮೇಲೆ ಅದ್ಭುತ ಪ್ರಭಾವವನ್ನು ಬೀರಿದ್ದಾರೆ. ಇದಕ್ಕೆ ಕಾರಣ, ಅವರ ಶೈಲಿಯ ಮೋಹಕತೆ, ಮತ್ತು ಅವರ ಸಾಹಿತ್ಯ ಚೀನದ ತೊಡಕುಗಳನ್ನು ಸುಲಭವಾಗಿ ಬಿಡಿಸುತ್ತಿದೆ. ಚೀನದ ಸಮಾಜದ ಹೃದಯಕ್ಕೆ, ಅವರ ಒಕ್ಕಲಿಗರ ಜೀವನದ ಕಾವ್ಯ ಮತ್ತು ಶಾಂತಿಯ ಸಂದೇಶ ಸುಲಭವಾಗಿ ಹೊಂದುತ್ತಿದೆ. ಲಿನ್-ಶುರವರು ಟಾಲ್‌ಸ್ಟಾಯರ ಕೃತಿಗಳನ್ನು ವೆನ್-ಯೆನ್ ಭಾಷೆಯಲ್ಲಿ ಅನುವಾದಿಸಿದರು. ಅಂದಿನಿಂದ ಅವರ ಕೃತಿಗಳು ಅಮರವಾದ ಲೋಕಪ್ರಿಯತೆಯನ್ನು ಪಡೆದಿವೆ. ರೈತರ ಕ್ರಾಂತಿ, ಚೀನದ ನಾಟಕೀಯ ವಿಷಯಗಳಲ್ಲಿ ಒಂದು. ಎಷ್ಟೋ ಲೇಖಕರು, ನಗರದ ಕೂಲಿಕಾರರ ಜೀವನವನ್ನು ಬಿಟ್ಟು, ಇದನ್ನೇ ತಮ್ಮ ವಿಷಯವನ್ನಾಗಿ ಆರಿಸಿಕೊಂಡಿದ್ದಾರೆ.

೧೯೨೭ರ ವರೆಗೆ ಗಾರ್ಕಿ ತನ್ನ ತತ್ವದ ಸಲುವಾಗಿ, ಚೀನಕ್ಕೆ ತಿಳಿಯಲೇ ಇಲ್ಲ. ಆದರೆ ಅವನ 'ಮದರ್' ಪ್ರಕಟವಾದಂದಿನಿಂದ ಚೀನದಲ್ಲಿ ಅವನೂ ಖ್ಯಾತಿಯನ್ನು ಪಡೆದಿದ್ದಾನೆ. ಟರ್ಗೇನಿವ್ಹ್, ಟಾಲ್‌ಸ್ಟಾಯ್‌ರ ನಂತರ, ಚೀನೀ ಸಾಹಿತ್ಯದ ಮೇಲೆ ಬಹಳ ಪರಿಣಾಮ ಮಾಡಿದವನು. ಮೂರನೆಯವ ಆರ್ಟ್ಸಿಬ್ಯಾಶೆವ್ಹ್ ಮತ್ತು ನಾಲ್ಕನೆಯವ ಚಕಾವ್ಹ್. ಇದಲ್ಲದೆ ಗಾರ್ಕಿ, ಡೊಸ್ಟೊವ್ಹಸ್ಕಿ, ಪುಸ್ಕಿನ್, ಗೊಗೊಲ್, ಆ್ಯಂಡ್ರೆಯೆವ್ಹ್, ಬುನಿನ್, ಆಸ್ಟ್ರೊವ್ಹಸ್ಕಿ, ಆರಾಶೆಂಕೊ, ಸೆಮೊನಿಯುಫ್, ಬ್ಲಾಕ್, ಲುಪ್‌ಸ್ಕಿನ್, ಮತ್ತು ಕೊರೊಲೆಂಕೊ ಇವರು ಪ್ರಸಿದ್ಧರಾಗಿದ್ದಾರೆ.

ಕಮ್ಯುನಿಸ್ಟ ಚಳವಳಿ ಜೋರಾದಂದಿನಿಂದ, ಚೀನದವರು ಆಧುನಿಕ ರಶಿಯನ್ ಸಾಹಿತ್ಯವನ್ನು ಹೆಚ್ಚುಹೆಚ್ಚಾಗಿ ಬೇಡಹತ್ತಿದ್ದಾರೆ. ಇವುಗಳಿಗೆ ಪ್ರತಿಬಂಧವಿದ್ದರೂ, ತಮ್ಮ ತಮ್ಮಲ್ಲಿಯೇ ಹಸ್ತಲಿಖಿತ ಪತ್ರಿಕೆಗಳಲ್ಲಿ ಜನರು ಓದುತ್ತಾರೆ. ಆಗ್ನಿಯೊವ್ಹ್‌ನ, 'ಕಮ್ಯುನಿಸ್ಟ ಹುಡುಗನ ದಿನಚರಿ' ಮತ್ತು ಮ್ಯಾಡಾಮ್ ಕೊಲೊಂಟಾಯರ್ 'ಅನುರಾಗ' ಇವೆರಡೂ ತೀರ ಪ್ರಿಯುವಾಗಿವೆ. ಇದಲ್ಲದೆ ಇವ್ಹಾನೊವ್ಹ್‌ನ ಮತ್ತು ಪಿಲ್‌ನ್ಯಾಕರ ಕೃತಿಗಳೂ, ಮತ್ತು ಗ್ಲಾಡ್‌ಕಾವ್ಹನ 'ಸಿಮೆಂಟ್' ಕಾದಂಬರಿಯೂ ಪ್ರಸಿದ್ಧವಾಗಿವೆ. ಎಡಪಕ್ಷದವರ ಸಾಹಿತ್ಯಕ್ರಾಂತಿಯ ಕಾಲದಲ್ಲಿ ಸುಮಾರು ನೂರು ರಶಿಯನ್ ಪುಸ್ತಕಗಳು ಅನುವಾದಿತವಾದವು.

ರಶಿಯನ್ ಸಾಹಿತ್ಯ ನಂತರ ಫ್ರೆಂಚ್ ಸಾಹಿತ್ಯವು ಅದ್ಭುತ ಪ್ರಭಾವವನ್ನು ಬೀರಿದೆ. ಫ್ಲಾಬೆರ್, ಮತ್ತು ಮೋಪಸಾಂತರು ಲೋಕಪ್ರಿಯರಾಗಿದ್ದಾರೆ. ಇವಲ್ಲದೆ, ಝೋಲಾ, ರೂಸೋ, ವ್ಹಿಕ್ಟರ್‌ಹ್ಯೂಗೋ, ಡ್ಯೂಮಾರಿಯರ್, ಡಾಡೆಟ್, ವಾಲ್ಟೇರ್, ಗೌರ್ಮಾಂಡ್, ಮಾಂಟೇನ್, ಮೆರಿಮೀ, ಮೂಸೀ, ಮಿರಾಬೂ, ಸೆಂಟ್‌ಬ್ಯೂನ್, ವ್ಹರ್ಟಿಲ್ಯಾಕ್, ಲೋಚೀ, ಗಾಯರ್ ಇವರು ಪ್ರಸಿದ್ಧರಾಗಿದ್ದಾರೆ. ಪ್ರೊ. ವ್ಹಾಸ್ಟರ, ಮಾನನ್‌ಲೆಸ್ಕೊ, ಮತ್ತು ಡೂಮಾನ ಲಡೇಮ ಆ ಕ್ಯಾಮೆಲಿಸ್ ಇವೆರಡೂ ಪ್ರಿಯವಾದ ಪುಸ್ತಕಗಳು. ರೋಮಾ ರೋಲಾ, ಹೆನ್ರಿ ಬಾರ್ಬೂ, ಮತ್ತು ಆಂದ್ರೆ ಗಾಯಿಡ್ ಇವರನ್ನು ಚೀನೀಯರು ಬಹುವಾಗಿ ಹೊಗಳುತ್ತಾರೆ.

ಟೆನ್-ಹನ್‌ನಿಂದ ಖ್ಯಾತಿಗೆ ಬಂದ ಇಬ್ಸೆನ್, ನಾಟಕಗಳ ಮೇಲೆ ಅತ್ಯದ್ಭುತವಾದ ಪರಿಣಾಮವನ್ನುಂಟುಮಾಡಿದ್ದಾನೆ. ರವೀಂದ್ರನಾಥರು ಕಾವ್ಯದಲ್ಲಿ ಬೀರಿದ ಪ್ರಭಾವ ಅದ್ವಿತೀಯ. ಮಿಸ್ ಶಿ: ಪಿಂಗ್‌ಶಿನ್, ಮತ್ತು ಶು-ಚಿ-ಮೊ ಇಬ್ಬರೂ ಅವರನ್ನೇ ಅನುಸರಿಸಿದರು. ಹುಶಿ: ತನ್ನ ತರುಣ ಕಾಲ ದಲ್ಲಿ ವ್ಹಿಟ್‌ಮನ್ನನನ್ನು ಅನುಸರಿಸಿದನು. ಫ್ರೆಂಚ್ ಜಪನೀಜ್ ಮತ್ತು ರಶಿಯನ್ ಆಧುನಿಕ ಕಾವ್ಯಗಳೂ ಚೀನೀ ಕಾವ್ಯದ ಮೇಲೆ ತಮ್ಮ ನೆರಳನ್ನು ಕೆಡವಿವೆ.

ಜರ್ಮನರಲ್ಲಿ ಕೇವಲ ಗಯಟೆ ಮತ್ತು ಹೀನ್ ಇವರಿಬ್ಬರ ಕೃತಿಗಳು ಚೀನಿಯರ ಮನಸೆಳೆದಿವೆ. ಮತ್ತು ರೆಮಾರ್ಕನ ' All quiet on the western front ' ಇದೂ ಪ್ರಿಯವಾಗಿದೆ.

ಅಮೇರಿಕನ್ನರಲ್ಲಿ ಲಿಪ್ಟನ್ ಸಿಂಕ್ಲೇರನೇ ಹೆಚ್ಚಾಗಿ ಚೀನೀಯರನ್ನು ಸೆಳೆದವನು. ಜಾಕ್‌ಲಂಡನ್ ಮತ್ತು ಜಾನ್‌ರೀಡರೂ ಸಾಕಷ್ಟು ಪ್ರಸಿದ್ಧ ರಾಗಿದ್ದಾರೆ. ಇತ್ತೀಚೆಗೆ ಮೈಕೇಲ್ ಗೋಲ್ಡ, ಮತ್ತು ವಿಗ್ನೆಸ್ ಸ್ಮೆಡ್ಲಿ ಇವರ ಕೃತಿಗಳನ್ನು ಹೆಚ್ಚಾಗಿ ಓದುತ್ತಾರೆ. ಪರ್ಲ್‌ಬಕ್ಕರ 'ಗುಡ್‌ಅರ್ಥ' ಕಾದಂಬರಿಯನ್ನು ಹೆಚ್ಚಾಗಿ ಓದುತ್ತಾರೆ. ಎಡ್ಗರ್ ಎಲನ್‌ಪೋ, ಮತ್ತು ಮಾರ್ಕ್‌ಟ್ವೇನರ ಸಣ್ಣಕತೆಗಳು ಚೀನಿಯರ ಮನಸ್ಸನ್ನು ರಂಜಿಸಿವೆ.

ಇಂಗ್ಲಿಶ್ ಸಾಹಿತಿಗಳಲ್ಲಿ, ಚೀನೀಯರನ್ನು ಸೆಳೆದವರೆಂದರೆ, ಶಾ: ಮತ್ತು ಆಸ್ಕರ್ ವಾಯಿಲ್ಡ್ ಇಬ್ಬರೇ. ಶೇಕ್ಸಪಿಯರನ ನಾಟಗಳನ್ನೂ ಮತ್ತು ಇತರ ಮಾರ್ಗಸಾಹಿತ್ಯವನ್ನೂ ಕರ್ತವ್ಯವೆಂದು ಮಾತ್ರ ಓದು ತ್ತಾರೆ. ಡಿಕೆನ್ಸ್‌ನ ಕಾದಂಬರಿಗಳು, ರಾಬಿನ್‌ಸನ್ ಕ್ರೂಸೋ, ಮತ್ತು ಗಲಿವ್ಹರ್‌ಸ್ ಟ್ರಾವಲ್ಸ್ ಇವು ಜನಪ್ರಿಯವಾಗಿವೆ. ಬ್ಯಾರಿಯ, ಅ್ಯಡ್ಮ್ ಮಿರೆಬಲ್ ಕ್ರಾಯಿಟನ್ ನಾಟಕ ಬಹಳ ಪ್ರಸಿದ್ಧವಾಗಿದೆ. ಇದಕ್ಕೆ ಚೀನಿಯರ ಬಹುವಿಧದ ರುಚಿಯೇ ಕಾರಣವಾಗಿರಬಹುದು. ಟಿ. ಎಸ್. ಇಲಿಯಟ್, ಡಿ. ಎಚ್, ಲಾರೆನ್ಸ್, ಕಾಥರೀನ್ ಮ್ಯಾನ್ಸಫೀಲ್ಡ್ ಇವರನ್ನು ಚೀನೀಯರು ಬಲ್ಲರು. ಜೇಮ್ಸ ಜಾಯಿಸನ ಹೆಸರೂ ಕೂಡ ಚೀನಕ್ಕೆ ಗೊತ್ತಿಲ್ಲ. ಆದರೆ ಒಂದು ದಿನ, ಅವನ ಕೃತಿಗಳೂ ಮತ್ತು ಗಟ್ರೂಡ್ ಸ್ಟೀನರ ಕೃತಿಗಳೂ ಉತ್ತಮ ಭಾಷಾಂತರವನ್ನು ಪಡೆಯಬಹುದು. ಎರಡೂ

ಭಾಷೆಗಳಿಗೂ ವ್ಯಾಕರಣದ ಲಕ್ಷ್ಯವಿಲ್ಲ. ಇಂಗ್ಲಿಶ ಸಾಹಿತ್ಯ ಚೀನೀ ಸಾಹಿತ್ಯದ ಮೇಲೆ ಬಹಳ ಸ್ವಲ್ಪ ಪ್ರಭಾವವನ್ನು ಬೀರಿದೆ. ಇಂಗ್ಲಿಶ ಭಾಷೆಯೇ ಶಿಕ್ಷಣದ ಮಾಧ್ಯಮವಾಗಬೇಕೆಂದು ನಡೆಸಿದ ಚಳವಳಿಯೇ ಇದಕ್ಕೆ ಕಾರಣವಾಗಿರಬಹುದು. ಶಾಲೆ ಕಾಲೇಜುಗಳಲ್ಲಿ ಇಂಗ್ಲಿಶ್ ಸಾಹಿತ್ಯಾಭ್ಯಾಸ ಒತ್ತಾಯದಿಂದ ನಡೆಯುತ್ತಿದೆ. ಆದರೆ ಇಂಗ್ಲಿಶ ಓದುವ ಜನರು ಬಹುವಾಗಿ ಇದ್ದುದ್ದರಿಂದಲೂ, ಮತ್ತು ಬಹಳ ಮಂದಿ ಪಂಡಿತರು ಇಂಗ್ಲಿಶ್ ಕೃತಿಗಳನ್ನು ಅನುವಾದಿಸಲು ಸಮರ್ಥರಾದ್ದರಿಂದಲೂ,ಇಂಗ್ಲಿಶ್ ಪುಸ್ತಕಗಳ ಬಳಕೆ ಹೆಚ್ಚಾಗಿದೆ. ರಶಿಯನ್ ಭಾಷೆ ಚೀನಿಯರಿಗೆ ತೀರ ಹೊಸದು. ಅದನ್ನು ಕಲಿಯಲೂ ಚೀನದಲ್ಲಿ ಏನೂ ಅನುಕೂಲತೆಗಳಿಲ್ಲ.

ಡೇವ್ಹಿಡ್ ವಿಲಾರ್ಡ್ ಲಿಯೋನ್‌ರು ತಮ್ಮ 'ಚೀನಿ ಸಾಹಿತ್ಯದ ಕಳೆದ ದಶಕ' ಎಂಬ ಪ್ರಬಂಧದಲ್ಲಿ, ಚೀನಿಯರ ಅಭ್ಯಾಸ ರೀತಿಯನ್ನು ವಿಚಿತ್ರವಾಗಿ ವಿವರಿಸಿದ್ದಾರೆ. ಪರದೇಶದ ಪುಸ್ತಕಗಳ ಯಾದಿ ಕೆಳಗಿನಂತದೆ.

**ರಶಿಯನ್**:—ಆರ್‌ಟ್ಸಿಬಾಶೆವ್ಹ್, 'ಸ್ಯಾನೈನ್' ಚೆಕಾವ್ಹ್ 'ಸಣ್ಣ ಕತೆಗಳ ಸಂಗ್ರಹ', ಗಾರ್ಕಿ 'ದಿ ಬೆಸ್ಟ್ಯಾಂಡರ್', ಟಾಲ್‌ಸ್ಟಾಯ್ 'ರೀಸರೆಕ್ಶನ್' ಟರ್ಗೆನೀವ್ಹ್ 'ಫರ್ಸ್ಟ್ ಲವ್'

**ಫ್ರೆಂಚ್**:— ಡೂಮಾ 'ಲಾ ಡೇಮ್ ಆ ಕ್ಯಾಮೆಲೀಸ್' ಅನಟೋಲ್ ಫ್ರಾನ್ಸ್ 'ಥಾಯಸ್', ರೂಸೋ 'ಲೇಕನ್ ಫೇಶನ್ಸ್'.

**ಡೇನಿಶ್:**— ಇಬ್ಸೆನ್‌ನ ನಾಟಕಗಳು.

**ಇಂಗ್ಲಿಶ್:**— ಬ್ಯಾರೀ 'ದಿ ಅ್ಯಡ್‌ಮಿರೆಬಲ್ ಕ್ರಾಯಿಟನ್' ಡೀಫೋ 'ರಾಬಿನ್‌ಸನ್ ಕ್ರೂಸೋ' ಶೇಕ್‌ಸ್ಪಿಯರ್ 'ದಿ ಮರ್ಚಂಟ್ ಆಫ್ ವ್ಹೆನಿಸ್' ಶಾ 'ಮಿಸೆಸ್ ವಾರೆನ್‌ಸ್ ' ಪ್ರೊ. ಫೆಶನ್. ಆಸ್ಕರ್ ವಾಯಿಲ್ಡ್ 'ಲೇಡಿ ವಿಂಡರ್ ಮಿಯರಸ್ ಫ್ಯಾನ್ ಮತ್ತು 'ಸ್ಯಾಲೋಮಿ'.

**ಅಮೇರಿಕನ್:**— ಅಪ್ಟನ್ ಸಿಂಕ್ಲೇರ್ 'ಬೋಸ್ಟನ್', 'ಸಿಮೆಂಟ್' ಮತ್ತು 'ಆಯಿಲ್'

**ಜರ್ಮನ್:**— ಗಯಟೆ: 'ಫಾಸ್ಟ್.' ರಿಮಾರ್ಕ: 'ಆಲ್ ಕ್ವಾಯೆಟ್

ಆನ್‌ದಿ ವೆಸ್ಟರ್ನ್ ಫ್ರಂಟ್' ಮತ್ತು 'ದಿ ರೋಡ್‌ಬ್ಯಾಕ್' ಸಾಮಾನ್ಯ ವಿಷಯದ ಬಗ್ಗೆ ಇದ್ದ ಹನ್ನೊಂದು ಪುಸ್ತಕಗಳಲ್ಲಿ ಆರು ಕಮ್ಯುನಿಸ್ಟ ಪದ್ಧತಿಯ ವಿಷಯವಾಗಿ ಇದ್ದವು. ಅವು ಬುಕಾರಿನ್, ಎಂಜೆಲ್ಸ್, ಮಾರ್ಕ್ಸ ಮತ್ತು ರಶಿಯದ ಪಂಚವಾರ್ಷಿಕ ಯೋಜನೆಯ ವಿಮರ್ಶೆಯಾಗಿದ್ದವು. ಉಳಿದ ಐದು ಪುಸ್ತಕಗಳು: ಸಿ. ಎಫ್ ಆ್ಯಂಡ್ರ್ಯೂಜ್ 'ಗಾಂಧಿ' ಮತ್ತು 'ಆತ್ಮವೃತ್ತ' ಎಮ್ ಬಿಯರ್ 'ಪ್ರಾಚೀನ ಕಾಲದ ಸಾಮಾಜಿಕ ಹೋರಾಟಗಳು'. 'ಲೀಗ್ ಆಫ್ ನೇಶನ್ಸ್'ದವರು ಕಳಿಸಿದ ಲಿಟನ್ ಕಮಿಶನ್‌ದವರ ವರದಿ', 'ಚೀನ ಜಪಾನದ ಕಲಹದ ಬಗ್ಗೆ ಹತ್ತೊಂಬತ್ತು ಜನರ ಕಮಿಟಿಯ ವರದಿ'. ಮತ್ತು 'ಟಾನಕಾ ಸ್ಮಾರಕ'.

ತಮ್ಮ ತರುಣ ಯುಗದಲ್ಲಿ ತಮ್ಮನ್ನು ಪರಿಣಾಮಗೊಳಿಸಿದ ಬೇರೆ ದೇಶದ ಸಾಹಿತ್ಯವನ್ನು ಕುರಿತು ಲು-ಶೂನರು ಹೀಗೆ ಹೇಳುತ್ತಾರೆ: 'ಅಂಕಲ್ ಟಾಮ್ಸ್ ಕೇಬಿನ್ ಮತ್ತು ರಾಬಿನ್‌ಸನ್ ಕ್ರೂಸೋ; ಡೂಮಾನ ಕಾದಂಬರಿಗಳು. ಮುಂದೆ ಸೆನ್‌ಕೆವಿಝ್‌ರ ಕ್ವೋವೇಡೀಸ್; ಮತ್ತು ಬಾಯರನ್, ಸ್ವಿಫ್ಟ್, ಆ್ಯಂಡೆಯೆವ್, ಮತ್ತು ಪೋ ಇವರ ಕೃತಿಗಳು; ಇನ್ನೂ ಮುಂದೆ, ಗೊಗೊಲ್, ಟರ್ಗೆನೀವ್ಹ, ಚೆಕಾವ್, ಹೀನ್, ನೀಟ್ಸೆ, ಮತ್ತು ಮುಸ್ಯೂಮ್ ಅವರಿಗೆ ದಾಂಟೇನ ಮೇಲೆ ಎಳ್ಳಷ್ಟು ಪ್ರೀತಿಯಿಲ್ಲ.

ಮಾಟುನ್ನರ ಮೇಲೆ ಡಿಕೆನ್ಸ್ ಮತ್ತು ಟರ್ಗೆನಿವ್ಹರು ಪ್ರಭಾವ ಬೀರಿದ್ದರು. ಫ್ಲಾಬೇರ್ ಮತ್ತು ಮೋಪಸಾಂತರು, ಟಿಂಗ್-ಲಿಂಗ್‌ರ ಪ್ರಿಯರಾದ ಸಾಹಿತಿಗಳು. ಫ್ರೆಂಚ್ ಸಾಹಿತಿಗಳೆಲ್ಲ ಪಾ-ಚಿನ್ನರನ್ನು ಸೆಳೆದಿದ್ದರು. ಯು-ಟಾ-ಫೂ ಇವರು ಟರ್ಗೆನಿವ್ಹನ ಭಕ್ತರು. ಕೌ-ಮೊ-ಜೊ ಗಯಟೆಯನ್ನು ಪೂಜಿಸುತ್ತಾರೆ. ಬಹಳವಾಗಿ ಈ ರೀತಿಯ ಪ್ರಭಾವ ಜಪಾನದಿಂದಲೇ ಬರುತ್ತಿದೆ.

ಮೊದಲಿನ ಎಲ್ಲ ಬರೆಹಗಾರರೂ ಉಭಯ ಭಾಷಾವಿಶಾರದರು. ಎಷ್ಟೋ ಲೇಖಕರು ಚೀನೀ ಪ್ರಾಚೀನ ಸಾಹಿತ್ಯವನ್ನೂ ಅಭ್ಯಾಸ ಮಾಡಿದ್ದರು. ಪ್ರಾಚೀನ ವೆನ್-ಯೆನ್ ಪಂಡಿತರ ಕಾಲದಿಂದ ಹಿಡಿದು, ಭಾಷೆಯಲ್ಲಿ ಸುಧಾರಣೆ ಬೇಡುವ ಕಮ್ಯುನಿಸ್ಟರ ವರೆಗೆ, ಲು-ಶೂನರ ಜೀವನ ಚಿನ್ನದ

ಏಳಿಯಂತೆ ನಡೆದಿದೆ. ಈ ಎಲ್ಲ ಲೇಖಕರೂ, ಭಾಷಾಂತರಕಾರರೂ, ಭೂಮಿಯ ನಾಲ್ಕೂ ಕಡೆಯಿಂದ ವಿವಿಧ ಅನುಭವಗಳಿಂದ ಒಂದು ಸಾಹಿತ್ಯ ದೆಸೆ ನಿರ್ಮಾಣವಾಗಿದೆ. ಇದರಿಂದಲೇ ಮುಂದಿನ ಪೀಳಿಗೆ ಸಾಹಿತ್ಯವನ್ನು ಬೆಳಸಬೇಕು. ಮೇ ನಾಲ್ಕರ ಚಳುವಳಿಯ ಅನುಕರಣಯುಗ ಈಗಿಲ್ಲ; ಕ್ರಾಂತಿಕಾಲದ ರೋಮ್ಯಾಂಟಿಕ್‌ರೂ ಇಲ್ಲ. ಕ್ರಾಂತಿಯಂತೆಯೇ, ಸಾಹಿತ್ಯದ ಅಂದೋಲನವೂ, ಒಂದು ಸ್ವತಂತ್ರ ವಸ್ತುವಾಗಿದೆ.

ಹಿಂದಿನವರಿಗಿಂತ ಹೆಚ್ಚು ಪ್ರತಿಭೆಯುಳ್ಳ ಎಷ್ಟೋ ತರುಣ ಲೇಖಕರಿಗೆ ಬೇರೆ ಭಾಷೆಗಳೇ ಗೊತ್ತಿಲ್ಲ. ಆಧುನಿಕ ಕಲೆ-ವಿಜ್ಞಾನಗಳನ್ನು ಅಭ್ಯಾಸ ಮಾಡಲಿಕ್ಕೆ ಮಾತ್ರ ಸ್ವಲ್ಪ ಗೊತ್ತಿದೆ. ವಿಶ್ವಸಾಹಿತ್ಯದ ಕಣ್ಣು ಕುಕ್ಕುವ ವೈಭವ, ಚೀನೀಯರ ಮಟ್ಟಿಗೆ ತನ್ನ ಮೊದಲ ಮೋಹಕತೆಯನ್ನು ಕಳೆದು ಕೊಂಡಿದೆ. ಓದುಗರು, ಪಾಶ್ಚಾತ್ಯ ಕೃತಿಗಳ ಭಾಷಾಂತರಗಳನ್ನು ಬಿಟ್ಟು, ಚೀನಿ ಕೃತಿಗಳನ್ನು ಕೊಳ್ಳುತ್ತಿದ್ದಾರೆ. ಲೇಖಕರೂ ಸುತ್ತಲಿನ ಜೀವನವನ್ನೇ ಕೃತಿಗಳ ವಸ್ತುವನ್ನಾಗಿ ತೆಗೆದುಕೊಳ್ಳಲು ಸಿದ್ಧರಿದ್ದಾರೆ. ವಾಕ್‌ಸ್ವಾತಂತ್ರ್ಯಕ್ಕಿದ್ದ ತೀವ್ರ ವಿರೋಧದಿಂದ, ಲೇಖಕರು ಹೊಸ ಸಾಹಿತ್ಯದ ನಿರ್ಮಾಣ ಕಾರ್ಯದಲ್ಲಿ ಉತ್ಸಾಹವಿಲ್ಲದವರಾಗಿದ್ದಾರೆ. ಈ ರೀತಿಯ ಪ್ರತಿಬಂಧಕ್ಕೂ ತೀವ್ರ ವಿರೋಧ ಬೇಗನೆ ಸ್ಫೋಟವಾಗಬಹುದು.

—'ನೀಮ್ ವೆಲ್ಸ್'

---